# ಗಂಗಾಮತಸ್ಥರ ಜಾನಪದ ಅಧ್ಯಯನ
## (ಮಂಡ್ಯ ಜಿಲ್ಲೆಯನ್ನು ಪರಿಗಣಿಸಿ)

ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ಮಹಾಪ್ರಬಂಧ


ಸಂಶೋಧಕ

ಕೃಷ್ಣೇಗೌಡ

ಮಾರ್ಗದರ್ಶಕರು

ಡಾ. ಸಿ.ಟಿ. ಗುರುಪ್ರಸಾದ್
ಪ್ರವಾಚಕರು





ಜಾನಪದ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬


೨೦[illegible]

# ಗಂಗಾಮತಸ್ಥರ ಜಾನಪದ ಅಧ್ಯಯನ
## (ಮಂಡ್ಯ ಜಿಲ್ಲೆಯನ್ನು ಪರಿಗಣಿಸಿ)

ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ಮಹಾಪ್ರಬಂಧ

ಸಂಶೋಧಕ

**ಕೃಷ್ಣೇಗೌಡ**

ಮಾರ್ಗದರ್ಶಕರು

**ಡಾ. ಸಿ.ಟಿ. ಗುರುಪ್ರಸಾದ್**

ಪ್ರವಾಚಕರು





**ಜಾನಪದ ಅಧ್ಯಯನ ವಿಭಾಗ**

**ಸಮಾಜ ವಿಜ್ಞಾನಗಳ ನಿಕಾಯ**

**ಕನ್ನಡ ವಿಶ್ವವಿದ್ಯಾಲಯ, ಹಂಪಿ**

**ವಿದ್ಯಾರಣ್ಯ – ೫೮೩ ೨೭೬**

**೨೦೧೦**

## ದೃಢೀಕರಣ ಪತ್ರ

**"ಗಂಗಾಮತಸ್ಥರ ಜಾನಪದ ಅಧ್ಯಯನ"** (ಮಂಡ್ಯ ಜಿಲ್ಲೆಯನ್ನು ಪರಿಗಣಿಸಿ) ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಶ್ರೀ ಕೃಷ್ಣೇಗೌಡ ಇವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : ೦೧/೦೩/೨೦೧೦
ಸ್ಥಳ : ವಿದ್ಯಾರಣ್ಯ

**ಡಾ.ಸಿ.ಟಿ. ಗುರುಪ್ರಸಾದ್**
ಪ್ರವಾಚಕರು ಮತ್ತು ಮಾರ್ಗದರ್ಶಕರು
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

## ಸಂಶೋಧಕರ ಪ್ರಮಾಣ ಪತ್ರ

**"ಗಂಗಾಮತಸ್ಥರ ಜಾನಪದ ಅಧ್ಯಯನ"** (ಮಂಡ್ಯ ಜಿಲ್ಲೆಯನ್ನು ಪರಿಗಣಿಸಿ) ಎಂಬ ಶೀರ್ಷಿಕೆಯ ಸಂಶೋಧನಾ ಮಹಾಪ್ರಬಂಧವನ್ನು ಡಾ.ಸಿ.ಟಿ. ಗುರುಪ್ರಸಾದ್, ಪ್ರವಾಚಕರು, ಜಾನಪದ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಅಥವಾ ಇತರೆ ಉದ್ದೇಶಗಳಿಗಾಗಲೀ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ : ೦೧/೦೩/೨೦೧೦
ಸ್ಥಳ : ವಿದ್ಯಾರಣ್ಯ

ಕೃಷ್ಣೇಗೌಡ
ಸಂಶೋಧಕರು
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ.

## ಕೃತಜ್ಞತೆಗಳು

ಕನ್ನಡ ವಿಶ್ವವಿದ್ಯಾಲಯದಲ್ಲಿ ಪಿಎಚ್.ಡಿ. ಅಧ್ಯಯನ ಕೈಗೊಳ್ಳಲು ಅವಕಾಶ ಕಲ್ಪಿಸಿಕೊಟ್ಟ ಅಂದಿನ ಮಾನ್ಯ ಕುಲಪತಿಗಳಾದ ಡಾ. ಬಿ.ಎ. ವಿವೇಕ ರೈ ಹಾಗೂ ಇಂದಿನ ಮಾನ್ಯ ಕುಲಪತಿಗಳಾದ ಶ್ರೀ ಎ. ಮುರಿಗೆಪ್ಪ, ಕುಲಸಚಿವರಾದ ಡಾ॥ ಮಂಜುನಾಥ ಬೇವಿನಕಟ್ಟಿ, ಅಧ್ಯಯನಾಂಗದ ನಿರ್ದೇಶಕರಾದ ಡಾ. ವಿ.ಎಸ್. ಬಡಿಗೇರ ಅವರಿಗೆ ಕೃತಜ್ಞತೆಗಳು.

ಜಾನಪದ ಅಧ್ಯಯನ ವಿಭಾಗದ, ಮುಖ್ಯಸ್ಥರಾದ ಡಾ.ಸ.ಚಿ. ರಮೇಶರವರಿಗೆ, ಪ್ರವಾಚಕರು ಹಾಗೂ ಸೂಕ್ತ ಸಲಹೆಗಳನ್ನು ನೀಡಿದ ಮಾರ್ಗದರ್ಶಕರಾದ ಡಾ. ಸಿ.ಟಿ. ಗುರುಪ್ರಸಾದ್‌ರವರಿಗೆ, ಆಗಿಂದಾಗ್ಗೆ ಸಲಹೆ ನೀಡುತ್ತಿದ್ದ ಡಾ. ಮೊಗಳ್ಳಿ ಗಣೇಶ್‌ರವರಿಗೆ, ಡಾ. ಹೆಬ್ಬಾಲೆ ಕೆ.ನಾಗೇಶ್‌ರವರಿಗೆ ನನ್ನ ಕೃತಜ್ಞತೆಗಳು.

ನನ್ನ ಶ್ರೇಯೋಭಿವೃದ್ಧಿಯನ್ನು ಬಯಸಿದ ಪೂಜ್ಯ ತಂದೆ ದಿ.ಗಿರಿಗೌಡ, ತಾಯಿ ಕೆಂಪಮ್ಮ ಹಾಗೂ ನನ್ನ ಪ್ರೀತಿಯ ಚಿಕ್ಕಪ್ಪನಾದ ಹೆಚ್.ಕೆ.ಕೆಂಪೇಗೌಡ, ಚಿಕ್ಕಮ್ಮ ಶ್ರೀಮತಿ ಹೊನ್ನಮ್ಮರವರನ್ನ ಈ ಸಂದರ್ಭದಲ್ಲಿ ನೆನೆಯುತ್ತೇನೆ.

ಅಧ್ಯಯನ ಸಂದರ್ಭದಲ್ಲಿ ಸೂಕ್ತ ಸಲಹೆ ನೀಡುತ್ತಿದ್ದ ನನ್ನ ಅಣ್ಣನಾದ ಡಾ.ಕೆ.ಅನ್ನದಾನಿ ಯವರನ್ನ, ನನ್ನ ಹಿತೈಷಿಯಾದ ಎಂ. ಪುಟ್ಟಯ್ಯರವರಿಗೆ ಹಾಗೂ ಕ್ಷೇತ್ರ ಕಾರ್ಯ ಸಂದರ್ಭದಲ್ಲಿ ಸಮುದಾಯದ ಬಗ್ಗೆ ಮಾಹಿತಿಗಳನ್ನು, ಸಹಕಾರಗಳನ್ನು ನೀಡಿದ ವಕ್ತೃ ಬಾಂಧವರಿಗೆ ಹೃತ್ಪೂರ್ವಕ ಕೃತಜ್ಞತೆಗಳು.

ಕ್ಷೇತ್ರಶಿಕ್ಷಣಾಧಿಕಾರಿಯಾದ, ನನ್ನ ಪ್ರೀತಿಯ ಶ್ರೀ ಎಂ. ಶಿವಮಾದಪ್ಪರವರಿಗೆ, ಪೂಜ್ಯರಾದ ಡಾ.ಮ.ರಾಮಕೃಷ್ಣರವರಿಗೆ, ನನ್ನ ಅಣ್ಣನಾದ ಶ್ರೀ ಹೆಚ್.ಸಿ. ದೇವೇಗೌಡರಿಗೆ, ಗುರುಗಳಾದ ಶ್ರೀ ಆರ್.ಜಿ.ಮಹದೇವಸ್ವಾಮಿಯವರಿಗೆ, ಪ್ರೀತಿಯ ಸಹೋದರನಾದ ಹೆಚ್.ಎಂ. ನಾಗೇಂದ್ರಮೂರ್ತಿಯವರಿಗೆ, ಆತ್ಮೀಯರಾದ ಎಚ್.ಎಸ್.ಆನಂದ್‌ರವರಿಗೆ, ಸ್ನೇಹಿತರಾದ ಎಸ್.ಕುಮಾರಸ್ವಾಮಿ ಎ.ಪಿ.ದೊಡ್ಡಿಯವರಿಗೆ, ಬ್ರಹ್ಮಲಿಂಗಾಚಾರಿ, ತಿ. ಮರಿಸ್ವಾಮಿ ಮಾದಹಳ್ಳಿ ಇವರೆಲ್ಲರಿಗೂ ಹೃತ್ಪೂರ್ವಕ ಕೃತಜ್ಞತೆಗಳು.

ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಸಹಾಯ ಮಾಡಿದ ಎಲ್ಲರಿಗೂ ಮತ್ತು ಈ ಮಹಾಪ್ರಬಂಧವನ್ನು ಸಕಾಲದಲ್ಲಿ ಅಂದವಾಗಿ ಅಕ್ಷರ ಸಂಯೋಜಿಸಿಕೊಟ್ಟ ಎಂ.ಎಸ್.ಪಾಯಿಂಟ್, ಸರಸ್ವತಿಪುರಂ, ಮೈಸೂರು, ಇವರಿಗೆ ನನ್ನ ಕೃತಜ್ಞತೆಗಳು.

ಕೃಷ್ಣೇಗೌಡ

## ಪರಿವಿಡಿ

# ಅಧ್ಯಾಯ – ಒಂದು

## ಅಧ್ಯಯನದ ಮಹತ್ವ, ಉದ್ದೇಶ, ವ್ಯಾಪ್ತಿ ಮತ್ತು ವಿಧಾನ

೧.೧ ಪೀಠಿಕೆ

೧.೨ ಅಧ್ಯಯನದ ಮಹತ್ವ

೧.೩ ಅಧ್ಯಯನದ ಉದ್ದೇಶಗಳು

೧.೪ ಅಧ್ಯಯನದ ವ್ಯಾಪ್ತಿ

೧.೫ ಅಧ್ಯಯನದ ವಿಧಾನಗಳು

೧.೬ ಇಲ್ಲಿಯವರೆಗೆ ನಡೆದಿರುವ ಅಧ್ಯಯನಗಳು

# ಅಧ್ಯಾಯ – ಒಂದು

## ೧.೧ ಅಧ್ಯಯನದ ಮಹತ್ವ, ಉದ್ದೇಶ, ವ್ಯಾಪ್ತಿ ಮತ್ತು ವಿಧಾನ

**ಪೀಠಿಕೆ**

ಭಾರತವು ಭಿನ್ನ ಸಂಸ್ಕೃತಿಗಳ ನಾಡಾಗಿದ್ದು ಸುಮಾರು ಮೂರು ಸಾವಿರಕ್ಕೂ ಹೆಚ್ಚು ಜಾತಿ, ಉಪಜಾತಿಗಳನ್ನು ಒಳಗೊಂಡಿದೆ. ಸಮುದಾಯ, ಜಾತಿ, ಬುಡಕಟ್ಟು ಮುಂತಾದ ಹೆಸರುಗಳಿಂದ ಅಸಂಖ್ಯಾತ ಜನಾಂಗವು ಚದುರಿಹೋಗಿವೆ. ಪ್ರತಿಯೊಂದು ಸಮುದಾಯವು ಅದರದೇ ಆದ ಜೀವನ ವಿಧಾನ, ಆಚಾರ–ವಿಚಾರ, ಸಂಪ್ರದಾಯ, ನಂಬಿಕೆ, ನಡಾವಳಿಕೆ, ಕುಲಾಚಾರಗಳನ್ನು ಒಳಗೊಂಡಿದೆ. ಇಲ್ಲಿ ಸಾಮಾಜಿಕ ಸ್ಥಾನಮಾನಗಳ ನಿರ್ಧಾರವಾಗುತ್ತಿರುವುದು ಜಾತಿಯ ಆಧಾರದ ಮೇಲೆಯೇ. ಅಲ್ಲದೆ ಮೇಲು–ಕೀಳು ಎಂಬ ಭಾವನೆಗಳು ಬಲವಾಗಿ ಬೇರೂರಿದೆ. ಪ್ರತಿಯೊಂದು ಸಮುದಾಯಗಳಿಗೂ ಅವುಗಳದೇ ಆದ ಗುರುತಿಸಿಕೊಳ್ಳುವಿಕೆ ಇದ್ದೇ ಇದೆ. ಭಾರತವು ವಿವಿಧತೆಯಲ್ಲಿ ಏಕತೆಯನ್ನು ಸಾಧಿಸಿರುವುದೇ ಇದರ ವೈಶಿಷ್ಟ್ಯವಾಗಿದೆ. ಪ್ರಾಚೀನ ಮಾನವ ನಿಸರ್ಗದೊಡನೆ ಹೊಂದಿಕೊಳ್ಳುತ್ತಾ ಬದುಕಿಗಾಗಿ ಹೋರಾಡುತ್ತಾ ನಾಗರೀಕತೆಯ ಕಡೆ ಸಾಗಿದ. ಅಂದಿನ ಬುದ್ಧಿವಂತ ವರ್ಗ ಚತುರತೆಯಿಂದ ವಿಂಗಡಿಸಿ ವರ್ಣ ವ್ಯವಸ್ಥೆಯನ್ನು ತಂದಿತು. ಇದು ತದನಂತರದಲ್ಲಿ ಒಂದು ಸಮುದಾಯದ ಉಗಮಕ್ಕೆ ಕಾರಣವಾಯಿತು.

ಭಾರತದಲ್ಲಿ ಇಂದು ಹಲವಾರು ಸಮುದಾಯಗಳಿವೆ. ಅಲ್ಲದೆ ಭಾರತವು ಹಲವು ವೈಶಿಷ್ಟ್ಯಗಳಿಂದ ಕೂಡಿದ ಪ್ರದೇಶವೂ ಹೌದು. ಸ್ವಾಮಿ ವಿವೇಕಾನಂದರು "ಎಲ್ಲಿ ಜ್ಞಾನ, ಇತರ ದೇಶಗಳಿಗೆ ಹೋಗುವ ಮೊದಲು, ತನ್ನ ಮನೆಯನ್ನು ಕಟ್ಟಿತೋ ಆ ಪ್ರಾಚೀನ ನಾಡು ಇದು. ಇಲ್ಲೆ, ಈ ಭಾರತದಲ್ಲೇ ಆಧ್ಯಾತ್ಮವು ಲೌಕಿಕ ಕ್ಷೇತ್ರದಲ್ಲಿ ಸಾಗರದಂತೆ ಉರುಳುವ ನದಿಗಳಾಗಿ ವ್ಯಕ್ತಗೊಂಡದ್ದು. ಇಲ್ಲೇ ಸನಾತನ ಹಿಮಾಲಯ ಪರ್ವತವು ಹಿಮಮುಚ್ಚಿದ ಶಿಖರ–ಶಿಖರಗಳಾಗಿ ಎದ್ದು ಸ್ವರ್ಗದ ರಹಸ್ಯಗಳನ್ನು ಭೇದಿಸುವಂತೆ ದೃಷ್ಟಿನೆಟ್ಟು ನಿಂತಿರುವುದು. ಈ ಭಾರತದ ನೆಲವನ್ನೇ ಮಹಾಸಂತರು ತುಳಿದಿದ್ದು ಇಲ್ಲೇ ಪ್ರಪ್ರಥಮವಾಗಿ ಮಾನವನ ಸ್ವಭಾವವನ್ನೂ, ಅವನ ಅಂತರಂಗ ಜಗತ್ತನ್ನೂ ಕುರಿತು ಅನ್ವೇಷಣೆ ನಡೆದದ್ದು".[೧] ಭಾರತದಲ್ಲಿ ಮೊಟ್ಟ ಮೊದಲಬಾರಿಗೆ ಮಾನವನನ್ನು ಕುರಿತು ಸಂಶೋಧನೆ, ಅವನ ಆಚಾರ–ವಿಚಾರ, ರೀತಿ–ನೀತಿಗಳ ಬಗ್ಗೆ ಅಧ್ಯಯನ ನಡೆದುದ್ದು ಇಲ್ಲಿಯೇ.

ಸಮಾಜದ ಒಬ್ಬ ಜೀವಿಯಾಗಿ ಮಾನವ ಪರಂಪರಾನುಗತವಾಗಿ ರೂಢಿಸಿಕೊಂಡು ಬಂದಿರುವ, ವರ್ಗಾಯಿಸುವ, ಹಂಚಿಕೊಳ್ಳುವ ಹಾಗೂ ಗೌರವಿಸುವ ಕ್ರಿಯೆಗಳ ಆಲೋಚನೆಗಳ ಮೌಲ್ಯಗಳ ಮತ್ತು ನಿರ್ಮಾಣ ಮಾಡುವ ವಸ್ತುಗಳ ಮೊತ್ತವನ್ನು ಸಂಸ್ಕೃತಿ ಎನ್ನಬಹುದು. ಸಂಸ್ಕೃತಿ ಅಥವಾ ನಾಗರೀಕತೆಯನ್ನ ಮಾನವ ಸಮಾಜದ ಸದಸ್ಯನಾಗಿ ಪರಿಸರದಿಂದ ಗಳಿಸಿ ಅರಗಿಸಿಕೊಂಡಿದ್ದೇ ಆಗಿದೆ. ಸಂಸ್ಕೃತಿಯು ಮಾನವನ ಆಂತರಿಕ ಮತ್ತು ಬಾಹ್ಯ ಜೀವನವನ್ನು ಅಭಿವ್ಯಕ್ತಗೊಳಿಸುತ್ತದೆ. ಫೆಲಿಕ್ಸ್ ಎಂ. ಕಿಸ್ಸಿಂಗ್ ಅವರು "ಸಮಾಜದ ಒಬ್ಬ ಜೀವಿಯಾಗಿ ಮಾನವ ಪರಂಪರಾಗತವಾಗಿ ಕಲಿಯುವ, ಹಂಚಿಕೊಳ್ಳುವ ಹಾಗೂ ಗೌರವಿಸುವ ಕಾರ್ಯಗಳ, ಆಲೋಚನೆಗಳ ಮತ್ತು ಮಾನವ ನಿರ್ಮಿತ ವಸ್ತುಗಳ ಮೊತ್ತವೇ ಸಂಸ್ಕೃತಿ ಎನ್ನಬಹುದು"[೨] ಎಂದಿದ್ದಾರೆ. ಮತ್ತೊಬ್ಬ ಬ್ರಿಟಿಷ್ ವಿದ್ವಾಂಸರಾದ ಬಿ. ಮಲಿನೋವಸ್ಕಿಯವರು "Culture is an instrumental reality and apparatus for the satisfaction of the biological and derived needs"[೩] ಎಂದಿದ್ದಾರೆ. ಇದರಿಂದಾಗಿ ಮನುಷ್ಯನ ಮೂಲಭೂತ, ಜೈವಿಕ ಹಾಗೂ ಸಾಧಿತ ಅಗತ್ಯಗಳನ್ನು ಪೂರೈಸಿಕೊಳ್ಳಲು ಸಂಸ್ಕೃತಿಯು ಒಂದು ಸಾಧನವಾಗಿದೆ ಎಂದು ತಿಳಿದು ಬರುತ್ತದೆ.

ಭಾರತದಲ್ಲಿ ಬ್ರಿಟಿಷರು ಆಳ್ವಿಕೆಯನ್ನು ಪ್ರಾರಂಭಿಸಿದ ಸಂದರ್ಭದಲ್ಲಿ ಅವರಿಗೆ ಇಲ್ಲಿಯ ಸಂಸ್ಕೃತಿಯ ಪರಿಚಯ ಮಾಡಿಕೊಳ್ಳುವ ಅಗತ್ಯ ಕಂಡು ಬಂದಿತು. ಆದುದ್ದರಿಂದ ಬೇರೆ ಬೇರೆ ಜನಪದ ಗುಂಪು ಮತ್ತು ಪಂಗಡಗಳ ಸಾಂಸ್ಕೃತಿಕ ಅಧ್ಯಯನಕ್ಕೆ ಸಮಾಜ ವಿಜ್ಞಾನಿಗಳನ್ನು ಮತ್ತು ಮಾನವ ಶಾಸ್ತ್ರಜ್ಞರನ್ನು ನೇಮಿಸಿದರು. ಬ್ರಿಟಿಷ್ ಸರ್ಕಾರದ ಈ ಯೋಜನೆಯ ಅನುಸಾರ ಕೆಲವು ಉಪಯುಕ್ತವಾದ ಅಧ್ಯಯನಗಳು ನಡೆದು ಅವು ಗ್ರಂಥರೂಪದಲ್ಲಿ ಹೊರಬಂದವು. "ಮಾನವ ಕುಲ ವಿವರಣಶಾಸ್ತ್ರ ಅಧ್ಯಯನ ಕ್ರಮದಲ್ಲಿ ಜಾತಿ ಮತ್ತು ಬುಡಕಟ್ಟುಗಳ ಅಧ್ಯಯನಗಳು ನಡೆದದ್ದರಿಂದ ಪ್ರತಿಯೊಂದು ಅಧ್ಯಯನವೂ ಸಾಮಾಜಿಕ ಸಾಂಸ್ಕೃತಿಕ ವೈಶಿಷ್ಟ್ಯಗಳ ಆಧಾರದ ಮೇಲೆ ಭೌಗೋಳಿಕ ಹಿನ್ನೆಲೆಯಲ್ಲಿ ಪ್ರತಿಪಾದಿತವಾಗಿವೆ".[೪] ರೈಸ್ಲೆ ಅವರ ಬಂಗಾಳದ ಬುಡಕಟ್ಟುಗಳ ಮತ್ತು ಜಾತಿಗಳನ್ನು ಕುರಿತು ನಡೆಸಿದ ಅಧ್ಯಯನ ೧೮೯೧ರಲ್ಲಿ ಗ್ರಂಥರೂಪದಲ್ಲಿ ಹೊರಬಂದಿತು. ಅವರು ಬಂಗಾಳದಲ್ಲಿ ವ್ಯಾಪಕ ಕ್ಷೇತ್ರಕಾರ್ಯ ಮಾಡಿ ಜಾತಿ ಮತ್ತು ಬುಡಕಟ್ಟುಗಳ ಪರಿಚಯ ಮಾಡಿಕೊಟ್ಟಿದ್ದಾರೆ (ರೈಸ್ಲೆ : ೧೮೯೧). ವಿಲಿಯಂ ಕ್ರುಕ್ ಅವರು ಸಂಯುಕ್ತ ಪ್ರದೇಶಗಳ ಜಾತಿ ಮತ್ತು ಬುಡಕಟ್ಟುಗಳ ಸರ್ವೇಕ್ಷಣೆ ಮಾಡಿದ್ದಾರೆ (೧೮೯೬). ಈ ಎರಡು ಪ್ರಯತ್ನಗಳು ಕಳೆದ ಶತಮಾನದಲ್ಲಿ ನಡೆದವು. ಇಪ್ಪತ್ತನೆಯ ಶತಮಾನದಲ್ಲಂತೂ ಈ ಬಗೆಯ ಗ್ರಂಥಗಳು ದೊಡ್ಡಸಂಖ್ಯೆಯಲ್ಲಿ ಬೆಳಕು ಕಂಡಿವೆ. ಥರ್ಸ್ಟನ್ ಮತ್ತು ರಂಗಾಚಾರಿ ಅವರು

ಪುಟಗಳನ್ನು ಹೊರತಂದುದು ಈ ಶತಮಾನದ ಆರಂಭದ ದಶಕದಲ್ಲೇ (೧೯೦೯).
ಅಯ್ಯರ್ ಮತ್ತು ಎಚ್.ವಿ. ನಂಜುಂಡಯ್ಯ ಅವರೊಡಗೂಡಿ ಆಗಿನ ಮೈಸೂರು
ಬುಡಕಟ್ಟು ಮತ್ತು ಜಾತಿಗಳ ಅಧ್ಯಯನ ನಡೆಸಿ ನಾಲ್ಕು ಸಂಪುಟಗಳನ್ನು ಪ್ರಕಟಿಸಿದ್ದಾರೆ
(೧೯೩೬). ಹೀಗೆ ಹತ್ತೊಂಭತ್ತು ಮತ್ತು ಇಪ್ಪತ್ತನೆಯ ಶತಮಾನದ ಆರಂಭದ
ಜೊತೆಜೊತೆಯಲ್ಲಿ ನಡೆದ ಜಾತಿ ಮತ್ತು ಬುಡಕಟ್ಟುಗಳ ಅಧ್ಯಯನ ಬ್ರಿಟಿಷರಿಗೆ
ಆಡಳಿತ ನಡೆಸಲು ದಾರಿಮಾಡಿಕೊಟ್ಟಿತು. ಈ ನೆಪದಲ್ಲಿ ನಡೆದ ಕೆಲಸಗಳು
ವಿಜ್ಞಾನ ಮತ್ತು ಜಾನಪದ ಕ್ಷೇತ್ರಕ್ಕೆ ವಿಶೇಷವಾದ ಕೊಡುಗೆಯೇ ಆದವು. ಒಂದೊಂದೇ
ವರ್ಗಗಳು ಸಂಶೋಧನೆಗೆ ತೊಡಗಿದವರಿಗೆ ಈ ಪ್ರಕಟಣೆಗಳು ಸೂಕ್ತ ಮಾರ್ಗದರ್ಶನ

॥ ಹಿರೇಮಲ್ಲೂರು ಈಶ್ವರನ್ "ಭಾರತದ ಹಳ್ಳಿಗಳು ಈ ನಾಡಿನ ಪ್ರಾಚೀನ
ಲ್ಲಿ ಅಡಕವಾಗಿರುವ ಅಪೂರ್ವ ಮೌಲ್ಯಗಳನ್ನು ಕಾಲ ಪುರುಷನ ಕ್ರೂರ
ಯಿಂದ ರಕ್ಷಿಸಿಕೊಂಡು ಬಂದಿವೆ. ಶೀಘ್ರಗತಿಯಲ್ಲಿ ಬದಲಾಗುತ್ತಿರುವ ಈ ಕಾಲದಲ್ಲಿ
ವಾಗಿ ಶಾಸ್ತ್ರೋಕ್ತವಾಗಿ ಅಭ್ಯಸಿಸಿ ಅವುಗಳ ವ್ಯಕ್ತಿತ್ವವನ್ನು ರೂಪಿಸುವ ಅವಶ್ಯಕತೆ
ಲೂ ಈಗ ಹೆಚ್ಚಾಗಿದೆ" ಎಂದಿದ್ದಾರೆ. ಭಾರತೀಯ ಸಮಾಜವನ್ನು ಪೂರ್ಣವಾಗಿ
ತಿಕೊಳ್ಳಬೇಕೆಂದು ಬಯಸುವವರಿಗೆ ದೊರೆಯುವ ಒಂದು ದೊಡ್ಡ ಆಕರ
ೀ. ಜಾನಪದವನ್ನು ಮೌಢ್ಯ ಕಂದಾಚಾರವೆಂದು ಕರೆದು ನಿರ್ಲಕ್ಷಿಸುವ ಧೋರಣೆ
ಾಲದವರೆಗೆ ರೂಢಿಯಲ್ಲಿತ್ತು. ಆದರೆ ಇಂದು ಎಂದೆಂದಿಗಿಂತಲೂ ಜಾನಪದ
ತುಂಬಾ ಮಹತ್ವವೊದಗಿದೆ. ಅದರಂತೆ ಈ ಅಧ್ಯಯನದ ಮುಖಾಂತರ
ಸ್ಥರ ಜಾನಪದ ಅಧ್ಯಯನ ಬಹುಮುಖ್ಯವಾಗಿದೆ.
ಗಾಮತಸ್ಥರು ಪ್ರಮುಖವಾಗಿ ಕರ್ನಾಟಕದ ತುಂಬೆಲ್ಲಾ ಕಂಡುಬಂದರು ಸಹ
ಾಗಿ ಸಂಪ್ರದಾಯ, ರೂಢಿ, ಆಚರಣೆಗಳು ಇನ್ನಿತರ ಅಂಶಗಳಲ್ಲಿ ಭಿನ್ನರಾಗಿದ್ದಾರೆ.
ಯನ ಸಂದರ್ಭದಲ್ಲಿ ಪ್ರಮುಖವಾಗಿ ಮಂಡ್ಯ ಜಿಲ್ಲೆಯನ್ನು ಪರಿಗಣಿಸಿ ಅಲ್ಲಿನ
ಸ್ಥರ ಸಾಂಸ್ಕೃತಿಕ, ಧಾರ್ಮಿಕ, ಶೈಕ್ಷಣಿಕ, ಉದ್ಯೋಗ, ಆರ್ಥಿಕ ಸ್ಥಿತಿ-ಗತಿ,
, ರಾಜಕೀಯ ಈ ಎಲ್ಲ ಅಂಶಗಳೊಂದಿಗೆ ಜಾನಪದೀಯ ಅಂಶಗಳು ಎಷ್ಟು
ಿವೆ ಹಾಗೂ ಪರಿವರ್ತನೆಯೊಂದಿಗೆ ಇಂದಿಗೂ ಮುಂದುವರಿಯುತ್ತಿವೆ ಎಂಬ
ಈ ಅಧ್ಯಯನ ಸಂದರ್ಭದಲ್ಲಿ ಕಂಡುಕೊಳ್ಳಲಾಯಿತು. "ನಮ್ಮ ಪರಂಪರೆಯಲ್ಲಿ
ಒಂದು ಭಾಷೆ ಒಂದು ಧರ್ಮ ನಿಂತಲ್ಲೇ ನಿಂತುಕೊಂಡರೆ, ಪರಂಪರೆಯ ಜೊತೆ

ಆ ಸ್ಥಗಿತ ಸಂಗತಿಗಳಿಗೆ ನಿರಂತರ ಅನುಸಂಧಾನ ಸಾಧ್ಯವಾಗಿಲ್ಲವೆಂಬುದು ಸ್ಪಷ್ಟವಾಗುತ್ತದೆ".[೬] ನನ್ನ ಸಂಶೋಧನ ವಲಯಕ್ಕೆ ಸಂಬಂಧಿಸಿ ಹೇಳುವುದಾದರೆ, ಕರ್ನಾಟಕ ರಾಜ್ಯದ ಮಂಡ್ಯ ಜಿಲ್ಲೆಯ ಏಳು ತಾಲ್ಲೂಕುಗಳಲ್ಲಿಯೂ ಗಂಗಾಮತಸ್ಥರು ವಾಸವಾಗಿದ್ದಾರೆ. ಸಾಂಸ್ಕೃತಿಕ ಅನನ್ಯತೆಯನ್ನು ಹೊಂದಿರುವ ಗಂಗಾಮತಸ್ಥರು ಅನೇಕ ವಿಧಗಳಲ್ಲಿ ಹಿಂದುಳಿದಿದ್ದಾರೆ. ಗಂಗಾಮತಸ್ಥ ಸಮುದಾಯದ ಬಗೆಗೆ ಹೆಚ್ಚಿನ ಅಧ್ಯಯನಗಳು ನಡೆದಿರುವುದಿಲ್ಲ. ಅಲ್ಲಲ್ಲಿ ಕೆಲವೊಂದು ಬಿಡಿ ಲೇಖನಗಳು ಬಂದಿವೆಯಷ್ಟೆ. ಈ ನಿಟ್ಟಿನಲ್ಲಿ ಗಂಗಾಮತಸ್ಥ ಸಮುದಾಯವನ್ನು ಹೊರ ಜಗತ್ತಿಗೆ ಪರಿಚಯಿಸಿ, ಒಟ್ಟು ಸ್ವರೂಪವನ್ನು ಅನಾವರಣಗೊಳಿಸುವುದು ಪ್ರಸ್ತುತ ಅಧ್ಯಯನದ ಪ್ರಧಾನ ಆಶಯವಾಗಿದೆ. ಇದರಿಂದಾಗಿ ಗಂಗಾಮತಸ್ಥ ಸಮುದಾಯವು ಎದುರಿಸುತ್ತಿರುವ ಸಮಸ್ಯೆಗಳಿಗೆ ಪರಿಹಾರೋಪಾಯಗಳನ್ನು ಕಂಡುಕೊಳ್ಳುವಲ್ಲಿ ಈ ಅಧ್ಯಯನವು ಸಹಕಾರಿಯಾಗಬಲ್ಲದು.

## ಅಧ್ಯಯನದ ಮಹತ್ವ

ನಮ್ಮ ದೇಶದ ಜನತೆ, ಸಾಮಾಜಿಕ ಜೀವನವನ್ನು ಜೀವಿಸಲು ಪ್ರಾರಂಭಿಸಿದಂದಿನಿಂದಲೇ, ಜನಪದ ಸಾಹಿತ್ಯ, ಕಲೆ ಸಂಸ್ಕೃತಿಗಳು ಬೆಳೆಯತೊಡಗಿದವು. ಜಾನಪದ ಮಾನವನಷ್ಟೇ ಪ್ರಾಚೀನವಾದುದ್ದು. ಒಂದಾನೊಂದು ಕಾಲದಲ್ಲಿ ಜಾನಪದ ಮಾನವ ಜೀವನದ ಸಕಲ ಕ್ಷೇತ್ರಗಳಲ್ಲಿಯೂ ವ್ಯಾಪಕವಾಗಿ ಹರಡಿಕೊಂಡಿತ್ತು. ಮಾನವ ವಿಕಾಸ ನಡೆದದ್ದೇ ಜಾನಪದ ರೀತಿಯಲ್ಲಿ. ಅವನ ಆಸೆ-ಆಕಾಂಕ್ಷೆಗಳು, ಅವನ ಕ್ರಿಯಾಜ್ಞಾನ ಭಾವನಾಶಕ್ತಿಗಳು ಹೊರಹೊಮ್ಮಿದ್ದೇ ಜಾನಪದ ಮಾಧ್ಯಮದ ಮೂಲಕ. ನಾಗರೀಕತೆ ಸಂಸ್ಕೃತಿಗಳು ಬೆಳೆದು ಪರಿಪುಷ್ಟಗೊಂಡದ್ದೇ ಜಾನಪದ ನೀಡಿದ ತೈಲಶಕ್ತಿಯಿಂದ. "ಒಂದು ಮಾತಿನಲ್ಲಿ ಹೇಳುವುದಾದರೆ ಬೆಳಗ್ಗೆ ಹಾಸಿಗೆಯಿಂದ ಏಳುವುದರಿಂದ ಹಿಡಿದು, ರಾತ್ರಿ ಮಲಗುವವರೆಗೆ, ಹುಟ್ಟಿದುದರಿಂದ ಹಿಡಿದು ಸಾಯುವವರೆಗೆ, ಮನುಷ್ಯ ಎದುರಿಸುವ ಎಲ್ಲ ಸಮಸ್ಯೆಗಳನ್ನೂ ಸರ್ವವ್ಯಾಪಿಯಾದ ಜನಪದ ಸಾಹಿತ್ಯ ಚರ್ಚಿಸುತ್ತದೆ".[೭]

ಹಲವಾರು ಧರ್ಮಗಳು, ನೂರಾರು ಜಾತಿಗಳು, ಸಾವಿರಾರು ಉಪಜಾತಿ ಹಾಗೂ ಭಾಷೆಗಳನ್ನು ಭಾರತ ಒಳಗೊಂಡಿದೆ. ಈ ಎಲ್ಲ ಜಾತಿ, ಉಪಜಾತಿಗಳು ತಮ್ಮದೇ ಆದ ವೈಶಿಷ್ಟ್ಯತೆಯನ್ನು ಕಾಪಾಡಿಕೊಂಡು ಬಂದಿವೆ. ಇಪ್ಪತ್ತನೇ ಶತಮಾನದ ಮೇಲುಪದರಿನಲ್ಲಿ ಎರಡು ಪ್ರಮುಖ ಬೆಳವಣಿಗೆಗಳನ್ನು ಗುರುತಿಸಬಹುದು. ಮೊದಲನೆಯದು, ರಾಜಕೀಯ ಸ್ವಾತಂತ್ರ್ಯ ಮತ್ತು ಪ್ರಜಾಸತ್ತೆ; ಎರಡನೆಯದು, ಶತಮಾನದ ಕೊನೆಯ ದಶಕದಿಂದ ಪ್ರಾರಂಭವಾಗಿರುವ

ಆರ್ಥಿಕ ಉದಾರೀಕರಣ. ಸ್ವಾತಂತ್ರ್ಯ ಪೂರ್ವ ಕಾಲದಲ್ಲಿ ಇಂಗ್ಲೀಷ್ ಶಿಕ್ಷಣ ಮತ್ತು ಆಧುನಿಕ ಪ್ರಜ್ಞೆ ಓದಿದವರಲ್ಲಿ ಬೆಳೆಯುತ್ತಿದ್ದ ಕಾಲದಲ್ಲಿ ನಮ್ಮ ಜನ ಸಮುದಾಯಗಳ ಬದುಕಿನಲ್ಲಿ ಭಾರಿ ಬದಲಾವಣೆಗಳೇನೂ ಆಗಿರಲಿಲ್ಲ. ಆಗಿನ ಬಹುಮುಖ್ಯ ಫಲ ಎಂದರೆ ಉದಾರ ಮಾನವೀಯತೆಯಷ್ಟೇ. ಸಾಮಾಜಿಕ ಚಲನೆ ಕಾಣಿಸಿಕೊಂಡದ್ದು ಸ್ವಾತಂತ್ರ್ಯದ ನಂತರವೇ. ಸುಮಾರು ಐವತ್ತು ವರ್ಷಗಳ ಸಂವಿಧಾನಬದ್ಧ ಬದುಕಿನ ಅನಂತರ ಈಗ ಜಾಗತೀಕರಣ ಪ್ರಕ್ರಿಯೆಯಲ್ಲಿ ಎಲ್ಲರೂ ತೊಡಗಿಕೊಂಡಿದ್ದೇವೆ. ಇದು ಮತ್ತೆ ನಮ್ಮ ಸಮಾಜಗಳನ್ನು ಹೊಸ ದಾರಿಯಲ್ಲಿ ಚಲಿಸಲು ಬಿಟ್ಟಿದೆ. ಈ ಹೊಸ ಚಲನೆ, ಮತ್ತೆ ತರಬಹುದಾದ ಬದಲಾವಣೆಗಳ ಮುನ್ನ ಇಂದಿನ ಸ್ಥಿತಿಯ ದಾಖಲಾತಿ ಮಾಡುವ ಅನಿವಾರ್ಯತೆಯಿದೆ.

ವಿವಿಧತೆಯಲ್ಲಿ ಏಕತೆಯನ್ನು ಸಾಧಿಸಿರುವ ಭಾರತ ದೇಶದಲ್ಲಿ ಹಲವಾರು ಸಮುದಾಯಗಳಿವೆ. ಇದರಲ್ಲಿ ಕೆಲವು ಸಮುದಾಯಗಳು ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ ಬದಲಾವಣೆಗಳನ್ನು ಕಂಡಿವೆ. ಕೆಲವು ಸಮುದಾಯಗಳು ನಿಂತಲ್ಲೇ ನಿಂತು ಬಿಟ್ಟಿವೆ. ಅಂಥ ಸಮುದಾಯಗಳಲ್ಲಿ ಗಂಗಾಮತಸ್ಥ ಸಮುದಾಯವು ಒಂದು. ಈ ಸಮುದಾಯದ ಬಗ್ಗೆ ಸಮಗ್ರ ಸಂಶೋಧನಾ ಅಧ್ಯಯನ ನಡೆದಿರುವುದಿಲ್ಲ. ಬೆರಳೆಣಿಕೆಯಷ್ಟು ಕಿರು ಲೇಖನಗಳು ಪ್ರಕಟಗೊಂಡಿವೆ. ಆಧುನಿಕ ಸಮಾಜದಲ್ಲಿ ಸಂಸ್ಕೃತಿಯ ಅನನ್ಯತೆಗಳು ಜಾಗತೀಕರಣದ ಭರಾಟೆಯಲ್ಲಿ ಮರೆಯಾಗುವುದಕ್ಕಿಂತ ಮೊದಲು ಗಂಗಾಮತಸ್ಥ ಸಮುದಾಯದ ಬಗ್ಗೆ ಅಧ್ಯಯನ ಮಾಡಬೇಕಾಗಿರುವುದು ಅನಿವಾರ್ಯವಾಗಿದೆ.

ಗಂಗಾಮತಸ್ಥ ಸಮುದಾಯವು ತನ್ನದೇ ಆದ ನಿರ್ದಿಷ್ಟ ವಾಸಸ್ಥಾನ, ಸಾಮಾಜಿಕ, ರಾಜಕೀಯ, ಆರ್ಥಿಕ, ಧಾರ್ಮಿಕ ಆಚರಣೆಗಳು, ಭಾಷೆ, ಉಡುಗೆ-ತೊಡುಗೆ, ರೀತಿ-ನೀತಿ, ಆಚಾರ-ವಿಚಾರ, ನ್ಯಾಯ ಪದ್ಧತಿ ವ್ಯವಸ್ಥೆಗಳನ್ನು ಹೊಂದಿದೆ. ಒಳನಾಡಿನ ಮೀನುಗಾರಿಕೆ ವೃತ್ತಿಯ ಜೊತೆಗೆ ವ್ಯವಸಾಯವನ್ನು ಇವರು ಮಾಡುತ್ತಾರೆ. ಪ್ರಸ್ತುತ ಅಧ್ಯಯನವು ವಿವಿಧ ಸಮುದಾಯಗಳನ್ನ ಕುರಿತು ತೌಲನಿಕ ಅಧ್ಯಯನ ನಡೆಸುವವರಿಗೆ ಉಪಯುಕ್ತವಾಗಬಲ್ಲವು. ಜೊತೆಗೆ ಈ ಮಹಾಪ್ರಬಂಧದಲ್ಲಿ ವಿಶ್ಲೇಷಿಸಲಾದ ಅಂಕಿ-ಅಂಶಗಳು ಬೇರೆ ಸಮುದಾಯವನ್ನು ಸಾಹಿತ್ಯ ಜಗತ್ತಿಗೆ ಪರಿಚಯಿಸುವ ಮೂಲಕ ಏಕಕಾಲದಲ್ಲಿ ಸಮುದಾಯಕ್ಕೆ ಮತ್ತು ಸಮಾಜಕ್ಕೆ ಈ ಅಧ್ಯಯನವು ಒಂದು ಕೊಡುಗೆಯಾಗಬಲ್ಲದು.

## ಅಧ್ಯಯನದ ಉದ್ದೇಶಗಳು

ಯಾವುದೇ ಒಂದು ಸಮುದಾಯವು ತನ್ನದೇ ಆದ ಆಚಾರ-ವಿಚಾರ, ನಡವಳಿಕೆ, ಸಂಪ್ರದಾಯ, ದೈವ, ದೇವರು ಮುಂತಾಗಿ ರೂಢಿಸಿಕೊಂಡಿರುತ್ತಾರೆ. ಈ ದೃಷ್ಟಿಯಲ್ಲಿ ಗಂಗಾಮತಸ್ಥರ ಬದುಕಿನ ಹಲವು ಮಜಲುಗಳ ಅಧ್ಯಯನ ನಡೆಸುವ ಮತ್ತು ಅವರ ಸಂಸ್ಕೃತಿಯ ಮೂಲಕ ನಮಗೆ ಸಿಗುವ ಉತ್ತಮ ಅಂಶಗಳನ್ನು ಹಾಗೂ ಒಟ್ಟು ಭಾರತೀಯ ಸಂಸ್ಕೃತಿಗೆ ಇವರು ಕೊಡುಗೆಯನ್ನು ಗಮನಿಸುವುದು ಅಗತ್ಯವಾಗಿದೆ. "ಬದುಕು ಸಾಗಿಸುತ್ತಿರುವ ಒಂದು ಜಾತಿ ತನ್ನದೇ ಆದ ಅನೇಕ ಜೀವನ ಪರ್ಯಂತದವರೆಗಿನ ಆಚರಣೆಗಳಿರುತ್ತವೆ. ಇವು ಜಾತಿಯಿಂದ ಜಾತಿಗೆ ವಿಭಿನ್ನವಾಗಿರುತ್ತದೆ".[೮] ಈ ದೃಷ್ಟಿಯಿಂದಾಗಿ ಗಂಗಾಮತಸ್ಥ ಸಮುದಾಯದ ಅಧ್ಯಯನದ ಉದ್ದೇಶಗಳು ಹಲವು ರೀತಿಯಲ್ಲಿ ಇದ್ದರೂ ಅವುಗಳನ್ನು ಪ್ರಮುಖವಾಗಿ ಐದು ಭಾಗಗಳಾಗಿ ವಿಂಗಡಿಸಿಕೊಳ್ಳಬಹುದು.

- ಗಂಗಾಮತಸ್ಥ ಸಮುದಾಯದ ಭೌಗೋಳಿಕ ಪರಿಸರ ಮತ್ತು ಜನಸಂಖ್ಯೆಯನ್ನು ತಿಳಿದುಕೊಳ್ಳಬಹುದು.
- ಗಂಗಾಮತಸ್ಥ ಸಮುದಾಯದ ಪೌರಾಣಿಕ ಹಿನ್ನೆಲೆ, ಸಾಹಿತ್ಯಿಕ ಹಾಗೂ ಚಾರಿತ್ರಿಕ ಬೆಳವಣಿಗೆಯನ್ನು ಕಂಡುಕೊಳ್ಳುವುದು.
- ಗಂಗಾಮತಸ್ಥರ ಪಾರಂಪರಿಕ ವೃತ್ತಿ, ಸಾಮಾಜಿಕ, ಆರ್ಥಿಕ ಮತ್ತು ಶೈಕ್ಷಣಿಕ, ಧಾರ್ಮಿಕ ಸ್ಥಿತಿಗತಿಗಳನ್ನು ಗುರುತಿಸುವುದು.
- ಗಂಗಾಮತಸ್ಥರ ಸಾಂಸ್ಕೃತಿಕ ಅನನ್ಯತೆಯನ್ನು ದಾಖಲಿಸುವುದು.
- ಗಂಗಾಮತಸ್ಥ ಸಮುದಾಯವು ಎದುರಿಸುತ್ತಿರುವ ಸಮಸ್ಯೆಗಳನ್ನು ಶೋಧಿಸುವುದು ಮತ್ತು ಸರ್ಕಾರವು ಕೈಗೊಂಡಿರುವ ಅಭಿವೃದ್ಧಿ ಕಾರ್ಯಗಳನ್ನು ಪರಿಶೀಲಿಸುವುದು.

## ಅಧ್ಯಯನದ ವ್ಯಾಪ್ತಿ

ಭಾರತದಾದ್ಯಂತ ಹರಡಿಕೊಂಡಿರುವ ಗಂಗಾಮತಸ್ಥರನ್ನ ಅಧ್ಯಯನದ ಉದ್ದೇಶಕ್ಕಾಗಿ ಕರ್ನಾಟಕ ರಾಜ್ಯದ ಮಂಡ್ಯ ಜಿಲ್ಲೆಯನ್ನ ಮಾತ್ರ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಲಾಗಿದೆ. ಕಾವೇರಿ ನದಿಯಿಂದ ಸದಾ ಹಸಿರಿನಿಂದ ಕಂಗೊಳಿಸುತ್ತಿರುವ ಮಂಡ್ಯ ಜಿಲ್ಲೆಯು ಏಳು ತಾಲ್ಲೂಕುಗಳನ್ನು ಹೊಂದಿದೆ. ಅವುಗಳೆಂದರೆ, ಮಂಡ್ಯ, ಮಳವಳ್ಳಿ, ಮದ್ದೂರು, ಶ್ರೀರಂಗಪಟ್ಟಣ, ಪಾಂಡವಪುರ, ನಾಗಮಂಗಲ, ಕೃಷ್ಣರಾಜಪೇಟೆ. ಈ ಏಳು ತಾಲ್ಲೂಕುಗಳಲ್ಲಿಯೂ

ಗಂಗಾಮತಸ್ಥರು ವಾಸಿಸುತ್ತಿದ್ದರೂ, ಪ್ರಮುಖವಾಗಿ ಮಳವಳ್ಳಿ, ಮದ್ದೂರು, ಮಂಡ್ಯ, ಶ್ರೀರಂಗಪಟ್ಟಣ ತಾಲ್ಲೂಕುಗಳಲ್ಲಿ ಅತ್ಯಂತ ಹೆಚ್ಚಿನ ಜನರು ವಾಸವಾಗಿದ್ದಾರೆ. ಒಟ್ಟಾರೆಯಾಗಿ ನನ್ನ ಅಧ್ಯಯನವು ಮಂಡ್ಯ ಜಿಲ್ಲೆಯ ವ್ಯಾಪ್ತಿಗೆ ಸೇರಿದೆ.

## ೧.೨ ಅಧ್ಯಯನಕ್ಕಾಗಿ ಕಂಡುಕೊಂಡ ವಿಧಾನಗಳು

ಗಂಗಾಮತಸ್ಥರ ಜಾನಪದ ಅಧ್ಯಯನವು ಮುಖ್ಯವಾಗಿ ಕ್ಷೇತ್ರಕಾರ್ಯ ಆಧಾರಿತ ಅಧ್ಯಯನವಾಗಿದೆ. ಪ್ರಸ್ತುತದಲ್ಲಿ ಅಧ್ಯಯನವು ಪ್ರಯೋಗಾತ್ಮಕವಾಗಿದೆ. ಜನಾಂಗೀಯ ಅಧ್ಯಯನ ಮಾಡುವಾಗ ಅವರ ವಾಸಸ್ಥಳ, ಅವರಲ್ಲಿರುವ ಮೌಖಿಕ ಪರಂಪರೆ, ಸಂಪ್ರದಾಯ, ಆಚಾರ-ವಿಚಾರ, ನಂಬಿಕೆ-ನಿಷೇಧಗಳು, ಧರ್ಮ, ಕಲೆ, ಹುಟ್ಟಿನಿಂದ ಸಾವಿನವರೆಗೆ ಬರುವ ಎಲ್ಲಾ ಬಗೆಯ ಜೀವನಾವರ್ತನದ ಆಚರಣೆಗಳು ಅವುಗಳಲ್ಲಿ ಅವರು ಇಟ್ಟಿರುವ ನಂಬಿಕೆ, ಕೌಟುಂಬಿಕ ವ್ಯವಸ್ಥೆ, ಸಾಮಾಜಿಕ ಜೀವನ, ನಾಗರೀಕತೆಯ ಪ್ರಭಾವದಿಂದ ಆಗಿರುವ ಬದಲಾವಣೆ, ವ್ಯಕ್ತಿ ಆಹಾರ ಪದ್ಧತಿ, ಮೊದಲಾದವುಗಳನ್ನು ಗಮನಿಸಬೇಕಾಗುತ್ತದೆ. ಯಾವುದೇ ಒಂದು ಜನಾಂಗದ ಸಂಸ್ಕೃತಿಯು ನಿಂತ ನೀರಲ್ಲ. ಅದು ಸದಾ ಹರಿಯುತ್ತಿರುವ ಜೀವಜಲ. ನಿತ್ಯ ಪರಿರ್ತನಾಶೀಲವಾದುದು. ಅನ್ಯ ಸಂಸ್ಕೃತಿಯ ಪ್ರಭಾವಕ್ಕೆ ಒಳಗಾಗದೆ ಪ್ರತ್ಯೇಕತೆಯನ್ನು ಕಾಯ್ದುಕೊಂಡಿರುವ ಸಂಸ್ಕೃತಿಗಳಲ್ಲಿಯೂ ಕೂಡ ಕುಲಾಂತರದಲ್ಲಿ ಎಷ್ಟೋ ಬದಲಾವಣೆಗಳಾಗುತ್ತಿರುವುದನ್ನು ಕಾಣುತ್ತೇವೆ. ಇದು ಅನಿವಾರ್ಯವೂ ಹೌದು. ಇಂತಹ ವಿಚಾರಗಳನ್ನು ಕುರಿತು ಅಧ್ಯಯನ ಮಾಡುವ ಸಂದರ್ಭದಲ್ಲಿ ಕೆಲವೊಂದು ವಿಧಾನಗಳನ್ನು ಅನುಸರಿಸಬೇಕಾಗುತ್ತದೆ.

**೧. ವಿಷಯ ಅಧ್ಯಯನ (Case study method) ವಿಧಾನ :** ಗಂಗಾಮತಸ್ಥ ಸಮುದಾಯದ ಸಾಮಾಜಿಕ ಹಾಗೂ ಆರ್ಥಿಕ ಸ್ಥಿತಿಗತಿಗಳನ್ನು ವಿಶ್ಲೇಷಿಸಲು "ವಿಷಯ ಅಧ್ಯಯನ ವಿಧಾನ"ವನ್ನು ಅನುಸರಿಸಲಾಗಿದೆ. ಬಿಕ್‌ಸೇ ಮತ್ತು ಬಿಸೇ ಎನ್ನುವವರು ಈ ವಿಧಾನವನ್ನು "ಒಂದು ಜನಾಂಗ, ಒಂದು ವಿಷಯ ಅಥವಾ ಒಂದು ಸಂಸ್ಥೆಯ ಬಹು ಕಾಳಜಿಯ ಮತ್ತು ಉತ್ಕೃಷ್ಟ ಅವಲೋಕನ" ಎಂದು ವ್ಯಾಖ್ಯಾನಿಸಿದ್ದಾರೆ. "ಗಂಗಾಮತಸ್ಥ ಸಮುದಾಯದ ಸಾಮಾಜಿಕ ಹಾಗೂ ಆರ್ಥಿಕ ಅಧ್ಯಯನಕ್ಕೆ" ಈ ವಿಧಾನವೇ ಅತ್ಯುತ್ತಮ ವಿಧಾನವೆಂದು ಇದನ್ನು ಬಳಸಿಕೊಳ್ಳಲಾಗಿದೆ.

**೨. ಪ್ರಶ್ನಾವಳಿ ವಿಧಾನ :** ಈ ವಿಧಾನವನ್ನು ಎಲ್ಲ ಅಧ್ಯಯನ ವಿಧಾನಗಳಲ್ಲೂ ಬಳಸಬಹುದು. ಸಂಶೋಧನಾ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳುವ ಕೆಲಸವನ್ನು ಸಂಶೋಧನೆಯಲ್ಲಿ ಮಾಡುತ್ತಿರುತ್ತೇವೆ. ಅಧ್ಯಯನದ ವಿಷಯಕ್ಕನುಗುಣವಾಗಿ ಸೂಕ್ತವಾದ ಪ್ರಶ್ನೆಗಳನ್ನು ರಚಿಸಿ ಸಮೀಕ್ಷೆ ಕೈಗೊಂಡು ಫಲಿತಗಳನ್ನು ಪ್ರಬಂಧದಲ್ಲಿ ನಮೂದಿಸಲಾಗಿದೆ.

**೩. ಸಂದರ್ಶನ ವಿಧಾನ :** ಮಂಡ್ಯ ಜಿಲ್ಲೆಯ ಎಲ್ಲ ಏಳು ತಾಲ್ಲೂಕುಗಳ ಗಂಗಾಮತಸ್ಥರ ಗುಂಪುಗಳ ಆಯ್ದ ವ್ಯಕ್ತಿಗಳನ್ನು ಸಂದರ್ಶನಕ್ಕೆ ಒಳಪಡಿಸಲಾಗಿದ್ದು, ಈ ಸಲುವಾಗಿ ಪ್ರಶ್ನಾವಳಿಯನ್ನು ರೂಪಿಸಿಕೊಳ್ಳಲಾಗಿದೆ. ಈ ಸಂದರ್ಶನದ ಮೂಲಕ ಪಡೆದ ಅನುಭವವನ್ನು ಪ್ರಸ್ತುತ ಅಧ್ಯಯನದಲ್ಲಿ ಮುಖ್ಯವಾಗಿ ಬಳಸಿಕೊಳ್ಳಲಾಗಿದೆ.

**೪. ಅವಲೋಕನ ವಿಧಾನ :** ಗಂಗಾಮತಸ್ಥ ಸಮುದಾಯದ ಸಾಮಾಜಿಕ, ಸಾಂಸ್ಕೃತಿಕ ಮತ್ತು ಧಾರ್ಮಿಕ ವಿಷಯಗಳನ್ನು ಆಯಾ ಸಂದರ್ಭದಲ್ಲಿ ಅವಲೋಕಿಸಿ ಸತ್ಯಕ್ಕೆ ಹತ್ತಿರವಾದ ಮಾಹಿತಿಯನ್ನು ದಾಖಲಿಸಿಕೊಳ್ಳುವ ಮೂಲಕ ಸಮುದಾಯದ ವಾಸ್ತವ ಅಂಶಗಳನ್ನು ಕಟ್ಟಿಕೊಡುವ ಪ್ರಯತ್ನದಲ್ಲಿ ಅವಲೋಕನ ವಿಧಾನವನ್ನು ಸಮರ್ಥವಾಗಿ ಬಳಸಿಕೊಳ್ಳಲಾಗಿದೆ.

**೫. ಐತಿಹಾಸಿಕ ವಿಧಾನ :** ಗಂಗಾಮತಸ್ಥ ಸಮುದಾಯವನ್ನು ಕುರಿತು ಈಗಾಗಲೇ ದಾಖಲೆಯಾಗಿರುವ ನಾನಾ ಮೂಲದ ಚಾರಿತ್ರಿಕ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಆ ಮೂಲಕ ಅವರ ಚರಿತ್ರೆಯನ್ನು ಕಟ್ಟಿಕೊಡುವ ಪ್ರಯತ್ನದಲ್ಲಿ ಈ ವಿಧಾನವು ಪೂರಕವಾಗಿದೆ.

**೬. ಸಂಖ್ಯಾ ಶಾಸ್ತ್ರೀಯ ವಿಧಾನ :** ಪ್ರಸ್ತುತ ಸಮೀಕ್ಷೆಯ ಪ್ರಕಾರ ಇವರ ಒಟ್ಟು ಜನಸಂಖ್ಯೆ, ಸಾಕ್ಷರತೆ ಪ್ರಮಾಣ ಮತ್ತು ವಿವಿಧ ವೃತ್ತಿಗಳಲ್ಲಿ ತೊಡಗಿಸಿಕೊಂಡಿರುವ ಶೇಕಡಾವಾರು ಸಂಖ್ಯೆಯನ್ನು ನೀಡಲಾಗಿದ್ದು, ಹೆಚ್ಚಿನ ಮಾಹಿತಿಯನ್ನು ಅನುಬಂಧದಲ್ಲಿ ಕೋಷ್ಟಕಗಳ ರೂಪದಲ್ಲಿ ಕೊಡಲಾಗಿದೆ. ಈ ಮೂಲಕ ಸಂಖ್ಯಾಶಾಸ್ತ್ರೀಯ ವಿಧಾನವನ್ನು ಬಳಸಿಕೊಳ್ಳಲಾಗಿದೆ.

ಹೀಗೆ ಮೇಲ್ಕಂಡ ವಿಧಾನಗಳ ಮೂಲಕ ಗಂಗಾಮತಸ್ಥ ಸಮುದಾಯದ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಅಲ್ಲದೆ ಅಧ್ಯಯನಕ್ಕೆ ಸಂಬಂಧಿಸಿದಂತೆ ಕೆಲವೊಂದು ಮಿತಿಗಳನ್ನೂ ಸಹ ಅನುಸರಿಸಲಾಗಿದೆ.

೧. ಮಂಡ್ಯ ಜಿಲ್ಲೆಯ ಏಳು ತಾಲ್ಲೂಕುಗಳ ಗಂಗಾಮತಸ್ಥರ ಕುರಿತು ಅಂಕಿ-ಅಂಶಗಳನ್ನು ಮಾತ್ರ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

೨. ಗಂಗಾಮತಸ್ಥ ಸಮುದಾಯದ ಬಹುಪಾಲು ಜನರು ಅನಕ್ಷರಸ್ಥರಾಗಿದ್ದು, ಅವರಿಂದ ಪಡೆಯಲಾಗಿರುವ ಮೌಖಿಕ ಮಾಹಿತಿಯನ್ನು ಅಧ್ಯಯನಕ್ಕೆ ಪೂರಕವಾಗಿ ಬಳಸಿಕೊಳ್ಳಲಾಗಿದೆ. ಅದನ್ನೇ ಸತ್ಯವೆಂದು ಭಾವಿಸಲಾಗಿದೆ.

೩. ಗಂಗಾಮತಸ್ಥ ಸಮುದಾಯದ ಆರ್ಥಿಕ ವ್ಯವಸ್ಥೆಯು ತೀರಾ ಕೆಳಮಟ್ಟದ್ದಾಗಿದ್ದು, ಇವರು ಅತ್ಯಂತ ಉನ್ನತ ಹುದ್ದೆಗಳಲ್ಲಿ ಇರುವುದು ವಿರಳವಾಗಿದೆ. ಇವರ ಪ್ರಾಥಮಿಕ ವಲಯವೆಂದರೆ ಮೀನುಗಾರಿಕೆಯಾಗಿದೆ. ಸಣ್ಣ-ಪುಟ್ಟ ವ್ಯಾಪಾರ ಮಾಡುವವರು, ಬೆರಳೆಣಿಕೆಯಷ್ಟು ಶಿಕ್ಷಕರನ್ನ ಗಂಗಾಮತಸ್ಥರಲ್ಲಿ ಕಾಣಬಹುದು.

## ೧.೩ ಇಲ್ಲಿಯವರೆಗೆ ನಡೆದಿರುವ ಅಧ್ಯಯನಗಳು

ಗಂಗಾಮತಸ್ಥ ಸಮುದಾಯದ ಬಗ್ಗೆ ನಡೆದಿರುವ ಅಧ್ಯಯನಗಳು ಕಡಿಮೆ. ಗಂಗಾಮತಸ್ಥರನ್ನ ಬೆಸ್ತ, ಮೊಗವೀರ, ಮರಕಾಲ, ಮೊಗೇರ, ಪಟ್ನದವ, ಬೋವಿ, ನಾಯಕ, ಅಂಬಿಗ, ಕಾರ್ವಿ, ಬಾರಿಕ, ಮಡಿ, ಮುದಿರಾಜ, ಪರಿವಾರ, ಕೋಲಿ, ಕಬ್ಬಿಗ ಮುಂತಾದ ನಾನಾ ಹೆಸರುಗಳಿಂದ ವಿವಿಧ ಪ್ರದೇಶಗಳಲ್ಲಿ ಕರೆದರೂ ಸಹ ಯಾವುದೇ ರೀತಿಯ ಸಂಶೋಧನೆಗಳು ನಡೆಯದಿರುವುದು ಕಂಡುಬರುತ್ತದೆ. ಆದರೆ ಉಪಸಂಸ್ಕೃತಿಯ ಅಧ್ಯಯನ ಮಾಲೆಯಡಿಯಲ್ಲಿ 'ಮೊಗವೀರರ ಸಂಸ್ಕೃತಿ' ಎಂಬ ಸಂಶೋಧನಾ ಕೃತಿಯನ್ನು ವೆಂಕಟರಾಜ ಪುಣಿಂಚತ್ತಾಯರು ಬರೆದಿದ್ದಾರೆ. ಕನ್ನಡ ವಿಶ್ವವಿದ್ಯಾನಿಲಯ, ಹಂಪಿಯ ಮಾನವಶಾಸ್ತ್ರ ಅಧ್ಯಯನ ವಿಭಾಗದ ಅಧ್ಯಾಪಕರಾದ ಡಾ.ಎಲ್. ಶ್ರೀನಿವಾಸರವರು, ಎಂ. ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ ಕರ್ನಾಟಕ ಸಂಘ (ರಿ), ಮಂಡ್ಯ, ಇವರು ಹೊರತರುತ್ತಿರುವ "ಅಭಿವ್ಯಕ್ತಿ" ಎಂಬ ಸಾಹಿತ್ಯ ಮಾಸಿಕಕ್ಕೆ "ಬುಂಡೆ ಬೆಸ್ತ ಸಮುದಾಯ : ಒಂದು ಅವಲೋಕನ" ಎಂಬ ಲೇಖನವೊಂದನ್ನು ಬರೆದಿದ್ದಾರೆ. ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಪ್ರಾಧ್ಯಾಪಕರಾದ ಪ್ರೊ. ಸಿ.ಪಿ. ಸಿದ್ಧಾಶ್ರಮರವರು ತಮ್ಮ 'ದಿಟದ ದಿಟ್ಟೆಯ ಪಯಣ' ಎಂಬ ಕೃತಿಯಲ್ಲಿ "ಉತ್ತರ ಕರ್ನಾಟಕದ ಗಂಗಾಮತಸ್ಥರ ಸಂಪ್ರದಾಯಗಳು" ಎಂಬ ಒಂದು ಸಂಶೋಧನಾ ಲೇಖನವನ್ನು ಬರೆದಿದ್ದಾರೆ.

ಗಂಗಾಮತಸ್ಥ ಸಮುದಾಯವನ್ನು ಕುರಿತು ಇದುವರೆಗೆ ದೊರೆತ ಸಂಶೋಧನಾ ಲೇಖನಗಳು ಅತ್ಯಲ್ಪವಾದವುಗಳು. ನನ್ನ ಸಂಶೋಧನಾ ಅವಧಿಯಲ್ಲಿ ದೊರೆತ ಕೆಲವು ಕೃತಿಗಳ

ಮಾಹಿತಿಯನ್ನು ಮೇಲೆ ಹೆಸರಿಸಿದ್ದೇನೆ. ಇವುಗಳಲ್ಲದೆ ನನಗೆ ಯಾವುದೇ ರೀತಿಯ ಸಂಶೋಧನಾ ಬರಹಗಳು ದೊರೆತಿರುವುದಿಲ್ಲ. ಆದರೆ ಇವುಗಳಲ್ಲಿ ಈ ಜನಾಂಗಕ್ಕೆ ಸಂಬಂಧಿಸಿದ ಕೆಲವೊಂದು ಪ್ರಾಥಮಿಕ ಮಾಹಿತಿಗಳು ಮಾತ್ರ ದೊರಕುತ್ತವೆ. ಇವುಗಳು ನನ್ನ ಸಂಶೋಧನೆಗೆ ಸಹಾಯವನ್ನು ನೀಡಿವೆ.

**ಅಡಿಟಿಪ್ಪಣಿಗಳು**

೧. ಭೈರಪ್ಪ, ಕೆ., ಭಾರತೀಯ ಸಮಾಜ ಮತ್ತು ಸಾಮಾಜಿಕ ಚಿಂತನೆ ಭಾಗ-೧, ಶ್ರೀ ಸಿದ್ದಲಿಂಗೇಶ್ವರ ಪ್ರಕಾಶನ, ಗುಲ್ಬರ್ಗಾ, ೨೦೦೭, ಪು. ೨೨.

೨. Keesing Felix. M – Cultural Anthropology New York Hort, Rime hart and Winston, 1962, page. 25.

೩. B. Malinoski – A Scientific theory of culture (page – 118) 1944.

೪. ಡಾ. ಅಂಬಳಿಕೆ ಹಿರಿಯಣ್ಣ – "ಮಲೆನಾಡಿನ ವೈಷ್ಣವ ಒಕ್ಕಲಿಗರ ಸಂಸ್ಕೃತಿ, – ೧೯೯೯ ಪು. ೩.

೫. ಡಾ. ಎಂ. ಹಿರೇಮಲ್ಲೂರು ಈಶ್ವರನ್, ಭಾರತದ ಹಳ್ಳಿಗಳು, ಮೈಸೂರು ವಿಶ್ವವಿದ್ಯಾನಿಲಯ ಪ್ರಸಾರಾಂಗ, ಮೈಸೂರು, ೧೯೭೨, ಪು. ೧೬.

೬. ಪ್ರಭಾಕರ ಎ.ಎಸ್., ಬುಡಕಟ್ಟು ಅಧ್ಯಯನ ಮಾಲೆ – ೩, ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ ಹಂಪಿ, ೨೦೦೦, ಪು–೫೧.

೭. ಗೋರೂರು ರಾಮಸ್ವಾಮಿ ಅಯ್ಯಂಗಾರ್, "ಜನಪದ ಜೀವನ ಮತ್ತು ದರ್ಶನ" ಪ್ರಸಾರಾಂಗ, ಮಾನಸಗಂಗೋತ್ರಿ, ಮೈಸೂರು – ೧೯೭೪, ಪು–೧೦೪.

೮. ಡಾ. ಡಿ.ಆರ್. ಪಾಂಡುರಂಗ, "ದಕ್ಷಿಣ ಕನ್ನಡ ಜಿಲ್ಲೆಯ ಭೈರರು" – ೧೯೯೦, ಪು–೧೭.

೯. Biesay and Biesay; Quoted in Baj Pai, S.R. Methods of Social Survey and Research, Kitab Bhar, Kanpur, Seventh Books.

# ಅಧ್ಯಾಯ – ಎರಡು

# ಗಂಗಾಮತಸ್ಥರ ಮೂಲ

೨.೧ ಪದನಿಷ್ಪತ್ತಿ

೨.೨ ಗಂಗಾಮತಸ್ಥರು

೨.೩ ಗಂಗಾಮತಸ್ಥರ ಬಳಿಗಳು ಮತ್ತು ಪಂಗಡಗಳು

೨.೪ ಭೌಗೋಳಿಕ ಪರಿಸರ ಮತ್ತು ಜನಸಂಖ್ಯೆ

೨.೫ ಗಂಗಾಮತಸ್ಥರ ಸಾಂಸ್ಕೃತಿಕ ಕೇಂದ್ರಗಳು

೨.೬ ಗಂಗಾಮತಸ್ಥರ ಪೌರಾಣಿಕ ಹಿನ್ನೆಲೆ

೨.೭ ಶಾಸನಗಳ ಉಲ್ಲೇಖಗಳು

೨.೮ ಈ ಸಮುದಾಯದವರ ಸಾಹಿತ್ಯದ ಉಲ್ಲೇಖಗಳು

# ಅಧ್ಯಾಯ – ೨

# ಗಂಗಾಮತಸ್ಥರ ಮೂಲ

ಭಾರತವು ವಿವಿಧತೆಯಲ್ಲಿ ಏಕತೆಯನ್ನು ಹೊಂದಿರುವ ದೇಶ. ಹಲವು ಧರ್ಮದವರು, ಹಲವು ಸಮುದಾಯಗಳು ನಮ್ಮ ರಾಷ್ಟ್ರದಲ್ಲಿರುವುದು ಹೆಮ್ಮೆಯ ವಿಷಯವಾಗಿದೆ. ಈ ಸಮುದಾಯಗಳು ತಮ್ಮದೇ ಆದ ಸಂಸ್ಕೃತಿಯನ್ನು ಹೊಂದಿವೆ. ಸಮುದಾಯಗಳಿಂದ, ಸಮುದಾಯಗಳಿಗೆ ಭಿನ್ನತೆಯನ್ನು ಗುರುತಿಸಬಹುದು. ಪ್ರತಿಯೊಂದು ಸಮುದಾಯವು ತಮ್ಮ ಮೂಲಗಳ ಬಗ್ಗೆ ಪೌರಾಣಿಕ ಹಿನ್ನಲೆಯನ್ನ ನೀಡಿ ಸಮರ್ಥಿಸಿಕೊಳ್ಳುವುದನ್ನು ಕಾಣಬಹುದು. ಇಂತಹ ಸಮುದಾಯಗಳು ಗುಂಪುಗುಂಪಾಗಿಯೇ ತಮ್ಮ ಜೀವನವನ್ನು ಸಾಗಿಸುತ್ತವೆ. ಈ ರೀತಿ ಗುಂಪಾಗಿರಲು ಕಾರಣ ಅಲೆಮಾರಿಯಾಗಿದ್ದ ಮಾನವ ಕ್ರೂರಮೃಗಗಳ ಭಯದಿಂದಲೋ ಅಥವಾ ತಾನು ತನ್ನವರೆಂಬ ಅರಿವು ಬಂದಿದ್ದರಿಂದಲೋ ಗುಂಪುಗುಂಪಾಗಿ ವಾಸಿಸುತ್ತ, ತಮ್ಮದೇ ಸಾಮಾಜಿಕ ಪರಿಸರವನ್ನು ನಿರ್ಮಿಸಿಕೊಂಡಿರಬಹುದು.[೧] ನಂತರ ಈ ಗುಂಪುಗಳೇ ಒಂದೊಂದು ಸಮುದಾಯಗಳಾಗಿ ರೂಪುಗೊಂಡಿವೆ.

ಭಾರತದಲ್ಲಿರುವ ಯಾವುದೇ ಸಮುದಾಯವು ಸಾಮಾನ್ಯವಾಗಿ ವೃತ್ತಿಗಳ ಹಿನ್ನಲೆಯಲ್ಲಿ ಬಂದಿರುವುದು ಕಂಡುಬರುತ್ತದೆ. ಒಂದೇ ವೃತ್ತಿಯನ್ನು ಮಾಡುವವರನ್ನ ಒಂದೇ ಸಮುದಾಯಕ್ಕೆ ಅಥವಾ ಜಾತಿಗೆ ಸೇರಿಸಿರುವುದನ್ನು ಮನಗಾಣಬಹುದು. ಈ ಹಿನ್ನೆಲೆಯಲ್ಲಿ ಗಂಗಾಮತಸ್ಥರ ಮೂಲದ ಬಗ್ಗೆ ಅವಲೋಕಿಸಬಹುದಾಗಿದೆ. ಇವರು ತಮ್ಮನ್ನ ಗಂಗೆಮಕ್ಕಳು, ಗಂಗೆಕುಲ, ಗಂಗೆಮತಸ್ಥರು, ಬೆಸ್ತರು, ಮೊಗವೀರರು, ನಾಯಕ, ಪರಿವಾರ ಮುಂತಾದ ಹೆಸರುಗಳಿಂದ ಕರೆದುಕೊಂಡು ಕರ್ನಾಟಕ ರಾಜ್ಯದ ಎಲ್ಲಾ ಭಾಗಗಳಲ್ಲೂ ವಾಸಿಸುತ್ತಿರುವುದನ್ನು ಕಾಣಬಹುದು. ಮಂಡ್ಯ ಜಿಲ್ಲೆಯಲ್ಲಿ ಗಂಗಾಮತಸ್ಥರು, ಬೆಸ್ತರು, ನಾಯಕರೆಂದು ಹೆಸರಿರುವ ಇವರು ತಮ್ಮನ್ನು 'ಗಂಗೆ'ಯಿಂದ ತಮ್ಮ ಕುಲವನ್ನು ಗುರುತಿಸಿಕೊಳ್ಳುತ್ತಾರೆ.

## ೨.೧ ಪದ ನಿಷ್ಪತ್ತಿ

ಭಾರತದಲ್ಲಿರುವ ಹಲವು ಸಮುದಾಯಗಳಂತೆ ಗಂಗಾಮತಸ್ಥ ಸಮುದಾಯವು ಕೂಡ ಒಂದಾಗಿದೆ. ಎಲ್ಲಾ ಸಮುದಾಯಗಳು ತಮ್ಮದೇ ಇತಿಹಾಸವನ್ನ, ಪೌರಾಣಿಕ ಹಿನ್ನಲೆಯನ್ನ, ಹೊಂದಿರುವುದರೊಂದಿಗೆ, ಆ ಸಮುದಾಯವು ಗುರುತಿಸಿಕೊಂಡಿರುವ ಹೆಸರಿನ ಅಥವಾ ಪದದ

ನಿಷ್ಪತ್ತಿಯು ಪ್ರಮುಖವಾಗುತ್ತದೆ. ಅದರಂತೆಯೇ 'ಗಂಗಾಮತಸ್ಥ' ಪದದ ನಿಷ್ಪತ್ತಿಯನ್ನು ನೋಡಬಹುದಾಗಿದೆ. ಆದರೆ ಇವರನ್ನ ಕರ್ನಾಟಕದ ವಿವಿಧ ಭಾಗಗಳಲ್ಲಿ, ವಿವಿಧ ಹೆಸರುಗಳಿಂದ ಕರೆಯುವುದುಂಟು. ಆದರೆ ಇವರೆಲ್ಲರೂ ಗಂಗಾಮತಸ್ಥರೇ ಆಗಿದ್ದಾರೆ. "ಕರ್ನಾಟಕದ ಬೆಸ್ತರನ್ನು ಮೊಗವೀರ, ಮರಕಾಲ, ಮೊಗೇರ, ಪಟ್ಟದವ, ಬೋವಿ, ನಾಯಕ (ನಾವಿಕ), ಗಂಗಾಮತಸ್ಥ, ಅಂಬಿಗ, ಖಾರ್ವಿ, ಮುಂತಾದ ನಾನಾ ಹೆಸರುಗಳಿಂದ ಗುರುತಿಸಲಾಗುತ್ತದೆ.[೨]

ವಿವಿಧ ಹೆಸರುಗಳಿಂದ ಗುರುತಿಸಲ್ಪಟ್ಟಿರುವ ಗಂಗಾಮತಸ್ಥರು ತಮ್ಮನ್ನು ಗುರುತಿಸಿಕೊಳ್ಳುವುದು 'ಗಂಗೆ'ಯ ಮೂಲದಿಂದಲೇ. ಆದುದ್ದರಿಂದ 'ಗಂಗಾಮತಸ್ಥ' ಪದದ ನಿಷ್ಪತ್ತಿಯನ್ನು ವಿವಿಧ ಹೆಸರುಗಳ ಹಿನ್ನೆಲೆಯಲ್ಲಿಯೇ ನೋಡಬೇಕಾಗುತ್ತದೆ.

ಕನ್ನಡ ವಿಶ್ವವಿದ್ಯಾನಿಲಯ ಹಂಪಿ, ಇಲ್ಲಿಯ ವಿಶ್ರಾಂತ ಕುಲಸಚಿವರು ಆದ ಪ್ರಸಿದ್ಧ ಭಾಷಾತಜ್ಞರಾದ ಶ್ರೀ ಕೆ.ವಿ. ನಾರಾಯಣ್‌ರವರನ್ನು ಸಂದರ್ಶನ ಮಾಡಿದ ಸಂದರ್ಭದಲ್ಲಿ ಪದನಿಷ್ಪತ್ತಿಯ ಬಗ್ಗೆ ಕೆಳಕಂಡಂತೆ ಹೇಳಿದ್ದಾರೆ.

**ಗಂಗಾಮತಸ್ಥ** : ಈ ಪದ ಸಂಸ್ಕೃತದಿಂದ ಬಂದ ಪದವಾಗಿದೆ.

**ಬೆಸ್ತ** : ತೆಲಗು ಮತ್ತು ಕನ್ನಡ ಭಾಷೆಗಳಲ್ಲಿ 'ಬೆಸದ' ಎಂದು ಕರೆಯುವ ಪದವಿದೆ. 'ಬೆಸದ' ಪದದ ಅರ್ಥ ಮೀನು ಹಿಡಿಯುವವ, ಪಲ್ಲಕ್ಕಿ ಹೊರುವವ ಎಂಬ ಅರ್ಥಗಳಿವೆ. ಇವರನ್ನು ಜಾಲಗಾರ ಎಂದು ಕರೆಯುತ್ತಾರೆ. ಜಾಲಗಾರ ಎಂದರೆ ಬಲೆಯನ್ನು ಬೀಸುವವ ಎಂಬ ಅರ್ಥವಿದೆ.

**ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟಿನಲ್ಲಿ ಬೆಸ್ತ ಪದದ ಅರ್ಥ ಹೀಗಿದೆ**

**ಬೆಸ್ತ :** (ನಾ) ೧. ಮೀನು ಹಿಡಿಯುವವನು; ಜಾಲಗಾರ; ಕಾಲ್ಕೆಳಗೆ ಹರಹಿದ ಬೆಸ್ತನ ಜಾಲಜಾಲಗಳ ದಾಟಿ ಸಮೀಪಿಸಿದೆ ಜಲಪ್ರದೇಶ; ಇವ ಬೆಸ್ತ; ಇವನ ಕೈಲಿ ಜನಿವಾರ ಮಡಿಸೋಕೆ ಆಗದು. ೨. ಮೇನೆಯನ್ನು ಹೊರುವವನು; ಬೋಯಿ; ಬೆಸ್ತ ಬಲ್ಲನೆ ಅಂದಳ ಮೊದಲಾದ ಅಷ್ಟಭೋಗುಗಳ; ಅಂದಳದ ಬೆಸ್ತನನು ಕರೆಸಿ ಅವನಿಗೆ ಇಂದುಧರವೇಷವನು ಧರಿಸಿ ಹೊಂದಿ ನಿಂಬವ್ವೆಯನು ಬೆರಸಿ ನೀ ಬಾರೆಂದು ಕಳುಹಿದರು ಸತ್ಕರಸಿ.[೩]

**ಕನ್ನಡ ಜಾನಪದ ಕೋಶದಲ್ಲಿ ಬೆಸ್ತ ಪದದ ನಿಷ್ಪತ್ತಿ**

ಬೆಸ್ತ : (ನಾ) ಮೀನು ಹಿಡಿಯುವವನು: ಅಂಬಿಗ : ಒಬ್ಬ ಬೆಸ್ತನ ಗುಡಿಸಲಿಗೆ ಹೋದೆ (ನಾಸಿರಿ ೧-೪೧೦); ಬೆಸ್ತರು, ಗುಂಡೆ ಬೆಸ್ತರು, ಬುರುಡೆ ಬೆಸ್ತರು ...... ಹಚ್ಚೆ ಹಾಕುತ್ತಾರೆ (ಜಾನಜ ೭-೬: ೧೦).[೪]

**ವಕ್ತೃ ಜಿ.ಬಿ. ವೈರಮುಡಿಯವರ ಅಭಿಪ್ರಾಯದಂತೆ**

ಬೆಸ್ತ : 'ಬೆ' ಅಂದರೆ ಬೆತ್ತದಿಂದ

'ಸ್ತ' ಅಂದರೆ ಚಲಿಸತಕ್ಕವನು

ಅಂದರೆ ಬೆತ್ತವನ್ನು ಉಪಯೋಗಿಸಿ ದೋಣಿನಡೆಸುವವನೇ ಬೆಸ್ತ, ಅಂಬಿಗ.[೫]

**ಕನ್ನಡ ಜಾನಪದ ಕೋಶದಲ್ಲಿ 'ಅಂಬಿಗ' ಪದದ ಅರ್ಥ**

**ಅಂಬಿಗ** : (ನಾ) ೧. ದೋಣಿ, ಹರಿಗೋಲುಗಳನ್ನು ನಡೆಸುವವನು: ದೋಣಿಗಳನ್ನು ನಡೆಸುವವರಿಗೆ 'ಅಂಬಿಗರು' 'ಅಂಬಿಗೇರ' ಎಂದು ಕರೆದರು (ಜಾನಜ ೩-೧; ೨೨): ಹೊಳೆ ದಾಟಿದ ಮೇಲೆ ಅಂಬಿಗರ ಮಿಂಡ (ಗಾದೆ). ೨. ಬೆಸ್ತ : ಮೀನುಗಾರ : ಹಾಸುಬಲೆಯ ಹಾಸಿದ ಬೀಸುಬಲೆಯ ಬೀಸಿದ ಎಳಿಬಲಿನ್ಹಾಕಿ...... ಎಳುದಾನಂಬಿಗರಣ್ಣ (ಸೋಚಿಪ. ೧೮೦-೨೧೭).[೬]

**ಸಂಕ್ಷಿಪ್ತ ಕನ್ನಡ ನಿಘಂಟಿನ ಪ್ರಕಾರ 'ಅಂಬಿಗ' ಪದದ ಅರ್ಥ**

ಅಂಬಿಗ (ನಾ) ೧. ದೋಣಿ, ನಾವೆ ಮುಂತಾದವುಗಳನ್ನು ನಡೆಸುವವನು, ನಾವಿಕ.

೨. ಬೆಸ್ತರವನು; ಮೀನುಗಾರ

೩. ಅಂಬನ್ನು ಹಿಡಿದವನು ; ಬಿಲ್ಲುಗಾರ

೪. ಬೇಡರವರನು.[೭]

**ಸಂಕ್ಷಿಪ್ತ ಕನ್ನಡ ನಿಘಂಟಿನ ಪ್ರಕಾರ "ಜಾಲಗಾರ" ಪದದ ಅರ್ಥ**

ಜಾಲಗಾರ (ನಾ) : ಬೆಸ್ತ : ಅಂಬಿಗ[೮]

**ಸಂಕ್ಷಿಪ್ತ ನಿಘಂಟಿನಲ್ಲಿ 'ಮೊಗವೀರ' ಪದದ ಅರ್ಥ**

ಮೊಗವೀರ (ನಾ) : ಮೀನು ಹಿಡಿಯುವವನು; ಬೆಸ್ತ[೯]

ರಾಜ್ಯದ ವಿವಿಧ ಭಾಗಗಳಲ್ಲಿ ವಾಸಿಸುವ ಗಂಗಾಮತಸ್ಥರು ಬೇರೆ ಬೇರೆ ಹೆಸರಿನಿಂದ ಗುರುತಿಸಿಕೊಂಡಿದ್ದರು. ಅವರ ಮೂಲ ಉದ್ಯೋಗದೊಂದಿಗೆ, ಆ ಹೆಸರುಗಳೆಲ್ಲಾ ಇರುವುದು

ತಿಳಿದು ಬರುತ್ತದೆ. ಆದರೆ "೧೯೫೮ರಲ್ಲಿ ಇಡೀ ರಾಜ್ಯದ ವಿವಿಧ ಹೆಸರುಗಳಿಂದ ಕರೆಯುವ ಬೆಸ್ತರೆಲ್ಲರೂ ಬೆಂಗಳೂರಿನಲ್ಲಿ ಸಭೆ ಸೇರಿ ನಾವೆಲ್ಲರೂ ಇನ್ನುಮುಂದೆ 'ಗಂಗಾಮತಸ್ಥ'ರೆಂದು ಕರೆದುಕೊಳ್ಳಬೇಕೆಂದು ನಿರ್ಣಯ ಕೈಗೊಳ್ಳಲಾಯಿತು.[೧೦] ಆದರೆ ಆ ನಿರ್ಣಯ, ನಿರ್ಣಯವಾಗಿಯೇ ಉಳಿದಿದ್ದು, ಇಂದಿಗೂ ಸಹ ಬೇರೆ ಬೇರೆ ಹೆಸರಿನಿಂದಲೇ ಗಂಗಾಮತಸ್ಥರು ಗುರುತಿಸಿಕೊಳ್ಳುತ್ತಿದ್ದಾರೆ. ಆದರೆ ಇವರು ಮಂಡ್ಯ ಜಿಲ್ಲೆಯಲ್ಲಿ ಗಂಗಾಮತಸ್ಥರೆಂದೂ, ಬೆಸ್ತರೆಂದೂ ಎರಡು ಹೆಸರುಗಳಿಂದ ತಮ್ಮ ಸಮುದಾಯವನ್ನು ಗುರುತಿಸಿಕೊಂಡಿದ್ದಾರೆ.

## ೨.೨ ಗಂಗಾಮತಸ್ಥರು

ಗಂಗಾಮತಸ್ಥರು ಯಾವ ಮೂಲದಿಂದ ಬಂದವರು ಎಂಬ ವಿಚಾರ ಬಹಳ ಮುಖ್ಯವಾದದ್ದು. ಇವರ ವೃತ್ತಿ ಒಂದೆಯಾದರೂ ಬೇರೆ ಬೇರೆ ಸ್ಥಳಗಳಲ್ಲಿ ಬೇರೆ ಬೇರೆ ಹೆಸರಿನಿಂದ ಇಂದಿಗೂ ಇವರನ್ನ ಗುರುತಿಸುತ್ತಾರೆ. ಪ್ರಾಚೀನ ಕಾಲದಲ್ಲಿ ಈ ಗಂಗಾಮತದವರು ನದಿ ಸರೋವರಗಳ ತೀರದಲ್ಲಿ, ಸಮುದ್ರ ದಡಗಳಲ್ಲಿ ವಾಸಿಸುತ್ತಿದ್ದು, ನೀರಿನಲ್ಲಿಯೇ ಕಸುಬನ್ನು ಮಾಡುವಂಥವರಾಗಿದ್ದರು. ಅಂದರೆ ದೋಣಿ, ನಾವೆಗಳನ್ನು ನಿರ್ಮಿಸಿಕೊಂಡು, ಅವುಗಳ ಮುಖಾಂತರ ಜನರನ್ನು ನದಿಯ ಈ ದಡದಿಂದ ಆ ದಡಕ್ಕೆ ದಾಟಿಸುತ್ತಿದ್ದರು. ಆ ಮೂಲಕ ಅಲ್ಪ ಸ್ವಲ್ಪ ಹಣವನ್ನೂ ಸಂಪಾದಿಸುತ್ತಿದ್ದರು. ಆ ವೃತ್ತಿಯಿಂದ ಅವರಿಗೆ ಜೀವನ ಸಾಗಿಸುವುದೂ ಕಷ್ಟವಾದಾಗ ತಾವೇ ಬಲೆಗಳನ್ನು ನೇಯ್ದು ಮೀನು ಹಿಡಿದು, ತಾವೂ ಉಪಯೋಗಿಸಿ, ಉಳಿದ ಮೀನುಗಳನ್ನು ಮಾರಿ ಜೀವನ ಸಾಗಿಸುತ್ತಿದ್ದರು. ಈ ರೀತಿ, ಈ ಜನ ನೀರಿನಲ್ಲಿಯೇ ಕಸುಬನ್ನು ಮಾಡುತ್ತಿದ್ದರಿಂದ ಇವರಿಗೆ ಸಹಜವಾಗಿಯೇ "ನೀರಿನ ಮಕ್ಕಳು", "ನೀರ್ ಮಕ್ಕಳು", "ಗಂಗೆಯ ಮಕ್ಕಳು", "ಗಂಗಾ ಪುತ್ರರು" ಎಂದು ಹೆಸರು ಬಂತು. ಇವರ ವೃತ್ತಿಯನ್ನೆ ಆಧರಿಸಿ, ದೋಣಿ ನಡೆಸುವವರನ್ನು 'ಅಂಬಿಗ'ರೆಂದೂ, ಮೀನು ಹಿಡಿಯುವವರನ್ನು 'ಬೆಸ್ತ'ರೆಂದೂ ಮೀನುಗಾರರೆಂದೂ 'ಮೀಂಗುಲಿಗ' (ಮೀನ್ + ಕುಲಗ = ಮೀಂಗುಲಿಗ – ಅರ್ಥ ಮೀನುಕುಲದವ)ರೆಂದೂ ಕರೆಯತೊಡಗಿದರು. ಒಟ್ಟಿನಲ್ಲಿ ಈ ರೀತಿ, ನೀರಿನಲ್ಲಿಯೇ ಕಸುಬನ್ನು ಮಾಡುವ ಜನರನ್ನು ಗಂಗಾಮಕ್ಕಳೆಂದೂ, ಅವರ ಕುಲ–ಮನೆತನವನ್ನು ಗಂಗಾಕುಲ–ಮತವೆಂದೂ ಕರೆದರು.[೧೧]

"Bestas are a caste of fisherman scattered all over the state and are found in large number in the river district of Mysore and Shimoga. They are known by different names according to the localities in which they

live. In the Eastern districts they are called Bestas in the Southern Toreya, Ambiga and Parivara (retinue), while in the western parts their names are kabberas and Gangemakkalu. Telugu speaking population call themselves Boyis"[೧೨] ಅಂದರೆ ಗಂಗಾಮತಸ್ಥರನ್ನ ವಿವಿಧ ಹೆಸರುಗಳಿಂದ ಕರೆಯುವುದು ಪ್ರಸ್ತುತದಲ್ಲಿಯೂ ಇದೆ. ಆದರೆ ಇವರ ವೃತ್ತಿ ಒಂದೇ ಆಗಿರುವುದು ಕಂಡುಬರುತ್ತದೆ. ಆಯಾ ಪ್ರದೇಶಗಳಿಗೆ ಅನುಗುಣವಾಗಿಯೂ ಇತ್ತೀಚಿನ ಸಂದರ್ಭದಲ್ಲಿ ವೃತ್ತಿಗಳನ್ನ ಅವಲಂಬಿಸಿಕೊಂಡಿದ್ದಾರೆ. ಹಾಗಾದರೆ ಗಂಗಾಮತಸ್ಥರ ಮೂಲ ಯಾವುದು ಎಂಬುದನ್ನ ತಿಳಿಯಬೇಕಾಗುತ್ತದೆ. ೧೮ ಪುರಾಣಗಳಲ್ಲಿ, ೧೮ನೆಯದು "ಗಂಗಾಪುರಾಣ"ವಾಗಿದೆ. ಇದು ನಮ್ಮ ಸಮುದಾಯಕ್ಕೆ ಸಂಬಂಧಿಸಿದ್ದು ಎಂದು ಹೇಳುವುದುಂಟು. ಆದರೆ ಕರ್ನಾಟಕ ತುಂಬೆಲ್ಲಾ ಇರುವ ಇವರನ್ನು ವಿವಿಧ ಹೆಸರುಗಳಿಂದ ಕರೆಯುತ್ತಾರೆ. "ಗಂಗಾಮತ, ಗಂಗೆ ಮಕ್ಕಳು, ಗಂಗಾಪುತ್ರ, ಗೌರಿಮತ, ಅಂಬಿಗ, ಅಂಬಿಗ್, ಬೆಸ್ತ, ಕಬ್ಬಲಿಗ, ಕಬ್ಬೇರ್, ಕೋಳಿ, ಖಾರ್ವಿ, ಭೋಇ, ಭೋಯಿ, ತೊರೆಯ, ಹರಕಾಂತ್ರ, ಕಾಹರ್, ಮೀನುಗಾರ್, ಮೊಗವೀರ, ಖಾರಿಯ, ಸುಣ್ಣಗಾರ್, ಸಿವಿಯಾರ್, ಪರಿವಾರ, ನಾಯಕ, ಬುಂಡೆ ಬೆಸ್ತ, ತಳವಾರ, ತೋಟಿಗ, ರಾಜಪರಿವಾರ," ಮುಂತಾದ ಹೆಸರುಗಳಿಂದ ಇವರು ಕರ್ನಾಟಕದ ವಿವಿಧ ಜಿಲ್ಲೆಗಳಲ್ಲಿ ವಾಸಮಾಡುತ್ತಿದ್ದಾರೆ.

ನಮ್ಮ ಸಮುದಾಯದ ಮೂಲ ಭೀಷ್ಮರೆಂದು, ಭಗೀರಥನೆಂದು ಹೇಳುವುದುಂಟು. ಇಕ್ಷ್ವಾಕು ವಂಶದ ಮಹಾಭೀಷ ಎಂಬ ರಾಜನು ಗಂಗೆಯನ್ನು ನೆಟ್ಟದೃಷ್ಟಿಯಿಂದ ನೋಡುತ್ತಿರಲು ಗಂಗೆಯು ಈತನನ್ನು ಮೋಹಿಸಿದಳು. ಇದರಿಂದ ಚತುರ್ಮುಖನು ಇವರಿಬ್ಬರಿಗೂ ಭೂಲೋಕದಲ್ಲಿ ಜನಿಸುವಂತೆ ಶಾಪವಿತ್ತನು. ಮಹಾಭಿಷನು ಶಂತುರಾಜನಾಗಿ ಹುಟ್ಟಿದನು. ಒಮ್ಮೆ ಇವನು ತಾರುಣ್ಯದಲ್ಲಿ ಬೇಟೆಯಾಡಲು ಕಾಡಿಗೆ ಹೋದಾಗ ಗಂಗೆಯನ್ನು ಕಂಡು ಪತ್ನಿಯಾಗೆಂದು ಹೇಳಿದನು. ಆ ಮೇಲೆ ಷರತ್ತನ್ನು ಹಾಕಿ ಮದುವೆಯಾಗುತ್ತಾಳೆ. ಷರತ್ತನ್ನ ಉಲ್ಲಂಘಿಸಿದಾಗ ಬಿಟ್ಟು ಹೋಗುತ್ತೇನೆ. ಮುಂದೆ ಅಷ್ಟ ವಸುಗಳು ಕ್ರಮವಾಗಿ ಹುಟ್ಟುತ್ತ ಬಂದರು. ಒಂದೊಂದು ಮಗು ಹುಟ್ಟಿದೊಡನೆ ಅದನ್ನು ಗಂಗಾನದಿಗೆ ಎಸೆಯುತ್ತಾ ಬಂದಳು. ಹೀಗೆ ಏಳು ಮಕ್ಕಳು ನಾಶವಾದವು. ೮ನೇ ಸಾರಿ ಗರ್ಭಿಣಿಯಾಗಿ ಹೆತ್ತು ಆ ಮಗುವನ್ನು ಗಂಗಾ ನದಿಗೆ ಎಸೆಯಲು ಹೋಗುತ್ತಿರುವಾಗ ಶಂತ ಮಹಾರಾಜನು ಶಿಶು ವಧೆಯನ್ನು ಅಪೇಕ್ಷಿಸಿದನು. ಇದರಿಂದ ರಾಜನ ಪ್ರತಿಜ್ಞೆ ಭಂಗವಾಯಿತೆಂದು ಆ ಮಗುವನ್ನು ಎತ್ತುಕೊಂಡು ಸ್ವರ್ಗ ಲೋಕಕ್ಕೆ ನಡೆದೇ ಬಿಟ್ಟಳು.[೧೩] ಈ ಎಂಟನೆ ಮಗುವೇ ದೇವವ್ರತ ಈತನೇ ಭೀಷ್ಮ. ನಮ್ಮ ಸಮುದಾಯದ ಮೂಲ ಪುರುಷ ಎಂದು ಹೇಳುತ್ತಾರೆ.

ಭಗೀರಥನು ಇಕ್ಷ್ವಾಕು ವಂಶದ ರಾಜ. ಈತ ತನ್ನ ಅಜ್ಜಂದಿರಾದ ೬೦ ಸಾವಿರ ಮಂದಿ ಸಗರನ ಮಕ್ಕಳಿಗೆ ಸದ್ಗತಿಯನ್ನುಂಟುಮಾಡುವುದಕ್ಕಾಗಿ ಶಿವನನ್ನು ತಪಸ್ಸಿನಿಂದ ಮೆಚ್ಚಿಸಿ ದೇವಲೋಕದಿಂದ ಗಂಗೆಯನ್ನು ಭೂಲೋಕಕ್ಕೆ ತಂದು ಅವರಿಗೆ ಸದ್ಗತಿಯನ್ನುಂಟು ಮಾಡಿದ. ಆದ್ದರಿಂದ ಭಗೀರಥನು ಸಹ ನಮ್ಮ ಮೂಲಪುರುಷನೆ[೧೪] ಎಂದು ಹೇಳುವುದುಂಟು. ಏನೇ ಆಗಲಿ ಗಂಗಾಮತಸ್ಥರು ಭೀಷ್ಮಚಾರ್ಯರೇ ನಮ್ಮ ಮೂಲ ಪುರುಷರು ಎಂದು ಹೇಳುತ್ತಾರೆಯೇ ವಿನಃ ಭಗೀರಥ ನಮ್ಮ ಮೂಲ ಪುರುಷ ಎಂದು ಹೇಳುವುದಿಲ್ಲ.

## ೨.೩ ಗಂಗಾಮತಸ್ಥರ ಬಳಿಗಳು ಮತ್ತು ಪಂಗಡಗಳು

ಮಂಡ್ಯ ಜಿಲ್ಲೆಯ ಗಂಗಾಮತಸ್ಥರಲ್ಲಿ ಮದುವೆಯ ಸಂದರ್ಭದಲ್ಲಿ ಬಳಿಗಳ ಆಚರಣೆ ಉಂಟು. ಇವರು ಬಳಿಗಳನ್ನು ಕಂಬ ಅಥವಾ ಬಣ್ಣವೆಂದು ಕರೆಯುತ್ತಾರೆ. ಬಣ್ಣದ ಆಧಾರದ ಮೇಲೆ ವಿವಾಹ ಸಂಬಂಧವನ್ನು ಮಾಡುತ್ತಾರೆ. ಬಣ್ಣವೆಂದರೆ ವಿವಾಹದ ಸಂದರ್ಭದಲ್ಲಿ ಬುಜ್ಜಣಿಗೆ ಪೆಟ್ಟಿಯಲ್ಲಿ ಅವರ ಬಣ್ಣಕ್ಕೆ ಅನುಗುಣವಾಗಿ ವಸ್ತುಗಳನ್ನು ತಂದು ಮದುವೆಯ ಹೆಣ್ಣಿಗೆ ಕೊಡಬೇಕು. ಆ ಬಣ್ಣಗಳೆಂದರೆ

೧೨ ಬಣ್ಣ

೧೧ ಬಣ್ಣ

೭ ಬಣ್ಣ

ಈ ಮೂರು ಬಣ್ಣಗಳು ಅಥವಾ ಕಂಬಗಳು ಮಂಡ್ಯ ಜಿಲ್ಲೆಯ ಗಂಗಾಮತಸ್ಥರಲ್ಲಿ ಆಚರಣೆಯಲ್ಲಿವೆ. ೧೨ ಬಣ್ಣದವರು ಶ್ರೇಷ್ಠರೆಂದು ೧೧ ಬಣ್ಣದವರು ಸ್ವಲ್ಪ ಕಡಿಮೆಯವರೆಂದು, ೭ ಬಣ್ಣದವರು ನಾಯಕರು ಮತ್ತು ಬುಂಡೆ ಬೆಸ್ತರೆಂದು ಹೇಳುತ್ತಾರೆ. ೧೨ ಬಣ್ಣದವರು ೧೧ ಬಣ್ಣದವರಿಗೆ ಮತ್ತು ೭ ಬಣ್ಣದವರಿಗೆ ಹೆಣ್ಣು ಕೊಡುವುದಿಲ್ಲ, ತರುವುದಿಲ್ಲ.[೧೫]

### ಪಂಗಡಗಳು

ಮಂಡ್ಯ ಜಿಲ್ಲೆಯಲ್ಲಿ ಗಂಗಾಮತಸ್ಥ ಸಮುದಾಯದಲ್ಲಿ ಪ್ರಮುಖವಾಗಿ ಮೂರು ಪಂಗಡಗಳು ಕಂಡುಬಂದಿವೆ. ಇವು ಆ ಸಮುದಾಯದ ಒಳಪಂಗಡಗಳಾಗಿವೆ. ಅವುಗಳೆಂದರೆ

೧. ದಾಸಬೆಸ್ತ

೨. ಜೋಗ ಬೆಸ್ತ

೩. ಬೈ ಜನಗಳು[೧೬]

ಮೇಲ್ಕಂಡ ಮೂರು ಪ್ರಮುಖವಾದ ಪಂಗಡಗಳು ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಕಂಡು ಬಂದಿರುತ್ತದೆ. ಆದರೆ ಕಲ್ಕುಣಿಯಲ್ಲಿ ಗಂಗಾಮತಸ್ಥರ ಒಂಬತ್ತು ಕೇರಿಗಳಿದ್ದು, ಒಂಬತ್ತು ಪಂಗಡಗಳಿರುವುದಾಗಿ ವಕ್ತೃ ಮಲ್ಲಯ್ಯ ಹೇಳುತ್ತಾರೆ. ಅವುಗಳೆಂದರೆ

| **ಪಂಗಡಗಳು** | | **ಪೂಜಿಸುವ ದೇವರುಗಳು** |
|---|---|---|
| ೧. ದೊಡ್ಡ ತಳವಾರ ಕೇರಿ | – | ಈಶ್ವರ |
| ೨. ಚಿಕ್ಕ ತಳವಾರ ಕೇರಿ | – | ಈಶ್ವರ |
| ೩. ಮಾಯನ ಕೇರಿ | – | ಬೋರೇದೇವರು |
| ೪. ಉಪ್ಪಲಕೇರಿ | – | ಶಿವಲಿಂಗೇಶ್ವರ |
| ೫. ಬೊಡ್ಡರ ಮಲ್ಲನ ಕೇರಿ | – | ಉಕ್ಕಲಗೆರೆ ಮಲ್ಲಣ್ಣ |
| ೬. ಮುಳ್ಳದಾಸನ ಕೇರಿ | – | ಸಿದ್ದಾಪ್ಪಾಜಿ |
| ೭. ದಾಸಗಳ ಕೇರಿ | – | ವಡ್ಗಲ್ ರಂಗನಾಥ ಸ್ವಾಮಿ |
| ೮. ಮಾದಪ್ಪನ ಕೇರಿ | – | ಮಾದೇಶ್ವರ ಒಕ್ಕಲಿನವರು |
| ೯. ಮನೆ ಬಾಯಿನ ಕೇರಿ | – | ಚಿದರಹಳ್ಳಿ ಸಿದ್ದಪ್ಪಾಜಿ[೧೭] |

ಇಲ್ಲಿ ಒಂಭತ್ತು ಕೇರಿಯಲ್ಲಿ ವಾಸಿಸುವ ಗಂಗಾಮತಸ್ಥರು ಒಂದೊಂದು ಕೇರಿಗೆ ಒಂದೊಂದು ಹೆಸರು ಮತ್ತು ಒಂದೊಂದು ದೇವರನ್ನು ಪೂಜಿಸುತ್ತಾರೆ. ಇಲ್ಲಿ ಬೇರೆ, ಬೇರೆ ದೇವರುಗಳನ್ನ ಪೂಜಿಸುವುದರ ಆಧಾರದ ಮೇಲೆ ಪಂಗಡಗಳನ್ನು ಮಾಡಿಕೊಂಡಿದ್ದಾರೆ. ಆದರೆ ವಿವಾಹ ಸಂಬಂಧವು ಎಲ್ಲಾ ಕೇರಿಯವರು ಪರಸ್ಪರ ಕೊಡುವ-ತರುವ ಸಂಪ್ರದಾಯವಿದೆ. ಆದರೆ ಜಿಲ್ಲೆಯ ಗಂಗಾಮತಸ್ಥರಲ್ಲಿ ಪ್ರಮುಖವಾಗಿ ಮೂರು ಪಂಗಡಗಳು ಮಾತ್ರ ಇರುವುದು ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಕಂಡುಬಂದಿದೆ.

## ೨.೪ ಭೌಗೋಳಿಕ ಪರಿಸರ ಮತ್ತು ಜನಸಂಖ್ಯೆ

ಭೌಗೋಳಿಕ ಎಂಬ ಪದಕ್ಕೆ ವಿಸ್ತಾರವಾದ ವ್ಯಾಪ್ತಿಯಿದ್ದು ಇದು ವೈವಿಧ್ಯಮಯವೂ ಮಾನವನ ವಾಸಸ್ಥಳವೂ ಆದ ಭೂಮಿಯ ಅಧ್ಯಯನವಾಗಿದೆ. ಭೌಗೋಳಿಕ ಲಕ್ಷಣವೆಂದರೆ ಭೂಮಿಯ ಮೇಲಣ ಪ್ರದೇಶ, ಜನಾಂಗಗಳ ಕುರಿತು ಪಟ್ಟಿ ಮಾತ್ರವಾಗಿದೆ. ಈಗಿರುವ ಭೂ ಲಕ್ಷಣಗಳ ಗುಣಲಕ್ಷಣಗಳ ಪರೀಕ್ಷೆ, ಅವುಗಳ ಭಿನ್ನತೆ, ವಿಶಿಷ್ಟತೆ, ಕಾರಣಗಳು, ಸಂಬಂಧಗಳು, ಆಗಿರಬಹುದಾದ ಬದಲಾವಣೆಗಳ ಅನುಪೂರ್ವಿ, ಪರಂಪರೆ ಅನುಕ್ರಮ, ಕಾರ್ಯಕಾರಣಗಳ ಸರಪಳಿಯ ಕೊಂಡಿಗಳ ಪರಸ್ಪರ ಸಂಬಂಧಿತ ಬದಲಾವಣೆಗಳು, ಭೂಮಿಯ ಮೇಲೂ,

ಆಂತರ್ಯದಲ್ಲೂ ಭೌತ ಮತ್ತು ರಾಸಾಯನಿಕ ಕ್ರಿಯೆಗಳು, ಜಲಗುಣ, ವಾಯುಗುಣ, ಈ ಭೂಮಿಯಲ್ಲಿ ಮಾನವನ ವಾಸ, ಆತನ ಜೀವನ ವಿಧಾನ, ನಿಸರ್ಗದೊಡನೆ ಆತನ ಪ್ರತಿಕ್ರಿಯೆ, ಪ್ರಕ್ರಿಯೆ ಇತ್ಯಾದಿಗಳೂ ಕೂಡಿಕೊಂಡಿವೆ.

ಮಂಡ್ಯ ಜಿಲ್ಲೆಯು ರಾಜ್ಯದ ಚಿಕ್ಕ ಜಿಲ್ಲೆಗಳಲ್ಲಿ ಒಂದಾಗಿದ್ದರೂ ಹಲವು ಹತ್ತು ವೈಶಿಷ್ಟ್ಯಗಳನ್ನು ಒಳಗೊಂಡ ಜಿಲ್ಲೆಯಾಗಿದೆ. ಮೂಲತಃ ಮೈಸೂರು ಜಿಲ್ಲೆಯ ಭಾಗವಾಗಿದ್ದ ಈ ಪ್ರದೇಶ ೧೯೩೯ರಲ್ಲಿ ಪ್ರತ್ಯೇಕಗೊಂಡು ರಾಜಕಾರಣ, ಕೃಷಿ, ಚಳುವಳಿ, ಆರ್ಥಿಕ, ಸಾಹಿತ್ಯ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ತನ್ನದೇ ಆದ ಛಾಪು ಮೂಡಿಸಿದೆ. "ಯಾವುದೇ ಪ್ರದೇಶದ ಜಾನಪದವಾದರೂ ಅದು ತನ್ನ ಸುತ್ತಮುತ್ತಲಿನ ಭೌಗೋಳಿಕ, ಸಾಂಸ್ಕೃತಿಕ ಅಂಶಗಳಿಂದ ಪ್ರಭಾವಿತವಾಗಿಯೇ ರೂಪುಗೊಳ್ಳುತ್ತದೆ. ಇಂಥ ಪ್ರಭಾವಗಳಿಂದಾಗಿ ಜಾನಪದ ಆಯಾ ಪ್ರದೇಶಕ್ಕೆ ವಿಶಿಷ್ಟವಾಗಿ ರೂಪು ತಾಳುತ್ತದೆ. ಒಂದೇ ಸಂಪ್ರದಾಯ ಭಿನ್ನ ಭಿನ್ನ ಪ್ರದೇಶಗಳಲ್ಲಿ ಆಚರಣೆಗೊಳ್ಳುವ ರೀತಿ ಭಿನ್ನ ಭಿನ್ನವಾಗಿರುತ್ತದೆ. ರೂಢಿಸಿಕೊಳ್ಳುವ ನಂಬಿಕೆಗಳು, ಸಾಹಿತ್ಯ, ಕಲೆ ಇತ್ಯಾದಿ ಆಯಾ ಪ್ರದೇಶದ ಜಾನಪದಕ್ಕೆ ವಿಶಿಷ್ಟವಾಗಿರುತ್ತವೆ.[೧೮] ಈ ಹಿನ್ನೆಲೆಯಲ್ಲಿ ಮಂಡ್ಯ ಜಿಲ್ಲೆಯಲ್ಲಿ ಗಂಗಾಮತಸ್ಥರು ವಾಸಿಸುತ್ತಿರುವ ಭೌಗೋಳಿಕ ಪ್ರದೇಶದ ಹಿನ್ನಲೆಯನ್ನು ಈ ಕೆಳಗಿನ ಲಕ್ಷಣಗಳಿಂದ ಗುರುತಿಸಬಹುದು.

೧. ಪ್ರದೇಶದ ಗಾತ್ರ, ಆಕಾರ, ಚಲನೆ.

೨. ಪ್ರದೇಶದ ಹಾಗೂ ಜಲರಾಶಿಗಳ ಸನ್ನಿವೇಶ ಮತ್ತು ವಿವರಣೆ.

೩. ಶಿಲೆಗಳಿಗೆ ಸಂಬಂಧಿಸಿದಂತೆ ಭೂಮಿಯ ಮೇಲ್ಮೈಯ ರಚನೆ ಹಾಗೂ ಉಬ್ಬುತಗ್ಗುಗಳು.

೪. ಸಾಗರ, ಸರೋವರ ಹಾಗೂ ನದಿ ಜಲರಾಶಿಗಳ ಗುಣಲಕ್ಷಣಗಳು ಹಾಗೂ ಚಲನೆ.

೫. ವಾಯುಗುಣ ಹಾಗೂ ಹವಾಗುಣಕ್ಕೆ ಸಂಬಂಧಿಸಿದಂತೆ ವಾತಾವರಣ ಸ್ಥಿತಿಗಳು.

೬. ಸಸ್ಯವರ್ಗ, ಪ್ರಾಣಿ ಸಂಪತ್ತು, ಜನಸಂಖ್ಯೆ.

## ಭೌಗೋಳಿಕ ಹಿನ್ನಲೆ

ಮಂಡ್ಯ ಜಿಲ್ಲೆಯು ಭಾರತ ದೇಶದ ಕರ್ನಾಟಕ ರಾಜ್ಯದ ದಕ್ಷಿಣ ಭಾಗದ ಮಧ್ಯದಲ್ಲಿದೆ (Central belt). ಇದು ಮೈಸೂರು ವಿಭಾಗಕ್ಕೆ ಸೇರಿದ ಜಿಲ್ಲೆಯಾಗಿದ್ದು ರಾಜ್ಯದ ದಕ್ಷಿಣದಲ್ಲಿ ಜಿಲ್ಲೆಯ ಒಟ್ಟು ವಿಸ್ತೀರ್ಣ ೪೯೬೧ ಚದರ ಕಿಲೋಮೀಟರ್‌ಗಳು. ಇದು ಅಸಮ ಆಕಾರದಿಂದಿದ್ದು ಉತ್ತರ ಅಕ್ಷಾಂಶ ೧೨°-೧೩ ರಿಂದ ೧೩°-೦೪ ಪೂರ್ವ ರೇಖಾಂಶ ೭೬°-೧೫ ಮತ್ತು ೭೭°-೨೦ ವರೆಗೆ ಹರಡಿದೆ. ಇದು ನಮ್ಮ ರಾಜ್ಯದ ಸುಮಾರು ೧/೩೯ನೇ

ಭಾಗದಷ್ಟಿದೆ. ರಾಜ್ಯದ ಜಿಲ್ಲೆಗಳಲ್ಲಿ ಕೊಡಗನ್ನು ಬಿಟ್ಟರೆ ಇದೇ ಅತ್ಯಂತ ಚಿಕ್ಕ ವಿಸ್ತೀರ್ಣವುಳ್ಳ ಕಿರಿಯ ಜಿಲ್ಲೆಯಾಗಿದೆ. ಇದು ದಕ್ಷಿಣ ಮತ್ತು ನೈರುತ್ಯದಲ್ಲಿ ಮೈಸೂರು ಜಿಲ್ಲೆ, ಉತ್ತರದಲ್ಲಿ ತುಮಕೂರು ಜಿಲ್ಲೆ, ಪೂರ್ವದಲ್ಲಿ ಬೆಂಗಳೂರು ಜಿಲ್ಲೆ, ವಾಯುವ್ಯದಲ್ಲಿ ಹಾಸನ ಜಿಲ್ಲೆ ಇವುಗಳಿಂದ ಸುತ್ತುವರಿದಿದೆ.

ಜಿಲ್ಲೆಯ ಬಹುಭಾಗ ಸಮತಟ್ಟಾದ ಬಯಲು ಪ್ರದೇಶದಿಂದ ಕೂಡಿದ್ದು, ಅಲ್ಲಲ್ಲಿ ಸಣ್ಣ ಬೆಟ್ಟಗಳು, ಹೆಚ್ಚು ಎತ್ತರವಲ್ಲದ ಶ್ರೇಣಿಗಳೂ ಇವೆ. ಮಂಡ್ಯ ಜಿಲ್ಲೆ ಸಾಮಾನ್ಯತಃ ಸಮುದ್ರ ಮಟ್ಟಕ್ಕಿಂತ ೭೬೨ ರಿಂದ ೯೧೪ ಮೀಟರ್ ಎತ್ತರದಲ್ಲಿದೆ. ಮಳವಳ್ಳಿ ತಾಲ್ಲೂಕಿನ ಪೂರ್ವದ ಅಂಚಿನಲ್ಲಿ ಬಿಳಿಗಿರಿರಂಗನ ಬೆಟ್ಟದ ಸಾಲಿನಿಂದ ಮುಂದುವರಿದ ಕೆಲವು ಬೆಟ್ಟಗಳೂ, ಜಿಲ್ಲೆಯ ದಕ್ಷಿಣ ಅಂಚಿನಲ್ಲಿ ಹುಲಿಕೆರೆ ಮತ್ತು ಕರಿಘಟ್ಟ ಬೆಟ್ಟಗಳ ಸಾಲೂ ಇವೆ. ಕೃಷ್ಣರಾಜಪೇಟೆ ಮತ್ತು ನಾಗಮಂಗಲದ ಸುತ್ತಲೂ ಕೆಲವು ಬೆಟ್ಟಗಳಿವೆ. ಮೊದಲು ಮೈಸೂರು ಜಿಲ್ಲೆಗೆ ಸೇರಿದ ಈ ಪ್ರದೇಶವು ೧-೭-೧೯೩೯ರಂದು ಸ್ವತಂತ್ರ ಮಂಡ್ಯ ಜಿಲ್ಲೆಯಾಗಿ ಅಸ್ತಿತ್ವಕ್ಕೆ ಬಂತು. ಈ ಜಿಲ್ಲೆಯಲ್ಲಿ ಒಟ್ಟು ಏಳು ತಾಲ್ಲೂಕುಗಳಿವೆ. ಅವು ಮಳವಳ್ಳಿ, ನಾಗಮಂಗಲ, ಮದ್ದೂರು, ಮಂಡ್ಯ, ಶ್ರೀರಂಗಪಟ್ಟಣ, ಪಾಡವಪುರ, ನಾಗಮಂಗಲ ಮತ್ತು ಕೃಷ್ಣರಾಜಪೇಟೆ. ಈ ಜಿಲ್ಲೆಯಲ್ಲಿ ೧೧ ಪಟ್ಟಣಗಳೂ, ೩೧ ಹೋಬಳಿಗಳೂ, ೧೧೦೪ ಮಂಡಲ ಪಂಚಾಯತ್‌ಗಳೂ, ೧೩೫೪ ಗ್ರಾಮಗಳು ಇವೆ. ೨೦೦೧ರ ಜನಗಣತಿಯ ಪ್ರಕಾರ ಜಿಲ್ಲೆಯ ಒಟ್ಟು ಜನಸಂಖ್ಯೆ ೧೭,೬೧,೦೦೦ ಆಗಿದ್ದು, ಜಿಲ್ಲೆಯಲ್ಲಿ ವಾಸಿಸುವ ಒಟ್ಟು ಗಂಗಾಮತಸ್ಥರ ಜನಸಂಖ್ಯೆ ೨,೮೦,೦೦೦.

ಮಂಡ್ಯ ಜಿಲ್ಲೆಯ ಭೌಗೋಳಿಕವಾದ ಅಸ್ತಿತ್ವವನ್ನು ಸಾವಿರಾರು ವರ್ಷಗಳ ಹಿಂದಿನಿಂದಲೂ ಗುರುತಿಸಬಹುದು. ಹಿಂದೂ ಧರ್ಮಶಾಸ್ತ್ರದ ಪ್ರಕಾರ ಕೃತಯುಗದ ಆದಿಯಲ್ಲಿ ಈ ಪ್ರದೇಶವನ್ನು 'ವೇದಾರಣ್ಯ'ವೆಂತಲೂ, ಅದೇ ಯುಗದ ನಂತರದ ವರ್ಷಗಳಲ್ಲಿ ಇದೇ ಪ್ರದೇಶವನ್ನು 'ವಿಷ್ಣುಪುರ'ವೆಂತಲೂ, ದ್ವಾಪರ ಯುಗದಲ್ಲಿ 'ಮಂಡವೇಮು' ಎಂಬ ಹೆಸರಿನ ಪ್ರದೇಶವೇ ಈಗ ಮಂಡ್ಯವಾಗಿದೆ ಎಂತಲೂ, ಪುರಾಣ ಕಾಲದಲ್ಲಿ ಮಾಂಡವ್ಯ ಮುನಿಯ ತಪೋ ಭೂಮಿಯಾದ ಇದನ್ನು ಮಾಂಡವ್ಯನ ಪ್ರದೇಶ ಮಂಡ್ಯವೆಂದು ಕರೆದರೆಂತಲೂ ದಂತಕಥೆ ಇದೆ.

### ಜಲರಾಶಿಗಳು

ಇಲ್ಲಿ ಮುಖ್ಯವಾಗಿ ಹರಿಯುವ ನದಿಗಳು ಕಾವೇರಿ, ಹೇಮಾವತಿ, ಲೋಕಪಾವನಿ, ಶಿಂಷಾ ಮತ್ತು ವೀರವೈಷ್ಣವಿ. ಈ ನದಿಗಳಲ್ಲದೆ ಬಂಡೇನಹಳ್ಳಿ ತೊರೆ, ಹಂದಿಹಳ್ಳ, ಹೆಬ್ಬಳ್ಳ ಮತ್ತು ಭೀಮಾ ಮುಂತಾದ ತೊರೆಗಳು ಈ ಜಿಲ್ಲೆಯಲ್ಲಿ ಹರಿಯುತ್ತವೆ. ಈ ನದಿಗಳ ನೀರು ಕೃಷಿಗೆ

ಮತ್ತು ಮೀನುಗಾರಿಕೆಗೆ ಅತ್ಯುಪಯುಕ್ತವಾಗಿವೆ. ಈ ನದಿಗಳು ಮಂಡ್ಯ ಜಿಲ್ಲೆಯನ್ನು ಸಂಪದ್ಭರಿತವನ್ನಾಗಿಯೂ ರಾಜ್ಯದ ಭತ್ತದ ಕಣಜ ಮತ್ತು ಸಕ್ಕರೆಯ ಬೀಡು ಎಂಬುದಾಗಿ ಕರೆಯಿಸಿಕೊಳ್ಳಲೂ ಅತ್ಯಂತ ನೆರವಾಗಿವೆ.

**ಭೂಮಿಯ ಮೇಲ್ಮೈಯ ಸಂರಚನೆ**

ಜಿಲ್ಲೆಯ ಬಹುಭಾಗ ಸಮತಟ್ಟಾದ ಬಯಲು ಪ್ರದೇಶ. ಅಲ್ಲಲ್ಲಿ ಸಣ್ಣ ಬೆಟ್ಟಗಳೂ ಹೆಚ್ಚು ಎತ್ತರವಲ್ಲದ ಶ್ರೇಣಿಗಳೂ ಕಂಡು ಬರುತ್ತವೆ. ಈ ಪ್ರದೇಶವು ಸಮುದ್ರಮಟ್ಟದಿಂದ ಸುಮಾರು ೭೬೨ ರಿಂದ ೯೧೪ ಮೀಟರ್ ಎತ್ತರದಲ್ಲಿದೆ. ಮಳವಳ್ಳಿ ತಾಲ್ಲೂಕಿನ ಪೂರ್ವದ ಅಂಚಿನಲ್ಲಿ ಬಿಳಿಗಿರಿರಂಗನಬೆಟ್ಟದ ಸಾಲಿನಲ್ಲಿ ಮುಂದುವರಿದ ಕೆಲವು ಬೆಟ್ಟದ ಶ್ರೇಣಿಗಳು, ಜಿಲ್ಲೆಯ ದಕ್ಷಿಣ ಅಂಚಿನಲ್ಲಿ ಹುಲಿಕೆರೆ ಮತ್ತು ಕರಿಘಟ್ಟ ಬೆಟ್ಟಗಳ ಸಾಲೂ ಇವೆ. ಇದಲ್ಲದೆ ಕೃಷ್ಣರಾಜ ಪೇಟೆ, ನಾಗಮಂಗಲ ಇವುಗಳ ಸುತ್ತಲೂ ಕೆಲವು ಬೆಟ್ಟಗಳಿವೆ. ಪಾಂಡವಪುರದ ಬಳಿಯ ಕುಂತಿಬೆಟ್ಟ, ಮಂಡ್ಯದ ಬಳಿಯ ಸಾತನೂರು ಬೆಟ್ಟ ಇವೂ ಕೆಲವು ಮುಖ್ಯವಾದ ಎತ್ತರದ ಪ್ರದೇಶಗಳು. ಈ ಜಿಲ್ಲೆಯ ಆದಿಚುಂಚನಗಿರಿ ಬೆಟ್ಟ (೧೦೬೦ ಮೀಟರ್) ಮಳವಳ್ಳಿ ತಾಲ್ಲೂಕಿನ ಕಬ್ಬಾಳದುರ್ಗ (೧೦೬೯ ಮೀ), ಶ್ರೀರಂಗಪಟ್ಟಣದ ಬಳಿಯ ಕರಿಘಟ್ಟ (೯೭೪.೪೪ ಮೀ.), ಮೇಲುಕೋಟೆ (೧೨೪೬.೩೨ ಮೀ), ನಾರಾಯಣ ದುರ್ಗ (೧೨೪.೩೨ ಮೀ) ಇತರ ಮುಖ್ಯ ಬೆಟ್ಟಗಳು.

**ವಾಯುಗುಣ ಹಾಗೂ ಹವಾಗುಣಕ್ಕೆ ಸಂಬಂಧಿಸಿದಂತೆ ವಾತಾವರಣ ಸ್ಥಿತಿಗಳು**

ಮಂಡ್ಯ ಜಿಲ್ಲೆಯಲ್ಲಿನ ವಾಯುಗುಣವು ಕೂಡ ಸುತ್ತ ಮುತ್ತಲಿನ ಜಿಲ್ಲೆಗಳಾದ ಮೈಸೂರು, ಬೆಂಗಳೂರುಗಳಂತೆಯೇ ಇದ್ದು ಇದು ಸಾಮಾನ್ಯವಾಗಿ ಭಾರತದ ವಾಯುಗುಣವನ್ನೇ ಹೋಲುತ್ತದೆ. ಮಂಡ್ಯ ಜಿಲ್ಲೆಯಲ್ಲಿ ಕೂಡ ಋತುಮಾನಗಳಿಗೆ ಅನುಗುಣವಾಗಿ ನಾಲ್ಕು ಭಾಗಗಳನ್ನು ಮಾಡಲಾಗಿದೆ. ಅವು ಡಿಸೆಂಬರ್‌ನಿಂದ ಫೆಬ್ರವರಿಯವರೆಗೆ ಉತ್ತಮವಾದ ತಿಳಿಯಾದ ವಾತಾವರಣವಿರುವ ಒಣಬೇಸಿಗೆ ಕಾಲ (Dry Season). ಮಾರ್ಚ್ ನಿಂದ ಮೇವರೆಗೆ ಅತಿ ಹೆಚ್ಚಿನ ಉಷ್ಣಾಂಶವಿರುವ ಸೆಖೆಗಾಲ (Hot Season). ಜೂನ್‌ನಿಂದ ಸೆಪ್ಟೆಂಬರ್‌ವರೆಗೆ ಅತ್ಯಂತ ಹೆಚ್ಚಿನ ಮಳೆ ಇರುವ ಮುಂಗಾರು ಮಳೆಗಾಲ (South-west Monsoon season). ಅಕ್ಟೋಬರ್‌ನಿಂದ ನವೆಂಬರ್‌ವರೆಗೆ ಮುಂಗಾರುಮಳೆಯ ರಭಸ ಕಡಿಮೆಯಾಗಿ ಆಗಾಗ್ಗೆ ಮಳೆ ಬೀಳುತ್ತಾ, ಮಳೆ-ಚಳಿ ಎರಡೂ ಕಂಡುಬರುವ ಹಿಂಗಾರು

ಮಳೆಗಾಲ (Post Monsson Season). ಅಲ್ಲದೆ ಸಾಮಾನ್ಯವಾಗಿ ಇತರ ಕಡೆಗಳಂತೆಯೇ ಮಂಡ್ಯದಲ್ಲೂ ಜೂನ್‌ನಿಂದ ಸೆಪ್ಟೆಂಬರ್‌ವರೆಗೆ ಮಳೆಗಾಲ. ಅಕ್ಟೋಬರ್‌ನಿಂದ ಜನವರಿವರೆಗೆ ಚಳಿಗಾಲ, ಫೆಬ್ರವರಿಯಿಂದ ಮೇವರೆಗೆ ಸೆಖೆಗಾಲ ಎಂದೂ ಪರಿಗಣಿಸುತ್ತಾರೆ. ಒಟ್ಟಾರೆ ವರ್ಷವಿಡೀ ಜಿಲ್ಲೆಯ ಉಷ್ಣಾಂಶಗಳಲ್ಲಿ ಅತ್ಯಧಿಕ ವ್ಯತ್ಯಾಸಗಳಿಲ್ಲದೆ ವರ್ಷಪೂರ್ತಿ ಹವಾಗುಣ ಹಿತಕರವಾಗಿರುವುದು. ವರ್ಷಕ್ಕೆ ಸರಾಸರಿ ೪೫ ದಿನಗಳು ಜಿಲ್ಲೆಯಲ್ಲಿ ಮಳೆಯಾಗುತ್ತವೆ.

### ಸಸ್ಯವರ್ಗ, ಪ್ರಾಣಿ ಸಂಪತ್ತು ಮತ್ತು ಜನಸಂಖ್ಯೆ

ಮಂಡ್ಯ ಜಿಲ್ಲೆಯ ಉತ್ತರ, ಪಶ್ಚಿಮ ಹಾಗೂ ಪೂರ್ವ ಭಾಗಗಳು ಮೈದಾನ ಪ್ರದೇಶ. ದಕ್ಷಿಣ ಭಾಗದಲ್ಲಿ ಕಾವೇರಿನದಿ ಹರಿಯುವ ಉದ್ದಕ್ಕೂ ಗಿಡ-ಮರಗಳ ಕಾಡು ಹಾಗೂ ಪೊದೆಗಳು ಕಂಡುಬರುತ್ತವೆ. ಮುತ್ತತ್ತಿಯ ಕಾಡು ಮಂಡ್ಯ ಜಿಲ್ಲೆಯ ಕಾಡುಗಳಲ್ಲಿ ದಟ್ಟವಾದ ಅರಣ್ಯವಾಗಿದೆ. ಅರಣ್ಯ ಸಂಪತ್ತು ದೇಶದ ಅಥವಾ ಯಾವುದೇ ಪ್ರದೇಶದ ಆರ್ಥಿಕ ಅಭಿವೃದ್ಧಿಯಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಒಂದು ಪ್ರದೇಶದ ಅಭಿವೃದ್ಧಿಗೆ ಆ ಪ್ರದೇಶದ ಒಟ್ಟು ಭೂವಿಸ್ತೀರ್ಣದ ಮೂರನೆಯ ಒಂದು ಭಾಗವಾದರೂ ಅರಣ್ಯ ಪ್ರದೇಶವಿರಬೇಕೆಂದು ತಜ್ಞರ ಸಾಮಾನ್ಯ ಅಭಿಪ್ರಾಯ. ಮಂಡ್ಯದ ಅರಣ್ಯಗಳಲ್ಲಿ ನೈಸರ್ಗಿಕ ಅರಣ್ಯಗಳಲ್ಲದೆ ಆದಿಚುಂಚನಗಿರಿಯ ನವಿಲು ಉದ್ಯಾನವನ (೧೯೮೧), ಮೇಲುಕೋಟೆಯ ವನ್ಯಜೀವಿ ಧಾಮ (೧೯೭೮), ಇಂಡುವಾಳು ಪ್ರಕೃತಿ ಉದ್ಯಾನವನ (೧೯೮೨), ರಂಗನತಿಟ್ಟು ಪಕ್ಷಿಧಾಮ ಮತ್ತು ಕೊಕ್ಕರೆ ಬೆಳ್ಳೂರು ಇತ್ಯಾದಿಗಳೂ ಸೇರಿವೆ.

ಮಂಡ್ಯದ ಅರಣ್ಯಗಳಲ್ಲಿ ಜಾಲರಿ, ಅಳಲೆ, ದಿಂಡಿಗ, ದೇವದಾರಿ, ಕಗ್ಗಲ, ನೀಲಗಿರಿ, ಚುನ್ನಂಗಿ, ನಲುಲಾಡಿ, ಬುರುಗಲು, ಬಳಿಮತ್ತಿ ನೆವೆಲಾ, ಭಂಡಾರಿ, ಜಾಲಿ, ಬಾಗೆ, ಹೊಂಗೆ, ಮಾವು, ಕವಲು, ಹುಣಸೆ, ಆಲದ ಮರ, ಸರ್ವೆತೋಪು ಇತ್ಯಾದಿ ಮರಗಳು ಕಂಡು ಬಂದಿವೆ. ಇದರೊಡನೆ ಅಲ್ಲಲ್ಲಿ ಶ್ರೀಗಂಧದ ಮರಗಳು ಕಂಡು ಬಂದರೂ ಆರ್ಥಿಕವಾಗಿ ಇವುಗಳ ಸ್ಥಾನಮಾನ ಅತ್ಯಂತ ಗೌಣವಾಗಿದೆ. ಇಲ್ಲಿ ಬೆಳೆಯುವ ಮರಗಳನ್ನು ಸಾಮಾನ್ಯವಾಗಿ ಮರ ಕೆಲಸಗಳಿಗೂ, ಉರವಲು ಕಟ್ಟಿಗೆಗೂ ಉಪಯೋಗಿಸುತ್ತಾರೆ. ಮಂಡ್ಯದ ಅರಣ್ಯ ವಿಭಾಗದಲ್ಲಿ ಈಗೀಗ ಅರಣ್ಯ ಇಲಾಖೆಯು ನೆಡುತೋಪನ್ನು ಬೆಳೆಸಿ ಸದರಿ ನೆಡುತೋಪಿನಲ್ಲಿ ಮಿಶ್ರಜಾತಿಯ ಮರಗಳನ್ನು ಬೆಳೆಸಲಾಗುತ್ತಿದೆ. ಇವುಗಳಲ್ಲಿ ನೀಲಗಿರಿ, ಸರ್ವೆ, ಬೇವು, ಹೊಂಗೆ, ಸಿಸ್ಸು, ಸುಬಾಬುಲ್, ಹುಣಸೆ, ಬೊಂಬು ಮುಂತಾದವುಗಳನ್ನು ಬೆಳೆಯುತ್ತಿದ್ದಾರೆ ಮತ್ತು ಇವುಗಳನ್ನು ಮುಖ್ಯವಾಗಿ ಉರುವಲಿಗಾಗಿ ಹಾಗೂ ಇತರ ಜನೋಪಯೋಗಿ ಕೆಲಸಗಳಿಗಾಗಿ ಬಳಸಲಾಗುತ್ತಿದೆ.

ಕಾವೇರಿ ನದಿಯ ಅಂಚಿನಬೆಟ್ಟ ಮತ್ತು ಕಾಡುಗಳಲ್ಲಿ ಚಿರತೆ, ಕಾಡುನಾಯಿ, ನರಿ, ಕಾಡುಹಂದಿ, ನವಿಲು, ಜಿಂಕೆ, ಮೊಲ, ಮುಳ್ಳುಹಂದಿ, ಆನೆ, ಕರಡಿ, ನಾಗರಹಾವು ಮತ್ತು ಹೆಬ್ಬಾವುಗಳು, ಮೈನಾ, ಕವಜುಗ, ಕಾಡು ಪಾರಿವಾಳ, ಕಾಡುಕೋಳಿ, ಕೋಗಿಲೆ, ನೀರುಹಕ್ಕಿ, ಗಿಳಿ ಮುಂತಾದವುಗಳೂ ಕಂಡು ಬಂದಿವೆ. ಮಂಡ್ಯ ಜಿಲ್ಲೆಯ ಆದಿಚುಂಚನಗಿರಿ ನವಿಲು ಉದ್ಯಾನವನದಲ್ಲಿ ನವಿಲುಗಳೂ, ಮೇಲುಕೋಟೆಯ ವನ್ಯಜೀವಿ ಧಾಮಗಳಲ್ಲಿ ತೋಳ ಮತ್ತು ಬ್ಲಾಕ್‌ಬುಕ್ ಎಂಬ ಪ್ರಾಣಿಗಳೂ, ರಂಗನತಿಟ್ಟಿನಲ್ಲಿ ಪಕ್ಷಿಗಳಿಗೆ ಪ್ರಕೃತಿದತ್ತ ರಕ್ಷಣೆ ಮತ್ತು ಆಹಾರ ಎರಡೂ ಇರುವುದರಿಂದ ಗೊರವಂಕ, ಗಿಳಿ, ಚಮಚಮುಖಿ, ಬುಲ್‌ಬುಲ್, ಕಾಜಾಣ, ಗೀಜುಗ, ಸೂರಕ್ಕಿ, ಚಂಬುಕುಟಿಗ, ಮಿಂಚುಳ್ಳಿ, ಗೌಜಲಹಕ್ಕಿ, ಗರುಡ, ನೀರುಕಾಗೆ, ಕಳ್ಳಿಕೀರ, ನವಿಲು, ಬೆಳವ, ದೇವನಹಕ್ಕಿ, ಕೌಜುಗ, ಜಂಗಲ್ ಬಾಬ್ಲರ್, ರಾಬಿನ್ ಮುಂತಾದ ವಿವಿಧ ಗಾತ್ರದ, ಜಾತಿಯ, ಬಣ್ಣದ, ದೇಶ–ವಿದೇಶಗಳ ಪಕ್ಷಿಗಳೂ ಇಂಡುವಾಳ ಪ್ರಕೃತಿ ಉದ್ಯಾನವನದಲ್ಲಿ ಜಿಂಕೆ, ಕಡವೆ, ಬಿಳಿಮೊಲ, ಬಾತು ಮುಂತಾದವುಗಳೂ, ಕೊಕ್ಕರೆ ಬೆಳ್ಳೂರಿನಲ್ಲಿ ಪಿಲಿಕಾಜಾತಿಯ ಪಕ್ಷಿಗಳೂ ಕಂಡು ಬಂದಿವೆ. ಕೊಕ್ಕರೆ ಬೆಳ್ಳೂರಿಯಲ್ಲಿ ಹರಿಯುವ ಶಿಂಷಾ ನದಿ ಈ ಕೊಕ್ಕರೆಗಳ ಜೀವ ನದಿಯಾಗಿದೆ. ಈ ಪಕ್ಷಿಗಳ ಗೊಬ್ಬರದಿಂದ ಇಲ್ಲಿಯ ಪ್ರದೇಶ ಫಲವತ್ತಾಗುತ್ತಿದ್ದು ಉತ್ತಮ ಗೊಬ್ಬರವಾಗಿದೆ.[೧೯]

## ಜನಸಂಖ್ಯೆ

೨೦೦೧ ರ ಜನಗಣತಿಯಂತೆ ಮಂಡ್ಯ ಜಿಲ್ಲೆಯಲ್ಲಿ ಒಟ್ಟು ಜನಸಂಖ್ಯೆ ೧೭,೬೧,೦೦೦ ಇದ್ದು, ಇದರಲ್ಲಿ ಗಂಗಾಮತಸ್ಥರ ಒಟ್ಟು ಜನಸಂಖ್ಯೆಯು ೨,೮೦,೦೦೦ ಆಗಿದ್ದು, ಒಟ್ಟು ಮತದಾರರ ಸಂಖ್ಯೆಯು ೧,೮೩,೦೦೦ ವಾಗಿರುತ್ತದೆ.[೨೦]

## ೨.೫ ಗಂಗಾಮತಸ್ಥರ ಸಾಂಸ್ಕೃತಿಕ ಕೇಂದ್ರಗಳು

ದುಡಿದು ಬರುವ ಜೀವಕ್ಕೆ ವಿಶ್ರಾಂತಿ ಬೇಕು. ಇದರೊಟ್ಟೊಟ್ಟಿಗೆ ಮನರಂಜನೆಯು ಆತನ ಆಯಾಸವನ್ನು ಮರೆಸುತ್ತದೆ. ಇದರಿಂದ ಯಾವ ಕಾಲಘಟ್ಟದ ಮಾನವನು ಸಹ ಹೊರತಾಗಿಲ್ಲ. ಅಂತೆಯೇ ಮಂಡ್ಯ ಜಿಲ್ಲೆಯ ಗಂಗಾಮತಸ್ಥರು ಸಹ ತಮ್ಮ ಸಮುದಾಯದವರೆಲ್ಲ ವಿಶೇಷ ಸಂದರ್ಭಗಳಲ್ಲಿ ಹಾಗೂ ಹಬ್ಬ–ಹರಿದಿನಗಳಲ್ಲಿ ಮನರಂಜನೆಗಾಗಿ ಸಾಂಸ್ಕೃತಿಕ ಕೇಂದ್ರಗಳನ್ನು ತಾವು ವಾಸಿಸುವ ಸುತ್ತ–ಮುತ್ತ ನಿರ್ಮಿಸಿಕೊಂಡಿರುವುದನ್ನು ಕಾಣಬಹುದು. ಕೆಲವು ಭಾಗಗಳಲ್ಲಿ ಅಲ್ಲಿಯೇ ಇರುವ ದೇವಸ್ಥಾನಗಳು, ಮಂದಿರಗಳು, ಚಾವಡಿಗಳು, ಸಮುದಾಯ ಭವನಗಳು ಈ

ಬಗೆಯ ಚಟುವಟಿಕೆಗಳಿಗೆ ಬಳಸುವುದುಂಟು. ಇದಕ್ಕೆ ಅರಳಿಕಟ್ಟೆಯು ಸಹ ಹೊರತಾಗಿಲ್ಲ. ಇಲ್ಲಿ ದಿನವು ಸಂಜೆ ಕಿರಿಯರು ಮತ್ತು ಹಿರಿಯರು ಸೇರಿ ಸಾಂಸ್ಕೃತಿಕ ವಿಚಾರಗಳ ಬಗ್ಗೆ ಚರ್ಚಿಸುವುದುಂಟು.

ಊರ ಹಬ್ಬಗಳು, ಜಾತ್ರೆಗಳು, ಇತರೇ ವಿಶೇಷ ದಿನಗಳಂದು ಸಾಂಸ್ಕೃತಿಕ ಕಾರ್ಯಕ್ರಮಗಳನ್ನ ನಡೆಸುವುದುಂಟು. ಅದಕ್ಕಾಗಿ ತಿಂಗಳಾನುಗಟ್ಟಲೆ ಅಭ್ಯಾಸ ಮಾಡುತ್ತಾರೆ. ಇವರು ಯಕ್ಷಗಾನ, ಐರಾವತ, ಗಯಚರಿತ್ರೆ, ಅಭಿಮಾನ್ಯವಿನ ಕಥೆ, ಗಂಗೆಗೌರಿ ಕಥೆ, ಶಿವಚರಿತ್ರೆ, ಮಲೆಮಾದೇಶ್ವರನ ಕಥೆ, ಕರಿಭಂಟರ ಕಥೆ, ರಾಮಾಂಜನೇಯ ಕಥೆ, ಶನಿಮಹಾತ್ಮನ ಕಥೆ ಇತ್ಯಾದಿ ಪ್ರಸಂಗಗಳನ್ನು ಆಯ್ಕೆ ಮಾಡಿಕೊಳ್ಳುತ್ತಾರೆ. ಇದಕ್ಕೆ ಆಗುವ ಖರ್ಚು–ವೆಚ್ಚಗಳನ್ನು ಪಾತ್ರದಾರಿಗಳು ಮತ್ತು ಕುಲದ ಮುಖಂಡರು ಒಟ್ಟಾಗಿ ಸೇರಿ ಚರ್ಚಿಸಿ ಹಣವನ್ನು ಸಂಗ್ರಹಿಸುತ್ತಾರೆ. ಈ ಕಥೆಗಳನ್ನ ಕಲಿಸಲು ಒಬ್ಬ ಭಾಗವತನಿರುತ್ತಾನೆ. ಈತ ಪಾತ್ರಗಳನ್ನ ಮೊದಲು ಪಾತ್ರಗಳಿಗೆ ಅನ್ವಯವಾಗಿ ಪರೀಕ್ಷಿಸಿ, ಆ ವ್ಯಕ್ತಿಗೆ ಹೊಂದುವ ಪಾತ್ರಗಳನ್ನು ಕೊಡುತ್ತಾರೆ. ಸಾಮಾನ್ಯವಾಗಿ ಸ್ತ್ರೀಪಾತ್ರಗಳನ್ನು ಸಹ ಗಂಡಸರೇ ಮಾಡುತ್ತಾರೆ. ಪಾತ್ರಗಳ ಆಧಾರದ ಮೇಲೆ ಪಾತ್ರಧಾರಿಗಳು ಹಣವನ್ನು ಮತ್ತು ದವಸಧಾನ್ಯವನ್ನು ಕೊಡುತ್ತಾರೆ. ಶನಿಮಹಾತ್ಮನ ಕಥೆಯಲ್ಲಿ ಶನಿಮಹಾತ್ಮ ಪಾತ್ರವನ್ನು ಮಾಡುವ ಪಾತ್ರಧಾರಿಯು ಅಭ್ಯಾಸ ಪ್ರಾರಂಭ ಮಾಡಿದ ದಿನದಿಂದ ಒಳಗೊಂಡಂತೆ ನಾಟಕ ಪ್ರದರ್ಶನವಾಗುವವರೆಗೂ ಮಾಂಸ–ಮಡ್ಡಿಯನ್ನು ತಿನ್ನುವುದಿಲ್ಲ. ಅಲ್ಲದೆ ಸ್ತ್ರೀಯರ ಸಂಪರ್ಕವನ್ನು ಸಹ ಮಾಡುವುದಿಲ್ಲ. ಅಂತೆಯೇ ಶಿವಚರಿತ್ರೆ, ಮಲೆಮಾದೇಶ್ವರನ ಕಥೆಗಳನ್ನ ಬಹಳ ಭಯಭಕ್ತಿಯಿಂದ ಕಲಿತು, ದೇವರ ಮಹಿಮೆಯನ್ನ ಅಭಿನಯದ ಮುಖೇನ ಅಭಿವ್ಯಕ್ತಿಸುವುದುಂಟು.

ಗಂಗಾಮತಸ್ಥರು ವಾಸಿಸುವ ಪ್ರತಿಯೊಂದು ಗ್ರಾಮದಲ್ಲಿಯೂ ಸಹ ಸಾಮಾನ್ಯವಾಗಿ ರಾಮಮಂದಿರವನ್ನ ನಿರ್ಮಿಸಿಕೊಂಡಿದ್ದಾರೆ. ಶ್ರೀರಾಮನಲ್ಲಿ ಈ ಜನಾಂಗದವರು ಅಪಾರವಾದ ಭಕ್ತಿಯನ್ನ ಇಟ್ಟುಕೊಂಡಿದ್ದಾರೆ. ಪ್ರತಿ ಶನಿವಾರವು ಸಹ ಜನಾಂಗದ ಕೆಲವು ಪ್ರಮುಖರು ಸೇರಿ ರಾತ್ರಿ ೭ ಗಂಟೆಯ ವೇಳೆಗೆ ರಾಮನನ್ನ ಕುರಿತು ಭಜಿಸುವುದುಂಟು. ರಾಮನ ಬಾಲ್ಯ, ವನವಾಸ, ಆತನ ಪಿತೃಪಾಲನೆ, ಹನುಮಂತನ ಭಕ್ತಿ, ಸೀತೆಯ ಪತಿಭಕ್ತಿ ಇತ್ಯಾದಿ ವಿಷಯಗಳನ್ನ ತಮ್ಮ ಭಜನೆಯಲ್ಲಿ ಹಾಡಿ ಹೊಗಳುತ್ತಾರೆ. ಪ್ರಮುಖವಾಗಿ ಒಬ್ಬ ವ್ಯಕ್ತಿಯು ತಾಳದ ಮೂಲಕ ಭಜನೆಯ ಹಾಡನ್ನು ಹೇಳಿಕೊಟ್ಟರೆ ಉಳಿದವರೆಲ್ಲರೂ ತಮ್ಮ ಕೈಗಳಲ್ಲಿರುವ ತಾಳವನ್ನು ಭಜನೆಗೆ ತಕ್ಕಂತೆ ಹಾಕುತ್ತ ಹಾಡುತ್ತಾರೆ. ಮೊದಲು ಶ್ರೀರಾಮನ ಭಾವಚಿತ್ರಕ್ಕೆ ಪೂಜೆಯನ್ನ ಸಲ್ಲಿಸಿ ಪ್ರಸಾದವನ್ನು ವಿನಿಯೋಗಿಸುತ್ತಾರೆ. ತದನಂತರದಲ್ಲಿ ಅವರಲ್ಲೆ ಒಬ್ಬ ಶ್ರೀರಾಮನ ಪಟವನ್ನ ಬಲದ ಕೈಯಲ್ಲಿ

ದೇಹಕ್ಕೆ ಹೊಂದಿಕೊಂಡಂತೆ ಹಿಡಿದುಕೊಂಡು ಎಡದ ಕೈಯಲ್ಲಿ ಉರಿಯುತ್ತಿರುವ ಗರಡುಗಂಬವನ್ನ ಹಿಡಿದುಕೊಂಡಿರುತ್ತಾರೆ. ಉಳಿದಂತೆ ಪ್ರಮುಖನೊಬ್ಬ ಭಜನೆಯ ಹೇಳಿಕೊಡುತ್ತ ಮುನ್ನಡೆದಂತೆ ಹಿಮ್ಮೇಳದವರು ಅವನು ಹೇಳಿಕೊಟ್ಟ ಭಜನೆಯ ಪದಗಳನ್ನು ಹೇಳುತ್ತಾ ಹಿಂಬಾಲಿಸುತ್ತಾರೆ. ತಮ್ಮ ಜನಾಂಗದ ಬೀದಿಗಳಲ್ಲಿ ಶ್ರದ್ಧಾ ಭಕ್ತಿಯಿಂದ ನಿಧಾನವಾಗಿ ಸಾಗುತ್ತಾರೆ. ಭಕ್ತಾದಿಗಳು ಶ್ರೀರಾಮನ ಪಟಕ್ಕೆ ನಮಿಸಿ, ಗರುಡುಗಂಬದ ಕಪ್ಪನ್ನು ಹಣೆಗೆ ಇಟ್ಟುಕೊಳ್ಳುತ್ತಾರೆ. ಅಲ್ಲದೆ ತಮ್ಮ ಕೈಲಾದಷ್ಟು ಹಣವನ್ನು ನಾಣ್ಯ ರೂಪದಲ್ಲಿ ಗರುಡು ಗಂಬಕ್ಕೆ ಅಂದರೆ ಅದರ ಎಣ್ಣೆಯೊಳಗಡೆಗೆ ಹಾಕುತ್ತಾರೆ.[೨೧] ಹೀಗೆ ಪ್ರತಿ ಶನಿವಾರವು ಸಹ ತಮ್ಮ ಜನಾಂಗದ ಬೀದಿಗಳಲ್ಲಿ ಶ್ರೀರಾಮನ ಭಾವಚಿತ್ರವನ್ನು ಹೊತ್ತು ಭಜನೆಯನ್ನು ಮಾಡುವುದನ್ನ ಸಾಮಾನ್ಯವಾಗಿ ಮಂಡ್ಯಜಿಲ್ಲೆಯಲ್ಲಿ ಗಂಗಾಮತಸ್ಥರು ವಾಸಿಸುವ ಗ್ರಾಮದಲ್ಲಿ ಕಾಣಬಹುದು. ಪ್ರಮುಖವಾಗಿ ಮಳವಳ್ಳಿ ತಾಲ್ಲೂಕಿನ, ಹುಸ್ಕೂರು, ನಿಟ್ಟೂರು, ಕುಂತೂರು, ಬಾಳೆಹೊನ್ನಿಗ, ಮಾರೇಹಳ್ಳಿ, ಮದ್ದೂರು ತಾಲ್ಲೂಕಿನ ತೊರೆಬೊಮ್ಮನಹಳ್ಳಿ, ಸುಣ್ಣದದೊಡ್ಡಿ, ದೊಡ್ಡರಸಿನಕೆರೆ, ಚಿಕ್ಕರಸಿನಕೆರೆ, ದೇಶವಹಳ್ಳಿ, ಮಂಡ್ಯ ತಾಲ್ಲೂಕಿನ ಕಡಿಲುವಾಗಿಲು, ಹೊಳಲು, ದುದ್ದ, ಕೊತ್ತತ್ತಿ, ಗೋಪಾಲಪುರ, ಶ್ರೀರಂಗಪಟ್ಟಣ ತಾಲ್ಲೂಕಿನ ಗಂಜಾಂ, ಕೆ.ಆರ್.ಎಸ್. ಮಹದೇವಪುರ, ಅರಕೆರೆ, ಪಾಂಡವಪುರ ತಾಲ್ಲೂಕಿನ ಕೆನ್ನಾಳು, ಬಸ್ತಿಪುರ, ಹೊನಗನಹಳ್ಳಿ, ವಡ್ಡರಹಳ್ಳಿ, ನಾಗಮಂಗಲ ತಾಲ್ಲೂಕಿನ ಬೊಮ್ಮನಹಳ್ಳಿ ಸರ್ಕಲ್, ಬೆಳ್ಳೂರು, ಮಾಯಸಂದ್ರ, ನಾಗಮಂಗಲ, ಕೃಷ್ಣರಾಜ ಪೇಟೆ ತಾಲ್ಲೂಕಿನ ಅಕ್ಕಿಹೆಬ್ಬಾಳು, ಹೊಸಹೊಳಲು, ಕಿಕ್ಕೇರಿ ಇತ್ಯಾದಿ ಸ್ಥಳಗಳಲ್ಲಿ ಇವರು ರಾಮಮಂದಿರಗಳನ್ನು ನಿರ್ಮಾಣ ಮಾಡಿಕೊಂಡಿರುವುದನ್ನು ಕಾಣಬಹುದು.

ಗಂಗಾಮತಸ್ಥರು ಈ ಜಿಲ್ಲೆಯಲ್ಲಿ ಬೇರೆ ಜನಾಂಗಕ್ಕಿಂತ ವಿಭಿನ್ನವಾದ ಸಾಂಸ್ಕೃತಿಕ ಕೇಂದ್ರಗಳನ್ನ ಹೊಂದಿರುವುದರೊಂದಿಗೆ, ಸಾಂಸ್ಕೃತಿಕವಾಗಿ ಶ್ರೀಮಂತರಾಗಿದ್ದಾರೆ.

## ೨.೬ ಗಂಗಾಮತಸ್ಥರ ಪೌರಾಣಿಕ ಹಿನ್ನಲೆ

ಗಂಗಾಮತಸ್ಥ ಸಮುದಾಯದಲ್ಲಿ ಪ್ರಚಲಿತವಿರುವ ಪುರಾಣದ ಪ್ರಕಾರ ಬಹಳ ಕಾಲದ ಹಿಂದೆ ಗಂಗಾನದಿ ತೀರದಲ್ಲಿ ತಂಡೋಪತಂಡವಾಗಿ ವಾಸವಾಗಿದ್ದರು. ಆ ಸಮುದಾಯಕ್ಕೆ ಒಬ್ಬ ಮುಖ್ಯಸ್ಥನಿದ್ದು, ಅವನು ರಾಜನಾಗಿದ್ದನು. ಅವನಿಗೆ ಒಬ್ಬ ಸಾಕುಮಗಳಿದ್ದಳು. ಅವನ ಹೆಸರು ದಾಶರಾಜನೆಂದು, ಇವನಿಗೆ ಇದ್ದ ಸಾಕುಮಗಳು ಅತ್ಯಂತ ಸುಂದರವಾಗಿದ್ದು, ಅವಳ ಹೆಸರು ಸತ್ಯವತಿ. ಗಂಗಾನದಿಯ ತೀರದಲ್ಲಿದ್ದ ಸಮುದಾಯದವರು ಮೀನುಗಳನ್ನು ಹಿಡಿಯುವ ಕಾಯಕವನ್ನು ಮಾಡುತ್ತಿದ್ದರು. ಕಾಯಕದಲ್ಲಿ ಹೆಣ್ಣುಮಕ್ಕಳು ಪಾಲ್ಗೊಳ್ಳುತ್ತಿದ್ದರು. ಒಂದು ದಿನ

ಹಸ್ತಿನಾವತಿಯ ಚಕ್ರವರ್ತಿಯಾದ ಶಂತನು ಬೇಟೆಗಾಗಿ ಗಂಗಾನದಿಯ ತೀರಕ್ಕೆ ಪರಿವಾರದ ಸಮೇತ ಬಂದನು. ಬೇಟೆಯ ಶ್ರಮವನ್ನು ನಿವಾರಿಸಿಕೊಳ್ಳಲು ವಿಹಾರಾರ್ಥವಾಗಿ ಗಂಗಾನದಿಯ ತೀರದಲ್ಲಿ ನಡೆದುಕೊಂಡು ಹೋಗುತ್ತಿದ್ದಾಗ, ಅತ್ಯಂತ ಚಲುವೆಯಾದ ಸತ್ಯವತಿಯನ್ನು ನೋಡಿ ಮನಸೋತನು. ಮದುವೆಯಾಗಲು ನಿರ್ಧರಿಸಿದನು. ಆ ಮತ್ಸ್ಯಗಂಧಿಯನ್ನು ಮದುವೆಯಾಗುವಂತೆ ಕೇಳುತ್ತಾನೆ. ಶಂತನ ಅಭಿಪ್ರಾಯಕ್ಕೆ ಅವಳು ಜಾನಪದ ಮುಗ್ಧತೆಯ ಪ್ರತೀಕವಾದ ಉತ್ತರವನ್ನು ಹೀಗೆ ಹೇಳುತ್ತಾಳೆ. "ನನಗಿಂತ ನನ್ನ ತಂದೆಯ ಅಭಿಪ್ರಾಯ ಮುಖ್ಯವಾದುದ್ದು. ಅವರು ಒಪ್ಪುವುದಾದರೆ ಅಗಲಿ". ಆಗ ಮತ್ಸ್ಯಗಂಧಿಯ ತಂದೆ, ಶಂತರಾಜನೊಂದಿಗೆ ಹೀಗೆ ಹೇಳುತ್ತಾನೆ. "ಚಕ್ರವರ್ತಿಗಳೇ, ನನ್ನ ಮಗಳ ಹೊಟ್ಟೆಯಲ್ಲಿ ಹುಟ್ಟುವ ಮಕ್ಕಳಿಗೆ ಪಟ್ಟ ಕಟ್ಟುವುದಾದರೆ ಮಾತ್ರ ಮದುವೆ ಮಾಡಿಕೊಡುತ್ತೇನೆ. ಇಲ್ಲದಿದ್ದರೆ ಈ ಕೆಲಸ ಆಗುವುದಿಲ್ಲ" ಎಂದು ಹೇಳುತ್ತಾನೆ. ಅದಕ್ಕೆ ಒಪ್ಪದ ರಾಜ ಚಿಂತಿಸುತ್ತಾ ಹಸ್ತಿನಾಪುರಕ್ಕೆ ಬರುತ್ತಾನೆ. ಕೆಲವು ದಿನಗಳ ನಂತರ ಶಂತನುವಿನ ಮಗನಾದ ದೇವವ್ರತ ತಂದೆಯ ಖಿನ್ನ ಸ್ಥಿತಿಗೆ ಕಾರಣವೇನು ಎಂದು ಅಂದು ಹೋಗಿದ್ದ ಆಪ್ತರನ್ನು ಕೇಳಿದನು. ಅವರಿಂದ ನಿಜವನ್ನು ತಿಳಿದ ದೇವವ್ರತನು ಕೂಡಲೇ ದಾಶರಾಜನ ಪಾಳಯಕ್ಕೆ ಹೊರಟನು. ಯುವರಾಜನು ಬಂದದ್ದನ್ನು ಕಂಡು ಆ ದಾಶರಾಜನು ಬಹಳ ಸಂಭ್ರಮದಿಂದ ದೇವವ್ರತನನ್ನು ಬರಮಾಡಿಕೊಂಡನು. ಬಳಿಕ ದಾಶರಾಜನು "ಯುವರಾಜರೇ, ನನ್ನಿಂದ ಯಾವ ಕಾರ್ಯವಾಗಬೇಕಾಗಿದೆ ಆಜ್ಞಾಪಿಸಿ" ಎಂದನು. ಅದಕ್ಕೆ ದೇವವ್ರತನು "ದಾಶರಾಜ ನಾನು ಮಹಾರಾಜರಿಗಾಗಿ ನಿನ್ನ ಮಗಳನ್ನು ಕೇಳಲು ಬಂದಿರುವೆ" ಎಂದನು. ಅದಕ್ಕೆ ದಾಶರಾಜನು "ಯುವರಾಜ ಇದು ನಮ್ಮ ಸೌಭಾಗ್ಯ. ಆದರೆ ಒಂದು ನಿಯಮದ ಮೇಲೆ ನನ್ನ ಒಪ್ಪಿಗೆಯಿದೆ". ದೇವವ್ರತನು "ದಾಶರಾಜ ನಿನ್ನ ನಿಯಮವೇನೆಂಬುದನ್ನು ಸಂಕೋಚವಿಲ್ಲದೆ ಹೇಳು" ಎಂದನು. ಅದಕ್ಕೆ ದಾಶರಾಜನು ನನ್ನ ಮಗಳ ಮಕ್ಕಳಿಗೆ ಸಿಂಹಾಸನದ ಉತ್ತರಾಧಿಕಾರಬೇಕು ಎಂದರೆ "ನನ್ನ ಮಗಳ ಹೊಟ್ಟೆಯಲ್ಲಿ ಹುಟ್ಟುವ ಮಕ್ಕಳು ರಾಜರಾಗಬೇಕು" ಎಂದು ಹೇಳಿ ಸುಮ್ಮನಾದನು. ರಾಜಸಿಂಹಾಸನಕ್ಕೆ ನಿಜವಾದ ಉತ್ತರಾಧಿಕಾರಿಯಾಗಬೇಕಾದ ಯುವರಾಜ ದೇವವ್ರತನಿಗೆ ದಾಶರಾಜನು ಹೀಗೆ ಹೇಳಲು, ಹೇಗಾದರೂ ತನ್ನ ಪೂಜ್ಯನಾದ ತಂದೆಗೆ ಸಂತೋಷವನ್ನುಂಟುಮಾಡಬೇಕೆಂಬ ಆಶಯದಿಂದ ದೇವವ್ರತನು ಹೀಗೆ ಪ್ರತಿಜ್ಞೆ ಮಾಡಿಬಿಟ್ಟನು. "ಈ ಕ್ಷಣದಿಂದ ನಾನು ರಾಜಸಿಂಹಾಸನದ ಎಲ್ಲಾ ಅಧಿಕಾರವನ್ನು ಬಿಟ್ಟು ಬಿಟ್ಟಿದ್ದೇನೆ. ಇದಕ್ಕೆ ಪಂಚಭೂತಗಳು, ದೇವತೆಗಳು ಸಾಕ್ಷಿಯಾಗಿರಲಿ, ಇದು ನನ್ನ ಪ್ರತಿಜ್ಞೆ". ಈ ರೀತಿ ಭೀಷಣವಾದ ಪ್ರತಿಜ್ಞೆಯನ್ನು ಮಾಡಿ ದೇವವ್ರತನು ಹೇಳುತ್ತಾನೆ. "ದಾಶರಾಜ ಈಗ ನಿನಗೆ ಸಮಾಧಾನವಾಯಿತೆ" ಆದರೆ

ದಾಶರಾಜನು ಹೇಳಿದನು "ಯುವರಾಜರೇ ನೀವು ಹೇಳಿದುದು ಸರಿಯೇ. ಆದರೆ ನಿಮ್ಮ ಮಕ್ಕಳು ಒಪ್ಪಬೇಕಲ್ಲ. ಅವರು ನನ್ನ ಮಗಳ ಮಕ್ಕಳಿಗೆ ತೊಂದರೆ ಕೊಟ್ಟರೆ ಏನು ಮಾಡುವುದು" ಆಗ ದೇವವ್ರತನು ತಂದೆಯ ಪ್ರೀತಿಗಾಗಿ ಇನ್ನೊಂದು ಘೋರಪ್ರತಿಜ್ಞೆಯನ್ನು ಮಾಡಿದನು. "ಪಂಚಭೂತಗಳು, ದೇವತೆಗಳ ಸಾಕ್ಷಿಯಾಗಿ ಹೇಳುತ್ತೇನೆ, ನಾನು ಈ ಜನ್ಮದಲ್ಲಿ ಮದುವೆಯಾಗುವುದೇ ಇಲ್ಲ. ಬ್ರಹ್ಮಚಾರಿಯಾಗಿಯೇ ಇರುತ್ತೇನೆ." ದೇವವ್ರತನು ಹೀಗೆ ಪ್ರತಿಜ್ಞೆ ಮಾಡುತ್ತಿದ್ದಂತೆಯೇ ಆಕಾಶದಲ್ಲಿ ದೇವತೆಗಳು ಹೇಳಿದರು "ಈ ವಿಧವಾದ ಭಯಂಕರವಾದ ಪ್ರತಿಜ್ಞೆಯನ್ನು ಯಾರೂ ಮಾಡಿರಲಿಲ್ಲ. ಭೀಷಣವಾದ ಪ್ರತಿಜ್ಞೆಗಳನ್ನು ಮಾಡಿದ ಈ ದೇವವ್ರತನು ಮುಂದೆ ಭೀಷ್ಮನೆಂದು ಪ್ರಸಿದ್ಧನಾಗಲಿ". ಅಂದಿನಿಂದ ದೇವವ್ರತನು ಭೀಷ್ಮನೆಂದು ಪ್ರಸಿದ್ಧನಾದನು.[೨೨]

ಅನಂತರ ಸತ್ಯವತಿಯನ್ನು ರಥದಲ್ಲಿ ಕೂರಿಸಿಕೊಂಡು ಭೀಷ್ಮನು ರಾಜಧಾನಿಗೆ ಹಿಂದುರುಗಿದನು. ಶಂತನು ಸತ್ಯವತಿಯ ವಿವಾಹವು ವೈಭವದಿಂದ ನಡೆಯಿತು. ತನ್ನ ಮಗನ ಮಹಾತ್ಯಾಗದಿಂದ ಶಂತಸಗೊಂಡ ಸಂತನು ಅವನಿಗೆ ಇಚ್ಛಾಮರಣಿಯಾಗು ಎಂಬ ವರವನ್ನಿತ್ತನು. ಶಂತನಿಗೆ ಇಬ್ಬರು ಗಂಡುಮಕ್ಕಳು ಸತ್ಯವತಿಯ ಹೊಟ್ಟೆಯಲ್ಲಿ ಜನಿಸಿದರು. ಚಿತ್ರಾಂಗದ, ವಿಚಿತ್ರವೀರ್ಯರೆಂದು ಹೆಸರಿಟ್ಟರು. ನಂತರದ ದಿನಗಳಲ್ಲಿ ಶಂತನು ಮರಣಹೊಂದಿದನು. ಚಿತ್ರಾಂಗದನನ್ನು ರಾಜನನ್ನಾಗಿ ಮಾಡಿದರು. ಬಹಳ ಪರಾಕ್ರಮಿಯಾಗಿದ್ದ ಚಿತ್ರಾಂಗದನು ತನಗೆ ಸಮಾನರಾದವರು ದೇವತೆಗಳಲ್ಲಿಯೂ, ದಾನವರಲ್ಲಿಯೂ ಮನುಷ್ಯರಲ್ಲಿಯೂ ಇಲ್ಲವೆಂದು ಗರ್ವಪಟ್ಟನು. ಈ ಗರ್ವವನ್ನು ಸಹಿಸದ ಗಂಧರ್ವರಾಜನು ಚಿತ್ರಾಂಗದನನ್ನು ಕೊಲ್ಲುತ್ತಾನೆ. ನಂತರ ವಿಚಿತ್ರವೀರ್ಯನನ್ನೆ ರಾಜನನ್ನಾಗಿ ಮಾಡುತ್ತಾರೆ. ವಿಚಿತ್ರವೀರ್ಯನಿಗೆ ಮದುವೆ ಮಾಡಲು ವ್ಯವಸ್ಥೆ ಮಾಡುತ್ತಾರೆ. ಸ್ವಯಂವರಕ್ಕೆ ಭೀಷ್ಮನೇ ಹೋಗಿ ಅಂಬೆ, ಅಂಬಿಕೆ, ಅಂಬಾಲಿಕೆ ಎಂಬ ಮೂವರು ಸುಂದರ ರಾಜಕುಮಾರಿಯರನ್ನು ತಮ್ಮನಿಗಾಗಿ ಕರೆದುಕೊಂಡು ಬಂದನು. ಅಂಬೆಯು ವಿಚಿತ್ರವೀರ್ಯನನ್ನು ಮದುವೆಯಾಗಲು ಒಪ್ಪದೆ ಭೀಷ್ಮನ ಮೇಲೆ ಕೋಪಗೊಂಡು ಹೊರಟುಹೋದಳು. ಅಂಬಿಕೆ, ಅಂಬಾಲಿಕೆಯವರು ವಿಚಿತ್ರ ವೀರ್ಯನನ್ನು ವರಿಸಿದರು. ವಿಚಿತ್ರವೀರ್ಯನ ಮದುವೆಯು ವಿಜೃಂಭಣೆಯಿಂದ ನಡೆಯಿತು. ಭೀಷ್ಮನ ನೇತೃತ್ವದಲ್ಲಿ ರಾಜ್ಯದ ಆಡಳಿತವು ತುಂಬಾ ಚೆನ್ನಾಗಿ ನಡೆಯುತ್ತಿತ್ತು. ವಿಚಿತ್ರವೀರ್ಯನು ಇದಾವುದರ ಬಗೆಗೂ ತಲೆಕೆಡಿಸಿಕೊಳ್ಳದೇ ಸುಂದರವಾದ ಹೆಂಡತಿಯರ ಜೊತೆಯಲ್ಲಿ ಅಂತಃಪುರದಲ್ಲಿಯೇ ಇದ್ದುಬಿಟ್ಟನು. ಹೀಗೆ ಏಳು ವರ್ಷಗಳ ಕಾಲ ಅಂತಃಪುರದಿಂದ ಹೊರಗೆ ಬಾರದಿದ್ದ ಅವನು ಕ್ಷಯರೋಗಕ್ಕೆ ತುತ್ತಾಗಿ ಮರಣ ಹೊಂದಿದನು. ಇವನಿಗೂ ಸಹ ಮಕ್ಕಳಿರಲಿಲ್ಲ. ಮುಂದೆ

ರಾಜ್ಯಭಾರಕ್ಕೆ ಉತ್ತರಾಧಿಕಾರಕ್ಕೆ ಮಕ್ಕಳಿಲ್ಲವೆಂದು ಚಿಂತಿಸಿದ ಭೀಷ್ಮ ಮತ್ತು ಸತ್ಯವತಿ ಕುರುವಂಶದ ಉದ್ಧಾರಕ್ಕಾಗಿ ವೇದವ್ಯಾಸರಿಂದ ಅಂಬಿಕೆ ಮತ್ತು ಅಂಬಾಲಿಕೆಯರಿಗೆ ಮಕ್ಕಳ ಭಾಗ್ಯವನ್ನು ಕರುಣಿಸುವಂತೆ ಕೋರಿಕೊಳ್ಳಲು, ವೇದವ್ಯಾಸರು ಮಕ್ಕಳನ್ನು ಕರುಣಿಸಿದರು. ಅವರೇ ಧೃತರಾಷ್ಟ್ರ, ಪಾಂಡು ಹಾಗೂ ದಾಸಿಯ ಪುತ್ರ ವಿಧುರ. ಮುಂದೆ ಮಹಾಭಾರತದ ಕತೆಯನ್ನೆಲ್ಲಾ ಗಂಗಾಮತಸ್ಥರು ತಮ್ಮದೆಂದೇ ಸಮರ್ಥಿಸಿಕೊಳ್ಳುತ್ತಾರೆ. 'ಮಹಾಭಾರತದ ಮುಖ್ಯ ಸ್ತಂಭಗಳಲ್ಲೊಬ್ಬನಾದ ಕರ್ಣನನ್ನು ಬೆಳೆಸಿದ್ದು ನಾವೇ' ಎಂದು ಹೇಳಿಕೊಳ್ಳುತ್ತಾರೆ. ಜಾನಪದ ಮಹಾಭಾರತದಲ್ಲಿ ಕರ್ಣ ಬೆಸ್ತ ಎಂಬುದಕ್ಕೆ ಪೂರಕವಾದ ಮಾಹಿತಿಗಳು ಇವೆ.

ಮಹಾಭಾರತದಲ್ಲಿ ಬರುವ ಪ್ರಮುಖ ಗುರುಗಳು ದ್ರೋಣಾಚಾರ್ಯರು ತಮ್ಮ ಶಿಷ್ಯನನ್ನು ಕುರಿತು 'ಧನುರ್ಧಾರಿ ಎಂಬ ವಿದ್ಯೆ ಎಲ್ಲದಕ್ಕೂ ದೊಡ್ಡದು. ಇದನ್ನು ಬಲ್ಲವನು ವೀರ ಅರ್ಜುನನು ಒಬ್ಬನೆ' ಎಂದು ಅರ್ಜುನನನ್ನು ಕೊಂಡಾಡುವಾಗ ಕೌರವ ಕಡೆಯಿಂದ ಕರ್ಣನು ಎದ್ದು ನಿಂತು, 'ಅರ್ಜುನನು ಕಲಿತ ವಿದ್ಯೆಗಿಂತ ನಾನು ಹೆಚ್ಚಿನ ರೀತಿಯಲ್ಲಿ ಕಲಿತಿರುವೆ. ಅವನಿಗೆ ಕಡಿಮೆ ಇಲ್ಲ. ಉತ್ತಮ ರೀತಿಯಲ್ಲಿ ಈ ವಿದ್ಯೆಯನ್ನು ಬಲ್ಲೆನು. ಅರ್ಜುನನೊಬ್ಬನೆ ಈ ವಿದ್ಯೆಯನ್ನು ಬಲ್ಲವನು ಎಂದು ಹೊಗಳೋದು ನಿಮ್ಮ ಮೂರ್ಖತನ' ಎಂದು ಹೇಳುತ್ತಾನೆ. ಇದನ್ನು ಕೇಳಿದ ಅರ್ಜುನ ರುದ್ರರೂಪತಾಳಿ 'ಎಲೋ ಎಲೋ ಕರ್ಣ ಕುಲವನ್ನು ಅರಿಯೆ? ತನುಮದದಿಂದ ನೀನು ಯಾಕೆ ಮೆರೆಯುತ್ತಿರುವೆ? ನೀನು ಅಂಬಿಗರವನು, ದೋಣಿ ನಡೆಸುವವನು, ಬಲೆಗಳ ಬೀಸುವವನು, ಮೀನು ಹಿಡಿಯುವವನು, ಮೀನು ಹಿಡಿದು ಸಂತೆಯಲ್ಲಿ ಮಾರುವವನು, ನೀನು ರಾಜಕುಮಾರರ ಜೊತೆ ಸರಿಸಾಟಿಯೇ? ನಿನ್ನ ಯೋಗ್ಯತೆ ಏನು? ನಮ್ಮ ಯೋಗ್ಯತೆ ಏನು? ಕುಲಬಲವಿಲ್ಲದ ಕುಲಹೀನನು ನೀನು' ಎಂದು ಅರ್ಜುನ ಕರ್ಣನನ್ನು ಜರಿಯುವುದು ಜಾನಪದ ಮಹಾಭಾರತದ ಕರ್ಣ ಅಂಗದೇಶದ ರಾಜಪರ್ವದಲ್ಲಿ ಬರುತ್ತದೆ. ಇವು ಈ ಜನಾಂಗದವರ ಬಗ್ಗೆ ದೊರೆಯುವ ಪೌರಾಣಿಕ ಕಥೆಗಳು. ಈ ರೀತಿಯ ಕಥೆಗಳು ಗಂಗಾಮತಸ್ಥರ ಬಗ್ಗೆ ಒಂದು ಪೌರಾಣಿಕ ಪರಿವೇಷವನ್ನು ಕಟ್ಟಿ ಒಂದು ಶ್ರೇಷ್ಠ ಹಿನ್ನೆಲೆಯನ್ನು ಒದಗಿಸುತ್ತವೆ.

### ೨.೭ ಶಾಸನಗಳ ಉಲ್ಲೇಖಗಳು

ಮಂಡ್ಯ ಜಿಲ್ಲೆಯಲ್ಲಿ ಗಂಗಾಮತಸ್ಥರಿಗೆ ಸಂಬಂಧಿಸಿದ ಹಲವು ಶಾಸನಗಳು ವಿವಿಧ ಭಾಗಗಳಲ್ಲಿ ಕಂಡುಬಂದಿವೆ. ಸಂಬಂಧಪಟ್ಟ ಶಾಸನಗಳ ಬಗ್ಗೆ ಹಲವು ವಕ್ತೃಗಳು ತಮ್ಮದೇ ಆದ ರೀತಿಯಲ್ಲಿ ಸಮರ್ಥಿಸಿಕೊಂಡಿದ್ದಾರೆ. ಗಂಗಾಮತಸ್ಥರು ಹಿಂದೆ ರಾಜರ ಸೈನ್ಯದಲ್ಲಿ

ಸೇವೆಸಲ್ಲಿಸಿದ್ದಾರೆ. ಈ ಭಾಗದ ಗಂಗಾಮತಸ್ಥರ ಹೆಸರಿನ ಮುಂದೆ ನಾಯಕ ಎಂಬುದಾಗಿ ಕರೆಯುವುದು ರೂಢಿ. ಹಿಂದೆ ದಂಡನಾಯಕರಾಗಿ ಸೇವೆಸಲ್ಲಿಸಿದ್ದರಿಂದ ಆ ವೃತ್ತಿಯ ಹೆಸರು ಉಳಿದುಕೊಂಡಿದೆ. ಸಾಹಿತಿ ತೈಲೂರುವೆಂಕಟಕೃಷ್ಣರವರು ಹೇಳುವಂತೆ "ಮಂಡ್ಯ ಜಿಲ್ಲೆಯಲ್ಲಿ ರಾಜರ ಕಾಲದಲ್ಲಿ ಸೈನ್ಯದಲ್ಲಿದ್ದವರು ಗಂಗಾಮತಸ್ಥ ಜನಾಂಗದವರು. ಆದುದ್ದರಿಂದ ಇವರನ್ನು ನಾಯಕರು ಎಂದೂ ಸಹ ಕರೆಯುತ್ತಾರೆ. ರಾಜನ ಜೊತೆಯಲ್ಲಿ ಬೇಟೆಗೆ ಹೋಗುವುದು, ಪಲ್ಲಕ್ಕಿ ಹೊರುವುದು, ಶತ್ರು ಸೈನ್ಯದ ಜೊತೆ ವೀರಾವೇಶದಿಂದ ಹೋರಾಡುವುದು ಇವರ ಕರ್ತವ್ಯವಾಗಿತ್ತು. ಅಲ್ಲದೆ ಇವರು ಹಲವು ದೇವಸ್ಥಾನಗಳಿಗೆ, ಹಳ್ಳಿಗಳಿಗೆ ರಾಜರಿಂದ, ಅವರೂ ಸಹ ದಾನಮಾಡುತ್ತಿದ್ದುದುಂಟು. ರಾಜ ಸತ್ತ ಸಂದರ್ಭದಲ್ಲಿ ತಮ್ಮ ಪ್ರಾಣವನ್ನೂ ಅರ್ಪಿಸುತ್ತಿದ್ದರು. ಅಂತಹ ಸಂದರ್ಭದಲ್ಲಿ ಅವರ ಹೆಂಡತಿಯರು ಇಹಲೋಕವನ್ನು ತ್ಯಜಿಸುತ್ತಿದ್ದರು. ಈ ಹಿನ್ನಲೆಯಿಂದಲೇ ಜಿಲ್ಲೆಯಲ್ಲಿ ಹಲವು ವೀರಗಲ್ಲು, ಮಾಸ್ತಿಗಲ್ಲು ಇಂದಿಗೂ ಇದ್ದು, ಗಂಗಾಮತಸ್ಥರಿಂದ ಪೂಜಿಸಿಕೊಳ್ಳುತ್ತಿರುವುದನ್ನ ಕಾಣಬಹುದು". ಎಂದು ಹೇಳಿದ್ದಾರೆ.

ಶಾಸನಗಳ ಗುಂಪಿನಲ್ಲಿ ದಾನ ಶಾಸನಗಳೇ ಸುಮಾರು ಅರ್ಧಕ್ಕಿಂತ ಹೆಚ್ಚಾಗಿವೆ. ದೇವಾಲಯ ಬಸದಿಗಳನ್ನು ಹೊಸದಾಗಿ ಕಟ್ಟಿಸುವುದು. ಹಳೆಯದನ್ನು ಜೀರ್ಣೋದ್ಧಾರ ಮಾಡುವುದು, ಅವುಗಳನ್ನು ವಿಸ್ತರಿಸುವುದು; ಹೊಸದಾಗಿ ದೇವರುಗಳನ್ನು ಹಳೆಯ ದೇವಾಲಯಗಳಲ್ಲಿ ಪ್ರತಿಷ್ಠಾಪಿಸುವುದು, ಅಲ್ಲಿ ನಡೆಯಬೇಕಾದ ಪೂಜಾ ಕಾರ್ಯಗಳಿಗೆ ಭೂಮಿ ಮತ್ತು ಕಾಣಿಕೆಗಳನ್ನು ದಾನವಾಗಿ ಕೊಡುವುದು, ದೇವರುಗಳಿಗೆ ಒಡವೆ ವಸ್ತ್ರಗಳನ್ನು ಸಮರ್ಪಿಸುವುದು, ಕೆರೆಕಟ್ಟೆ, ಕಾಲುವೆ, ಕಲ್ಯಾಣಿ ಮುಂತಾದವುಗಳನ್ನು ನಿರ್ಮಿಸುವುದು, ಅವುಗಳನ್ನು ನವೀಕರಿಸುವುದು ಮುಂತಾದ ಧರ್ಮ ಕಾರ್ಯಗಳನ್ನು ನಡೆಸಿದಾಗ ಅವುಗಳ ನೆನಪಿಗಾಗಿ ನೆಡಿಸಿದ ಶಾಸನಗಳೇ ದಾನ ಶಾಸನಗಳು.

ಗಂಗಾಮತಸ್ಥರ ದಾನ ಶಾಸನಗಳಲ್ಲಿ ಒಂದಾದ ತೆನದಂಕವಂಶದ ಹರಿಹರ ದಂಡನಾಯಕನು ತನ್ನ ತಮ್ಮಂದಿರಾದ ಸಿಂಗೆನಾಯಕ ಮತ್ತು ಮಾರೆಯ ನಾಯಕರೊಡಗೂಡಿ, ತಂದೆಯ ಹೆಸರಿನಲ್ಲಿ ಮಲ್ಲಿಕಾರ್ಜುನ ದೇವಾಲಯವನ್ನು ಕಟ್ಟಿಸಿ, ತಾಯಿಯ ಹೆಸರಿನಲ್ಲಿ ಕೆರೆಯನ್ನು ನಿರ್ಮಿಸಿ ರಾಜನಿಂದ ಭೂಮಿಯನ್ನು ಪಡೆದು ದತ್ತಿಯಾಗಿ ಬಿಟ್ಟನೆಂದು ಕ್ರಿ.ಶ. ೧೨೩೪ ಮಂಡ್ಯ ತಾ॥ ಬಸರಾಳು ಶಾಸನವು (ಮಂ. ೨೯) ತಿಳಿಸುತ್ತದೆ. ಅವರು ತಮ್ಮ ಸೇವಾ ಕಾರ್ಯದ ಮೂಲಕ ಕೃತಾರ್ಥರಾದರೆಂದು ಆ ಶಾಸನ ಬಣ್ಣಿಸುತ್ತದೆ.

ಜನನಿಯ ಹೆಸರಿಂದಂ ಕೆರೆ
ಜನಕನ ಹೆಸರಿಂದೆ ದೇವತಾಗೃಹವೆಸದಿ
ರ್ಪಿನೆಗಂ ಮಾಡಿಸಿದರ್ನ್ನಿಜ
ತಮಯರ್ಮ್ಮೂವರುಮಿದೇಂ ಕೃತಾರ್ತ್ಥರೊ ಜಗದೊಳ್[೨೩]

ದೇವಲಾಪುರದ ಲಕ್ಷ್ಮೀಕಾಂತ ದೇವರ ಸನ್ನಿಧಿಗೆ ದೀಪಮಾಲೆಯ ಕಂಭ ಮತ್ತು ಬಾಗಿಲು ವಾಡವನ್ನು ಚಿಕ್ಕ ಅಲ್ಲಪ್ಪನಾಯ್ಕನು ನಿಲ್ಲಿಸಿಕೊಟ್ಟನೆಂದು ಕ್ರಿ.ಶ. ೧೪೭೨ರ ಶಾಸನ (ನಾಮಂ. ೧೫೮) ಹೇಳುತ್ತದೆ. ಹೀಗೆಯೇ ಬೆಳ್ಳೂರಿನ ಪ್ರಸನ್ನ ಮಾಧವದೇವರ ಮುಂದೆ ಹರಿದಾಸರಾವುತನು ಉತ್ಸವ ಮಂಟಪ, ದೀಪಮಾಲೆಯ ಕಂಭ ಮತ್ತು ಬಲಿ ಪೀಠಾಧಿಗಳನ್ನು ನಿಲ್ಲಿಸಿದನೆಂಬ ವಿಚಾರ ಅಲ್ಲಿನ ಕ್ರಿ.ಶ. ೧೫೧೮ರ ಶಾಸನದಲ್ಲಿ (ನಾಮಂ. ೯೧) ಹೇಳಲ್ಪಟ್ಟಿದೆ.

ವೀರಗಲ್ಲುಗಳು, ಮಾಸ್ತಿಕಲ್ಲುಗಳು, ನಿಸಿದಿಗಲ್ಲುಗಳು ಎಂದು ವೀರ ಶಾಸನಗಳನ್ನು ಮೂರು ಬಗೆಯಾಗಿ ವಿಂಗಡಿಸಬಹುದು. ಬಗೆಬಗೆಯ ಕಾರಣಗಳಿಗಾಗಿ ತಮ್ಮ ಪ್ರಾಣವನ್ನರ್ಪಿಸಿದ ವೀರರ ನೆನಪಿಗಾಗಿ ನೆಟ್ಟ ಕಲ್ಲುಗಳೇ ವೀರಗಲ್ಲುಗಳು. ವೀರರು ಮಡಿದಾಗ ಅವರ ಮಡದಿಯರು ತಾವು ಅಗ್ನಿ ಪ್ರವೇಶ ಮಾಡಿಯೋ, ತಲೆ ಕಡಿದುಕೊಂಡೊ ಪ್ರಾಣವನ್ನೊಪ್ಪಿಸುತ್ತಿದ್ದರು ಅವರೇ ಮಹಾಸತಿಯರು ಅಥವಾ ಮಾಸ್ತಿಯರು. ಅವರ ಸ್ಮಾರಕವಾಗಿ ನೆಟ್ಟ ಕಲ್ಲುಗಳೇ ಮಾಸ್ತಿಕಲ್ಲುಗಳು. ಅಂತಹ ವೀರವೀರೆಯರನ್ನು ನಮ್ಮ ಗ್ರಾಮಸ್ಥರು ಇಂದಿಗೂ ಪೂಜಿಸಿಕೊಂಡು ಬರುತ್ತಿದ್ದಾರೆ. ಕೆಲವರು ಅವರಿಗಾಗಿ ಗುಡಿಗಳನ್ನು ಕಟ್ಟಿದ್ದಾರೆ. ಗುಡಿಗಳೆಂದರೆ ಅವು ಅತ್ಯಂತ ಕಿರಿದಾದ, ಮೂರು ದಿಕ್ಕಿಗೆ ಮೂರು ಮೂರು ಚಪ್ಪಡಿ, ಮೇಲ್ಛಾವಣಿಗೊಂದು ಚಪ್ಪಡಿ ಎಂಬಂತೆ ಅತ್ಯಂತ ಸರಳವಾದ ರಚನೆಗಳು. ಮಂಡ್ಯ ತಾ॥ ಪುರ, ಮದ್ದೂರ ತಾ॥ ಮಾರಾಗಾನಹಳ್ಳಿ, ಪಾಂಡವಪುರ ತಾ॥ ದೇವರಾಯಪಟ್ಟಣಗಳಲ್ಲಿ ವೀರರ ಗುಡಿ, ಮಾಸ್ತಿಗುಡಿಗಳಿವೆ. ವೀರಗಲ್ಲು–ಮಾಸ್ತಿಕಲ್ಲುಗಳೆಂಬ ಸ್ಮಾರಕ ಶಿಲೆಗಳ ಮೇಲೆ ಚಿತ್ರ ಪಟ್ಟಿಕೆಗಳಂತೆ ಸಾಲು ಸಾಲಾಗಿ ಕೊರೆದ ಚಿತ್ರಗಳು ಮಾತ್ರವೇ ಇರಬಹುದು. ಚಿತ್ರಗಳ ಜೊತೆಗೆ ಕಾಲ ದೇಶ ನಾಮ ರೂಪಾದಿ ವಿವರಗಳನ್ನು ತಿಳಿಸುವ ಬರಹವೂ ಇರಬಹುದು, ಚಿತ್ರಗಳಿಲ್ಲದೆ ಕೇವಲ ಬರಹ ಮಾತ್ರವೇ ಇರಬಹುದು.

ವೀರರು ಪ್ರಾಣ ತೊರೆಯುವ ಸನ್ನಿವೇಶಗಳು ಅನೇಕ ಮುಖವಾಗಿ ಒದಗುತ್ತಿದ್ದವು. ಮಂಡ್ಯ ಜಿಲ್ಲೆಯ ಶಾಸನಗಳನ್ನು ಪರಿಶೀಲಿಸಿದಾಗ ಪ್ರಾಣಾರ್ಪಣೆಯ ಏಳು ಪ್ರಮುಖ ಸಂದರ್ಭಗಳು ನಮಗೆ ಗೋಚರಿಸುತ್ತವೆ.

೧. ದೊರೆಯ ಪರವಾಗಿ ರಣರಂಗದಲ್ಲಿ ಕಾದುವುದು.

೨. ತನ್ನ ಆಶ್ರಯದಾತನಿಗಾಗಿ ಸ್ವಯಂ ಪ್ರೇರಣೆಯಿಂದ ಪ್ರಾಣಾರ್ಪಣೆ ಮಾಡುವುದು.

೩. ಗ್ರಾಮದ ದನ ಕರುಗಳನ್ನು ರಕ್ಷಿಸಿಕೊಳ್ಳುವುದು.

೪. ಗ್ರಾಮದ ಸ್ತ್ರೀಯರ ಅಪಹರಣ ಅಥವಾ ಮಾನಾಪಹರಣವಾಗುವುದನ್ನು ತಪ್ಪಿಸುವುದು.

೫. ಪರವೂರವರು ಏನೋ ಕಾರಣದಿಂದ ತಮ್ಮ ಊರ ಮೇಲೆ ದಾಳಿ ನಡೆಸಿದಾಗ ಗ್ರಾಮ ರಕ್ಷಣೆಗೆ ಮುಂದಾಗುವುದು.

೬. ಕ್ರೂರ ಮೃಗಗಳೊಂದಿಗೆ ಕಾದಾಡುವುದು.

೭. ಕಳ್ಳರೊಡನೆ ಹೋರಾಡುವುದು.

ನಾಯಕನಹಳ್ಳಿಯ ಕ್ರಿ.ಶ. ೧೨ನೆಯ ಶತಮಾನದ ಶಾಸನದಲ್ಲಿ (ಕೃಪೇ. ೬೭) ಗುಳೆಯ ನಾಯಕನ ಆಳು, ಕುರುಳೆಯ ನಾಯಕನ ಮಗ ಮಚನ ಎಂಬಾತನು ಸಿಂಗ ಕಟ್ಟಕದ ಬವರದಲ್ಲಿ ಬಿದ್ದನೆಂದಿದೆ. ಅದೇ ಕಾಲದ ಹೊನ್ನೇನಹಳ್ಳಿಯ ಶಾಸನದಲ್ಲಿ (ನಾಮಂ. ೧೦೫) ಹಾಡವಾಳ ಮಸಣಯ್ಯನು ಸತ್ತ ವೃತ್ತಾಂತವಿದೆ. ಹೊಯ್ಸಳ ದೇವನು ದಂಡನಾಯಕ ಮಸಣಯ್ಯನ ಮೇಲೆ ದಂಡೆತ್ತಿ ಹೋಗಿ ಕಪಿಲಾನದಿಯ ತೀರದಲ್ಲಿ ಯುದ್ಧ ಮಾಡಿದನು. ಆಗ ಹಾಡಿವಾಳ ಮಸಣಯ್ಯನು ದೊರೆಯ ಪರವಾಗಿ ಕಾದಾಡಿ, ಹಲವರನ್ನು ಇರಿದು ಸುರಲೋಕ ಪ್ರಾಪ್ತನಾದನು ಎಂದು ಇಲ್ಲಿ ಬರೆದಿದೆ.

ಕೆಲವು ವೀರ ಶಾಸನಗಳಲ್ಲಿ ಸತ್ತ ವೀರರ ಗುಣಗಾನ ನಡೆದಿರುವುದೂ ಉಂಟು. ತೆಂಗಿನ ಘಟ್ಟದ ಸಾವಂತ ಕಾಳಯ್ಯನಿಗಾಗಿ ನೆಟ್ಟ ವೀರಗಲ್ಲಿನಲ್ಲಿ (ಕೃಪೇ ೪೩; ಕ್ರಿ.ಶ. ೧೧೧೭) ಅವನನ್ನು ಸಂಗ್ರಾಮ ಸಹಸ್ರಬಾಹು, ಕದನತ್ರಿಣೇತ್ರ, ಕರೆದೀವದಾನಿ, ಸುಭಟರಾದಿತ್ಯ, ಕಲಿಯುಗ ಮಾರ್ತಾಂಡ, ಪರನಾರಿದೂರ, ರಣರಂಗಧೀರ, ಸತ್ಯರಾಧೇಯ ಎಂದು ಕೊಂಡಾಡಲಾಗಿದೆ. ಅಗ್ರಹಾರ ಬಾಚಹಳ್ಳಿಯ ಕ್ರಿ.ಶ. ೧೧೭೪ರ ಹೊಯ್ಸಳ ವೀರ ಬಲ್ಲಾಳನ ಆಳ್ವಿಕೆಯ ವೀರಗಲ್ಲೊಂದರಲ್ಲಿ (ಕೃಪೇ. ೧೭೭) ಸಾಮಂತ ಬಬ್ಬೆಯ ನಾಯಕನು ರಾಜನ ಪರವಾಗಿ ಕಾದಾಡಿ ಪ್ರಾಣತೆತ್ತ ವೃತ್ತಾಂತವಿದೆ. ಬಲ್ಲಾಳದೇವನು ದೋರಸಮುದ್ರದಲ್ಲಿನ ಬೀಡಿನಲ್ಲಿದ್ದು, ಬಬ್ಬೆಯ ನಾಯಕನನ್ನು ಕರೆದು ಸಂಕಮದೇವನ ಸೈನ್ಯದೊಂದಿಗೆ ಕಾದಾಡಬೇಕೆಂದು ಆಜ್ಞೆಮಾಡಿ ವೀಳೆಯವನ್ನು ಕೊಟ್ಟು ಬೀಳ್ಕೊಟ್ಟನು. ಅವನಾದರೋ 'ಮಹಾಪ್ರಸಾದ' ಎಂದು ನಡೆದು ರಣರಂಗದಲ್ಲಿ ವೀರಭಟರನ್ನು ನವಖಂಡವಾಗುವಂತೆ ತರಿದನು. ಅವರ ಮುಂಡಗಳು ಕುಣಿದಾಡಿದವು. ರಕ್ತದ ಕಡಲು ಹರಿಯಿತು. ಆಗ ಬೇರೊಂದು ಶಸ್ತ್ರವು ಎದೆಗೆ ಬಂದು ತಗುಲಿದಾಗ ಬಬ್ಬೆಯನಾಯಕನು ವೀರಸ್ವರ್ಗವನ್ನು ಸಾಧಿಸಿ, ದೇವಸುಂದರಿಯರಿಗೆ ಗಂಡನಾಗಿ ದೇವಲೋಕವನ್ನು ಸೇರಿದನು ಎಂದು ಅಲ್ಲಿ ವಿವರಿಸಿದೆ. ಇಲ್ಲಿ ಕೆಲವೇ ವಾಕ್ಯಗಳಲ್ಲಿ ಬಬ್ಬೆಯ ನಾಯಕನು ಮೆರೆದ ಶೌರ್ಯದ ಉದಾತ್ತಚಿತ್ರಣ ನಮ್ಮ ಕಣ್ಣಮುಂದೆ ಕಟ್ಟುತ್ತದೆ.

ಚುಂಚನಹಳ್ಳಿಯ ಕ್ರಿ.ಶ. ೧೨೦೫ರ ಶಾಸನದಲ್ಲಿ (ನಾಮಂ. ೧೧೧) ರಾಮೆಯ ನಾಯಕನ ವೀರಸಿರಿಯ ಬಣ್ಣನೆಯಿದೆ. ಆತನು ಎಡವಾರದ ರಾಚಿನಾಯಕನೂ ಬೆಲುಹೊರ ಎಂಬಲ್ಲಿ ಕಾದಿ ಸತ್ತನು ಎಂದು ಅಲ್ಲಿ ಬರೆದಿದೆ. ಕೆಸಲಗೆರೆಯ ಕ್ರಿ.ಶ. ೧೨೬೦ರ ಶಾಸನದಲ್ಲಿ (ನಾಮಂ. ೧೭೨) ಗುಜ್ಜಯ ನಾಯ್ಕನೆಂಬಾತನು ರಣರಂಗಧೀರನಾಗಿ ಕಾದಿ ಮಡಿದ ವೃತ್ತಾಂತವಿದೆ. ಅದರಲ್ಲಿ ಆತನ ತಂದೆ ಸಾಮಂತ ಮಾಚಿದೇವ ಮತ್ತು ತಾಯಿ ಕೇತಲದೇವಿಯರ ಗುಣಗಾನವೂ ಕಾವ್ಯಾತ್ಮಕವಾಗಿ ಕೂಡಿಬಂದಿದೆ. ಗುಜ್ಜಯನಾಯ್ಕನ ಸಾಹಸ ವರ್ಣನೆಯಂತೂ ಬಹು ಮನೋಹಾರಿಯಾಗಿದೆ. ಶತ್ರು ಸಮುದಾಯವೆಂಬ ಕತ್ತಲೆಗೆ ಅವನು ಚಂದ್ರನಂತೆ, ಮದ್ದಾನೆಗಳಿಗೆ ಅವನು ಸಿಂಹದಂತೆ ಶತ್ರು ಪರ್ವತಗಳಿಗೆ ವಜ್ರಾಯುಧದಂತೆ ಇದ್ದನಂತೆ.

ಅರಿಕುಲತಿಮಿರಸಶಾಂಕಂ
ಅರಿಮದಕರಿಹರಿಯೆನಿಪ್ಪಸಿತಗರಗಂಡಂ
ಅರಿಗಿರಿವಜ್ರಂ, ಗುಜ್ಜಂ
ಗರಿಗಳು ಖಳವಳ್ಸಿದಿಹರೆ ವಸುಧಾಥಳದೊಳ್[೨೪]

ಚಿಟ್ಟಿನಹಳ್ಳಿಯ ಕ್ರಿ.ಶ. ೧೩೦೩ರ ಶಾಸನದಲ್ಲಿ ಹಡಪದ ಸಾಯಣ್ಣನು ಮಡಿದ ವೃತ್ತಾಂತವಿದೆ. ಬೆಮತೂರಕಲ್ಲಿನ ಸೋಮೆಯದಣ್ಣಾಯಕನು ಹೊಳಲಕೆರೆಯಲ್ಲಿ ಕಂಪೆಲನ ಮೇಲೆ ಯುದ್ಧಕ್ಕೆ ಹೋದನು. ಆ ಹೊತ್ತಿನಲ್ಲಿ ಹಡಪದ ಸಾಯಣ್ಣನು ಕಂಪೆಲನ ಕೂಡೆ ಕಾದಿ ರಣದೊಳು ಬಿದ್ದನು ಎಂದು ಅಲ್ಲಿ ಹೇಳಿದೆ. ಹೀಗೆ ರಣರಂಗದಲ್ಲಿ ಪ್ರಾಣದ ಹಂಗು ತೊರೆದು ಕಾದಿಬಿದ್ದ ಅನೇಕ ವೀರರ ವಿಷಯಗಳು ಮಂಡ್ಯ ಜಿಲ್ಲೆಯ ಶಾಸನಗಳಲ್ಲಿ ಕೂಡಿಕೊಂಡಿವೆ.

ಸ್ವಯಂ ಪ್ರೇರಣೆಯಿಂದ ತಮ್ಮ ದೊರೆಗಳಿಗಾಗಿ ಪ್ರಾಣವನ್ನು ಅರ್ಪಣೆ ಮಾಡಿಕೊಳ್ಳುತ್ತಿದ್ದ ವೀರರ ವಿಚಾರ ರೋಮಾಂಚನಕಾರಿಯಾದುದು. ಅಂಥವರನ್ನು ವೇಳೆವಾಳಿ, ಗರುಡ ಎಂದು ಕರೆಯಲಾಗಿದೆ. ತಮ್ಮ ಒಡೆಯರು ಮಡಿದರೆ ಈ ಗರುಡರು ತಮ್ಮ ಪರಿವಾರ ಸಹಿತ ಅಥವಾ ತಾವೊಬ್ಬರು ಪ್ರಾಣವೊಪ್ಪಿಸುವ ಪ್ರತಿಜ್ಞೆಯನ್ನು ಮೊದಲೇ ಕೈಗೊಂಡಿರುತ್ತಿದ್ದು, ತರುವಾಯದಲ್ಲಿ ಅದನ್ನು ಪೂರೈಸುತ್ತಿದ್ದರು. ಈ ಪರಮಾದ್ಭುತವಾದ ಸ್ವಾಮಿ ಭಕ್ತಿಗೆ ಅಗ್ರಹಾರ ಬಾಚಹಳ್ಳಿಯ ಕ್ರಿ.ಶ. ೧೨೫೭ರ ಸ್ಮಾರಕಗಳು (ಕೃ.ಪೇ. ೮೨) ಸಾಕ್ಷಿಯನ್ನೊದಗಿಸುತ್ತವೆ. ಅಲ್ಲಿನ ಹುಣಸೇಶ್ವರ ದೇವಾಲಯದ ಹೊರಗೆ ಎತ್ತರವಾದ ಮೂರು ಗರುಡಗಲ್ಲುಗಳಿವೆ. ಅವುಗಳ ತುದಿಯಲ್ಲಿ ನಿಂತಭಂಗಿಯ ಆನೆಗಳಿವೆ. ಆ ಪೈಕಿ ಮಧ್ಯದ ಕಂಬದ ಆನೆಯ ಮೇಲೆ ಒಬ್ಬ ವೀರನ ಹಿಂದೆ ಒಬ್ಬ ಮಹಾಸತಿ ಕುಳಿತಿದ್ದಾಳೆ. ಉಳಿದೆರಡರ ಮೇಲೆ ಒಬ್ಬರ ಹಿಂದೊಬ್ಬರಂತೆ ಮೂವರು

ವೀರರಿದ್ದಾರೆ. ಮೂರರಲ್ಲೂ ಮೊದಲಿಗೆ ಕುಳಿತ ವೀರನು ಆಯಾ ಆನೆಯ ಕುಂಭಸ್ಥಳದ ಮೇಲೆ ಕುಳಿತಿರುವ ಗರುಡನೊಂದಿಗೆ ಕಾದಾಡುತ್ತಿರುವಂತಿದೆ. ಆ ಕಂಬದ ಬುಡದಲ್ಲಿ ವಿವರಗಳಿವೆ.

ಸಿವನೆಯನಾಯಕ, ಲಖ್ಖೆಯನಾಯಕ, ಕಂನೆಯನಾಯಕ, ಸಿಂಗಯನಾಯಕ ಎಂಬ ವೀರರು ಬೇರೆ ಬೇರೆ ಕಾಲಗಳಲ್ಲಿ ಆಳಿದ ತಮ್ಮ ಆಶ್ರಯದಾತ ಹೊಯ್ಸಳ ದೊರೆಗಳಿಗಾಗಿ ಪರಿವಾರ ಸಮೇತ ಪ್ರಾಣತೆತ್ತ ಘಟನೆ ಅಲ್ಲಿದೆ. ಆ ವೀರರು ವಂಶಪಾರಂಪರ್ಯವಾಗಿ ದೊರೆಗಳ ಸೇವೆಯಲ್ಲಿದ್ದಿರಬಹುದು. ಸೋಮೇಶ್ವರ ದೇವನೊಡನೆ ಕಂನೆಯ ನಾಯಕನು ಉಮ್ಮವ್ವೆ, ಜವನವ್ವೆ, ಕಲ್ಲವ್ವೆಯರೆಂಬ ಮೂವರು ಮಡದಿಯರು, ಇಪ್ಪತ್ತೊಂದು ಲೆಂಕರು, ಹತ್ತು ಲೆಂಕತಿಯರೊಡಗೂಡಿ ಗಜಮಸ್ತಕದಲ್ಲಿ ಆರು ಬಾರಿ ಗರುಡನನಪ್ಪಿ ಭಾಷೆಯನ್ನು ಹೇಗೆ ಪೂರೈಸಿದನು ಎಂಬುದನ್ನು ನೋಡಿ; ತನ್ನೊಡೆಯನು ಕಾಲವಾದೊಡನೆ ಕಂನಯನು ದೊರೆಯ ಲೆಂಕನಾದ 'ನಾನಿನ್ನು ಬದುಕಿ ಏನು ಬಂತು' ಎಂದು ಭಾವಿಸಿ ಅವಿಚಲನಾಗಿ ತನ್ನ ತಲೆಯನ್ನು ಕಡಿದುಕೊಂಡನು. ಎಡಗಾಲಿಗೆ ತೊಟ್ಟ ಹೊನ್ನಿನ ತೊಡವು ಹೊಳೆಯುತ್ತಿರುವಲ್ಲಿ ಆವನು ಬೊಂಬೆಯಂತೆ ಚಲಿಸದೆ ತಪೋಮಗ್ನನಾಗಿದ್ದನೋ ಎಂಬಂತೆ ನಿಂತೇ ಇದ್ದನು. ಅವನ ಸ್ಥೈರ್ಯವನ್ನು ಎಲ್ಲರೂ ಕೊಂಡಾಡಿದರು. ಅವನ ಮಡದಿಯರು ಆರತಿ ಬೆಳಗಿದರೋ ಎಂಬಂತೆ ತಮ್ಮ ಪಂದಲೆಗಳನ್ನು ಒಪ್ಪಿಸಿದರು ಎಂದು ಅಲ್ಲಿ ಹೇಳಿದೆ. ಈ ವಿವರಣೆಗಳು ಮೈನವಿರೇಳಿಸುತ್ತವೆ. ಸ್ವಾಮಿ ಭಕ್ತಿಯಲ್ಲಿ ಈ ಗರುಡರು ಮಹಾವಿಷ್ಣುವಿನ ವಾಹನವಾದ ಗರುಡನಿಗೆ ಯಾವ ಮಟ್ಟಿಗೂ ಕಡಿಮೆಯಿಲ್ಲ ಎಂಬುದನ್ನು ಸೂಚಿಸಲು ಅವರು ಗರುಡನೊಂದಿಗೆ ಹೋರಾಡುತ್ತಿರುವಂತೆ ಕಂಡರಿಸಿರಬೇಕು ಎಂದು ವಿದ್ವಾಂಸರು ಹೇಳಿದ್ದಾರೆ. ಆ ಗರುಡಗಂಬಗಳು ವೀರಗಲ್ಲು, ಮಾಸ್ತಿಕಲ್ಲು ಎರಡಕ್ಕೂ ಸಂಕೇತವಾಗಿ ನಿಲ್ಲುತ್ತವೆಂದು ಹೇಳಬಹುದು.

ಕ್ರಿ.ಶ. ೧೧೮೫ರ ರಾಯಸೆಟ್ಟಿಪುರದ ಶಾಸನವು (ಮಂ. ೩೪) ಧರ್ಮ ಸಂರಕ್ಷಣೆಗಾಗಿ ಆತ್ಮಾರ್ಪಣೆ ಮಾಡಿಕೊಂಡ ಅಪರೂಪದ ಘಟನೆಯೊಂದನ್ನು ತಿಳಿಸುತ್ತದೆ. ಕೆರಗೋಡು ನಾಡಿಗೆ ಸೇರಿದ ಬಿದಿರುಕೋಟೆಯ ಮಲ್ಲೆಯನಾಯಕ ಮತ್ತು ಸೋಮೆನಾಯಕ ಎಂಬಿಬ್ಬರು ತಮ್ಮ ಹಳ್ಳಿಯನ್ನು ಶಿವಪುರವಾಗಿ ಪರಿವರ್ತಿಸಿ ಅದನ್ನು ಶಿವಭಕ್ತರಿಗೆ ನೀಡಿದರು. ಆದರೆ ೭೦ ವರ್ಷಗಳ ತರುವಾಯ ಅಂದರೆ ಕ್ರಿ.ಶ. ೧೨೫೧ರಲ್ಲಿ ಹೋಯ್ಸಳ ಸೋಮೇಶ್ವರನು ಕಣ್ಣಾನೂರಿನಿಂದ ಆಳುತ್ತಿದ್ದಾಗ ಮಾದೆಯನಾಯಕನೆಂಬಾತನು ಅದು ಶಿವಪುರವಾಗುವುದನ್ನು ಬಲವಾಗಿ ವಿರೋಧಿಸಿದನು. ಇದರಿಂದ ಶಿವಭಕ್ತರು ತಮಗೆ ಲಭಿಸಿದ್ದ ವೃತ್ತಿಗಳನ್ನು ಅನುಭವಿಸಲು ಅಡ್ಡಿಯಾಯಿತೆಂದು ತೋರುತ್ತದೆ. ಈ ಸಂಗತಿ ಅಲ್ಲಿನ ಶಿವಭಕ್ತರನ್ನು ಕಂಗೆಡಿಸಿತು. ಆಗ ವೀರಮಲ್ಲಯ್ಯನೆಂಬಾತನು ತನ್ನನ್ನು ಕಡಿದುಕೊಂಡನು. ಈ ಮೂಲಕ ಅವನ

ಪ್ರಾಣಾರ್ಪಣೆಯೇ ನಡೆದು ಹೋಯಿತೋ ಏನೋ. ಈ ಘಟನೆಯಿಂದ ಮಾದೆಯನಾಯಕನು ಮಣಿಯಬೇಕಾಯಿತು. ಶಿವಪುರವನ್ನು ಶಿವಭಕ್ತರಿಗೇ ಬಿಟ್ಟುಕೊಟ್ಟನು. ಅದಕ್ಕೆ ಅವರು ಸೋಮನಾಥಪುರ ಎಂದು ಹೆಸರಿಟ್ಟರು ಎಂದು ಆ ಶಾಸನದಲ್ಲಿ ಹೇಳಿದೆ. "ಕೆರಿಗೋಡನಾಡ ಬಿದಿರಕೋಟೆಯ ಮಲ್ಲೆಯ ನಾಯಕ ಸೋಮೆಯನಾಯಕ ತಂಮ ಹಳಿಯ ಶಿವಪುರವಾಗಿ ಭಕ್ತರಿಗೆ ಧಾರಾಪೂರ್ವಕಂ ಮಾಡಿಕೊಟ್ಟ ಧರ್ಮವನ್ನು ಮಾದೆಯನಾಯಕ ಬಲುಹಿಂದೆ ಸಿವ(ಪುರವ)ನು ಬಿಡದಡೆ ವೀರಮಲ್ಲಯ್ಯ ಕುತ್ತಿಕೊಂಡು ನಾಲ್ಕು ಸೀಮೆಯ ಕಲ್ಲಕಂಡು (ಮಾದೆಯನಾಯಕನ) ಕಯ್ಯಲು ಸಿವಪುರವ ಕೊಂಡು ಸೋಮನಾಥಪುರವಾಗಿ ಮಾಡಿದರು" ಎಂದು ಅಲ್ಲಿ ಬರೆದಿದೆ.

ಕೃಷ್ಣರಾಜಪೇಟೆ ತಾಲ್ಲೂಕು ಅಗ್ರಹಾರ ಬಾಚಹಳ್ಳಿಯ ಕ್ರಿಶ. ೧೧೪೨ರ ಶಾಸನದಲ್ಲಿ (ಕೃ.ಪೇ. ೮೨) ಕಲ್ಲವ್ವೆ, ಜವನವ್ವೆ, ಉಮ್ಮವ್ವೆಯರು ಲೆಂಕಿತಿಯರಾಗಿ ತಮ್ಮ ತಲೆಗಳನ್ನು ಕಡಿದುಕೊಂಡ ವರ್ಣನೆ ಬಂದಿದೆ. ಅವರು ತಮ್ಮ ಪತಿಯರಂತೆಯೇ ತನ್ನ ತಲೆಯನ್ನರ್ಪಿಸಿ ಕದಲದೆ ನಿಂತ, ಕನ್ನೆಯ ನಾಯಕನಿಗೆ ತಮ್ಮ ಪಂದಲೆಗಳಿಂದಲೇ ಆರತಿ ಬೆಳಗಿದರಂತೆ.

ಅತಿಧೃತಿಯಿಂದವಂಗಯ್ಸಿ ಕಂನಯನಾಯಕನಿರ್ದುನೋಡೆ ಸಂ
ತತಿ ಬೆರಗಾಗೆ ಬಂಧುಜನವಾಯೆನೆ ಲೋಕದ ಹೆಂಡಿರೆಲ್ಲ ಪಾ
ಯತಿಕೆಗೆ ಮೆಚ್ಚಿ ಬಿತ್ತರಿಸೆ ಕಲ್ಲಲೆಯೂ ಜವನವ್ವೆಯುಂ ಮನಾ
ರತಿಗಳನೆತ್ತಿರ್ದ ತೊರ್ಳಪ ಪಂದಲೆಯಂ ಪತಿ ಮೆಚ್ಚಿ ಮೂವರುಂ ॥[೨೫]

ಗಂಗಾಮತಸ್ಥರು ಅಥವಾ ನಾಯಕರು ಅಥವಾ ಬೆಸ್ತರು ಅಥವಾ ಪರಿವಾರದವರು ದಾನಗುಣ, ತ್ಯಾಗ, ಪರೋಪಕಾರ, ದೈವಭಕ್ತಿ, ಧರ್ಮರಕ್ಷಣೆ, ಸ್ವಾಮಿಭಕ್ತಿ ಅಭಿಮಾನ, ಪೌರುಷ, ಛಲ, ಶರಣಾಗತ ರಕ್ಷಣೆ, ಶೌರ್ಯ, ತೇಜಸ್ಸು, ಧೃತಿ, ದಕ್ಷತೆ, ಯುದ್ಧದಲ್ಲಿ ಓಡಿ ಹೋಗದಿರುವುದು, ಪರಲೋಕದಲ್ಲಿ ನಂಬಿಕೆ, ಪರಧರ್ಮ ಸಹಿಷ್ಣುತೆ, ಪರಸ್ಪರ ಸಹಕಾರ, ಸಾಮರಸ್ಯ, ವೈರಾಗ್ಯ, ಸತ್ಯವಾಕ್ಯತೆ ಈ ಮುಂತಾದವುಗಳನ್ನು ನಂಬಿ ನಡೆಯುತ್ತಿದ್ದ ಅಮೂಲ್ಯ ಜೀವನ ಮೌಲ್ಯಗಳಾಗಿದ್ದುವು. ಈ ಎಲ್ಲ ಮೌಲ್ಯಗಳನ್ನೂ ಮಂಡ್ಯ ಜಿಲ್ಲೆಯ ಪರಿಸರದ ಪ್ರಾಚೀನರೂ ಸಹ ತಮ್ಮ ಜೀವನದ ಉಸಿರಾಗಿ ಕಾಪಾಡಿಕೊಂಡು ನಡೆಯುತ್ತಿದ್ದರು ಎಂಬುದು ಈ ಜಿಲ್ಲೆಯ ಶಾಸನಗಳ ಪರಿಶೀಲನೆಯಿಂದ ವ್ಯಕ್ತವಾಗುತ್ತದೆ. ಮದ್ದೂರಿನ ತೈಲೂರಿನಲ್ಲಿ ಗಂಗಾಮತಸ್ಥರ ರಾಮ ಎಂಬ ವ್ಯಕ್ತಿಯ "ವೀರಗಲ್ಲಿಗೆ" ಗೌರಿ ಹಬ್ಬದಲ್ಲಿ ಎಡೆ ಇಡುತ್ತಾರೆ. ಈತ ಚಿಕ್ಕದೇವರಾಜನ ಸೈನ್ಯದಲ್ಲಿದ್ದನೆಂದು"[೨೬] ಹೇಳುತ್ತಾರೆ.

## ೨.೮ ಈ ಸಮುದಾಯದವರ ಸಾಹಿತ್ಯದ ಉಲ್ಲೇಖಗಳು

ಬೆಸ್ತ ಜನಾಂಗದ ಬಗ್ಗೆ ಭಾರತೀಯ ಕಾವ್ಯಗಳಲ್ಲಿ, ಅತ್ಯಂತ ಪ್ರಾಚೀನಕಾವ್ಯವಾದ ಮಹಾಭಾರತದಲ್ಲಿಯೇ ಬಹುಮುಖ್ಯವಾದ ಉಲ್ಲೇಖ ಬರುತ್ತದೆ. 'ಮಹಾಭಾರತ'ವು ತನ್ನ ಬೃಹತ್ ಮತ್ತು ಮಹತ್ತಿನಿಂದ ಜಗತ್ತಿನ ಸಾಹಿತ್ಯದಲ್ಲಿಯೇ ವಿಶಿಷ್ಟವಾದ ಹಾಗೂ ಪೂಜನೀಯವಾದ ಸ್ಥಾನ ಪಡೆದಿದೆ. ಹಿಂದುಗಳ ಪವಿತ್ರಗ್ರಂಥವಾದ, ಈ ಗ್ರಂಥವನ್ನ ಐದನೆಯ ವೇದವೆಂದು ಕರೆಯಲಾಗಿದ್ದು, ಇದರ ಕೃರ್ತ 'ವ್ಯಾಸ' ಎಂದು ಹೇಳಲಾಗುತ್ತದೆ. ವ್ಯಾಸರು ಪರಾಶರ ಮುನಿ ಮತ್ತು ಮತ್ಸ್ಯಗಂಧಿಯರ ಸಮಾಗಮದಿಂದ ಜನಿಸಿದರು. ಮತ್ಸ್ಯಗಂಧಿ ಹೆಸರೆ ಹೇಳುವಂತೆ ಮೀನುಹಿಡಿಯುವ, ಮಾರುವ ಬೆಸ್ತರ ಹುಡುಗಿ. ಹೀಗಾಗಿ ವ್ಯಾಸ ಬೆಸ್ತರವನು. ಬಸವಣ್ಣನವರು "ವ್ಯಾಸ ಬೋಯಿಯ ಮಗ" ಎಂದು ಒಂದು ವಚನದಲ್ಲಿ ಹೇಳಿರುವುದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಬೋಯಿ ಎಂಬುದು ಬೆಸ್ತ, ಅಂಬಿಗ ವೃತ್ತಿ ಮಾಡುವವರನ್ನೆ ಕುರಿತು ಹೇಳುವ ಜಾತಿವಾಚಕ ಪದವಾಗಿದೆ. ಆದುದರಿಂದ ಜಗತ್‌ಖ್ಯಾತಿ ಪಡೆದ ಕೋಟ್ಯಾಂತರ ಜನರ ಪ್ರೀತಿ, ಗೌರವ, ಭಕ್ತಿಗೆ, ಆರಾಧನೆಗೆ ಪಾತ್ರವಾಗಿರುವ 'ಮಹಾಭಾರತ' ಕೃತಿಯು ಬೆಸ್ತನಾದ ವ್ಯಾಸನಿಂದ ರಚಿಸಲ್ಪಟ್ಟಿತ್ತು ಎಂಬುದು ವಿಶೇಷ ಸಂಗತಿ.

'ವ್ಯಾಸ'ರು ಬೆಸ್ತ ಜನಾಂಗದವರೆ ಆಗಿದ್ದರೂ ಅವರಿಗೆ ಸಾಹಿತ್ಯದಲ್ಲಿ ಮತ್ತು ಆ ಕಾಲದ ಸಾಮಾಜಿಕ ಜೀವನದಲ್ಲಿ ಗೌರವದ ಸ್ಥಾನ–ಮಾನ ದೊರಕಿರುವುದನ್ನು ಕಾಣುತ್ತೇವೆ. ಇದಕ್ಕೆ ಅವರ ತಂದೆ 'ಪರಾಶರ' ಮುನಿ ಬ್ರಾಹ್ಮಣ ವರ್ಗಕ್ಕೆ ಸೇರಿದ್ದುದು ಒಂದು ಮುಖ್ಯ ಕಾರಣವಾಗಿರಬಹುದು. ಆದರೆ ಎಲ್ಲ ಬೆಸ್ತ ಜಾತಿಗೆ ಸೇರಿದವರಿಗೆ ಇಂಥ ಗೌರವ, ಮಾನ್ಯತೆ ದೊರಕಿಲ್ಲ ಎಂಬುದು ಅಷ್ಟೇ ಸತ್ಯದ ಸಂಗತಿ. ಸಂಸ್ಕೃತಿ ಮತ್ತು ಕನ್ನಡ ಸಾಹಿತ್ಯಗಳಲ್ಲಿ ಇದಕ್ಕೆ ಹಲವು ಉದಾಹರಣೆಗಳು ದೊರೆಯುತ್ತವೆ. ಬಸವಣ್ಣನವರು ಒಂದು ವಚನದಲ್ಲಿ "ಕಾಸಿ ಕಮ್ಮಾರನಾದ, ಬೀಸಿ ಮಡಿವಾಳನಾದ, ವೇದವನೋದಿ ಹಾರವನಾದ........" ಎಂದು ಹೇಳಿದ್ದಾರೆ. ಅಂದರೆ ಕಬ್ಬಿಣದ ಉಪಕರಣಗಳನ್ನು ಕಾಯಿಸಿ ತಟ್ಟುವ ವೃತ್ತಿ ಮಾಡುವವನು ಕಮ್ಮಾರ, ಬಟ್ಟೆ ಒಗೆದು ಶುಚಿಗೊಳಿಸುವ ಕಾಯಕ ಮಾಡುವವನು ಮಡಿವಾಳ, ವೇದ ಮಂತ್ರಗಳ ಅಧ್ಯಯನದಲ್ಲಿ ನಿರತನಾದವನನ್ನು ಬ್ರಾಹ್ಮಣ ಎಂದು ಕರೆಯಲಾಗುತ್ತದೆ. ಈ ವಚನವು 'ಜಾತಿ' ಎಂಬುದು ವೃತ್ತಿಯಿಂದ ಬಂದುದೆ ಹೊರತು ಹುಟ್ಟಿನಿಂದ ಅಲ್ಲ ಎಂದು ಒತ್ತಿ ಹೇಳುತ್ತದೆ.

ಆದರೆ ಭಾರತ ದೇಶದಲ್ಲಿ ಒಬ್ಬ ವ್ಯಕ್ತಿ ತನ್ನ ಜಾತಿಯ ಕಾರಣದಿಂದ ಅನೇಕ ಸ್ಥಾನಮಾನಗಳಿಂದ ವಂಚಿತನಾಗುತ್ತ ಬಂದಿರುವುದನ್ನು ಕಾಣುತ್ತೇವೆ. ರಾಮಾಯಣ, ಮಹಾಭಾರತ, ಮೊದಲಾದ ಪುರಾಣ ಇತಿಹಾಸ ಕಾವ್ಯಗಳಲ್ಲಿ ಕಂಡು ಬರುವ ಶೂದ್ರಕ, ಏಕಲವ್ಯ,

ಕರ್ಣ ಮೊದಲಾದ ಪಾತ್ರಗಳು ತಮ್ಮ ಜಾತಿಯ ಕಾರಣದಿಂದ ಶೋಷಣೆಗೆ ಒಳಗಾಗಿ, ನೋವು ಅಪಮಾನವನ್ನು ಅನುಭವಿಸಿದ್ದಾರೆ.

'ಕರ್ಣ ಮಹಾಭಾರತದಲ್ಲಿ ಬರುವ ಪ್ರಮುಖ ಪಾತ್ರಗಳಲ್ಲಿ ಒಬ್ಬ. ಮಹಾವೀರ ದುರ್ಯೋಧನನ ಅಚ್ಚು ಮೆಚ್ಚಿನ ಗೆಳೆಯ. ದಾನಶೂರ ಎಂದೆಲ್ಲ ಈತನನ್ನು ಮಹಾಭಾರತದಲ್ಲಿ ಚಿತ್ರಿಸಲಾಗಿದೆ. ಈತನು ಕ್ಷತ್ರಿಯ ವಂಶಕ್ಕೆ ಸೇರಿದ ಕುಂತಿಗೆ ವಿವಾಹಕ್ಕೆ ಮುನ್ನ ಹುಟ್ಟಿದ್ದರಿಂದ ಆಕೆ ಆತನನ್ನು ಗಂಗೆಯಲ್ಲಿ ತೇಲಿಬಿಟ್ಟಳೆಂದು, ಆ ಮಗು ಬೆಸ್ತ ಕುಲದ ದಾಶವೃದ್ಧ ಎಂಬುವವನಿಗೆ ದೊರಕಿತೆಂದು, ಆತ ಕರ್ಣನನ್ನು ಬೆಳೆಸಿದನೆಂದು ಮಹಾಭಾರತದಲ್ಲಿ ಹೇಳಲಾಗಿದೆ. ಕರ್ಣನ ಸಾಕು ತಾಯಿ ರಾಧೆ. ಈ ಕಾರಣದಿಂದಲೇ ಕರ್ಣನಿಗೆ 'ಸೂತಪುತ್ರ' 'ರಾಧೇಯ' ಎಂಬ ಹೆಸರುಗಳು ರೂಢವಾದವು.[೨೭]

ಮಹಾಭಾರತದಲ್ಲಿ ಸೂತಪುತ್ರನಾದ ಕರ್ಣನನ್ನು ಆತನ ಜಾತಿಯ ಕಾರಣಕ್ಕಾಗಿ ನಿಂದಿಸಿದ ಪ್ರಸಂಗ ಹಲವು ಸಂದರ್ಭಗಳಲ್ಲಿ ಬರುತ್ತದೆ. ಪಾಂಡವ-ಕೌರವರ ಅಸ್ತ್ರ ವಿದ್ಯಾ ನೈಪುಣ್ಯವನ್ನು ಪರೀಕ್ಷಿಸಲು ಗುರು ದ್ರೋಣಾಚಾರ್ಯರು ರಂಗವನ್ನು ನಿರ್ಮಿಸಿ ಅವರ ವಿದ್ಯೆಯನ್ನು ಪರೀಕ್ಷಿಸುತ್ತಿದ್ದಾಗ ಕರ್ಣ ಅಲ್ಲಿಗೆ ಹೋಗಿ ಅರ್ಜುನನೊಡನೆ ಹೋರಾಡಲು ಸಿದ್ಧನಾಗುತ್ತಾನೆ. ಆಗ ಕೃಪಾಚಾರ್ಯ ಮತ್ತು ಭೀಮ ಕರ್ಣನನ್ನು ಕುರಿತು ಸೂತಪುತ್ರನಾದ ನಿನಗೆ ಅರ್ಜುನನೊಡನೆ ಯುದ್ಧಮಾಡುವುದಕ್ಕೆ ಯೋಗ್ಯತೆ ಇಲ್ಲವೆಂದು ಹೀಯಾಳಿಸುತ್ತಾರೆ.[೨೮] ಪಂಪ ಭಾರತದಲ್ಲಿ ಕರ್ಣನಿಗೆ ಪಟ್ಟಕಟ್ಟಿದಾಗ ಅದನ್ನು ವಿರೋಧಿಸಿ ಶಲ್ಯನು ಕರ್ಣನನ್ನು ಜಾತಿಯ ಹೆಸರಿನಿಂದ ನಿಂದಿಸುತ್ತಾನೆ. "ಬೀರವಟ್ಟಾಮನಾನಿರೆ ನೀನು ಸೂತಸುತಂಗೆಡೆಗೊಂಡು ಕೈವಾರದಿಂದೊಸೆದಿತ್ತೊಡೆವೆನಾಯ್ತು................"[೨೯] ಎಂದು ನಿಂದಿಸುತ್ತಾನೆ. 'ಸೂತಸುತ' ಎಂಬ ಪದ ಪ್ರಯೋಗ ಇಲ್ಲಿ ಗಮನಾರ್ಹವಾದುದು. ವೀರನಾಗಿದ್ದರೂ ಬೆಸ್ತ ಅಥವಾ ಸೂತನ ಮಗನಾದುದರಿಂದ ಕರ್ಣ ವಿನಾಕಾರಣ ಅಪಮಾನಕ್ಕೆ ಒಳಗಾದುದನ್ನು ಈ ಪ್ರಸಂಗಗಳು ಹೇಳುತ್ತವೆ.

ಬೆಸ್ತ ಜನಾಂಗದವರ ವೇಷ ಭೂಷಣದ ಬಗ್ಗೆ ಮಹಾಭಾರತದಲ್ಲಿ ಮಾಹಿತಿ ದೊರಕುತ್ತದೆ. ಕರ್ಣನ ಸಾಕು ತಂದೆಯಾದ ದಾಶವೃದ್ಧನ ಚಿತ್ರವನ್ನು ವ್ಯಾಸರು ಸೊಗಸಾಗಿ ಚಿತ್ರಿಸಿದ್ದಾರೆ.

ಆದಿಪರ್ವದಲ್ಲಿ ಕುರು ಪಾಂಡವರ ಶಸ್ತ್ರಾಸ್ತ್ರ ಪ್ರದರ್ಶನ ರಂಗಮಂಟಪದಲ್ಲಿ ನಡೆಯುತ್ತಿದ್ದಾಗ ಕೃಪ, ಭೀಮರು ಕರ್ಣನನ್ನು ಜಾತಿಯ ಕಾರಣದಿಂದ ನಿಂದಿಸಿದಾಗ ಅದನ್ನು ಕೇಳಿ ಸಹಿಸದ ದುರ್ಯೋಧನ ಕರ್ಣನಿಗೆ ಅಂಗರಾಜ್ಯ ಪಟ್ಟಾಭಿಷೇಕ ಮಾಡುತ್ತಾನೆ. ಅದನ್ನು

ಕಂಡು ಸಂತೋಷಗೊಂಡ ಕರ್ಣನ ಸಾಕು ತಂದೆ ದಾಶವೃದ್ಧ 'ಕಂದಾ' ಎಂದು ಅಕ್ಕರೆಯ ದನಿಯೊಡನೆ ಓಡಿ ಬರುತ್ತಾನೆ. ಆಗ ವ್ಯಾಸರು ಆತನನ್ನು ಹೀಗೆ ಚಿತ್ರಿಸಿದ್ದಾರೆ. "ನೆಲದವರೆಗು ಇಳಿಬಿದ್ದಿದ್ದ ಉತ್ತರೀಯವನ್ನು ಹೊದ್ದುಕೊಂಡು, ಅಂಗಾಗಳಿಂದಲೂ ಬೆವರನ್ನು ಸುರಿಸುತ್ತಾ, ತರ-ತರನೆ ನಡುಗುತ್ತ ಆಸರೆಯ ಕೋಲು ಹಿಡಿದು 'ಮಗನೆ' ಎಂದು ಅಕ್ಕರೆಯ ದನಿಯೊಡನೆ ಅಧಿರಥನು ರಂಗಮಂಟಪವನ್ನು ಪ್ರವೇಶಿಸಿದನು."[೨೦]

ಹೀಗೆ 'ಬೆಸ್ತ'ರ ಜಾತಿಯ ಉಲ್ಲೇಖ ಸಾಹಿತ್ಯದಲ್ಲಿ ಕಂಡುಬರುತ್ತದೆ. ವ್ಯಾಸಭಾರತದಲ್ಲೆ 'ಬೆಸ್ತ'ರ ಬಗ್ಗೆ ಹಲವು ಉಲ್ಲೇಖಗಳು ದೊರಕುವುದರಿಂದ, ಇದರ ಹಿನ್ನೆಲೆಯಲ್ಲಿ ಈ ಸಮುದಾಯದ ಪ್ರಾಚೀನತೆಯನ್ನು ಮನಗಾಣಬಹುದು.

## ಅಡಿ ಟಿಪ್ಪಣಿಗಳು

೧. ಭೈರಪ್ಪ ಕೆ., ಭಾರತೀಯ ಸಮಾಜ, ಎಂ.ಎಂ. ಪ್ರಕಾಶನ, ಬೆಂಗಳೂರು ೨೦೦೦, ಪು. ೧೦೭.

೨. ವೆಂಕಟರಾಜ ಪುಣಿಂಚತ್ತಾಯ "ಮೊಗವೀರರ ಸಂಸ್ಕೃತಿ" ಉಪಸಂಸ್ಕೃತಿ ಅಧ್ಯಯನ, ೧೯೯೩, ಪು. ೧.

೩. ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು, ಏಳನೆಯ ಸಂಪುಟ ಬಿಲ್ವ–ಲೌಹಿತ್ಯ, ಮುದ್ರಣ–೧೯೯೩, ಪು. ೬೫೯೫.

೪. 'ಕನ್ನಡ ಜಾನಪದ ಕೋಶ' ಎಚ್.ಎಲ್. ನಾಗೇಗೌಡ–ಪ್ರಧಾನ ಸಂಪಾದಕರು, ಕರ್ನಾಟಕ ಜಾನಪದ ಪರಿಷತ್ತು, ೧೯೯೮, ಪು. ೫೭೭.

೫. ವಕ್ತೃ : ಜಿ.ಬಿ. ವೈರಮುಡಿ ತಂದೆ ಜಿ.ಕೆ. ಬೆಟ್ಟಯ್ಯ, ವಯಸ್ಸು–೭೫, ಗಂಜಾಂ, ಶ್ರೀರಂಗಪಟ್ಟಣ ತಾಲ್ಲೂಕು.

೬. 'ಕನ್ನಡ ಜಾನಪದ ಕೋಶ' ನಿಘಂಟು ಎಚ್.ಎಲ್. ನಾಗೇಗೌಡ –ಪ್ರಧಾನ ಸಂಪಾದಕರು, ಕರ್ನಾಟಕ ಜಾನಪದ ಪರಿಷತ್ತು, ೧೯೯೮, ಪು. ೮.

೭. ಸಂಕ್ಷಿಪ್ತ ಕನ್ನಡ ನಿಘಂಟು (ಪರಿಷ್ಕೃತ), ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೧, ಪು. ೮.

೮. ಅದೇ ಕೃತಿ, ಪು. ೪೭೫.

೯. ಅದೇ ಕೃತಿ, ಪು. ೧೦೬೧.

೧೦. ವಕ್ತೃ : ಹೆಚ್. ಪುಟ್ಟಸ್ವಾಮಿ ತಂದ ಹುಚ್ಚಯ್ಯ ಬ್ಲಫ್, ವಯಸ್ಸು–೭೮, ನಿವೃತ್ತ ಶಿಕ್ಷಕರು, ಮಳವಳ್ಳಿ ತಾಲ್ಲೂಕು.

೧೧. ಸಿ.ಪಿ. ಸಿದ್ಧಾಶ್ರಮ 'ದಿಟಯ ಪಯಣ' ಪು. ೧೬೧, ೨೦೦೫.

೧೨. Rao Bahadur, L.K. Ananthakrishna Iyer, The Mysore Tribes and Castes, Vol. 11; 1928, page 239.

೧೩. ಯಜ್ಞನಾರಾಯಣ ಉಡುಪ, 'ಪುರಾಣ ಭಾರತ ಕೋಶ' ಜನಪ್ರಿಯ ಪುಸ್ತಕ ಮಾಲೆ, ೧೯೭೪, ಪು.೧೫.

೧೪. ವಕ್ತೃ : ಪೀಚಯ್ಯ ತಂದೆ ತೈಲೂರು ಪುಟ್ಟಯ್ಯ, ವಯಸ್ಸು–೯೫, ಕುಲುಮೆದೊಡ್ಡಿ, ಮಳವಳ್ಳಿ ತಾಲ್ಲೂಕು.

೧೫. ವಕ್ತೃ : ಗೋವಿಂದರಾಜ್ ತಂದೆ ಶ್ರೀನಿವಾಸಯ್ಯ, ವಯಸ್ಸು-೪೮, ಗಂಜಾಂ, ಶ್ರೀರಂಗಪಟ್ಟಣ ತಾಲ್ಲೂಕು.

೧೬. ವಕ್ತೃ : ವೆಂಕಟಪ್ಪ ತಂದೆ ಯಜಮಾನ್ ದೊಡ್ಡ ಹೊನ್ನಪ್ಪ, ವಯಸ್ಸು-೬೨, ಶಿವಪುರ, ಮದ್ದೂರು ತಾಲ್ಲೂಕು.

೧೭. ವಕ್ತೃ : ಮಲ್ಲಯ್ಯ ತಂದೆ ಕಾಳಯ್ಯ, ವಯಸ್ಸು-೬೫, ಕಲ್ಕುಣಿ, ಮಳವಳ್ಳಿ ತಾಲ್ಲೂಕು.

೧೮. ಡಾ. ಅಂಬಳಿಕೆ ಹಿರಿಯಣ್ಣ "ಮಲೆನಾಡಿನ ವೈಷ್ಣವ ಒಕ್ಕಲಿಗರ ಸಂಸ್ಕೃತಿ" ೧೯೯೯, ಪು. ೪೧.

೧೯. 'ಸುವರ್ಣ ಮಂಡ್ಯ', ಸಂಪಾದಕ ಡಾ. ದೇಜಗೌ, ೨೦೦೬, ಪು. ೬೨.

೨೦. ವಕ್ತೃ : ಹೊ.ರ. ಕುಮಾರಸ್ವಾಮಿ ತಂದೆ ರಾಮಸಿದ್ದಯ್ಯ, ವಯಸ್ಸು-೬೦, ಪ್ರಧಾನ ಕಾರ್ಯದರ್ಶಿ ಹಾಗೂ ಸಮುದಾಯದ ಅಂಕಿ ಅಂಶಗಳ ಸಂಗ್ರಹಣಾ ಅಧ್ಯಕ್ಷರು, ಗಂಗಾಮತಸ್ಥರ ಸಂಘ, ಮಂಡ್ಯ ಜಿಲ್ಲೆ.

೨೧. ವಕ್ತೃ : ಬೋರಯ್ಯ ತಂದೆ ಚಿಕ್ಕಮರಿಯ್ಯ, ವಯಸ್ಸು-೬೦, ಮದನಹಟ್ಟಿ, ನಾಗಮಂಗಲ ತಾಲ್ಲೂಕು.

೨೨. ಶ್ರೀ ಹರಿ 'ಭೀಷ್ಮ' ಮಹಾಭಾರತದ ಮಹಾಪಾತ್ರಗಳು, ೨೦೦೨, ಪು. ೧೧.

೨೩. 'ಸುವರ್ಣ ಮಂಡ್ಯ' ಡಾ. ದೇಜಗೌ ಸಂಪಾದಕ, ೨೦೦೬, ಪು. ೧೦೭.

೨೪. ಅದೇ ಕೃತಿ, ಪು. ೧೧೪

೨೫. ಅದೇ ಕೃತಿ, ಪು. ೧೩೧.

೨೬. ವಕ್ತೃ : ತೈಲೂರು ವೆಂಕಟಕೃಷ್ಣ, ವಯಸ್ಸು-೬೫, ಸಾಹಿತಿಗಳು, ತೈಲೂರು, ಮದ್ದೂರು ತಾಲ್ಲೂಕು.

೨೭. ರಾಮರಾವ್ ಬೆನಗಲ್, ಪಾನ್ಯಂ ಸುಂದರ ಶಾಸ್ತ್ರಿ "ಪುರಾಣನಾಮ ಚೂಡಾಮಣಿ", ೧೯೭೭, ಪ್ರಸಾರಾಂಗ, ಮೈಸೂರು, ಪು. ೧೦.

೨೮. ಮಹಾಭಾರತ, ಆದಿಪರ್ವ, ಅಧ್ಯಾಯ-೧೪೬-೧೪೭, ಸಂಪುಟ-೨, ಭಾರತದರ್ಶನ ಪ್ರಕಾಶನ, ಬೆಂಗಳೂರು.

೨೯. ಪಂಪಭಾರತ, ೧೦ನೇ ಆಶ್ವಾಸ, ೪೨ನೇ ಪದ್ಯ.

೩೦. ಮಹಾಭಾರತ, ಆದಿಪರ್ವ, ಸಂಪುಟ-೨, ಪು. ೮೬೭, ಭಾರತದರ್ಶನ ಪ್ರಕಾಶನ, ಬೆಂಗಳೂರು.

# ಅಧ್ಯಾಯ – ಮೂರು

## ಸಾಮಾಜಿಕ ಸಂರಚನೆ

೧. ಕುಟುಂಬ ಪದ್ಧತಿ

೨. ಆರ್ಥಿಕ ಸ್ಥಾನ–ಮಾನ

೩. ಶಿಕ್ಷಣ

೪. ಮಹಿಳೆಯ ಸ್ಥಾನ–ಮಾನ

೫. ಆಹಾರಪದ್ಧತಿ

೬. ನ್ಯಾಯ ಪದ್ಧತಿ

೭. ಉಡುಗೆ–ತೊಡುಗೆ

೮. ಬೇಟೆ

೯. ಸಾಮಾಜಿಕ ಸಂಘ ಸಂಸ್ಥೆಗಳು

೧೦. ನಂಬಿಕೆಗಳು ಮತ್ತು ವಿಧಿ ನಿಷೇಧಗಳು

೧೧. ಧಾರ್ಮಿಕ ಜೀವನ

# ಅಧ್ಯಾಯ – ಮೂರು

## ಸಾಮಾಜಿಕ ಸಂರಚನೆ

ಭಾರತವು ಇಂದಿಗೂ ಕೆಲವೊಂದು ಸಾಂಪ್ರದಾಯಿಕ ಪರಂಪರೆಗಳನ್ನ ಉಳಿಸಿಕೊಂಡಿದ್ದರು ಸಹ, ಸಾಮಾಜಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಭಿನ್ನವಾಗಿದೆ. ಭಾರತೀಯ ಸಂಸ್ಕೃತಿಯಲ್ಲಿ ಸತ್ಯ, ಅಹಿಂಸೆ, ವಿಶ್ವಪ್ರೇಮ, ದಾನಶೀಲತೆ, ಹೃದಯ ವೈಶಾಲ್ಯತೆ, ಧರ್ಮ ಚಿಂತನೆಗಳು, ಪುರುಷಾರ್ಥಗಳು, ಲೋಕನೀತಿ, ಕಲೆ, ಸಾಹಿತ್ಯ, ಸಂಸ್ಕೃತಿ, ವಿವಿಧ ಧರ್ಮ, ಭಾಷೆ, ಜನಾಂಗ ಹೀಗೆ ವ್ಯಾಪಕವು ಮತ್ತು ವೈವಿಧ್ಯಮಯವೂ ಆಗಿರುವ ಸಂಸ್ಕೃತಿ ಭಾರತದೇಶದಲ್ಲಿದೆ. ಆದ್ದರಿಂದಲೇ ಬಹುಶಃ ಇರಬಹುದು ಡಾ॥ ಇರಾವತಿ ಕರ್ವೆಯವರು "ಭಾರತವು ವಿಶ್ವದ ಸೂಕ್ಷ್ಮ ರೂಪ"[1] ಎಂದು ಕರೆದರು. ವಿವಿಧತೆಯಲ್ಲಿ ಏಕತೆಯನ್ನ ಸಾಧಿಸಿರುವ ಭಾರತ ಜಗತ್ತಿನ ಎಲ್ಲ ರಾಷ್ಟ್ರಗಳಿಗೆ ಮಾದರಿಯಾಗಿದೆ. ಮಾನವ ಸಮಾಜಜೀವಿ, ಸಂಘಜೀವಿ, ಸಮಾಜವನ್ನು ಬಿಟ್ಟು ಬದುಕಲಾರ ಬಾಳಲಾರ, ಒಬ್ಬಂಟಿಗನಾಗಿ ಬದುಕಲು ಸಾದ್ಯವಿಲ್ಲ. ಆದ್ದುದರಿಂದಲೇ ಸಮಾಜಶಾಸ್ತ್ರಜ್ಞರಲ್ಲಿ ಪ್ರಮುಖರಾದ ಅರಿಸ್ಟಾಟಲ್ "ಮಾನವ ಸಂಘಜೀವಿ"[2] ಎಂದು ಹೇಳಿದ್ದಾರೆ. ಸಮಾಜವನ್ನ ಬಿಟ್ಟು ಮಾನವನಿಲ್ಲ; ಮಾನವನನ್ನ ಬಿಟ್ಟು ಸಮಾಜವಿಲ್ಲ.

ಹಲವಾರು ಸಮುದಾಯಗಳು, ಜನಾಂಗಗಳು, ಬುಡಕಟ್ಟುಗಳು ಭಾರತ ದೇಶದಲ್ಲಿರುವುದು ವಿಶೇಷವಾದ ಸಂಗತಿಯಾಗಿದೆ. ಒಂದೊಂದು ಸಮುದಾಯವೂ ಬೇರಿನ ಬೇರೆ ಬೇರೆ ಅಸ್ತಿತ್ವದಂತೆ, ಸಾಮಾಜಿಕ ರಚನೆಗೆ ಒಳಪಟ್ಟು ತನಗೆ ಅಗತ್ಯವಾದ ಸಾಂಸ್ಕೃತಿಕ ಬಂಧುತ್ವವನ್ನು ರಚಿಸಿಕೊಂಡಿದೆ. ಒಂದೊಂದು ಸಮುದಾಯಗಳಿಗೂ ಒಂದೊಂದು ರೀತಿಯ ಚಹರೆಯಿದೆ. ಆದರೆ ಪ್ರತಿಯೊಂದು ಸಮಾಜವೂ ಪರಿವರ್ತನಾ ಶೀಲವಾದದ್ದು, ಅಂತೆಯೇ ಕೆಲವು ಸಮುದಾಯಗಳಲ್ಲಿ ಪರಿವರ್ತನೆ ಎಂಬುದು ಮಂದಗತಿಯಲ್ಲಿದೆ. ಕೆಲವು ಸಮುದಾಯಗಳು ನಿಂತ ನೀರಾಗಿಯೇ ಉಳಿದಿವೆ. ಇತ್ತೀಚಿಗೆ ಸಮುದಾಯಗಳಲಿ ನಾಗರೀಕತೆ ಬೆಳೆದಂತೆಲ್ಲಾ ತಮ್ಮ ಸಾಂಸ್ಕೃತಿಕ ಸೊಗಡನ್ನು ಬಿಡದೆ ತಮ್ಮ ಸಾಮಾಜಿಕ ನೆಲೆಯಲ್ಲಿಯೇ ಜೀವನ ಮಾಡಲು ಪ್ರಾರಂಭಿಸಿದ್ದು, ಈ ಹಿನ್ನೆಲೆಯಲ್ಲೇ.

ಗಂಗಾಮತಸ್ಥರು ಸಹ ತಮ್ಮದೆ ಆದ ಆಚಾರ-ವಿಚಾರ, ನಂಬಿಕೆ ನಡವಳಿಕೆಗಳನ್ನು ಹೊಂದಿದವರಾಗಿದ್ದಾರೆ. ಸಾಮಾಜಿಕವಾಗಿ ಗುರುತರವಾದ ಜವಾಬ್ದಾರಿಯನ್ನು ಹೊಂದಿದ ಪ್ರಮುಖ ಜನಾಂಗವಾಗಿ ಇತ್ತೀಚಿಗೆ ಮಾರ್ಪಾಡಾಗುತ್ತಿರುವುದನ್ನ ಕಾಣಬಹುದಾಗಿದೆ. ಇವರು

ಬೇರೆ ಜನಾಂಗದವರ ಪ್ರಭಾವಕ್ಕೆ ಒಳಗಾಗಿದ್ದರೂ ಅಲ್ಪ ಪ್ರಮಾಣದಲ್ಲಿ ಮೂಲ ಸಾಂಸ್ಕೃತಿಕತೆಯಲ್ಲಿಯೇ ಜೀವನ ನಡೆಸುತ್ತಿದ್ದಾರೆ. ಹಾಗಾಗಿ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ವೈಶಿಷ್ಟ್ಯತೆಯನ್ನು ಪಡೆಯುವುದರೊಂದಿಗೆ, ಪ್ರಾಚೀನತೆಯೂ ಕೂಡ ಇರುವುದನ್ನ ಗಮನಿಸಬಹುದು. ಗಂಗಾಮತಸ್ಥರ ಕುಟುಂಬ ಪದ್ದತಿ, ಉಡುಗೆ-ತೊಡುಗೆಗಳು, ನ್ಯಾಯಪದ್ಧತಿ, ಸಂಘಸಂಸ್ಥೆಗಳು ಇವುಗಳಲ್ಲಿ ಬೇರೆ ಜನಾಂಗಕ್ಕಿಂತ ಸೂಕ್ಷ್ಮವಾದ ಭಿನ್ನತೆಯನ್ನು ಹೊಂದಿದ್ದಾರೆ. ನಂಬಿಕೆಗಳು-ನಿಷೇಧಗಳು, ಧಾರ್ಮಿಕ ಜೀವನ ಇವುಗಳಲ್ಲಿ ಅವರ ಪ್ರಾಚೀನತೆಯನ್ನು ಕಾಣಬಹುದಾಗಿದೆ.

## ೩.೧ ಕುಟುಂಬ ಪದ್ದತಿ

ಸಮಾಜದ ಮೂಲ ಘಟಕ ಕುಟುಂಬ. ಮಾನವನ ಭವಿಷ್ಯವನ್ನು ವಿಶೇಷವಾಗಿ ರೂಪಿಸುವ ಮತ್ತು ಆತನನ್ನು ವಿಶಿಷ್ಟ ರೀತಿಯಲ್ಲಿ ಸಂರಕ್ಷಿಸುವುದೇ ಕುಟುಂಬ 'ಮನೆಯೇ ಮೊದಲ ಪಾಠಶಾಲೆ' ಎಂಬಂತೆ ಮಗು ಪ್ರಾಥಮಿಕವಾಗಿ ಸಮಾಜದಲ್ಲಿ ಹೇಗೆ ಹೊಂದಿಕೊಂಡು ಬಾಳಬೇಕು, ಒಳ್ಳೆಯದು ಯಾವುದು, ಕೆಟ್ಟದ್ದು ಯಾವುದು ಎಂಬುದರ ಅರಿವಿನ ಶಿಕ್ಷಣವನ್ನು ಕುಟುಂಬವು ಮಗುವಿಗೆ ನೀಡುತ್ತದೆ. ಕುಟುಂಬವು ವಿಶ್ವವ್ಯಾಪಕವಾದುದು. ಕುಟುಂಬವಿಲ್ಲದ ಸಮಾಜವಿಲ್ಲ; ಸಮಾಜವಿಲ್ಲದೇ ಕುಟುಂಬವಿಲ್ಲ. ಕುಟುಂಬದ ಸ್ವರೂಪವು ಇತ್ತೀಚಿನ ದಶಕಗಳಲ್ಲಿ ಆಗುತ್ತಿರುವ ಮಾರ್ಪಾಟುಗಳು, ಇದು ನಿರ್ವಹಿಸುತ್ತಿರುವ ಕಾರ್ಯಗಳಲ್ಲಿ ಕಂಡುಬರುತ್ತಿರುವ ಪರಿವರ್ತನೆಗಳು ಮತ್ತಷ್ಟು ಕುತೂಹಲವನ್ನು ಕೆರಳಿಸಿವೆ. ಮೆಕೈವರ್ & ಪೇಜ್‌ರವರ ಪ್ರಕಾರ "ಕುಟುಂಬವು ಲೈಂಗಿಕ ಸಂಬಂಧದಿಂದ ಸ್ಪಷ್ಟಪಡಿಸಲ್ಪಟ್ಟು, ಸಾಕಷ್ಟು ಖಚಿತವಾದ, ಮಕ್ಕಳನ್ನು ಪಡೆಯಲು ಮತ್ತು ಪೋಷಿಸಲು ಅವಕಾಶ ಮಾಡಿಕೊಡುವಂತಹ ಒಂದು ಸಾಮಾಜಿಕ ವ್ಯವಸ್ಥೆ"[೩] ಎಂದು ವ್ಯಾಖ್ಯಾನಿಸಿದ್ದಾರೆ.

ಕುಟುಂಬವು ಸಾಮಾಜಿಕ ಜೀವನದ ಮೇಲೆ ಬಹುಮುಖ ಪ್ರಭಾವವನ್ನು ಬೀರುತ್ತದೆ. ಆದ್ದರಿಂದಲೇ ಕುಟುಂಬ ಒಂದು ಸಾಮುದಾಯಿಕ ಚೌಕಟ್ಟಿನಲ್ಲಿ ಜನ್ಮತಾಳುತ್ತದೆ. ಗಂಗಾಮತಸ್ಥ ಸಮುದಾಯದಲ್ಲಿ ವಿಭಕ್ತ ಮತ್ತು ಅವಿಭಕ್ತ ಕುಟುಂಬಗಳೆರಡೂ ಕಂಡುಬಂದರೂ ಸಹ ಅವಿಭಕ್ತ ಕುಟುಂಬಕ್ಕಿಂತ ವಿಭಕ್ತ ಕುಟುಂಬಗಳೇ ಹೆಚ್ಚಾಗಿ ಕಂಡುಬರುತ್ತವೆ. ಇಲ್ಲಿಯ ಗಂಗಾಮತಸ್ಥರು ಎರಡು ದಶಕಗಳ ಹಿಂದೆ ಅವಿಭಕ್ತ ಕುಟುಂಬದವರಾಗಿದ್ದು, ಕಾಲಕ್ರಮೇಣದಲ್ಲಿ ಆಧುನಿಕತೆಯ ಪ್ರಭಾವಕ್ಕೆ ಒಳಪಟ್ಟು ವಿಭಕ್ತ ಕುಟುಂಬಗಳಾಗಿ ವಿಂಗಡಣೆಗೊಂಡಿವೆ.

### ಅವಿಭಕ್ತ ಕುಟುಂಬ

ಸಮಾಜದಲ್ಲಿ ನಾಯಕತ್ವದ ಗುಣವನ್ನ ಸಹಕಾರ – ಸಹಬಾಳ್ವೆಯ ಜೀವನವನ್ನ ಕಲಿಸಿದ್ದೆ ಅವಿಭಕ್ತ ಕುಟುಂಬ. ಒಂದು ಪುಟ್ಟ ಸಮಾಜದಂತೆ, ಅವಿಭಕ್ತ ಕುಟುಂಬ ಕಂಡುಬರುತ್ತಿತ್ತು. ಇದು ಎಲ್ಲರಲ್ಲಿಯೂ ಪ್ರೀತಿ – ವಿಶ್ವಾಸ ಮೂಡಿಸಿ ಸಮಾಜದಲ್ಲಿ ಶಾಂತಿಯನ್ನ ಸೌಹಾರ್ದತೆಯನ್ನ ಉಂಟು ಮಾಡುತ್ತಿತ್ತು. ಡಾ॥ ಇರಾವತಿ ಕರ್ವೆಯವರು "ಒಂದೇ ಮನೆಯಲ್ಲಿ ವಾಸಿಸುವ ಒಂದೇ ಪಾಕಶಾಲೆಯಲ್ಲಿ ತಯಾರಿಸಿದ ಆಹಾರವನ್ನು ಸ್ವೀಕರಿಸುವ, ಕುಟುಂಬದ ಆಸ್ತಿ – ಪಾಸ್ತಿಗಳ ಮೇಲೆ ಸಮಾನ ಅಧಿಕಾರವನ್ನು ಪಡೆದಿರುವ, ಸಾಮೂಹಿಕವಾಗಿ ಧಾರ್ಮಿಕ ಪರಂಪರೆಗಳಲ್ಲಿ ಭಾಗವಹಿಸುವ ರಕ್ತ ಸಂಬಂಧಿಕರ ಗುಂಪಿಗೆ ಅವಿಭಕ್ತ ಕುಟುಂಬವೆಂದು ಕರೆಯಬಹುದು"[೮] ಎಂದಿದ್ದಾರೆ. ಇಂದಿಗೂ ಸಹ ವಿರಳವಾಗಿ ಗಂಗಾಮತಸ್ಥರಲ್ಲಿ ಅವಿಭಕ್ತ ಕುಟುಂಬಗಳನ್ನ ನೋಡಬಹುದು.

ಒಂದೇ ಕುಟುಂಬದಲ್ಲಿ ದೊಡ್ಡಪ್ಪ, ಚಿಕ್ಕಪ್ಪ, ಅಜ್ಜ, ಮುತ್ತಜ್ಜ, ಮಾವ, ಅತ್ತೆ, ಅಜ್ಜಿ, ಮುತ್ತಜ್ಜಿ, ಮಕ್ಕಳು, ಮೊಮ್ಮಕ್ಕಳು, ಮೂಳಮಕ್ಕಳು ಹೀಗೆ ಹೆಚ್ಚುಮಂದಿ ಇರುತ್ತಿದ್ದರು. "ನಮ್ಮ ತಂದೆ ಕಾಲದಲ್ಲಿ ಮೂವತ್ತಾರು ಜನ ಒಂದೇ ಮನೆಯಲ್ಲಿ ವಾಸಮಾಡುತ್ತಿದ್ವಿ, ಒಂದೇ ಕಡೆ ಊಟ, ಸ್ನಾನ ಮಾಡಿ ದಿನನಿತ್ಯ ಒಬ್ಬೊಬ್ಬರಿಗೆ ಒಂದೊಂದು ಕೆಲಸ, ಯಾರಿಗೂ ಯಾವುದು ಶ್ರಮ ಅನ್ನಿಸುತ್ತಿರಲಿಲ್ಲ"[೯] ಎಂದು ವಕ್ತೃ ಒಬ್ಬರು ಹೇಳುತ್ತಾರೆ. ಹೀಗೆ ಒಂದೇ ಕುಟುಂಬದಲ್ಲಿ ಸಾಮಾನ್ಯವಾಗಿ ೧೫ ರಿಂದ ೪೦ ಮಂದಿ ವಾಸಮಾಡುತ್ತಿದ್ದುದನ್ನ ಕಾಣಬಹುದಾಗಿದೆ. ಇದಕ್ಕೆ ಪ್ರಮುಖವಾದ ಕಾರಣ ಅವರೇ ಹೇಳುವಂತೆ ಬಡತನ. ಅವಿಭಕ್ತ ಕುಟುಂಬವಿದ್ದಾಗ ಒಬ್ಬರು ಕೂಲಿಗೆ ಹೋಗಲಿಲ್ಲವೆಂದರು ಆ ದಿನದ ಊಟನಡೆದು ಹೋಗುತ್ತದೆ ಎಂಬುದಾಗಿದೆ. ಇನ್ನು ಕೆಲವರು ಹೇಳುವಂತೆ ಬೇಟೆಗೆ ಹೋಗಲು ಒಬ್ಬರು, ಇಬ್ಬರಿಂದ ಸಾಧ್ಯವಿಲ್ಲ. ಅಂತೆಯೇ ವ್ಯವಸಾಯ ಮಾಡಲು ಸಹ "ಕೂಡಿ ಬಾಳಿದರೆ ಸುಖವುಂಟು" ಎಂಬ ಮಾತನ್ನು ಹೇಳಿದ್ದುಂಟು. ಇವರು ವಾಸಿಸುವ ಮನೆಗಳೇನು ಅತ್ಯಂತ ದೊಡ್ಡದು ಆಗಿರಲಿಲ್ಲ. ತಕ್ಕ ಮಟ್ಟಿಗೆ ನಾಡಹೆಂಚಿನ ಮನೆಯಾಗಿದ್ದು, ಹೆಚ್ಚಿನ ಜನ ಇದ್ದುದರಿಂದ ಏನೋ ವಯಸ್ಸಾದ ಅಜ್ಜಂದಿರು ಮನೆಯ ಮುಂದಿನ ಪಡಸಾಲೆಯಲ್ಲಿ ಮಲಗಿಕೊಳ್ಳುತ್ತಿದ್ದರು.

ಕುಟುಂಬದ ಮುಖ್ಯಸ್ಥ, ಆ ಕುಟುಂಬದ ಹಿರಿಯ ಯಜಮಾನನಾಗಿರುತ್ತಿದ್ದ. ಆತನ ಮಾತುಗಳನ್ನು ಎಲ್ಲರು ಸಹ ಕೇಳುತ್ತಿದ್ದರು. ಪಿತೃಪ್ರಧಾನ ಸಮಾಜವಾಗಿದ್ದರು, ಕುಟುಂಬದ ನಿರ್ವಹಣೆಯನ್ನ ತಾಯಿ ನೋಡಿಕೊಳ್ಳುತ್ತಿದ್ದರು. ಪಿತೃಪ್ರಧಾನ ಕುಟುಂಬವಾದ್ದರಿಂದ ಮನೆಯಲ್ಲಿ ಹಿರಿಯನಾದ ಅಜ್ಜ ಹೇಳಿದಂತೆ ಕಾರ್ಯಗಳು ನಡೆಸುತ್ತಿದ್ದವು. ಕುಟುಂಬದಲ್ಲಿ ದುಡಿದದ್ದೆಲ್ಲವನ್ನು

ಯಜಮಾನನಿಗೆ ಒಪ್ಪಿಸಬೇಕು, ಆತ ಕುಟುಂಬದ ಜವಾಬ್ದಾರಿಯನ್ನ ಹೊರುತ್ತಾನೆ. ಕೂಲಿ ಅಥವಾ ಬೇರೆ ಯಾವುದೇ ಕೆಲಸದಿಂದ ಬಂದ ಹಣವನ್ನು ಯಜಮಾನನಿಗೆ ಕೊಡಬೇಕು. ಇವರದು ದೊಡ್ಡ ಪ್ರಮಾಣದ ಕೃಷಿ ಪ್ರಧಾನ ಉದ್ಯೋಗವಲ್ಲ. ಗಂಡಸರಂತೆಯೇ ಹೆಂಗಸರೂ ಸಹ ಕೂಲಿಗೆ ಹೋಗುತ್ತಾರೆ. ಗಂಡಸಿಗೆ ಸರಿಸಮಾನವಾಗಿ ಹೆಂಗಸರು ಅಷ್ಟೇ ಕಷ್ಟದ ಕೆಲಸವನ್ನ ಮಾಡುತ್ತಾರೆ. ಮನೆಯವರೆಲ್ಲಾ ಕೆಲಸಗಳನ್ನು ಹಂಚಿಕೊಳ್ಳುತ್ತಿದ್ದರಿಂದ, ಕೆಲಸದ ಹೊರೆ ಕಡಿಮೆಯಾಗುತ್ತಿತ್ತು. ಮಕ್ಕಳ ಲಾಲನೆ-ಪಾಲನೆಗೆ ಯಾವುದೇ ರೀತಿಯ ತೊಂದರೆಯಾಗುತ್ತಿರಲಿಲ್ಲ. ಎಲ್ಲರೂ ಭಯ-ಭಕ್ತಿಯಿಂದ ಹಿರಿಯರಿಗೆ ಗೌರವ ನೀಡುತ್ತಿದ್ದರು. ಅವರ ಉತ್ತಮವಾದ ಹಾದಿಯನ್ನು ಅನುಸರಿಸುತ್ತಿದ್ದರು. ಇಂತಹ ಕುಟುಂಬವನ್ನು ಕುಲುಮೆದೊಡ್ಡಿಯ ಜಯರಾಮ ಮಾಜಿ ತಾಲ್ಲೂಕು ಪಂಚಾಯಿತಿ ಸದಸ್ಯ ಇವರ ಮನೆಯಲ್ಲಿ ಈಗಲೂ ಸಹ ಅವಿಭಕ್ತ ಕುಟುಂಬ ಪದ್ದತಿ ಇದೆ. ಹೊಳಲು ಗ್ರಾಮದಲ್ಲಿ ಕೆಲವೊಂದು ಕಡೆ ಅವಿಭಕ್ತ ಕುಟುಂಬಗಳನ್ನು ಕಾಣಬಹುದು. ಸಾಮಾನ್ಯವಾಗಿ ಅವಿಭಕ್ತ ಕುಟುಂಬದವರು ಒಂದು ಕಡೆ ಅಡುಗೆಯನ್ನು ಮಾಡುತ್ತಾರೆ. ಊಟಕ್ಕಾಗಿ ಕುಟುಂಬದ ಸದಸ್ಯರೆಲ್ಲರೂ ಒಟ್ಟಾಗಿ ಕೂಡುತ್ತಾರೆ. ಕುಟುಂಬದ ಎಲ್ಲ ಹೆಂಗಸರು ಅಡಿಗೆ ಮಾಡುವಾಗ ಒಟ್ಟಾಗಿ ಕೆಲಸ ಮಾಡುತ್ತಾರೆ. ಊಟದ ನಂತರದಲ್ಲಿ ಮನೆಯ ಪಕ್ಕದಲ್ಲೇ ಚಿಕ್ಕ ಚಿಕ್ಕ ಗುಡಿಸಲುಗಳನ್ನ ಮಾಡಿಕೊಂಡಿರುತ್ತಾರೆ. ರಾತ್ರಿವೇಳೆಯಲ್ಲಿ ಪ್ರತ್ಯೇಕ ಗುಡಿಸಲಿನಲ್ಲಿ ಮಲಗುತ್ತಾರೆ. ಧಾರ್ಮಿಕ ಆಚರಣೆಯನ್ನು ನಡೆಸಲು ಪ್ರಮುಖವಾದ ಕೋಣೆಯೊಂದು ಪ್ರತ್ಯೇಕವಾಗಿರುತ್ತದೆ. ಇಲ್ಲದಿದ್ದವರು ಮನೆಯ ಅಡುಗೆಯ ಮನೆಯಲ್ಲೆ ದೇವತಾಕಾರ್ಯಗಳನ್ನು ನಡೆಸುವುದುಂಟು. ಇಂತಹ ಕಡೆಗಳಲ್ಲಿ ದೇವರ ಮನೆಯ ಗೋಡೆ ತಗ್ಗಾಗಿರುತ್ತದೆ. ಮನೆಯಲ್ಲಿ ಶುಭಕಾರ್ಯಗಳಾದರೂ ಯಜಮಾನನ ನೇತೃತ್ವದಲ್ಲಿ ನಡೆಯುತ್ತದೆ. ಕುಟುಂಬದಲ್ಲಿ ಯಾವುದೇ ರೀತಿಯ ತೊಂದರೆಗಳು ಸಂಭವಿಸಿದರೆ ಅವುಗಳನ್ನು ಕುಟುಂಬದ ಯಜಮಾನನೇ ಬಗೆ ಹರಿಸುತ್ತಾನೆ. ಕುಟುಂಬವನ್ನು ಒಡೆಯಲು ಬಿಡುತ್ತಿರಲಿಲ್ಲ ಇವೆಲ್ಲವೂ ಸಹ ಯಜಮಾನನ ಬುದ್ಧಿವಂತಿಕೆಯನ್ನ ಅವಲಂಬಿಸಿರುತ್ತಿತ್ತು. ಊಟದ ವಿಚಾರದಲ್ಲಿ ಯಾವುದೇ ವ್ಯತ್ಯಾಸವಾದರೂ ಎಲ್ಲರು ಅನುಸರಿಸಿಕೊಂಡು ಜೀವನ ಸಾಗಿಸುತ್ತಾರೆ. ಆದರೂ ಸಹ ಇಂದಿನ ಸಂದರ್ಭಗಳಲ್ಲಿ ಅವಿಭಕ್ತ ಕುಟುಂಬಗಳು ತಮ್ಮ ಮಹತ್ವವನ್ನ ಕಳೆದುಕೊಂಡು ಕಣ್ಮರೆಯಾಗುತ್ತಿರುವುದು ಶೋಚನೀಯವಾದ ಸಂಗತಿಯಾಗಿದೆ.

**ವಿಭಕ್ತ ಕುಟುಂಬಗಳು**

ಅವಿಭಕ್ತ ಕುಟುಂಬದಲ್ಲಿದ್ದ ಕೆಲವೊಂದು ಲೋಪದೋಷಗಳಿಂದಾಗಿ ವಿಭಕ್ತ ಕುಟುಂಬಗಳು ಹುಟ್ಟಿಕೊಂಡವು. ಎಲ್ಲ ಜನರಂತೆಯೇ ಗಂಗಾಮತಸ್ಥರು ಸಹ ವಿಭಕ್ತವಾದ ಸಣ್ಣ ಕುಟುಂಗಳನ್ನು ಹೊಂದಿದ್ದಾರೆ. "ಅವಿಭಕ್ತ ಕುಟುಂಬದಲ್ಲಿ ಸದಸ್ಯನಿಗೆ ಪೂರ್ಣ ಸ್ವಾತಂತ್ರ್ಯ ಯಾವ ಸಂದರ್ಭದಲ್ಲೂ ಇರುತ್ತಿರಲಿಲ್ಲ. ದುಡಿಮೆಗೆ ತಕ್ಕ ತೃಪ್ತಿ ಇರುತ್ತಿರಲಿಲ್ಲ. ಕೆಲಸದ ಸಂದರ್ಭದಲ್ಲಿ ಸದಸ್ಯ ಮನೆಯಲ್ಲಿ ಇರುವುದನ್ನು ಯಜಮಾನ ಒಪ್ಪುತ್ತಿರಲಿಲ್ಲ. ಹೆಚ್ಚಿನ ಜನರು ಒಂದೇ ಕಡೆ ವಾಸಮಾಡುವುದರಿಂದಾಗಿ ಆಗಿಂದಾಗ್ಗೆ ಕೌಟುಂಬಿಕ ಕಲಹಗಳಾಗುತ್ತಿದ್ದವು. ಇಂತಹ ಹಲವಾರು ಕಾರಣಗಳಿಂದಾಗಿ ದೊಡ್ಡ ಕುಟುಂಬಗಳು ಇಂದು ಚಿಕ್ಕ ಕುಟುಂಬಗಳಾಗಲು ಕಾರಣವಾಯಿತು."[೬] ಇದಕ್ಕೆ ಮತ್ತೊಂದು ಪ್ರಮುಖ ಕಾರಣವೆಂದರೆ ಮನೆಯ ಗಾತ್ರ ಚಿಕ್ಕದಾಗಿದ್ದು, ಹೊಸದಾಗಿ ಮದುವೆಯಾದ ನವ ಜೋಡಿಗಳಿಗೆ ಸಾಂಸಾರಿಕ ಜೀವನ ನಡೆಸಲು ಏಕಾಂತತೆಯ ಅವಶ್ಯಕತೆಯೂ ಕೂಡ ವಿಭಕ್ತ ಕುಟುಂಬಕ್ಕೆ ಕಾರಣವಾಗಿದೆ. ಇವರಲ್ಲಿ ಬಡತನವೇ ಪ್ರಧಾನವಾಗಿ ಮನೆ ಮಾಡಿರುವ ಕಾರಣದಿಂದಾಗಿ ಎಲ್ಲರು ತಮ್ಮ ಜೀವನ ನಿರ್ವಹಣೆಗಾಗಿ ದುಡಿಯುವ ಅನಿವಾರ್ಯತೆ ಇರುವುದರಿಂದಾಗಿ ವಿಭಕ್ತ ಕುಟುಂಬಗಳ ಅಗತ್ಯತೆ ಉಂಟಾಯಿತು.

ವಿಭಕ್ತ ಕುಟುಂಬ ವ್ಯವಸ್ಥೆಯಲ್ಲಿ ಪತಿ-ಪತ್ನಿ ಮತ್ತು ಮಕ್ಕಳಿರುತ್ತಾರೆ. ಒಂದು ಮನೆಯಲ್ಲಿ ತಂದೆ-ತಾಯಿ ಮತ್ತು ಒಬ್ಬ ಮಗನ ಕುಟುಂಬ ವಾಸವಾಗಿರುತ್ತದೆ. ಉಳಿದಂತೆ ಅಣ್ಣ-ತಮ್ಮಂದಿರೆಲ್ಲರೂ ಭಾಗವಾಗಿ ಅಕ್ಕ ಪಕ್ಕದಲ್ಲೇ ವಾಸಿಸುತ್ತಾರೆ. ಸಾಮಾನ್ಯವಾಗಿ ತಂದೆ-ತಾಯಿಯರು ಕಿರಿಯ ಮಗನ ಅಧೀನದಲ್ಲಿ ಇರುತ್ತಾರೆ. ಆದರೆ ಧಾರ್ಮಿಕ ಕಾರ್ಯಗಳನ್ನು ನಡೆಸಲು ಮನೆಯ ಹಿರಿಯರಾದ ಅಜ್ಜ-ಅಜ್ಜಿಯರೇ ಪ್ರಧಾನರೆನಿಸಿರುತ್ತಾರೆ. ಇಂಥ ವಿಭಕ್ತ ಕುಟುಂಬದ ಮನೆ ಸರಳವಾಗಿರುತ್ತದೆ. ಗುಡಿಸಲಾದರೆ ಒಳಗೆ ಅಡಿಗೆ ಕೋಣೆ ಮತ್ತು ಹಜಾರ ಇರುತ್ತದೆ. ಹಂಚಿನ ಮನೆಯಾದರೆ ಮುಂದಿನ ಹಜಾರ, ಮಲಗುವ ಕೋಣೆ, ಅಡಿಗೆಕೋಣೆ, ದೇವರ ಕೋಣೆ, ಬಚ್ಚಲು ಕೋಣೆ ಮತ್ತು ಹಿಂದೆ ವಾರಪಾಕಿ ಇರುತ್ತದೆ. ಇಂಥ ಮನೆಗಳನ್ನು ಹೊಳಲು, ನಾಗಮಂಗಲ, ಗಂಜಾಂ, ದೊಡ್ಡರಸಿನಕೆರೆ, ಕಲ್ಕುಣಿ ಇತ್ಯಾದಿ ಸ್ಥಳಗಳಲ್ಲಿ ಕಾಣಬಹುದು. ಹಂದಿ ವಾಸಿಸುವ ಗುಡಿಸಲಿನಂತಿರುವ ಮನೆಗಳು, ಕುಲುಮೆ ದೊಡ್ಡಿ, ಸುಣ್ಣದ ದೊಡ್ಡಿ, ಕಡಿಲುವಾಗಿಲು, ದೇಶಹಳ್ಳಿ, ಹುಸ್ಕೂರು ಇನ್ನೂ ಮುಂತಾದ ಸ್ಥಳಗಳಲ್ಲಿವೆ. ಆದರೆ ಗುಡಿಸಲಿನಲ್ಲಿಯೇ ಹೆಚ್ಚು ಮಂದಿ ಗಂಗಾಮತಸ್ಥರು ವಾಸಿಸುತ್ತಿದ್ದಾರೆ. ಗುಡಿಸಿನಲ್ಲಿ ಗಂಡ-ಹೆಂಡತಿ ಮಲಗಲು ಪ್ರತ್ಯೇಕ ಅಡ್ಡಗೋಡೆಯಂತೆ ಬಿದಿರಿನ ಚಾಪೆ ಕಟ್ಟಿ ವಾಸಿಸುತ್ತಾರೆ. ಮುಟ್ಟಾದವರು ಪ್ರತ್ಯೇಕವಾಗಿ ಮನೆಯ ಮುಂದಿನ ಭಾಗದಲ್ಲಿ ಚಾಪೆ ಹಾಕಿ ಮಲಗುತ್ತಾರೆ. ಅವರು ಮನೆಯ

ಒಳಗೆ ಪ್ರವೇಶ ಮಾಡುವಂತಿಲ್ಲ. ಗಂಗಾಮತಸ್ಥರು ಸಾಮಾನ್ಯವಾಗಿ ಮೇಕೆ, ಕೋಳಿಯನ್ನ ಹೆಚ್ಚಾಗಿ ಸಾಕುತ್ತಾರೆ. ಮೊಲ, ಕಾಡುಕೋಳಿ, ಗೌಜಲಹಕ್ಕಿ, ವಿರಳವಾಗಿ ಸಾಕುತ್ತಾರೆ. ಹಟ್ಟಿಯ ಮುಂದೆ ಅನುಕೂಲವಿದ್ದರೆ ಕೋಳಿಗೂಡನ್ನು ಮಾಡಿಕೊಂಡಿರುತ್ತಾರೆ. ಕೆಲವರು ದೊಡ್ಡ ಪಂಜರದಲ್ಲಿ ಕೋಳಿಗಳನ್ನು ಸಾಕುತ್ತಾರೆ. ಮೇಕೆಗಳನ್ನ ಹೆಚ್ಚಾಗಿ ಸಾಕಿದ್ದರೆ ಮನೆಯ ಒಳಗೆ ಅಥವಾ ಮನೆಯ ಪಕ್ಕದ ಸ್ಥಳದಲ್ಲಿ ಬಿದಿರಿನ ಚೌಕಾಕಾರದ ಬೇಲಿಯನ್ನ ಹಾಕಿ ಅವುಗಳನ್ನ ಕೂಡಿಹಾಕುತ್ತಾರೆ.

ಇವರು ವಾಸಿಸುವ ಗುಡಿಸಲಿನ ಬಾಗಿಲು ಕಿರಿದಾಗಿದ್ದು, ಎಲ್ಲರೂ ಬಗ್ಗಿ ಒಳಗೆ ಹೋಗುವಂತಿರುತ್ತದೆ. ಮಳೆ ಗಾಳಿಯಿಂದ ರಕ್ಷಿಸಲು ಈ ರೀತಿಯ ಗುಡಿಸಲನ್ನು ಮಾಡಿಕೊಂಡಿರುತ್ತಾರೆ. ಗುಡಿಸಲು ಮಧ್ಯದ ಕಂಬದ ತುದಿಯಲ್ಲಿ ದೇವರ ಬಂಢಾರವಿರುತ್ತದೆ. ಆದ್ದರಿಂದ ಮನೆಯ ಒಳಗೆ ಅಶುದ್ಧ ಮಾಡಬಾರದು ಎಂಬ ಕಾರಣದಿಂದಾಗಿ ಮನೆಯ ಮುಂದಿನ ಅಥವಾ ಹಿಂದಿನ ಒಂದು ಮೂಲೆಯ ಕಡೆಯಲ್ಲಿ ಮಾಂಸದ ಅಡುಗೆಯನ್ನು ಮಾಡುವುದುಂಟು. ಸಾಮಾನ್ಯವಾಗಿ ಮಕ್ಕಳನ್ನು ಬಿಟ್ಟರೆ ಕುಟುಂಬದ ನಿರ್ವಹಣೆಗಾಗಿ ಎಲ್ಲರೂ ದುಡಿಯಬೇಕು. ಗಂಡ-ಹೆಂಡತಿಯರಿಬ್ಬರು ಒಟ್ಟಿಗೆ ಕೂಲಿಗೆ ಹೋಗುತ್ತಾರೆ. ತಂದೆ-ತಾಯಿಯಿಂದ ಹೊರಬಂದು ವಿಭಕ್ತ ಕುಟುಂಬದಲ್ಲಿ ವಾಸಮಾಡುತ್ತಿದ್ದರೂ ಸಹ ಅವರ ಮಕ್ಕಳು ಅಜ್ಜ ಅಜ್ಜಿಯರ ಮನೆಯಲ್ಲೇ ಸಾಮಾನ್ಯವಾಗಿ ಮಲಗುವುದು, ಊಟ ಉಪಚಾರ ಎಲ್ಲವನ್ನೂ ಮಾಡುತ್ತಾರೆ. ಕೆಲವು ತಂದೆ-ತಾಯಿಯರು ತಾವು ದುಡಿದು ಸಂಪಾದಿಸಿದ ಹಣ ಅಥವಾ ದವಸ-ಧಾನ್ಯವನ್ನು ಬೇರೆ ಸಂಸಾರ ಮಾಡುತ್ತಿರುವ ಮಕ್ಕಳಿಗೂ ಕೊಡುವುದುಂಟು. ಗಂಗಾಮತಸ್ಥರಲ್ಲಿ ವಿಭಕ್ತ ಕುಟುಂಬಗಳು ಹೆಚ್ಚಾಗಿ ಕಂಡುಬಂದರೂ, ಅಕ್ಕ-ಪಕ್ಕದ ಮನೆಯಲ್ಲೇ ತಂದೆ-ತಾಯಿ, ಅಣ್ಣ-ತಮ್ಮಂದಿರು ವಾಸಿಸುವುದರಿಂದ ಅವಿಭಕ್ತ ಕುಟುಂಬದ ವಾಸನೆಯ ನೆಲೆಯಲ್ಲೇ ಇರುವಂತೆ ಭಾಸವಾಗುತ್ತದೆ.

### ೩.೨ ಆರ್ಥಿಕ ಸ್ಥಾನಮಾನ

ಭಾರತದೇಶ ಹಳ್ಳಿಗಳ ನಾಡು, ವ್ಯವಸಾಯವನ್ನೇ ಪ್ರಧಾನ ವೃತ್ತಿಯನ್ನಾಗಿ ಹೊಂದಿರುವ ದೇಶ. ವ್ಯವಸಾಯದ ಆವಿಷ್ಕಾರದಿಂದಲೇ ಪ್ರಾಚೀನ ಅನಾಗರೀಕನು ಮಾನವನಾಗಲು ಸಾಧ್ಯವಾದುದು. ಅವನು ಕಲಿತಿರುವ ವ್ಯವಸಾಯ ಕ್ರಮ ಸಾಂಪ್ರದಾಯಕವಾಗಿ, ಪರಂಪರಾನುಗತವಾಗಿ ಬಂದಿರುವಂತಹದ್ದು. "ಎಷ್ಟೋ ವರುಷಗಳಿಂದ ವ್ಯವಸಾಯಗಾರನೊಬ್ಬ ಭೂಮಿಯ ಜೊತೆಗಿನ ಸಂಪರ್ಕದಿಂದ ಪಡೆದುಕೊಂಡ ಅನುಭವವನ್ನು ಆಚರಣೆಯ ಮುಖಾಂತರವೋ, ಕ್ರಿಯಾತ್ಮಕ ಕಲೆಯ ಮುಖಾಂತರವೋ, ಗಾದೆ, ಒಗಟು, ಪುರಾಣ,

ಐಹಿತ್ಯಗಳ ಮುಖಾಂತರವೋ, ಒಟ್ಟಿನಲ್ಲಿ ಜಾನಪದ ಸ್ವರೂಪದ ಮುಖಾಂತರ ತನ್ನ ಮುಂದಿನ ತಲೆಮಾರಿಗೆ ವರ್ಗಾಯಿಸಿ ಹೋಗಿದ್ದಾನೆ".[೭]

ಭಾರತವು ಹಲವು ಸಮುದಾಯಗಳನ್ನ ಒಳಗೊಂಡ ಜಾತ್ಯಾತೀತವಾದ ರಾಷ್ಟ್ರ. ಈ ಸಮುದಾಯಗಳು ತಮ್ಮದೇ ಆದ ಆರ್ಥಿಕ ಸ್ಥಾನಮಾನವನ್ನ ಹೊಂದುವುದಕ್ಕೆ ವಂಶಪಾರಂಪರ್ಯವಾಗಿ ಬಂದ ಮೂಲ ವೃತ್ತಿಗಳನ್ನ, ಉಪ ಕಸುಬುಗಳನ್ನ ಉಳಿಸಿಕೊಂಡು, ಬೆಳಿಸಿಕೊಂಡು ಬಂದಿವೆ. ಮಂಡ್ಯ ಜಿಲ್ಲೆಯಲ್ಲಿ ನೆಲೆಸಿರುವ ಗಂಗಾಮತಸ್ಥರು ಮೂಲ ವೃತ್ತಿಯ ಜೊತೆಗೆ, ವ್ಯವಸಾಯವನ್ನು ಅವಲಂಬಿಸಿಕೊಂಡಿರುತ್ತಾರೆ. ಪಾರಂಪರಿಕ ವೃತ್ತಿಗಳಾದ ಮೀನುಗಾರಿಕೆ, ಬಲೆನೆಯ್ಯುವುದು, ವೀಳ್ಯದೆಲೆ ಬೆಳೆಯುವುದು, ಸುಣ್ಣ ಸುಡುವುದು, ಬೇಟೆಯಾಡುವುದು ಇತ್ಯಾದಿ ವೃತ್ತಿಗಳನ್ನ ಇನ್ನೂ ಅವಲಂಬಿಸಿಕೊಂಡಿದ್ದಾರೆ. ಗಂಗಾಮತಸ್ಥರು "ನದಿಗಳ ತೀರ ಪ್ರದೇಶಗಳ ಅಥವಾ ಕೆರೆಕಟ್ಟೆಗಳ ಸಮೀಪಗಳಲ್ಲಿ ಹೆಚ್ಚಾಗಿ ಇವರು ನೆಲೆಸಿರುತ್ತಾರೆ. ಈ ಜನಾಂಗದ ಜನರು ಹಿಂದೆ ಬೇರೆ ಯಾವುದೇ ಉದ್ಯೋಗವನ್ನು ಮಾಡುತ್ತಿರಲಿಲ್ಲ. ಇವರ ಮೂಲ ಕಸುಬು ಕೆರೆಕಟ್ಟೆ-ನದಿಗಳಲ್ಲಿ ಮೀನುಗಳ ಬೇಟೆ ಅಥವಾ ಶಿಕಾರಿಯನ್ನು ಮಾಡುವುದು ಮಾತ್ರ".[೮] ಬೇರೆ ಕಸುಬು ಅಥವಾ ಉದ್ಯೋಗವನ್ನು ಮಾಡಿದರೆ ಅದು ಪಾಪದ ಕೆಲಸವೆಂದು ಪರಿಗಣಿಸುತ್ತಿದ್ದರು. ಆದ್ದರಿಂದ ವ್ಯವಸಾಯವನ್ನಾಗಲಿ, ಪಶುಪಾಲನೆಯನ್ನಾಗಲಿ ಇವರು ಮಾಡುತ್ತಿರಲಿಲ್ಲ. ಹಾಗಾಗಿ ಈ ಜನಾಂಗದ ಪ್ರಮುಖ ವೃತ್ತಿ ಮೀನುಗಳ ಶಿಕಾರಿ ಮಾತ್ರ ಆಗಿತ್ತು.

ಗಂಗಾಮತಸ್ಥರು ಹಿಂದೆ ಒಂದೇ ಕಡೆ ಶಾಶ್ವತವಾಗಿ ನೆಲೆಸದೇ ಅಲೆಮಾರಿಗಳಂತೆ ನದಿ ತೀರ ಪ್ರದೇಶಗಳ ಒಂದು ಕಡೆಯಿಂದ ಮತ್ತೊಂದು ಕಡೆಗೆ, ಕೆರೆಕಟ್ಟೆಗಳ ಕಡೆಗೆ ಮೀನುಗಳ ಬೇಟೆಗಾಗಿ ಇಡೀ ವರ್ಷವೆಲ್ಲ ತಿರುಗಾಡುತ್ತಿದ್ದರು. ಆದರೆ ಇಂದು ಅವರು ಸಾಮಾನ್ಯವಾಗಿ ವಾಸಿಸುತ್ತಿರುವ ಸ್ಥಳಗಳಲ್ಲಿ ಹೊಳೆಗಳು ಅಥವಾ ಕೆರೆಕಟ್ಟೆಗಳು ಇವೆ. ಇಂತಹ ಕೆರೆಕಟ್ಟೆಗಳಲ್ಲಿ ಮೀನುಗಳ ಸಾಕಾಣಿಕೆ ಮಾಡಿ, ಮೀನುಗಾರಿಕೆ ವೃತ್ತಿಯನ್ನು ಮುಂದುವರೆಸಿಕೊಂಡು ಬರುತ್ತಿದ್ದಾರೆ. "ಮೀನು ಹಿಡಿಯುವುದು ಮತ್ತು ದೋಣಿ ನಡೆಸುವುದು ಇವರ ಸಾಂಪ್ರದಾಯಿಕ ಉದ್ಯೋಗವಾಗಿದ್ದು, ಈಚೆಗೆ ಬೇಸಾಯ, ಕೂಲಿ, ನೌಕರಿ ಮೊದಲಾದವುಗಳಲ್ಲಿಯೂ ತೊಡಗಿದ್ದಾರೆ."[೯]

## ಕಸುಬುಗಳು

ಮಾನವ ಕೃಷಿಯ ಆವಿಷ್ಕಾರದಿಂದ ಪ್ರಕೃತಿಯ ರಹಸ್ಯಗಳನ್ನು ಹೆಚ್ಚು ತಿಳಿಯುತ್ತ ಪ್ರಾಕೃತಿಕ ಸಂಪನ್ಮೂಲಗಳ ಅಧ್ಯಯನ, ಬಳಿಕ ನಿಯಂತ್ರಣ ಅವನಿಗೆ ಸಾಧ್ಯವಾಯಿತು. ಕೃಷಿಯ

ಅಧ್ಯಯನದೊಡನೆ ಅವನಿಗೆ ಒಂದೆಡೆ ನಿಂತು ಆಹಾರ ಪಡೆಯಲು ಸಾಧ್ಯವಾಯಿತು. ಆಹಾರ ಪೂರೈಕೆಯೇ ಕೃಷಿಯ ಮೂಲಭೂತ ಉದ್ದೇಶ. ಹಸಿದ ಹೊಟ್ಟೆಗಳ ಸಂಖ್ಯೆ ಬೆಳೆದಂತೆ ಅದನ್ನು ತುಂಬಿಸಲು ಮಾನವನ ಸತತ ಪ್ರಯತ್ನ ಸಾಗಿದೆ. ಬಡತನ ರೇಖೆಗಿಂತ ಕೆಳಗೆ ಜೀವಿಸುವ ಈ ಗಂಗಾಮತಸ್ಥ ಸಮುದಾಯ ವ್ಯವಸಾಯದ ಜೊತೆಗೆ ಸಾಂಪ್ರದಾಯಕವಾಗಿ ಬಂದ ಮೀನುಗಾರಿಕೆ, ಬಲೆನೆಯ್ಯುವುದು, ವೀಳ್ಯದೆಲೆ ಬೆಳೆಯುವುದು, ಸುಣ್ಣ ಸುಡುವುದು, ದೋಣಿ ನಡೆಸುವುದು, ಹಣ್ಣು-ತರಕಾರಿ, ಹೂವಿನ ವ್ಯಾಪಾರ, ಕೂಲಿ ಇವುಗಳ ಜೊತೆಗೆ ಆಡು ಮೇಯಿಸುವುದು, ದನ ಕಾಯುವುದು, ಮನೆ ಕಟ್ಟುವುದು, ಗಾರೆ ಕೆಲಸ, ಹೋಟೆಲ್‌ಗಳಲ್ಲಿ ಕೆಲಸ, ಡ್ರೈವರ್, ಫೋಟೋಗ್ರಾಫರ್ ಹೀಗೆ ಅನೇಕ ಬಗೆಯ ಕೆಲಸಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವುದು ಕಾಣಸಿಗುತ್ತದೆ. ಸರ್ಕಾರಿ ಕ್ಷೇತ್ರದಲ್ಲಿ ಶಿಕ್ಷಕ ವೃತ್ತಿ, ಅಂಗನವಾಡಿ ಶಿಕ್ಷಕಿ, ಸಹಾಯಕಿ, ಜವಾನ ವೃತ್ತಿ, ಬಸ್ ಕಂಡಕ್ಟರ್, ಪೋಲಿಸ್ ಇಲಾಖೆ ಹೀಗೆ ಇನ್ನೂ ಮುಂತಾದ ವೃತ್ತಿಗಳಲ್ಲಿ ಸೇವೆ ಸಲ್ಲಿಸುತ್ತಿರುವ ಬೆರಳೆಣಿಕೆಯಷ್ಟು ಮಂದಿ ನೌಕರಿಯಲ್ಲಿ ಇದ್ದಾರೆ.

## ವ್ಯವಸಾಯ ಅಥವಾ ಕೃಷಿ

ಭಾರತ ಕೃಷಿ ಪ್ರಧಾನ ರಾಷ್ಟ್ರವಾಗಿದ್ದು, ಶೇ. ೭೦ರಷ್ಟು ಜನರು ಕೃಷಿಯಲ್ಲಿ ತೊಡಗಿಸಿಕೊಂಡಿದ್ದಾರೆ. ಹಳ್ಳಿಗಳ ಬೀಡಾದ ಭಾರತದಲ್ಲಿ ವ್ಯವಸಾಯವೇ ಸಿಂಹಪಾಲಾಗಿದೆ. "ಗ್ರಾಮೀಣ ಭಾರತವೇ ನೈಜ ಭಾರತ"[೧೦] ಎಂದು ಮಹಾತ್ಮ ಗಾಂಧೀಜಿ ಹೇಳಿರುವುದು ಸಹ ಇದೇ ಅರ್ಥದಲ್ಲಿ. ಆರ್ಥಿಕತೆಯ ಬೆನ್ನೆಲುಬಾದ ಕೃಷಿಯು ಹೆಚ್ಚಿನ ಆದಾಯದ ಮೂಲವು ಆಗಿದೆ. "ಭಾರತದಂತೆ ಕರ್ನಾಟಕವೂ ಕೃಷಿ ಪ್ರಧಾನ ರಾಜ್ಯ. ಇದು ೧.೯೫ ಲಕ್ಷ ಚ.ಕಿ.ಮೀ. ವಿಸ್ತೀರ್ಣದೊಂದಿಗೆ ರಾಷ್ಟ್ರದ ಎಂಟನೆಯ ಅತಿದೊಡ್ಡ ರಾಜ್ಯವಾಗಿದೆ. ಕರ್ನಾಟಕವು ಪ್ರಧಾನವಾಗಿ ಮಳೆಯಾಶ್ರಿತ ಬೇಸಾಯದ ರಾಜ್ಯವಾಗಿದೆ."[೧೧] ಆದರೆ ಮಂಡ್ಯ ಜಿಲ್ಲೆಗೆ ಸಂಬಂಧಪಟ್ಟಂತೆ ದಕ್ಷಿಣಗಂಗೆ ಎಂದೇ ಪ್ರಸಿದ್ಧವಾದ, ಜಿಲ್ಲೆಯ ಜೀವನಾಡಿ ಆದ ಕಾವೇರಿ ನದಿಯಿಂದ ನೀರಾವರಿಗೆ ಹೆಚ್ಚು ಅನುಕೂಲವಾಗಿ, ಬೇಸಾಯಕ್ಕೆ ಸಹಕಾರಿಯಾಗಿದೆ.

ಗಂಗಾಮತಸ್ಥರು ಹೆಚ್ಚಿನ ಭೂಮಿಯನ್ನು ಹೊಂದಿದವರಲ್ಲ. ಆ ದೃಷ್ಟಿಯಿಂದಲೇ ಅವರು ಕೃಷಿಯನ್ನೇ ಪ್ರಧಾನ ಕಸುಬನ್ನಾಗಿ ನಂಬಿದವರಲ್ಲ. ಇವರಲ್ಲಿ ಹೆಚ್ಚಿನ ಭಾಗದ ಜನರಿಗೆ ಭೂಮಿಯೇ ಇಲ್ಲ. ಇನ್ನೂ ಭೂಮಿಯನ್ನ ಹೊಂದಿರುವ ಶೇ. ೧೦ ರಿಂದ ೧೫ರಷ್ಟು ಜನರಿಗೆ ೧೦ ಗುಂಟೆಯಿಂದ ೨೦ ಗುಂಟೆಯ ಭೂಮಿ ಇರುವುದೇ ಹೆಚ್ಚು. ಯಾರೋ ನೂರಕ್ಕೆ ಮೂರು - ನಾಲ್ಕು ಮಂದಿ ಮಾತ್ರ ಎರಡು-ಮೂರು ಎಕರೆ ಕೃಷಿ ಭೂಮಿಯನ್ನು ಹೊಂದಿದವರಾಗಿದ್ದಾರೆ.

ಆದ್ದರಿಂದ ಇವರು ಕೃಷಿಯನ್ನ ಪ್ರಧಾನವಾಗಿ ನಂಬಿಬದುಕುವವರಲ್ಲ. ಇರುವ ೧೦-೨೦ ಗುಂಟೆಯ ಜಮೀನಿನಲ್ಲೆ ವೀಳ್ಯದೆಲೆ ತೋಟ, ತರಕಾರಿ ಬೆಳೆಯುವುದು, ಹೂವಿನ ತೋಟಗಳು ಕಂಡು ಬರುತ್ತವೆ. ಮಜುಂದಾರ್ ಎನ್. ಎ ಅವರು ಹೇಳುವಂತೆ "ರೈತರು ಆರ್ಥಿಕ ಅಂಶಗಳಿಗನುಗುಣವಾಗಿ ತಮ್ಮ ಬೆಳೆ ವಿಧಾನವನ್ನು ಬದಲಾಯಿಸುತ್ತಾ ಹೋಗುತ್ತಾರೆ"[೧೨] ಎಂದಿದ್ದಾರೆ. ಈ ಹೇಳಿಕೆಯಂತೆ ಇಲ್ಲಿಯ ಗಂಗಾಮತಸ್ಥರು ಕಾಲ ಮತ್ತು ಬೆಲೆಗೆ ಅನುಗುಣವಾಗಿ ವೀಳ್ಯದೆಲೆ ತೋಟ, ತರಕಾರಿ, ಹೂವು ಬೆಳೆಯುತ್ತಾರೆ.

ಜಿಲ್ಲೆಯಲ್ಲಿ ನೀರಾವರಿಗೆ ಅತ್ಯಂತ ಹೆಚ್ಚಿನ ಕೊರತೆ ಇಲ್ಲದ ಕಾರಣ ಕೆಲವರು ಇರುವ ಕಡಿಮೆ ಜಮೀನಿನಲ್ಲೇ, ಭತ್ತ, ರಾಗಿ, ಕಬ್ಬು, ಬೆಳೆಗಳನ್ನು ಬೆಳೆಯುತ್ತಾರೆ. ಅದೇ ಜಮೀನಿನ ನಡುವೆ ಅಲ್ಲಲ್ಲಿ ತೆಂಗಿನ ಮರಗಳಿರುವುದು ಕಂಡುಬರುತ್ತದೆ. ೨-೩ ಎಕರೆ ಜಮೀನನ್ನ ಹೊಂದಿರುವ ಕೆಲವರು ಕಬ್ಬು, ಭತ್ತ ಬೆಳೆಯುತ್ತಾರೆ. ಇದಲ್ಲದೆ ಸರ್ವೆ ತೋಟ, ನೀಲಗಿರಿ ಮರಗಳ ತೋಟವನ್ನ ನೋಡಬಹುದು.

## ವೀಳ್ಯದೆಲೆ ತೋಟ

ಇವರ ಸಾಂಪ್ರದಾಯಿಕ ವೃತ್ತಿಯಲ್ಲಿ ಒಂದಾದ ವೀಳ್ಯದೆಲೆ ತೋಟವು ಸಾಮಾನ್ಯವಾಗಿ ಮಂಡ್ಯ ಜಿಲ್ಲೆಯ ಮಳವಳ್ಳಿ, ಮದ್ದೂರು, ಮಂಡ್ಯ, ಪಾಂಡವಪುರ, ಶ್ರೀರಂಗಪಟ್ಟಣ ತಾಲ್ಲೂಕುಗಳಲ್ಲಿ ಹೆಚ್ಚಾಗಿರುವುದು ಕಂಡುಬರುತ್ತದೆ. ಇವರು ಅತ್ಯಲ್ಪ ಜಮೀನಿನಲ್ಲಿ ಭಾರತೀಯ ಸಂಸ್ಕೃತಿಯಲ್ಲಿ ಪೂಜನೀಯ ಸ್ಥಾನವನ್ನು ಹೊಂದಿರುವ ವೀಳ್ಯದೆಲೆಯನ್ನು ಬೆಳೆಯುತ್ತಾರೆ. ಎಲ್ಲ ಶಾಸ್ತ್ರಗಳಿಗೆ ಹಾಗೂ ದೇವತಾಕಾರ್ಯಕ್ಕೆ ಬೇಕಾದ ವೀಳ್ಯದೆಲೆ ಇವರ ದೃಷ್ಟಿಯಲ್ಲಿ ಲಕ್ಷ್ಮೀದೇವಿಯೇ ಸರಿ. ನುಗ್ಗೆ ಮರ ಮತ್ತು ಪಾರಿವಾಳದ ಮರಗಳಿಗೆ ವೀಳ್ಯದೆಲೆಯ ಹಂಬುಗಳು ಸುತ್ತುವಂತೆ ಕಟ್ಟಿರುತ್ತಾರೆ. ಫಲವತ್ತತೆಗೆ ಕೊಟ್ಟಿಗೆಯ ಗೊಬ್ಬರವನ್ನು ಹಾಕುತ್ತಾರೆ. ತೋಟದ ಪಕ್ಕದಲ್ಲೆ ಒಂದು ಚಿಕ್ಕದಾದ ಬಾವಿ ಅಥವಾ ಗುಂಡಿಯನ್ನು ತೋಡಿರುತ್ತಾರೆ. ಏತದ ಮೂಲಕ ವೀಳ್ಯದೆಲೆ ತೋಟಕ್ಕೆ ನೀರನ್ನು ಹಾಯಿಸುತ್ತಾರೆ. ಪ್ರತಿ ಒಂದೂವರೆ ಅಥವಾ ಎರಡು ತಿಂಗಳಿಗೊಮ್ಮೆ ಎಲೆಯನ್ನು ಕುಯ್ಯುತ್ತಾರೆ. ಎಲೆಯು ಕುಯ್ಲಿಗೆ ಬಂದಾಗ, ಎಲೆ ಕುಯ್ಯುವ ಉಗುರನ್ನು ಉಪಯೋಗಿಸಿ ಎಲೆಯನ್ನು ಜಿಗಟಿ ಒಂದೆಡೆ ಶೇಖರಿಸುತ್ತಾರೆ. ಹೀಗೆ ಶೇಖರಿಸಿದ ಎಲೆಯನ್ನ ನೂರುಕ್ಕೊಂದೊಂದರಂತೆ ಕಟ್ಟುಗಳನ್ನು ಕಟ್ಟುತ್ತಾರೆ. ಹೀಗೆ ನೂರು ಕಟ್ಟುಗಳನ್ನು ಸೇರಿಸಿ ಒಂದು ಪಿಂಡಿ ಮಾಡುತ್ತಾರೆ."[೧೩]

ವೀಳ್ಯದೆಲೆ ಪಿಂಡಿಗಳನ್ನ ಮಾರಾಟ ಮಾಡಲು ಮಂಡ್ಯ, ಚನ್ನಪಟ್ಟಣ, ಕನಕಪುರ, ಮೈಸೂರು ಇಲ್ಲಿರುವ ಮಾರುಕಟ್ಟೆಗಳಿಗೆ ತೆಗೆದುಕೊಂಡು ಹೋಗುತ್ತಾರೆ. ಹತ್ತು ಗುಂಟೆ ಜಮೀನಿನಲ್ಲಿ ಸರಿ ಸುಮಾರು ಆರು-ಏಳು ಪಿಂಡಿ ಎಲೆಗಳನ್ನು ಬೆಳೆಯುತ್ತಾರೆ. ಮಾರುಕಟ್ಟೆಯಲ್ಲಿ ಮದುವೆಯ ಸುಗ್ಗಿ ಮತ್ತು ದೀಪಾವಳಿಯ ಹಬ್ಬದ ಸಂದರ್ಭದಲ್ಲಿ ಒಂದು ಪಿಂಡಿಗೆ ೧೦೦೦ ದಿಂದ ೨೦೦೦ ರೂಗಳವರೆಗೆ ಬೆಲೆ ಸಿಗುವುದುಂಟು. ಉಳಿದಂತೆ ಇಷ್ಟೇ ಬೆಲೆ ಸಿಗುತ್ತದೆ ಎಂದು ಹೇಳುವುದಕ್ಕೆ ಸಾಧ್ಯವಿಲ್ಲ. ಸಾಮಾನ್ಯವಾಗಿ ೪೦೦ ರಿಂದ ೨೦೦ ರೂ.ಗಳವರೆಗೆ ಒಂದು ಪಿಂಡಿ ಎಲೆಗೆ ಬೆಲೆ ಇರುತ್ತದೆ. ವೀಳ್ಯದೆಲೆ ತೋಟವನ್ನು ನಂಬಿ ಬದುಕುವ ಕೆಲವರಿಗೆ ಇದೇ ಆದಾಯದ ಮೂಲವಾಗಿರುತ್ತದೆ. ಇದರಿಂದಲೇ ಅವರು ತಮ್ಮ ಜೀವನ ನಿರ್ವಹಣೆಯನ್ನು ಮಾಡಬೇಕಾಗುತ್ತದೆ. ಪ್ರತಿ ಪಿಂಡಿಗೆ ಇಂತಿಷ್ಟು ಬೆಲೆಯನ್ನ ಕೊಡುವುದೆಂದು ಮಧ್ಯವರ್ತಿಗಳು ನಿಗಧಿಪಡಿಸಿರುತ್ತಾರೆ. ಇಂತಹ ಸಂದರ್ಭದಲ್ಲಿ ಆರ್ಥಿಕ ಮುಗ್ಗಟ್ಟನ್ನು ಎದುರಿಸುವ ಕೆಲವರು ಮಧ್ಯವರ್ತಿಗಳಿಂದ ಮುಂಗಡ ಹಣ ಪಡೆದು, ಮಾರುಕಟ್ಟೆಯಲ್ಲಿ ಎಷ್ಟೇ ಬೆಲೆಯಿದ್ದರೂ ಸಹ ಅವರು ಮೊದಲೇ ನಿಗಧಿ ಪಡಿಸಿದ ಬೆಲೆಗೆ ಇವರು ಕೊಡುತ್ತಿರುವ ಪರಿಸ್ಥಿತಿಯನ್ನು ನೋಡಬಹುದು. ಇಲ್ಲಿ ಆತ ದುಡಿದು ಮಧ್ಯವರ್ತಿಗಳಿಗೆ ಹೆಚ್ಚಿನ ಅನುಕೂಲ ಮಾಡಿಕೊಟ್ಟಂತಾಗುತ್ತದೆ.[೧೪] ಈ ರೀತಿಯಲ್ಲಿ ಮಧ್ಯವರ್ತಿಗಳ ಮೋಸಕ್ಕೆ ಸಿಕ್ಕಲು ಕಾರಣ ಮನೆಯಲ್ಲಿರುವ ಬಡತನ. ಅಲ್ಲದೆ ಮಾರುಕಟ್ಟೆಯಲ್ಲಿ ಮಾರಾಟ ಮಾಡುವ ತಿಳುವಳಿಕೆಯ ಕೊರತೆ. ಇವರು ವಾಸಿಸುವ ಕೆಲವು ಕಡೆಗಳಲ್ಲಿ ಸಾರಿಗೆ-ಸಂಪರ್ಕದ ವ್ಯವಸ್ಥೆ ಇರುವುದಿಲ್ಲ.

ವೀಳ್ಯದೆಲೆಯ ತೋಟದ ಕಾಯಕವನ್ನು ನಂಬಿ ಬದುಕುವ ಇವರು ವಂಶಪಾರಂಪರ್ಯವಾಗಿಯೇ ಕೆಲವು ಕುಟುಂಬಗಳು ಮುಂದುರಿಸಿಕೊಂಡು ಬರುತ್ತಿವೆ. ಇದರಿಂದ ಕೆಲವರು ಹಿಟ್ಟು-ಬಟ್ಟೆಗೆ ನೇರ ಎಂಬ ರೀತಿಯಲ್ಲಿ ಜೀವನ ಸಾಗಿಸಿದರೆ, ಇನ್ನೂ ಕೆಲವರು "ಹಿಟ್ಟಿಗಾದರೆ ಬಟ್ಟೆಗಿಲ್ಲ; ಬಟ್ಟೆಗಾದರೆ ಹಿಟ್ಟಿಗಿಲ್ಲ" ಎಂಬ ಗಾದೆಯಂತೆ ಜೀವನ ಸಾಗಿಸುತ್ತಿದ್ದಾರೆ.

**ಕಬ್ಬು**

ಮಂಡ್ಯ ಜಿಲ್ಲೆ ಕಬ್ಬು ಬೆಳೆಗೆ ಪ್ರಸಿದ್ಧವಾದ ಜಿಲ್ಲೆಯಾಗಿದೆ. ಇಲ್ಲಿ ಎಲ್ಲ ಜನಾಂಗದವರು ಕಬ್ಬು ಬೆಳೆಯುತ್ತಾರೆ. ಅಂತೆಯೇ ಗಂಗಾಮತಸ್ಥರು ತಮಗೆ ಇರುವ ಜಮೀನಿನಲ್ಲಿ ಕಬ್ಬು ಬೆಳೆಯುತ್ತಾರೆ. ಶೇಕಡ ೪ ರಿಂದ ೫ರಷ್ಟು ಜನರು ಕಬ್ಬು ಬೆಳೆಯುತ್ತಾರೆ. ಕಡಿಮೆಯೆಂದರೆ ೨೦ ಗುಂಟೆಯಿಂದ ೨ ಎಕರೆಯವರೆಗೆ ಕಬ್ಬು ಬೆಳೆಯಿರುವುದು ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ

ಕಂಡುಬಂದಿದೆ. "ಸಿ.ಓ-೪೧೯ ಹಾಗೂ ಹೆಚ್.ಎಂ. ೩೨೦ ತಳಿಗಳ ಬಳಕೆಯ ಮೊದಲು ಹೆಚ್ಚು ಪ್ರಚಾರದಲ್ಲಿದ್ದ ಕಬ್ಬಿನ ತಳಿಗಳೆಂದರೆ 'ರಸದಾಳಿ' (೧೨ ತಿಂಗಳಾವಧಿ) ಹಾಗೂ 'ಪಟ್ಟಾಪಟ್ಟಿ' (೧೪ ತಿಂಗಳಾವಧಿ) ಇವು ಬೆಲ್ಲವನ್ನು ಮಾಡಲು ಯೋಗ್ಯವಾದ ಕಬ್ಬುಗಳಾಗಿದ್ದವು. ಇವುಗಳ ಸರಾಸರಿ ಇಳುವರಿ ಒಂದು ಎಕರೆಗೆ ೨೦ ಟನ್."[೧೫]

ಜಿಲ್ಲೆಯಲ್ಲಿ ಆರು ಸಕ್ಕರೆ ಕಾರ್ಖಾನೆಗಳಿದ್ದು, ಪ್ರತಿ ಹಳ್ಳಿಗಳಲ್ಲೂ ಆಲೆಮನೆಗಳಿವೆ. ಕಬ್ಬನ್ನು ಕಾರ್ಖಾನೆಗೆ ಕಟಾಯಿಸಿಕೊಡುವುದಾಗಿ ಒಪ್ಪಿಗೆ ಮಾಡಿಕೊಂಡಿರುತ್ತಾರೆ. ಮುಂಗಡ ಹಣವನ್ನು ಒಂದು ಎಕರೆಗೆ ಐದು ಸಾವಿರ ರೂಗಳನ್ನು ಪಡೆಯಬಹುದಾಗಿದೆ. ಕಬ್ಬನ್ನು ಸಕ್ಕರೆ ಕಾರ್ಖಾನೆಗೆ ಅಥವಾ ಅದೇ ಗ್ರಾಮದಲ್ಲಿರುವ ಆಲೆಮನೆಗಳಿಗೆ ಮಾರಾಟ ಮಾಡುತ್ತಾರೆ. ಪ್ರತಿ ಟನ್ನಿಗೆ ೧೮೦೦ ಬೆಲೆ ಇದೆ. ಕಬ್ಬು ಬೇಸಾಯದ ಸಂದರ್ಭದಲ್ಲಿ ತಮ್ಮ ಕುಟುಂಬದ ಸದಸ್ಯರೆಲ್ಲ ಸೇರಿಕೊಂಡೇ ಪ್ರತಿ ಕೆಲಸವನ್ನು ನಿರ್ವಹಿಸುತ್ತಾರೆ. ರಾಸಾಯನಿಕ ಗೊಬ್ಬರವನ್ನು, ಕಬ್ಬನ್ನು ಮುರಿ ಮಾಡುವಾಗ ಬಳಸುತ್ತಾರೆ. ಕೆಲವೊಮ್ಮೆ ಕಬ್ಬು ಇಳುವರಿ ಬಂದರೆ ಲಾಭವು ಬರಬಹುದು; ಇಳುವರಿ ಬರದೆ ನಷ್ಟವೂ ಆಗಬಹುದು. ಇಲ್ಲಿ ಜನಜನಿತವಾಗಿರುವ "ಮಂಡಿ ಉದ್ದ ಕಬ್ಬು, ಎದೆ ಉದ್ದ ಸಾಲ"[೧೬] ಎಂಬ ಗಾದೆಯೇ ಇದ್ದು ಬರುವ ಲಾಭನಷ್ಟದ ಅರಿವನ್ನು ಮೂಡಿಸುತ್ತದೆ. ಒಟ್ಟಾರೆಯಾಗಿ ಜಿಲ್ಲೆಯ ಶೇಕಡ ೪ ರಿಂದ ೫ ರಷ್ಟು ಗಂಗಾಮತಸ್ಥರ ಆರ್ಥಿಕ ಮೂಲಗಳಲ್ಲಿ, ಕಬ್ಬು ಕೂಡ ಒಂದು ಬೆಳೆಯಾಗಿದೆ.

## ಭತ್ತ

ಮಂಡ್ಯ ಜಿಲ್ಲೆಯಲ್ಲಿ ಕಬ್ಬನ್ನು ಬಿಟ್ಟರೆ, ಹೆಚ್ಚಿನ ಜನರು ಬೆಳೆಯುವುದು ಭತ್ತವನ್ನ. ಗಂಗಾಮತಸ್ಥರು ತಮಗೆ ಇರುವ ಅಲ್ಪ ಜಮೀನಿನಲ್ಲಿಯೆ ನೀರಾವರಿಯನ್ನ ಆಧರಿಸಿ ಭತ್ತವನ್ನು ಬೆಳೆಯುತ್ತಾರೆ. ಶೇಕಡ ೧೨ ರಿಂದ ೧೫ ರಷ್ಟು ಜನರು ಭತ್ತವನ್ನು ಬೆಳೆಯುತ್ತಾರೆ. ೧೦ ಗುಂಟೆಯಿಂದ ೧ ಎಕರೆಯವರೆಗಿನ ಜಮೀನಿನಲ್ಲಿ ಭತ್ತವನ್ನು ಹಾಕುತ್ತಾರೆ. ಈ. ಗದ್ದೆಯ ಕೆಲಸಗಳನ್ನು ಅದೇ ಸಮೂದಾಯದವರು ಒಟ್ಟುಗೂಡಿ ಮಾಡುತ್ತಾರೆ. ಭತ್ತದ ನಾಟಿಯಿಂದ ಹಿಡಿದು, ಕೂಯ್ಲಿನವರೆಗೂ ಹೆಂಗಸರೆ ದುಡಿಯುತ್ತಾರೆ. "ವ್ಯವಸಾಯ ಕ್ಷೇತ್ರದಲ್ಲಿ ಸ್ತ್ರೀ ಮುಖ್ಯವೋ, ಪುರುಷ ಮುಖ್ಯವೋ ಎಂಬ ಪ್ರಶ್ನೆಯೊಂದಿದೆ. ಮಾನವ ಶಾಸ್ತ್ರಜ್ಞರ ಪ್ರಕಾರ ವ್ಯವಸಾಯದ ಪ್ರಾಚೀನ ಶಿಲ್ಪಿಗಳು ಸ್ತ್ರೀಯರೇ. "The First cultivators were Women" ಎಂದು ಮಾನವಶಾಸ್ತ್ರಜ್ಞ ರಾಲ್ಫ್ ಎಲ್. ಬೀಲ್ಸ್ ಹೇಳುತ್ತಾನೆ."[೧೭]

ಕಡಿಮೆ ಭೂಮಿಯನ್ನ ಹೊಂದಿದವರಾದುದ್ದರಿಂದ ಆ ಕುಟುಂಬದವರ ಭತ್ತದ ಗದ್ದೆಯ ಎಲ್ಲ ಕೆಲಸವನ್ನು ಮಾಡುತ್ತಾರೆ. ಒಂದು ಎಕರೆ ಜಮೀನಿನಲ್ಲಿ ಹತ್ತು ಕ್ವಿಂಟಾಲ್ ಭತ್ತವನ್ನು ಸಾಮಾನ್ಯವಾಗಿ ಬೆಳೆಯುತ್ತಾರೆ. ಆದರೆ ಹೆಚ್ಚಿನ ಜನರಿಗೆ ೧೦ ಗುಂಟೆಯಿಂದ ೨೦ ಗುಂಟೆಯ ಜಮೀನಿನ ಹೊಂದಿದವರಾದ್ದರಿಂದ ವರ್ಷದಲ್ಲಿ ಆರು ತಿಂಗಳಿಗೆ ಆಗುವಷ್ಟು ಭತ್ತ ಬೆಳೆದುಕೊಳ್ಳುತ್ತೇವೆ ಎಂದು ಹೇಳುತ್ತಾರೆ. ಇನ್ನು ಉಳಿದ ಆರು ತಿಂಗಳಿಗೆ ಕೂಲಿಯೇ ಗಟ್ಟಿ. ಹೀಗೆ ಇವರ ಆರ್ಥಿಕ ಸ್ಥಾನ-ಮಾನವನ್ನು ನಿರ್ಧರಿಸುವಲ್ಲಿ ಭತ್ತದ ಬೆಳೆಯು ಸಹ ಒಂದಾಗಿದೆ ಎಂದು ಹೇಳಬಹುದು.

**ರಾಗಿ**

ಮಂಡ್ಯ ಜಿಲ್ಲೆಯಲ್ಲಿ ಭತ್ತ, ಕಬ್ಬಿನ ಬೆಳೆಗಳನ್ನ ಬಿಟ್ಟರೆ, ಕಂಡು ಬರುವ ಮತ್ತೊಂದು ಬೆಳೆಯೆಂದರೆ ರಾಗಿಯಾಗಿದೆ. ಗಂಗಾಮತಸ್ಥರು ತಮಗೆ ಇರುವ ಅಲ್ಪ ಪ್ರಮಾಣದ ಖುಷ್ಕಿ ಜಮೀನಿನಲ್ಲಿ ರಾಗಿ ಬೆಳೆಯನ್ನ ಬೆಳೆಯುತ್ತಾರೆ. ೧೦ ರಿಂದ ೨೦ ಗುಂಟೆಯಷ್ಟು ಖುಷ್ಕಿ ಜಮೀನನ್ನ ಸಾಮಾನ್ಯವಾಗಿ ಶೇಕಡ ೧೫ ರಿಂದ ೨೦ ರಷ್ಟು ಜನರು ಹೊಂದಿರುವುದು ಅಧ್ಯಯನದ ಸಂದರ್ಭದಲ್ಲಿ ಕಂಡುಬಂದಿದೆ. ಚಿಕ್ಕ ಚಿಕ್ಕ ಪಾತಿಗಳನ್ನ ಮಾಡಿ ಮಳೆಗಾಲದಲ್ಲಿ, ಮಳೆಯಾದ ಮಾರನೆ ದಿವಸ ನಾಟಿಯನ್ನ ಮಾಡುತ್ತಾರೆ. ಇವರು ರಾಗಿ ಬೆಳೆಯನ್ನ ಮಳೆಯಾಶ್ರಯದಿಂದಲೇ ಬೆಳೆಯುತ್ತಾರೆ. ಮಳೆಯಾಗದ ಸಂದರ್ಭದಲ್ಲಿ ಗುಂಡಿಯಿಂದ ಬಿಂದಿಗೆ ಅಥವಾ ಕುಂಭಗಳಿಂದ ನೀರು ಉಯ್ಯುವುದುಂಟು. ಇತ್ತೀಚಿಗೆ ಚಿಕ್ಕ ಡೀಸೆಲ್ ಮೋಟಾರ್‌ನಿಂದ ನೀರು ಹೊಡೆಯುವುದುಂಟು. ಸಾಮಾನ್ಯವಾಗಿ ತಾವೇ ಸಾಕಿರುವ ಜಾನುವಾರುಗಳ ಗೊಬ್ಬರವನ್ನ ಹಾಕಿ ಇವರು ೧೦ ಗುಂಟೆ ಜಮೀನಿನಲ್ಲಿ ೩ ರಿಂದ ೪ ಕ್ವಿಂಟಾಲ್ ರಾಗಿಯನ್ನ ಬೆಳೆಯುತ್ತಾರೆ. ಇದರಿಂದಾಗಿ ಜೀವನ ನಿರ್ವಹಣೆಗೆ ತಕ್ಕ ಮಟ್ಟಿಗೆ ಅಲ್ಪ ಪ್ರಮಾಣದ ಸಹಾಯವಾಗುತ್ತದೆ. ರಾಗಿ ಬೆಳೆಯುವುದಕ್ಕೆ ಎಲ್ಲ ತರಹದ ಕೆಲಸವನ್ನು ತಮ್ಮ ಕುಟುಂಬದವರೇ ನಿರ್ವಹಿಸಿಕೊಳ್ಳುತ್ತಾರೆ. ರಾಗಿಯ ಹುಲ್ಲನ್ನ ತಾವು ಸಾಕುವ ಜಾನುವಾರುಗಳಿಗೆ ಬಳಸಿಕೊಳ್ಳುತ್ತಾರೆ.

**ಒಕ್ಕಣೆ ಮಾಡುವುದು**

ಒಕ್ಕಣೆ ಮಾಡುವುದಕ್ಕೆ ಮೊದಲು 'ಕಳ'ವನ್ನು ಮಾಡುತ್ತಾರೆ. ಇವರು ಅಲ್ಪ-ಸ್ವಲ್ಪ ಬೆಳೆಯನ್ನು ಬೆಳೆಯುವುದರಿಂದಾಗಿ ನಾಲ್ಕೈದು ಕುಟುಂಬದವರು ಸೇರಿ ಒಂದೇ ಕಡೆ ಕಳವನ್ನು ಮಾಡುತ್ತಾರೆ. 'ಕಳ' ಅಂದರೆ ಜಮೀನಿನಲ್ಲಿ ಸಮತಟ್ಟಾದ ಜಾಗವನ್ನು ಆಯ್ಕೆ ಮಾಡಿಕೊಂಡು

ಮಣ್ಣನ್ನು ತೆಗೆದು ನೀರು ಹಾಕಿ ದನಗಳ ಕಾಲುಗಳಿಂದ ಚೆನ್ನಾಗಿ ತುಳಿಸಿ ಸೆಗಣಿಯಿಂದ ಸಾರಿಸುತ್ತಾರೆ. ಹೀಗೆ ಸಾರಿಸಿದ ಮೇಲೆ ಈ ಕಳಕ್ಕೆ ಮೆದೆ ಹಾಕಿದ ರಾಗಿಯನ್ನು ಒತ್ತೊತ್ತಾಗಿ ಜೋಡಿಸಿ, ಬಿದಿರುಗಳಿಂದ ಸ್ತ್ರೀ ಪುರುಷರು ಸೇರಿಕೊಂಡು ಬಡಿದು ರಾಗಿಯನ್ನು ಬಿಡಿಸುತ್ತಾರೆ. ಅನಂತರ ಹುಲ್ಲಿನಲ್ಲಿ ಕೆಲವು ರಾಗಿ ತೆನೆಗಳು ಉಳಿದುಕೊಂಡರೆ ಅದನ್ನು ಹೆಣೆ ಕಟ್ಟುತ್ತಾರೆ. ಹೆಣೆ ಎಂದರೆ ದನಗಳನ್ನು ಅಥವಾ ಎತ್ತುಗಳನ್ನು ಒಟ್ಟಾಗಿ ಕಟ್ಟಿ ತುಳಿಸುವುದು.

ಭತ್ತವನ್ನು ಬಡಿದು, ಹುಲ್ಲಿನಲ್ಲಿ ಉಳಿದ ಭತ್ತದ ಕಾಳನ್ನು ಉದುರಿಸಲು ದನಗಳಿಗೆ ರೋಣಿನ ಕಲ್ಲನ್ನು ಕಟ್ಟಿ ಮೇಟಿಯ ಸುತ್ತ ಸುತ್ತಿಸುತ್ತಾರೆ. ಇದರಿಂದ ಹುಲ್ಲಿನಲ್ಲಿ ಉಳಿದಿದರುವ ಭತ್ತದ ಕಾಳುಗಳು ಉದುರುತ್ತವೆ. ಇದಾದ ನಂತರ ಹುಲ್ಲನ್ನು ಒದರಿ ಹುಲ್ಲಿನ ಕಂತೆಯನ್ನು ಕಟ್ಟುತ್ತಾರೆ. ರಾಗಿಯನ್ನು ಅಥವಾ ಭತ್ತದ ಒಕ್ಕಣೆಯಾದ ನಂತರ ಒಂದು ಕಡೆ ರಾಶಿ ಹಾಕಿ ಪೂಜಿಸಿದ ನಂತರವೇ ಮನೆಗೆ ತೆಗೆದುಕೊಂಡು ಹೋಗುತ್ತಾರೆ. ಮನೆಯಲ್ಲಿರುವ ಕಣಜಕ್ಕೆ ಧಾನ್ಯವನ್ನು ತುಂಬುತ್ತಾರೆ. ಇಲ್ಲವೆ ದೊಡ್ಡ ದೊಡ್ಡ ಗುಡಾಣಗಳಿಗೆ ಧಾನ್ಯವನ್ನು ತುಂಬಿಡುತ್ತಾರೆ.



**ಸುಣ್ಣ ಸುಡುವುದು**

ಪ್ರಾಚೀನಕಾಲದಿಂದ-ಇಂದಿನವರೆವಿಗೂ ಮಂಡ್ಯ ಜಿಲ್ಲೆಯಲ್ಲಿ ಸುಣ್ಣ ಸುಡುವ, ಸುಣ್ಣದ ವ್ಯಾಪಾರ ಮಾಡುವ ಪದ್ಧತಿಯನ್ನು ಉಳಿಸಿಕೊಂಡಿರುವವರೆಂದರೆ ಗಂಗಾಮತಸ್ಥರೇ. ಸುಣ್ಣ ಸುಡುವ ಸಂಪ್ರದಾಯ ಇವರಿಗೆ ಹೇಗೆ ಬಂತೆಂಬುದನ್ನ ವಕ್ತೃ ಪೀಚಯ್ಯ ಎಂಬುವವರು ಹೇಳುವಂತೆ "ಹಿಂದೆ ಇದ್ದ ಗುರುಕುಲ ಪದ್ಧತಿಯ ಶಾಲೆಯಲ್ಲಿ ಮೀನು ಹಿಡಿಯುವ ಬೆಸ್ತರ ಹುಡುಗನು ಓದುತ್ತಿದ್ದನಂತೆ. ಗುರುಗಳು ತರಗತಿಯಲ್ಲಿ ಪ್ರಶ್ನೆಯನ್ನು ಕೇಳಿದರಂತೆ. ಯಾವ ವಿದ್ಯಾರ್ಥಿಯು ಪ್ರಶ್ನೆಗೆ ಉತ್ತರಿಸದಿದ್ದ ಸಂದರ್ಭದಲ್ಲಿ ಆ ಬೆಸ್ತರ ಹುಡುಗ ಗುರುಗಳ ಪ್ರಶ್ನೆಗೆ ಉತ್ತರ ಕೊಟ್ಟನಂತೆ. ಅವನ ಜ್ಞಾನವನ್ನ ಮೆಚ್ಚಿ ಶಿವ ಪ್ರತ್ಯಕ್ಷನಾದನಂತೆ. ವಿದ್ಯಾರ್ಥಿಯನ್ನ ಕುರಿತು ನಿನಗೆ ಬೇಕಾದ ವರ ಕೇಳು ಎಂದಾಗ ಬೆಸ್ತರ ಹುಡುಗ –

"ಕಲ್ಲರಳಿ ಹೂವಾಗಿ
ಎಲ್ಲರಿಗೂ ಬೇಕಾಗಿ
ಮಲ್ಲಿಕಾರ್ಜುನ ಶಿಖರಕ್ಕೆ ಬೆಳಕಾಗುವ"

– ವರ ಕೊಡು ಎಂದನಂತೆ. ಶಿವನು ಆಶೀರ್ವದಿಸಿ ಹೋದನಂತೆ. ಇದರ ಅರ್ಥ ಸುಣ್ಣ. ಆದುದ್ದರಿಂದ ಗಂಗಾಮತಸ್ಥರೇ ಸುಣ್ಣವನ್ನು ಸುಡುತ್ತಾರೆ"[೧೮] ಎಂದು ಹೇಳುತ್ತಾರೆ. ಈ ಪದ್ಧತಿಯನ್ನು ಜಿಲ್ಲೆಯಲ್ಲಿ ಅಲ್ಲಲ್ಲಿ ಕಂಡು ಬಂದರೂ, ಅತ್ಯಂತ ಹೆಚ್ಚಾಗಿ ಮಳವಳ್ಳಿ,

ಕುಲುಮೆದೊಡ್ಡಿ, ಸುಣ್ಣದ ದೊಡ್ಡಿ, ಕಲ್ಕುಣಿ, ದೊಡ್ಡರಸಿನಕೆರೆ, ಕೆನ್ನಾಳು, ಉಕ್ಕಡ, ಗಂಜಾಂ, ಆಲಂಬಾಡಿ, ಹಕ್ಕಿ ಹೆಬ್ಬಾಳ, ಬಾಳೇ ಹೊನ್ನಿಗ ಇನ್ನೂ ಮುಂತಾದ ಕಡೆಗಳಲ್ಲಿ ಸುಣ್ಣ ಸುಡುವ ವೃತ್ತಿಯನ್ನ ಅವಲಂಬಿಸಿದ್ದಾರೆ. ಸುಣ್ಣದ ಕಲ್ಲುಗಳನ್ನು ಸಿಗುವ ಜಾಗದಿಂದ ತಂದು ದಾಸ್ತಾನು ಮಾಡಿಕೊಳ್ಳುತ್ತಾರೆ. ಒಂದೆರಡು ದಿನ ಕಲ್ಲನ್ನು ಚೆನ್ನಾಗಿ ನೆನೆಸುತ್ತಾರೆ. ನಂತರ ಮಣ್ಣಿನಿಂದ ಕಟ್ಟಿದ ಒಲೆಯಲ್ಲಿ ಅರ್ಧಕ್ಕಿಂತ ಕೆಳಗೆ ಕಬ್ಬಿಣದ ಜಾಲರಿ ಹಾಕಿಡುತ್ತಾರೆ. ಜಾಲರಿ ಮೇಲೆ ಸುಣ್ಣದ ಕಲ್ಲು ಎರಡು ಅಥವಾ ಮೂರು ಕುಕ್ಕೆ ಹಾಕಿ ಕೆಳಗಿನಿಂದ ಬೆಂಕಿ ಕೊಡುತ್ತಾರೆ. ಕಲ್ಲು ಅರಳಿ ಸುಣ್ಣವಾಗುತ್ತದೆ. ಸುಣ್ಣವಾದ ನಂತರ ಮೂಟೆ ಅಥವಾ ಕುಕ್ಕೆಗಳಲ್ಲಿ ತುಂಬಿಕೊಂಡು ಮಾರುತ್ತಾರೆ. ಮಳೆಗಾಲದಲ್ಲಿ ಸುಣ್ಣ ಸುಡುವ ಕೆಲಸವಾಗುವುದಿಲ್ಲ. ಮಳೆ ಬಿಟ್ಟ ನಂತರ ಬೇಸಿಗೆಯ ಕಾಲದಲ್ಲಿ ಮಾತ್ರ ಈ ಕೆಲಸ ಹಿಡಿಯುತ್ತಾರೆ. ಇದಕ್ಕೆ ಕಟ್ಟಿಗೆಯ ಆಸರೆ ಇರುವ ಜಾಗದಲ್ಲಿ ಸುಣ್ಣದ ಒಲೆಗಳನ್ನು ಕಟ್ಟಿರುತ್ತಾರೆ. ಹೀಗೆ ಸುಟ್ಟ ಸುಣ್ಣವನ್ನು ಸಂತೆಗಳಲ್ಲಿ ಉದಾಹರಣೆಗೆ ಭಾನುವಾರದ ಹಲಗೂರಿನ ಸಂತೆ, ಶುಕ್ರವಾರದ ಮಳವಳ್ಳಿ ಸಂತೆ, ಶನಿವಾರದ ಕಿರುಗಾವಲಿನ ಸಂತೆ, ಗುರುವಾರದ ಮಂಡ್ಯದ ಸಂತೆ, ಇನ್ನಿತರ ಸಂತೆಗೆ ಹೋಗಿ ಮಾರಾಟ ಮಾಡುತ್ತಾರೆ. ಇಷ್ಟೇ ಅಲ್ಲದೆ ಬೇರೆ ಬೇರೆ ಊರಿಗೆ ಕುಕ್ಕೆಯಲ್ಲಿ ಸುಣ್ಣವನ್ನು ಹೊತ್ತುಕೊಂಡು ಮಾರಾಟ ಮಾಡುವುದುಂಟು. ಅಳತೆಗೆ ಸೇರಿನ ಡಬ್ಬಿಯನ್ನ ಇಟ್ಟುಕೊಂಡಿರುತ್ತಾರೆ. ಪ್ರತಿ ಸೇರಿಗೆ ಸಾಮಾನ್ಯವಾಗಿ ಹತ್ತು ರೂ.ನಿಂದ ಹನ್ನೆರಡು ರೂ.ಗಳವರೆಗೆ ಮಾರಾಟ ಮಾಡುವುದುಂಟು.

ಸುಣ್ಣದ ಮಾರಾಟದಿಂದ ಜೀವನ ಸಾಗಿಸುವವರ ಸಂಖ್ಯೆ ಶೇಕಡ ೬ ರಿಂದ ೮ರಷ್ಟು ಜನರು ಮಾತ್ರ. ಸುಣ್ಣದ ಮಾರಾಟದಿಂದ ಕೆಲವು ಬಾರಿ ಅಲ್ಪ ಪ್ರಮಾಣದ ಲಾಭ ಬಂದರೆ, ಕೆಲವು ಸಂದರ್ಭದಲ್ಲಿ ಕೂಲಿಗೆ ಸಿಗುವ ಹಣವು ಸಿಗದ ಸಂದರ್ಭವನ್ನು ಕಾಣಬಹುದಾಗಿದೆ. ಈ ವೃತ್ತಿ ವರ್ಷದಲ್ಲಿ ಕೇವಲ ಐದರಿಂದ ಆರು ತಿಂಗಳುಗಳ ಕಾಲ ಅವಲಂಬಿಸಿರುತ್ತಾರೆ. ಕಾರಣವೆಂದರೆ ಉಳಿದಂತೆ ಮಳೆಗಾಲದ ಅವಧಿಯಲ್ಲಿ ಸುಣ್ಣ ಸುಡುವುದಕ್ಕೆ ಸಾಧ್ಯವಾಗುವುದಿಲ್ಲ. ಆದರೆ ಆ ಆರು ತಿಂಗಳ ಅವಧಿಯಲ್ಲೇ ಸಾಧ್ಯವಾದಷ್ಟು ಸುಣ್ಣವನ್ನು ಸುಟ್ಟು ಒಂದು ಕಡೆ ಶೇಖರಿಸಿಕೊಂಡಿರುತ್ತಾರೆ. ಕೆಲವೊಂದು ಸಂದರ್ಭದಲ್ಲಿ ಮಧ್ಯವರ್ತಿಗಳಿಗೂ ಮಾರಾಟ ಮಾಡುವುದುಂಟು. ಕಾರಣವೆಂದರೆ ಹಣದ ಅಗತ್ಯತೆ ಇರುವುದರಿಂದ ಮಧ್ಯವರ್ತಿಗಳು ಕೇಳಿದಷ್ಟು ಬೆಲೆಗೆ ಮಾರಾಟ ಮಾಡುತ್ತಾರೆ. ಇದರಿಂದ ಮಧ್ಯವರ್ತಿಗಳಿಗೆ ಹೆಚ್ಚಿನ ಲಾಭ ಸಿಗುವುದುಂಟು. ಗಂಗಾಮತಸ್ಥರಲ್ಲಿ ಹೆಚ್ಚಿನ ಜನ ಅಶಿಕ್ಷಿತರಾಗಿರುವುದರಿಂದ ಪ್ರಸ್ತುತ ಸಂದರ್ಭದ ಮಾರುಕಟ್ಟೆಯ ಬೆಲೆಯು ತಿಳಿಯದ ಕಾರಣದಿಂದಾಗಿ, ಅವರುಗಳು ಕೇಳಿದ ಬೆಲೆಗೆ ಮಾರಾಟ ಮಾಡುತ್ತಾರೆ.

ಗಂಗಾಮತಸ್ಥರ ಆರ್ಥಿಕ ಸ್ಥಿತಿ–ಗತಿಯು ಸುಣ್ಣದ ಮಾರಾಟದಿಂದಲೂ ಸಹ ನಿರ್ಧಾರವಾಗುತ್ತದೆ. ಬೇರೆ ಬೇರೆ ಕಸುಬುಗಳ ಜೊತೆಗೆ ಈ ಪದ್ಧತಿಯನ್ನು ಇವರು ರೂಢಿಸಿಕೊಂಡಿರುತ್ತಾರೆ. ಕೆಲವರು ತಮ್ಮ ಕೆಲಸಗಳ ಜೊತೆಗೆ ಬಿಡುವಿನ ವೇಳೆಯನ್ನು ಬಳಸಿಕೊಂಡು ಸುಣ್ಣ ಸುಡುವುದನ್ನ ಮಾಡುತ್ತಾರೆ. ಇದರೊಟ್ಟೊಟ್ಟಿಗೆ ಕೂಲಿಯನ್ನು ಮಾಡುತ್ತಾರೆ. ಕೆಲವರು ತಮ್ಮ ಮನೆಯ ಹಿಂದಿನ ಸ್ಥಳದಲ್ಲಿ ಗೂಡುಗಳನ್ನು ಹಾಕಿಕೊಂಡಿದ್ದರೆ, ಇನ್ನು ಕೆಲವರು ಸ್ವಲ್ಪ ದೂರವಿರುವ ತಮ್ಮ ಜಮೀನಿನಲ್ಲಿ ಗೂಡುಗಳನ್ನು ಹಾಕಿಕೊಂಡಿರುತ್ತಾರೆ. ಒಟ್ಟಾರೆಯಾಗಿ ಗಂಗಾಮತಸ್ಥರ ಜೀವನ ನಿರ್ವಹಣೆಯ ಪಾರಂಪರಿಕ ವೃತ್ತಿಗಳಲ್ಲಿ, ಸುಣ್ಣ ಸುಡುವ ಪದ್ಧತಿಯು ಒಂದಾಗಿದೆ.

## ಮೀನುಗಾರಿಕೆ

ಗಂಗಾಮತಸ್ಥರ ಪಾರಂಪರಿಕ ವೃತ್ತಿಗಳಲ್ಲಿ ಪ್ರಮುಖವಾದದ್ದು ಮೀನುಗಾರಿಕೆ. ನಮ್ಮ ಕುಲದೇವತೆಯಾದ ಗಂಗೆಯಲ್ಲಿ ಆಶ್ರಿತವಾದ ಮೀನನ್ನು ಹಿಡಿಯುವುದು ನಮ್ಮ ವೃತ್ತಿ ಎಂದು ಹೇಳುತ್ತಾರೆ. ಏಕೆಂದರೆ ನನ್ನ ಕುಲದ ಮಕ್ಕಳು ಚೆನ್ನಾಗಿರಲೆಂದು ಗಂಗಾಮಾತೆ ತನ್ನೊಳಗೆ ಮೀನುಗಳನ್ನು ಇರಿಸಿಕೊಂಡು ಸಾಕುತ್ತಿದ್ದಾಳೆ ಎಂಬುದು ಇವರ ನಂಬಿಕೆಯಾಗಿದೆ. ಇವರಿಗೆ "ಹಿಂದೆ ಮೀನು ಹಿಡಿಯುವುದು ಮತ್ತು ದೋಣಿ ನಡೆಸುವುದು ಮಾತ್ರ ಪ್ರಧಾನ ಕಸುಬುಗಳಾಗಿದ್ದವು".[೧೯] ಆದರೆ ಇಂದೂ ಸಹ ಮೀನುಗಾರಿಕೆಯನ್ನೇ ಪ್ರಧಾನ ಉದ್ಯೋಗವನ್ನಾಗಿ ಅವಲಂಬಿಸಿಕೊಂಡಿದ್ದಾರೆ.

ಮೀನುಗಾರಿಕೆಗೆ ಮುಖ್ಯವಾಗಿ ಬೇಕಾದುದು ತೆಪ್ಪ ಮತ್ತು ಬಲೆ. ತೆಪ್ಪವನ್ನು ಅವರೇ ತಯಾರಿಸಿಕೊಳ್ಳುತ್ತಾರೆ. ಅದಕ್ಕೆ ಬೇಕಾಗುವ ವಸ್ತುಗಳನ್ನು ತಂದು ನಾಲ್ಕಾರು ಮಂದಿ ಸೇರಿಕೊಂಡು ತೆಪ್ಪವನ್ನು ತಯಾರಿಸುತ್ತಾರೆ. ಬಲೆಯನ್ನು ಸಹ ಅದಕ್ಕೆ ಬೇಕಾಗುವ ದಾರವನ್ನು ತಂದು ಹೆಣೆಯುತ್ತಾರೆ. ಮೀನು ಹಿಡಿಯುವುದಕ್ಕೆ ಮೊದಲು "ಗಂಗೆ–ತಾಯಿ, ನಾವು ಬಡವರು ನಿನ್ನನ್ನು ನಂಬಿಯೇ ನಾವು ಬದುಕುವವರು. ನಮಗೆ ಮೀನು ಸಂಪತ್ತು ಕೊಡು"[೨೦] ಎಂದು ಪ್ರಾರ್ಥಿಸುತ್ತಾರೆ. ಹರಿಯುವ ಹೊಳೆಯಲ್ಲಿ ಮೀನನ್ನು ಗಾಳಗಳಿಂದ ಹಿಡಿಯುತ್ತಾರೆ. ಬೀಸು ಬಲೆಯನ್ನು ಹಾಕಿ ಮೀನುಗಳನ್ನು ಹೊಳೆಯಲ್ಲಿ ಹಿಡಿಯುವುದುಂಟು. ಪ್ರತಿದಿನದ ಸಂಜೆಯ ಸಮಯದಲ್ಲಿ ಬಲೆಯನ್ನು ಕೆರೆ ಅಥವಾ ನದಿಯಲ್ಲಿ ಬಿಟ್ಟು ಬೆಳಗಿನ ಸಮಯದಲ್ಲಿ ಬಲೆಯನ್ನು ಎತ್ತುವ ಕಾರ್ಯ ನಡೆಯುತ್ತದೆ. ಬೆಳಗ್ಗೆ ೫ ರಿಂದ ೮ ಗಂಟೆಯವರೆಗೆ ಮಾತ್ರ ಮೀನಿನ ಶಿಕಾರಿ

ಮಾಡುತ್ತಾರೆ. ಆದರೆ ಗಾಳದಿಂದ ಮೀನುಗಳನ್ನ ಹಿಡಿಯುವವರು ಬೆಳಗ್ಗೆ ೮ ರಿಂದ ಸಂಜೆ ೬ ಗಂಟೆಯವರೆವಿಗೂ ಹಿಡಿಯುತ್ತಾರೆ.

ಗಂಗಾಮತಸ್ಥರ ಮೂಲದ ನೆಲೆಯನ್ನು ಗುರುತಿಸುವುದಾದಲ್ಲಿ ಅವರು ನದಿಗಳ ತೀರ ಪ್ರದೇಶಗಳ ಅಥವಾ ಕೆರೆ ಕಟ್ಟೆಗಳ ಸಮೀಪಗಳಲ್ಲಿ ಹೆಚ್ಚಾಗಿ ಇವರು ನೆಲೆಸುತ್ತಾರೆ. ಈ ಜನಾಂಗದ ಜನರು ಹಿಂದೆ ಬೇರೆ ಯಾವುದೇ ಉದ್ಯೋಗವನ್ನು ಮಾಡುತ್ತಿರಲಿಲ್ಲ. ಇವರ ಮೂಲ ಕಸುಬು ಕೆರೆಕಟ್ಟೆಗಳಲ್ಲಿ ನದಿಗಳಲ್ಲಿ ಮೀನುಗಳ ಬೇಟೆ ಅಥವಾ ಶಿಕಾರಿಯನ್ನು ಮಾಡುವುದು ಮಾತ್ರ, ಕಾರಣ ಬೇರೆ ಕಸುಬು ಅಥವಾ ಉದ್ಯೋಗವನ್ನು ಮಾಡಿದರೆ ಅದು ಪಾಪದ ಕೆಲಸವೆಂದು ಪರಿಗಣಿಸುತ್ತಿದ್ದರು. ಆದ್ದರಿಂದ ವ್ಯವಸಾಯವನ್ನಾಗಲೀ, ಪಶುಪಾಲನೆಯನ್ನಾಗಲಿ ಇವರು ಮಾಡುತ್ತಿರಲಿಲ್ಲ. ಹಾಗಾಗಿ ಈ ಜನಾಂಗದ ಪ್ರಮುಖ ವೃತ್ತಿ ಮೀನುಗಳ ಶಿಕಾರಿ ಮಾತ್ರ ಆಗಿತ್ತು. ಇವರು ಒಂದೇ ಕಡೆ ಶಾಶ್ವತವಾಗಿ ನೆಲಸದೇ ಅಲೆಮಾರಿಗಳಂತೆ ನದಿ ತೀರ ಪ್ರದೇಶಗಳ ಒಂದು ಕಡೆಯಿಂದ ಮತ್ತೊಂದು ಕಡೆಗೆ, ಕೆರೆಕಟ್ಟೆಗಳ ಕಡೆಗೆ ಮೀನುಗಳ ಬೇಟೆಗಾಗಿ ಇಡೀ ವರ್ಷವೆಲ್ಲ ತಿರುಗಾಡುತ್ತಾರೆ. ಸರ್ಕಾರವು ಇವರುಗಳಿಗೆ ಕೊಡುವ ಸೌಲಭ್ಯಗಳನ್ನು ಇತರ ನಾಗರಿಕ ಸಮಾಜದವರಿಗೆ ಮಾರಾಟ ಮಾಡಿ ಯಾವಾಗಲೂ ಅಲೆಮಾರಿಗಳಾಗಿ ಒಂದು ಕಾಲಘಟ್ಟದಲ್ಲಿ ಜೀವನ ಸಾಗಿಸುತ್ತಿದ್ದರು. ಆದರೆ ಇಂದಿನ ಮಟ್ಟಿಗೆ ಬಹಳವಾಗಿ ಸುಧಾರಿಸಿರುವುದನ್ನು ಗಮನಿಸಬಹುದಾಗಿದೆ. ತಮ್ಮ ಮೂಲವೃತ್ತಿಯೊಂದಿಗೆ ಬೇಸಾಯ ಮತ್ತು ಪಶುಪಾಲನೆಯಲ್ಲಿ ತೊಡಗಿರುತ್ತಾರೆ. ತಮ್ಮದೇ ಆದ ಮನೆ-ಬೇಸಾಯದ ಭೂಮಿ, ದನಕರುಗಳು, ಕೋಳಿ, ಕುರಿ, ಮೇಕೆ ಮುಂತಾದವುಗಳನ್ನು ಹೊಂದಿದ್ದಾರೆ. ಇತರ ನಾಗರೀಕ ಸಮಾಜದಂತೆ ಈ ಜನಾಂಗದವರು ಇರುವುದನ್ನು ಕಾಣಬಹುದು. ಆದರೆ ಇವರು ಮೂಲವೃತ್ತಿಯಾದ ಮೀನುಗಾರಿಕೆಯನ್ನು ಮಾತ್ರ ಬಿಟ್ಟಿಲ್ಲ.

ಗ್ರಾಮಪಂಚಾಯಿತಿ, ಪುರಸಭೆ, ಅಥವಾ ನಗರಸಭೆ ವ್ಯಾಪ್ತಿಯಲ್ಲಿ ಬರುವ ಕೆರೆಗಳನ್ನ ಗುತ್ತಿಗೆ ಆಧಾರದ ಮೇಲೆ ತೆಗೆದುಕೊಳ್ಳುತ್ತಾರೆ. ಇವುಗಳು ಮಳೆಯಾಶ್ರಿತ ಕೆರೆಗಳಾಗಿರಬಹುದು ಇಲ್ಲವೇ ಕಾವೇರಿ ಜಲಾನಯನ ಪ್ರದೇಶದ ಕೆರೆಗಳಾಗಿರಬಹುದು. ಒಂದು ವರ್ಷದಿಂದ ಐದು ವರ್ಷದವರೆಗೆ ಗುತ್ತಿಗೆ ಆಧಾರದ ಮೇಲೆ ಮೀನುಗಾರಿಕೆಗಾಗಿ ಕೆರೆಗಳನ್ನು ತೆಗೆದುಕೊಳ್ಳುತ್ತಾರೆ. ಈ ಕೆರೆಗಳಿಗೆ ಮೀನಿನ ಮರಿಗಳನ್ನ ಸಾಮಾನ್ಯವಾಗಿ ಜೂನ್-ಜುಲೈ ತಿಂಗಳುಗಳಲ್ಲಿ ಅಂದರೆ ಮಳೆಗಾಲದಲ್ಲಿ ಬಿಡುತ್ತಾರೆ. ಅದಲ್ಲದೆ ಜೂನ್ ತಿಂಗಳಿಂದ ಅಕ್ಟೋಬರ್ ತಿಂಗಳವರೆಗೆ ಮೀನನ್ನು ಹಿಡಿಯುವುದಿಲ್ಲ. ಕಾರಣವೆಂದರೆ ಈ ಅವಧಿಯಲ್ಲಿ ಮೀನಿನ ವಂಶಾಭಿವೃದ್ಧಿಯಾಗಲೆಂಬುದಾಗಿ. ಮೀನುಗಳು ಅಭಿವೃದ್ಧಿ ಹೊಂದಿದ ನಂತರದಲ್ಲಿ, ನವೆಂಬರ್ ಅಥವಾ ಡಿಸೆಂಬರ್ ತಿಂಗಳಿಂದ

ಮೀನುಗಳನ್ನು ಹಿಡಿಯುವುದಕ್ಕೆ ಪ್ರಾರಂಭಿಸುತ್ತಾರೆ. ಮೀನುಗಳ ತೂಕ ಒಂದು ಕೆ.ಜಿ. ಯಿಂದ ಹತ್ತು ಕೆ.ಜಿ.ಯವರೆವಿಗೂ ಬೆಳವಣಿಗೆಯನ್ನು ಹೊಂದಿರುತ್ತವೆ. ಹೀಗೆ ಬೆಳವಣಿಗೆ ಹೊಂದಿರುವ ಮೀನುಗಳನ್ನು ಹಿಡಿಯುವರಿಗೆ ಕೆ.ಜಿ.ಗೆ ಒಂದು ರೂಪಾಯಿಯಿಂದ ಎರಡು ರೂಪಾಯಿವರೆಗೆ ಕೆಲವರು ಕೂಲಿಯ ಹಣವಾಗಿ ಕೊಡುವುದುಂಟು. ಇನ್ನೂ ಕೆಲವರು ತಾವೇ ಮೀನುಗಳನ್ನು ಹಿಡಿದು ಮಾರಾಟ ಮಾಡುತ್ತಾರೆ.

ಕೆರೆಗಳಿಗೆ ರಾತ್ರಿಯ ವೇಳೆಯಲ್ಲಿ ದೊಡ್ಡ ದೊಡ್ಡ ಬಲೆಗಳನ್ನು ಬಿಟ್ಟಿರುತ್ತಾರೆ. ಅವುಗಳನ್ನು ಬೆಳಗ್ಗೆ ೬ ರಿಂದ ೮ ಗಂಟೆಯಷ್ಟರಲ್ಲಿ ಹೊರಗೆ ತೆಗೆದುಹಾಕುತ್ತಾರೆ. ಕೆರೆಯಲ್ಲಿ ಮೀನು ಹಿಡಿಯಲು ಪ್ರಾರಂಭಿಸಿದ ದಿನಗಳಲ್ಲಿ ಪ್ರತಿನಿತ್ಯ ೧೦೦ ಕೆ.ಜಿ.ಯಿಂದ ೩೦೦ ಕೆ.ಜಿ.ವರೆವಿಗೂ ದೊಡ್ಡ ಕೆರೆಗಳಲ್ಲಿ ಹಿಡಿಯುವುದುಂಟು. ಸಣ್ಣ ಕೆರೆಗಳಲ್ಲಿ ೨೦ ಕೆ.ಜಿ.ಯಿಂದ ೫೦ ಕೆ.ಜಿ.ಯವರೆವಿಗೂ ಮೀನುಗಳು ಸಿಗುತ್ತವೆ. ಇತ್ತೀಚಿನ ದಿನಗಳಲ್ಲಿ ಆಧುನಿಕ ಮೀನಿನ ತಳಿಗಳನ್ನು ಸಾಕುವುದರಿಂದ ಉತ್ತಮ ಬೆಲೆಯು ಸಿಗುತ್ತದೆ. ಪ್ರತಿ ಕೆ.ಜಿ.ಗೆ ೩೦ ರಿಂದ ೫೦ ರೂ.ಗಳವರೆಗೆ ಬೆಲೆ ಇರುತ್ತದೆ. ಕೆಲವರು ತಾವು ಮೀನುಗಳನ್ನು ಹಿಡಿಯುವ ಕೆರೆಯ ಸಮೀಪದಲ್ಲೆ ಮೀನುಗಳನ್ನು ಮಾರುತ್ತಾರೆ. ದೊಡ್ಡ ಪ್ರಮಾಣದಲ್ಲಿ ಮೀನನ್ನ ಹಿಡಿಯುವವರು ಸಮೀಪದ ಪಟ್ಟಣಗಳಿಗೆ ಹೋಗಿ ಮೀನಿನ ಮಾರಾಟಕ್ಕಾಗಿ ಇರುವ ಮಾರುಕಟ್ಟೆಯಲ್ಲಿ ಮಾರುತ್ತಾರೆ. ಕೆಲವರು ಸೈಕಲ್‌ಗೆ ಮಕ್ಕರಿಯನ್ನು ಕಟ್ಟಿಕೊಂಡು ಮೀನುಗಳ ಮಾರಾಟ ಮಾಡುತ್ತಾರೆ. ಹೆಂಗಸರು ಸಹ ಮಕ್ಕರಿಯಲ್ಲಿ ಮೀನುಗಳನ್ನು ಹೊತ್ತು ಮಾರುತ್ತಾರೆ. ಕೆರೆಗಳನ್ನ ಗುತ್ತಿಗೆ ಪಡೆಯದೆ ಮೀನುಗಾರಿಕೆ ಮಾಡುವರುಂಟು. ಇಂಥ ಗಂಗಾಮತಸ್ಥರು ತಮ್ಮ ಗ್ರಾಮದ ಅಥವಾ ಅಕ್ಕ-ಪಕ್ಕದ ಗ್ರಾಮಗಳ ಹೊರಗೆ ಹರಿಯುವ ಹೊಳೆಯಲ್ಲಿ, ಮೀನು ಹಿಡಿದು ಮಾರುತ್ತಾರೆ. ಗಾಳದ ಮೂಲಕ ಇಲ್ಲವೇ ಬೀಸುಬಲೆಯಿಂದ ಮೀನು ಹಿಡಿಯುತ್ತಾರೆ. ಇವರು ಮೀನುಗಳನ್ನ ಹೊಡಕೆಗೆ ಪೋಣಿಸಿ ಸರದ ರೂಪದಲ್ಲಿ ಮಾರುತ್ತಾರೆ. ಒಂದು ಸರ ಮೀನನ್ನ ೩೦ ರೂಪಾಯಿಯಿಂದ ೭೦ ರೂಪಾಯಿವರೆಗೆ ಮಾರುತ್ತಾರೆ. ಹಣಕ್ಕೆ ಬದಲಾಗಿ ಅಕ್ಕಿ, ರಾಗಿ, ತೆಂಗಿನಕಾಯಿ ಇವುಗಳಿಗೂ ಮಾರುವುದುಂಟು. ಪ್ರತಿ ನಿತ್ಯ ಒಬ್ಬ ಹೆಚ್ಚೆಂದರೆ ಎರಡರಿಂದ ಮೂರು ಸರದ ಮೀನುಗಳನ್ನ ಹಿಡಿದು ಮಾರಿ, ಅದರಿಂದ ಬಂದ ಹಣದಿಂದ ಜೀವನ ಸಾಗಿಸುತ್ತಾರೆ.

ಮೀನು ಮಾರಾಟಕ್ಕೆ ಸಂಬಂಧಿಸಿದಂತೆ ಮಧ್ಯವರ್ತಿಗಳ ಹಾವಳಿಯಿಂದ ಇವರು ಸಹ ಹೊರತೇನಲ್ಲ. ಕೆಲವು ಮಧ್ಯವರ್ತಿಗಳು ಮೀನುಗಾರರಿಗೆ ಮುಂಗಡ ಹಣವನ್ನು ನೀಡಿರುತ್ತಾರೆ. ಇವರಿಗೆ ಇಂತಿಷ್ಟು ಪ್ರತಿ ಕೆ.ಜಿ.ಯ ಮೀನಿಗೆ ಬೆಲೆ ಎಂದು ನಿಗಧಿ ಮಾಡಿರುತ್ತಾರೆ. ಮಾರುಕಟ್ಟೆಯಲ್ಲಿ ಅತ್ಯಧಿಕ ಬೆಲೆ ಇದ್ದರೂ ಸಹ ಅವರು ಮಧ್ಯವರ್ತಿ ನಿಗಧಿ ಮಾಡಿರುವ ಬೆಲೆಗೆ

ಮೀನನ್ನು ಮಾರಬೇಕಾಗುವ ಪರಿಸ್ಥಿತಿ ಇರುತ್ತದೆ. ಇದಕ್ಕೆ ಕಾರಣ ಬಡತನ. ಬಡತನದಿಂದಾಗಿ ಮಧ್ಯವರ್ತಿಗಳಿಂದ ಅವರು ಜೀವನ ಸಾಗಿಸಲು ಮುಂಗಡ ಹಣವನ್ನು ಪಡೆದುಕೊಂಡಿರುತ್ತಾರೆ. ಆದುದ್ದರಿಂದ ಮಧ್ಯವರ್ತಿಗಳು ನೀಡುವ ಬೆಲೆಯನ್ನ ಒಪ್ಪಿ ಮೀನನ್ನ ಮಾರಾಟ ಮಾಡಬೇಕಾಗುತ್ತದೆ. ಹೆಚ್ಚಿನ ಲಾಭ ಮೀನುಗಾರರಿಗಿಂತ ಮಧ್ಯವರ್ತಿಗಳಿಗೆ ಸಿಗುತ್ತದೆ. ಇದನ್ನು ತಪ್ಪಿಸಲು ಮೀನಿನ ಮಾರುಕಟ್ಟೆಗಳಿದ್ದರೂ ಸಹ ಹಲವಾರು ತೊಂದರೆಗಳಿಂದಾಗಿ ಮಧ್ಯವರ್ತಿಗಳ ಬಲೆಯಿಂದ ಹೊರಬರಲು ಸಾಧ್ಯವಾಗದ ಕಾರಣ ಅವರಿಗೆಯೇ ಮಾರಾಟ ಮಾಡಬೇಕಾಗುತ್ತದೆ.

ಇವರು ಹಿಡಿದು ಮಾರುವ ಮೀನುಗಳೆಂದರೆ ಕ್ಯಾಟ್ಲಾಗ್, ಕಾಮಾನ್‌ಕರ್ಪು, ರೌ, ಮುರುಗಲ್, ಸಿಲ್ವರ್‌ಕಪ್, ಕೊರ್ಮ, ಆನೆ ಮೀನು, ಗ್ಲಾಸ್‌ಕಾರ್ಪು, ಕಂದಿನ ಮೀನು, ಹಾವಿನ ಬತ್ತಿ, ಗೊದ್ಲೆ ಮೀನು, ಜಿಲಾಬಿ ಮೀನು, ಚಪ್ಲಿ ಮೀನು, ಗೆಂಡೆ ಪುರ್ಚಿ, ಬೆಳ್ಚಿ ಮೀನು, ಗಿರ್ಲು ಮೀನು, ಹೊಟ್ಟೆ ಪುಕ್ಲಿ, ಗೆಂಡೆ ಮೀನು, ಸಾರ್ಪು, ಕಾಟ್ಲ, ಚೌಳಿಮೀನು ಇತ್ಯಾದಿ ಮೀನುಗಳನ್ನ ಕೆರೆಯಲ್ಲಿ ಸಾಕಿ ಹಿಡಿದು ಮಾರುತ್ತಾರೆ. ಹೊಳೆಗಳಲ್ಲಿ ಗಾಳದ ಮೂಲಕ ಮೀನನ್ನ ಹಿಡಿಯುವವರು ಗಾಳಕ್ಕೆ ಎರೆಹುಳು, ಗೊಣ್ಣೆ ಹುಳು ಅಥವಾ ಯಾವುದಾದರೂ ಹುಳ-ಉಪ್ಪಟೆಗಳನ್ನ ಸಿಕ್ಕಿಸಿ ಮೀನುಗಳು ಇರುವ ಸ್ಥಳಕ್ಕೆ ಹಾಕಿದರೆ, ಹುಳು ತಿನ್ನಲು ಬಂದ ಮೀನು ಗಾಳಕ್ಕೆ ಸಿಕ್ಕಿಕೊಳ್ಳುತ್ತದೆ. ಹೀಗೆ ಹಿಡಿಯುವ ಸಂದರ್ಭದಲ್ಲಿ ಹೆಚ್ಚಾಗಿ ಹಾವಿನ ಬತ್ತಿಯ ಮೀನುಗಳು ಗಾಳಕ್ಕೆ ಸಿಗುವುದುಂಟು. ಇದರೊಂದಿಗೆ ಬೇರೆ ಜಾತಿಯ ಮೀನುಗಳು ಸಹ ಗಾಳಕ್ಕೆ ಬೀಳುವುದುಂಟು. ಆರ್ಥಿಕವಾಗಿ ಅಲ್ಪ-ಸ್ವಲ್ಪ ಆದಾಯವನ್ನು ತಂದು ಕೊಡುವ ಒಂದು ಉದ್ದಿಮೆಯಾಗಿದೆ. ಮಂಡ್ಯ ಜಿಲ್ಲೆಯ ಗಂಗಾಮತಸ್ಥ ಜನಾಂಗದವರಲ್ಲಿ ಶೇಕಡ ೩೦ ರಿಂದ ೪೦ ರಷ್ಟು ಜನರು ಮೀನುಗಾರಿಕೆಯನ್ನ ನಂಬಿ ಬದುಕುವ ಜನರಿರುವುದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕಂಡುಬಂದಿದೆ. "ಶೇಕಡ ೨೦ ರಿಂದ ೩೦ ರಷ್ಟು ಜನರು ವ್ಯವಸಾಯ, ಕೂಲಿ, ವ್ಯಾಪಾರ ಇದರ ಜೊತೆಗೆ ಬಿಡುವಿನ ವೇಳೆಯಲ್ಲಿ ಮೀನು ಹಿಡಿದು ಮಾರಾಟ ಮಾಡುವುದುಂಟು. ಇದರಿಂದಾಗಿ ಅವರ ಜೀವನೋಪಾಯಕ್ಕೆ ಬೇಕಾದ ವಸ್ತುಗಳನ್ನ ಕೊಂಡುಕೊಳ್ಳಲು ಸಹಾಯವಾಗುತ್ತದೆ. ಕುಟುಂಬದ ನಿರ್ವಹಣೆಗೆ ನೆರವಾಗುತ್ತದೆ ಎನ್ನುತ್ತಾರೆ ವಕ್ತೃ ಸಿದ್ದಯ್ಯ.[೨೧]

ಮೀನಿನ ಬೇಟೆಯಾಡುವಾಗ ಗಂಗಾಮತಸ್ಥರು ಅತ್ಯಂತ ಚಾಣಾಕ್ಷತನವನ್ನ ಉಪಯೋಗಿಸುತ್ತಾರೆ. ತಮ್ಮ ಅನುಭವ ಹಾಗೂ ಬುದ್ಧಿಶಕ್ತಿಯನ್ನ ಬಳಸಿಕೊಂಡು ಯಾವ ಭಾಗದಲ್ಲಿ ಎಂತೆಂಥ ಮೀನುಗಳು ಕೆರೆ ಅಥವಾ ಹೊಳೆಯ ಯಾವ ಭಾಗದಲ್ಲಿವೆ ಎಂಬುದನ್ನು ಪತ್ತೆ ಮಾಡಿ ಬೇಟೆಯಾಡುವುದುಂಟು. ಇದಕ್ಕೆ ಪೂರಕವಾಗಿ ಅತ್ಯಂತ ಆಧುನಿಕ ಬಲೆಯನ್ನು ಬಳಸಿಕೊಂಡು ಮೀನಿನ ಶಿಕಾರಿ ಮಾಡುತ್ತಾರೆ. ಗಂಗಾಮತಸ್ಥರು ಪೂರ್ವಕಾಲದಿಂದಲೂ

ಮೀನುಗಾರಿಕೆಯನ್ನೇ ಕಸುಬಾಗಿ ಮಾಡಿಕೊಂಡವರು ಮತ್ತು ಅದರಲ್ಲೇ ಪಳಗಿದವರು. ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಪ್ರಮುಖವಾದ ಹತ್ತು ಬಲೆಗಳ ಹೆಸರನ್ನು ವಕ್ತೃಗಳು ತಿಳಿಸಿದ್ದಾರೆ. ಅವುಗಳೆಂದರೆ –

೧. ಸುತ್ತ ಬಲೆ
೨. ಬೀಸು ಬಲೆ
೩. ದೋಣಿ ಬಲೆ
೪. ಮಾರಿ ಬಲೆ
೫. ದೊಡ್ಡ ಬಲೆ
೬. ಸಾಮಾನ್ಯ ಬಲೆ
೭. ಸೀಗಡಿ ಬಲೆ
೮. ಮರಗಿ ಬಲೆ
೯. ಬೀಡಿನ ಬಲೆ
೧೦. ಇಡೆ ಬಲೆ

**ಸುತ್ತು ಬಲೆ :** ಕೆರೆಯಲ್ಲಿ ನೀರು ಕಡಿಮೆಯಾದಾಗ ಕೆರೆಯ ಒಳಗೆ ಇಳಿದು ಬೇಟೆಯಾಡುವುದು. ನೀರು ಕಡಿಮೆ ಇರುವುದರಿಂದ ಮೀನುಗಳು ಯಾವ ಕಡೆ ಇವೆ ಎಂಬುದು ಕಾಣುತ್ತಿರುತ್ತದೆ. ಇದರಿಂದಾಗಿ ಬೇಟೆಗಾರ ನಿರಾಯಾಸವಾಗಿ ಮೀನುಗಳನ್ನು ಹಿಡಿಯುತ್ತಾರೆ. ಇಂತಹ ಕಡೆ ಸಾಮಾನ್ಯವಾಗಿ ಒಂದು ಕೆ.ಜಿ.ಯಿಂದ ಮೂರು ಕೆ.ಜಿ.ಯವರೆಗಿನ ಮೀನುಗಳು ಬಲೆಗೆ ಬೀಳುತ್ತವೆ.

**ಬೀಸು ಬಲೆ :** ತುಂಬಿದ ಕೆರೆಯಲ್ಲಿ ಅಥವಾ ಹರಿಯುವ ನದಿಯಲ್ಲಿ ಮೀನು ಹಿಡಿಯಲು ಹಾಕುವ ಬಲೆ. ತುಂಬಿದ ಕೆರೆಯ ಒಳಗಡೆಗೆ ತೆಪ್ಪದಲ್ಲಿ ಹೋಗಿ ಮೀನು ಇರುವ ಕಡೆಗೆ ಬಲೆಯನ್ನು ಬಿಡಿಸುತ್ತಾರೆ. ಮೂರು ನಾಲ್ಕು ನಿಮಿಷಗಳನ್ನ ಬಿಟ್ಟು ಬಲೆಯನ್ನ ಮೇಲಕ್ಕೆ ಎತ್ತುತ್ತಾರೆ. ಹರಿಯುವ ನದಿಯಲ್ಲಿಯು ತೆಪ್ಪದ ಮೂಲಕ ನದಿಯ ನೀರು ನಿಂತಿರುವ ಕಡೆಗೆ ಹೋಗಿ ಬಲೆಯನ್ನ ಬೀಸಿ ಮೀನುಗಳನ್ನ ಹಿಡಿಯುತ್ತಾರೆ. ಬೆಳಗ್ಗೆ ಅಥವಾ ಸಂಜೆಯ ವೇಳೆಯಲ್ಲಿ ಈ ಬಲೆಯನ್ನು ಬಳಸಿಕೊಂಡು ಮೀನಿನ ಶಿಕಾರಿಯನ್ನ ಆಡುತ್ತಾರೆ.

**ದೋಣಿ ಬಲೆ :** ತುಂಬಿದ ಕೆರೆಯಲ್ಲಿ ದೋಣಿಯ ಮೂಲಕ ಹೋಗಿ ಬಲೆಯನ್ನು ಎಸೆದು ಮೀನುಗಳನ್ನ ಹಿಡಿಯುತ್ತಾರೆ. ದೋಣಿಯಲ್ಲಿ ಇಬ್ಬರು ಅಥವಾ ಮೂವ್ವರು ಹೋಗುತ್ತಾರೆ. ಒಂದು ಬಲೆಯನ್ನು ಎಸೆದು ಅದನ್ನು ಒಬ್ಬ ಮೇಲಕ್ಕೆತ್ತಿದರೆ, ಮತ್ತೊಬ್ಬ ಆ ಬಲೆಯ ಮೀನುಗಳನ್ನ ಬಿಡಿಸುತ್ತಾನೆ. ಹೀಗೆ ಬಿಡಿಸಿದ ಮೀನುಗಳನ್ನು ಬಾಕ್ಸ್‌ನೊಳಗೆ ಹಾಕುತ್ತಾರೆ.

**ಮಾರಿ ಬಲೆ :** ಬಲೆಗಳಲ್ಲಿ ಅತ್ಯಂತ ದೊಡ್ಡದು ಮಾರಿಬಲೆ ಅಥವಾ ರಂಪಣಿ. ಹದಿನೆಂಟನೆಯ ಶತಮಾನದ ಕಾಲಘಟ್ಟದಲ್ಲೇ ಮೀನುಗಾರರಿಗೆ ಸಹಾಯಕವಾಗಿ ಬಂದದ್ದು ಮಾರಿಬಲೆಯಾಗಿದೆ. "ನೂರಕ್ಕೂ ಹೆಚ್ಚು ಜನರಿಗೆ ಉದ್ಯೋಗವಕಾಶವನ್ನು ಕಲ್ಪಿಸಿರುವ ಮಾರಿಬಲೆಯ ಸಂಶೋಧನೆ ಮೀನುಗಾರಿಕೆಯ ಜಗತ್ತಿನಲ್ಲಿ ಒಂದು ಹೊಸ ಬೆಳಕನ್ನೇ ಸೃಷ್ಟಿಸಿತು ಎಂದರೂ ಅತಿಶಯವಲ್ಲ. ಮಾರಿಬಲೆಯ ಸಂಪ್ರದಾಯ ಗೋವಾದಲ್ಲಿ ಹುಟ್ಟಿ ಕರ್ನಾಟಕಕ್ಕೆ ಬಂತು ಎಂಬುದು ಹಳೆಯ ಕಾಲದ ಅನುಭವಸ್ಥರ ಮಾತು."[೨೨] ಮಂಡ್ಯ ಜಿಲ್ಲೆಯ ಗಂಗಾಮತಸ್ಥರಿಗೆ ಮಾರಿಬಲೆಯ ಉಪಯೋಗವೆಂದರೆ ನೀರು ಕೆರೆಯಲ್ಲಿ ಮುಕ್ತಾಯದ ಹಂತದಲ್ಲಿರುವ ಸಂದರ್ಭದಲ್ಲಿ ಮಾರಿಬಲೆಯನ್ನು ಹಾಕುತ್ತಾರೆ. ಈ ಬಲೆಗೆ ದೊಡ್ಡ ಮೀನುಗಳಿಂದ ಹಿಡಿದು ಸಣ್ಣ ಮೀನುಗಳವರೆವಿಗೂ ಬೀಳುತ್ತವೆ. ದಕ್ಷಿಣ ಕನ್ನಡದ ಮೀನುಗಾರರಿಗೂ ಹಾಗೂ ಮಂಡ್ಯ ಜಿಲ್ಲೆಯ ಗಂಗಾಮತಸ್ಥರು ಉಪಯೋಗಿಸುವ ಮಾರಿಬಲೆಗೂ ಬಹಳ ವ್ಯತ್ಯಾಸವಿರುವುದನ್ನ ಗಮನಿಸಬಹುದು.

**ಬೀಡಿನ ಬಲೆ :** ಸಂಜೆ ನಾಲ್ಕು ಗಂಟೆಯ ನಂತರ ತುಂಬಿದ ಕೆರೆಗಳಲ್ಲಿ ಮೀನುಗಳನ್ನು ಹಿಡಿಯಲು ಈ ಬಲೆಯನ್ನು ಉಪಯೋಗಿಸುತ್ತಾರೆ. ಎಲ್ಲಾ ಜಾತಿಯ ಮೀನುಗಳು ಈ ಬಲೆಗೆ ಬೀಳುತ್ತವೆ. ಸಾಮಾನ್ಯವಾಗಿ ಕತ್ತಲಾಗುವವರೆಗೂ ಬೀಡಿನ ಬಲೆಯನ್ನು ಉಪಯೋಗಿಸಿ ಮೀನುಗಳನ್ನು ಹಿಡಿಯುತ್ತಾರೆ. ತೆಪ್ಪದ ಮೂಲಕ ಇಬ್ಬರು ಅಥವಾ ಮೂರು ಜನರು ಕೆರೆಯ ಒಳಗೆ ಹೋಗಿ ಬಲೆಯನ್ನು ಬೀಸಿ ಮೀನನ್ನು ಹಿಡಿದು, ಸಾಧ್ಯವಾದರೆ ಸಂಜೆಯ ವೇಳೆಯಲ್ಲಿ ಇಲ್ಲವೇ ಬೆಳಗ್ಗೆ ಮೀನುಗಳನ್ನು ಮಾರುತ್ತಾರೆ.

ಮೇಲೆ ಹೇಳಲಾದ ವಿವಿಧ ರೀತಿಯ ಬಲೆಗಳ ಮೂಲಕ ಮೀನುಗಾರಿಕೆಯನ್ನು ಮಾಡುತ್ತಾರೆ. ಹೀಗೆ ಹಿಡಿದ ಮೀನುಗಳನ್ನು ಕೆಲವರು ಅಲ್ಲೇ ಗ್ರಾಹಕರಿಗೆ ಮಾರುತ್ತಾರೆ. ಇನ್ನು ಕೆಲವರು ಮೀನಿನ ಮಾರುಕಟ್ಟೆಗೆ ತಂದು ತಮ್ಮ ಅಂಗಡಿಯಲ್ಲಿ ಮಾರಾಟ ಮಾಡುವುದುಂಟು. ಅಂಗಡಿ ಇಲ್ಲದ ಮೀನುಗಾರರು ಅಂಗಡಿ ಇರುವವರ ಬೇರೆ ಮೀನುಗಾರರಿಗೆ ಒಂದು ಕೆ.ಜಿ.

ಮೀನಿಗೆ ೪ ರೂ.ಗಳಿಂದ ೫ ರೂ.ಗಳವರೆಗೆ ರಿಯಾಯಿತಿ ಮೂಲಕ ಅವರಿಗೆ ಮಾರಾಟ ಮಾಡುತ್ತಾರೆ. ದೊಡ್ಡ ದೊಡ್ಡ ಮೀನುಗಳು ಮಾರಾಟ ಮಾಡುವವರೆಗೆ ಜೀವಂತವಾಗಿರಲೆಂದು ಮಾರುಕಟ್ಟೆಯಲ್ಲಿ ನೀರಿನ ತೊಟ್ಟಿಗಳನ್ನು ನಿರ್ಮಿಸಿಕೊಂಡಿರುತ್ತಾರೆ. ಕಾರಣವೆಂದರೆ ಮಾರಾಟವಾಗದೆ ಉಳಿದ ಮೀನುಗಳನ್ನು ನಾಳೆ ಮಾರುವವರೆಗೂ ಜೀವಂತವಾಗಿರಲೆಂಬುದಕ್ಕಾಗಿ. ಇಂತಹ ತೊಟ್ಟಿಗೆ ಜೀವವಿರುವ ಮೀನುಗಳನ್ನು ಬಿಡುತ್ತಾರೆ. ಕೆಲವರು ಮೀನಿನ ಬುಟ್ಟಿಗೆ ಮಂಜುಗಡ್ಡೆ ಹಾಕಿ ಅದರ ನಡುವೆ ಮೀನುಗಳನ್ನು ಶೇಖರಿಸಿರುತ್ತಾರೆ. ಇಷ್ಟೆಲ್ಲಾ ಕಷ್ಟಪಟ್ಟರೂ ದಿನವೊಂದಕ್ಕೆ ೨೦೦ ರೂ.ಗಳ ಆದಾಯ ಕಾಣುವುದು ಕಷ್ಟವಾಗಿದೆ ಎಂದು ವಕ್ತೃಗಳೇ ಹೇಳುತ್ತಾರೆ.

ಕೆರೆಕಟ್ಟೆಗಳ, ನದಿಗಳ ಕಡೆಗೆ ಮೀನುಗಳ ಬೇಟೆಗಾಗಿ ಇಡೀ ವರ್ಷವೆಲ್ಲ ಸುತ್ತುವ ಇವರಿಗೆ, ಸರ್ಕಾರವು ಹಲವು ರೀತಿಯ ಸೌಲಭ್ಯಗಳನ್ನು ಕಲ್ಪಿಸಿಕೊಟ್ಟಿದೆ. ಗಂಗಾಮತಸ್ಥರು ಹೆಚ್ಚಾಗಿ ವಾಸವಿರುವ ಕಡೆಗಳಲ್ಲೆಲ್ಲಾ "ಶ್ರೀ ಗಂಗಾಪರಮೇಶ್ವರಿ ಮೀನುಗಾರರ ಸಹಕಾರ ಸಂಘ" ಎಂಬ ಸಂಘವನ್ನ ಕಾಣಬಹುದು. ಈ ಸಂಘ ತಮ್ಮ ಜನಾಂಗದವರ ಅಭಿವೃದ್ಧಿಗಾಗಿ ದುಡಿಯುತ್ತಿದೆ. ಸಂಘದವರು ಸರ್ಕಾರದಿಂದ ದೊರೆಯುವ ಸೌಲಭ್ಯಗಳನ್ನು ಮೀನುಗಾರರಿಗೆ ತಿಳಿಸಿಕೊಡುತ್ತದೆ. ಇವರಿಗೆ ಸರ್ಕಾರ ರಿಯಾಯಿತಿಯ ದರದಲ್ಲಿ ಮೀನಿನ ಮರಿಗಳನ್ನ, ಕೆರೆಗಳನ್ನ ಕೊಡುತ್ತದೆ. ಅಲ್ಲದೆ ಮೀನುಗಾರರಿಗೆ ಹೆಚ್ಚಿನ ಅನುಕೂಲವಾಗಲೆಂದು ವಾಸಮಾಡುವುದಕ್ಕೆ ಮನೆಯನ್ನ ಕಟ್ಟಿಸಿಕೊಡುವುದು. ಉಚಿತವಾಗಿ ಅಥವಾ ರಿಯಾಯಿತಿ ದರದಲ್ಲಿ ಬಲೆ, ಬೋಟು, ಮೀನಿನ ಬಾಕ್ಸ್, ಸೈಕಲ್ ಮುಂತಾದ ಸೌಲಭ್ಯಗಳನ್ನ ಸರ್ಕಾರ ಕಲ್ಪಿಸಿಕೊಟ್ಟಿದೆ. ಇದರ ಸದುಪಯೋಗವನ್ನ ಎಲ್ಲರು ಪಡೆದುಕೊಳ್ಳುವಂತೆ "ಗಂಗಾ ಪರಮೇಶ್ವರಿ ಮೀನುಗಾರರ ಸಹಕಾರ ಸಂಘ" ಪ್ರೇರೇಪಣೆ ಮಾಡುತ್ತಿದೆ. ಜಿಲ್ಲೆಯ ಎಲ್ಲಾ ಭಾಗಗಳಲ್ಲೂ ಸಾಮಾನ್ಯವಾಗಿ ಸಂಘವಿರುವುದನ್ನ ಗಮನಿಸಬಹುದು. ಮಳವಳ್ಳಿತಾಲ್ಲೂಕಿನ ನಿಟ್ಟೂರು, ಗೊಲ್ಲರಹಳ್ಳಿ, ಬಾಳೆಹೊನ್ನಿಗ, ಕಲ್ಕುಣಿ, ಮಾರೆಹಳ್ಳಿ, ರಾಮನಾಥಮೋಳೆ, ಮಳವಳ್ಳಿ, ಮದ್ದೂರು ತಾಲ್ಲೂಕಿನ ಚಿಕ್ಕರಸಿನಕೆರೆ, ದೊಡ್ಡರಸಿನಕೆರೆ, ಮೆಣಸಗೆರೆ, ಕಡಿಲುವಾಗಿಲು, ಬೆಸಗರಹಳ್ಳಿ, ತೈಲೂರು, ದೇಶವಹಳ್ಳಿ, ಮಂಡ್ಯ ತಾಲ್ಲೂಕಿನ ಕಸಲಗೆರೆ, ಶಿವಹಳ್ಳಿ, ಮರಡಿಪುರ, ಹೊಳಲು, ಗಾಮನಹಳ್ಳಿ, ಚೀರನಹಳ್ಳಿ, ಶ್ರೀರಂಗಪಟ್ಟಣ ತಾಲ್ಲೂಕಿನ ಗಂಜಾಂ, ಆರತಿ ಉಕ್ಕಡ, ಮಹದೇವಪುರ, ಕೆ.ಆರ್.ಎಸ್., ಪಾಂಡವಪುರ ತಾಲ್ಲೂಕಿನ ಹೊನಗನಹಳ್ಳಿ, ವಡ್ಡರಹಳ್ಳಿ, ಕೆನ್ನಾಳು, ಬಸ್ತಿಪುರ, ನಾಗಮಂಗಲ ತಾಲ್ಲೂಕಿನ ಹಿರಿಸಾವೆ, ಬೊಮ್ಮನಹಳ್ಳಿ, ಮಾಯಾಸಂದ್ರ, ಮದನಹಟ್ಟಿ, ಬೆಳ್ಳೂರು,

ಕೆ.ಆರ್. ಪೇಟೆ ತಾಲ್ಲೂಕಿನ ಹೊಸಹೊಳಲು, ಹೇಮಗಿರಿ ತೆಂಡೆಕೆರೆ, ಬೂಕನಕೆರೆ ಹೀಗೆ ಜಿಲ್ಲೆಯ ವಿವಿಧ ಕಡೆಗಳಲ್ಲಿ ಮೀನುಗಾರರ ಸಹಕಾರ ಸಂಘಗಳು ಸಾಮಾನ್ಯವಾಗಿ ಕಂಡುಬರುತ್ತವೆ.

ಗಂಗಾಮತಸ್ಥರ ಆರ್ಥಿಕ ಸ್ಥಾನ-ಮಾನವನ್ನ ನಿರ್ಧರಿಸುವ ಸಂದರ್ಭದಲ್ಲಿ ಅವರ ವೃತ್ತಿಯಲ್ಲಿ ಪ್ರಧಾನ ಭಾಗವಾಗಿರುವ ಮೀನುಗಾರಿಕೆಯು ಪ್ರಮುಖವಾಗಿದೆ. ಶೇಕಡ ೫೦ಕ್ಕಿಂತಲೂ ಹೆಚ್ಚಿನ ಜನರು ಈ ವೃತ್ತಿಯನ್ನ ನಂಬಿ ಬದುಕುವವರಿದ್ದಾರೆ. ಇದರಲ್ಲಿ ಕೆಲವರು ಈ ಉದ್ಯೋಗದ ಜೊತೆ ಬೇರೆ ಬೇರೆ ಉದ್ಯೋಗವನ್ನ ಮಾಡುವವರಿದ್ದಾರೆ. ಒಟ್ಟಾರೆಯಾಗಿ ಮೀನುಗಾರಿಕೆಯು ಇವರ ಆರ್ಥಿಕತೆಯನ್ನ ಉತ್ತಮ ಪಡಿಸುವುದಲ್ಲಿ ಪ್ರಮುಖ ಪಾತ್ರವನ್ನ ವಹಿಸುತ್ತದೆಂದು ಹೇಳಬಹುದು.

**ಬಲೆ ನೇಯ್ಯುವುದು**

ಗಂಗಾಮತಸ್ಥರ ಆದಾಯದ ಮೂಲಗಳಲ್ಲಿ ಬಲೆ ನೇಯ್ಯುವುದು ಕೂಡ ಒಂದಾಗಿದೆ. ಬೇಟೆಯಾಡುವುದು ಇವರ ವೃತ್ತಿಗಳಲ್ಲಿ ಒಂದಾದುದ್ದರಿಂದ, ಬೇಟೆಯಾಡಲು ಅಗತ್ಯವಾಗಿ ಬೇಕಾಗಿರುವ ಬಲೆ ನೇಯ್ಯುವ ಕಲೆಯನ್ನು ಇವರು ಬಲ್ಲರು. ಬಲೆ ನೇಯ್ಯುವುದಕ್ಕೆ ಬೇಕಾದ ಕಚ್ಚಾ ವಸ್ತುಗಳನ್ನು ಹತ್ತಿರ ಪಟ್ಟಣಗಳಲ್ಲಿ ತರುತ್ತಾರೆ. ಸಾಮಾನ್ಯವಾಗಿ ಬಲೆಯನ್ನ ನೇಯ್ಯುವವರು ವೃದ್ಧರು ಮತ್ತು ಹೆಂಗಸರು. ಇವರ ಜೊತೆಗೆ ಬೇರೆಯವರು ಇರುತ್ತಾರೆ. ಬಲೆ ನೇಯ್ಯುವ ಕಲೆಯನ್ನ ಒಬ್ಬರಿಂದ ಮತ್ತೊಬ್ಬರಿಗೆ ತರಬೇತು ಮೂಲಕ ಕಲಿಸುವುದುಂಟು. ಕೆಲವು ಮೀನುಗಾರರೇ ತಮಗೆ ಅಗತ್ಯವಾದ ಬಲೆಗಳನ್ನ ನೇಯ್ಯುವುದುಂಟು. ಬೇಟೆಯಾಡಲು ದೂರದೂರಿಗೆ ಹೋಗಲು ಸಾಧ್ಯವಿಲ್ಲದಿರುವವರು ತಮ್ಮ ಜನಾಂಗದ ಜೋಪಡಿಗಳಲ್ಲಿ, ದೇವಾಲಯಗಳಲ್ಲಿ ಅಥವಾ ಕುಲದ ಮನೆಗಳಲ್ಲಿ ಇಲ್ಲವೇ ಮೀನುಗಾರರ ಸಹಕಾರ ಸಂಘದ ಸ್ಥಳಗಳಲ್ಲಿ ಇಬ್ಬರು ಮೂವರು ಸೇರಿಕೊಂಡು ಬಲೆಯನ್ನು ನೇಯ್ಯುತ್ತಾರೆ. ಇಂತಹ ಬಲೆಗಳನ್ನು ತಮ್ಮ ಸ್ವಂತಕ್ಕಾಗಿ ಕೆಲವರು ಉಪಯೋಗಿಸುತ್ತಾರೆ. ಇನ್ನು ಕೆಲವರು ಬೇರೆಯವರಿಗೆ ಮಾರಾಟ ಮಾಡುತ್ತಾರೆ.

ಗಂಗಾಮತಸ್ಥರಿಗೆ 'ಬಲೆ'ಯನ್ನ ತಾವು ಹೊಂದಿರುವುದರ ಬಗ್ಗೆ ಒಂದು ಕಲ್ಪನೆಯುಂಟು. ಒಮ್ಮೆ ಒಬ್ಬ ವ್ಯಕ್ತಿ ಕೆರೆಯೊಳಗೆ ಇಳಿದು, ತನ್ನ ಬಟ್ಟೆಯನ್ನೆಲ್ಲಾ ಕೊಳಕು ಮಾಡಿಕೊಂಡು, ಅವನು ಕೈಯಿಂದಲೇ ಮೀನನ್ನು ಹಿಡಿದು ತರುತ್ತಿದ್ದನು. ಇದನ್ನು ನೋಡಿ ಶಿವ ಪ್ರತ್ಯಕ್ಷನಾದನು. ಈ ಕೆಲಸವನ್ನು ಬಿಡು ಎಂದು ಹೇಳಿ ಚಿನ್ನ ತುಂಬಿದ ಕುಂಬಳ ಕಾಯಿಯನ್ನು ಕೊಟ್ಟು ಶಿವ ಮಾಯವಾದನು. ಆದರೆ ಆತ ಕುಂಬಳ ಕಾಯಿಯನ್ನ ಬೇರೆಯವರಿಗೆ ಮಾರಾಟಮಾಡಿ ಪುನಃ

ಮೀನು ಹಿಡಿಯಲು ಹೋದ. ಈ ಸಂದರ್ಭದಲ್ಲಿ ಶಿವ ಪುನಃ ಪ್ರತ್ಯಕ್ಷನಾಗಿ, ನೀವು ಮೀನು ಹಿಡಿಯುವ ಕಾಯಕವನ್ನೇ ಮುಂದುವರೆಸಿರಿ ಎಂದು 'ಬಲೆ'ಯನ್ನು ಕೊಟ್ಟು ಮಾಯವಾದನಂತೆ. ಆದುದ್ದರಿಂದ ಬಲೆ ದೇವರಿಗೆ ಸಮಾನವಾಗಿದೆ ಎಂದು ವಕ್ತೃಲಕ್ಷ್ಮಣ ಹೇಳುತ್ತಾನೆ. ಬಹುಶಃ ಈ ಕಥೆ ಗಂಗಾಮತಸ್ಥರ ಕಾಯಕಕ್ಕೆ ಪ್ರಮುಖವಾಗಿ ಬೇಕಾದ 'ಬಲೆ'ಯ ಮಹತ್ವದ ಹಿನ್ನಲೆಯಲ್ಲಿ ಬಂದಿರಬಹುದು.

ಬಲೆ ನೇಯ್ಯುವುದನ್ನೇ ಕೆಲವರು ವೃತ್ತಿಯನ್ನಾಗಿ ಮಾಡಿಕೊಂಡಿರುತ್ತಾರೆ. ಕೆಲವರು ಬೇರೆ ಕಸುಬಿನ ಜೊತೆಗೆ ಬಲೆಯನ್ನ ಬಿಡುವಿನ ವೇಳೆಯಲ್ಲಿ ನೇಯ್ಯುತ್ತಾರೆ. ಬಲೆಯನ್ನು ನೇಯ್ಯಲು ಬೇಕಾದ ಎಲ್ಲಾ ಕಚ್ಚಾವಸ್ತುಗಳನ್ನು ಬಲೆ ನೇಯ್ಯುವವರಿಗೆ ಕೊಟ್ಟು ಇಂತಿಷ್ಟು ಹಣವನ್ನು ಕೊಡುತ್ತೇನೆಂದು ಹುಂಡಿಯಾಗಿ ಮಾತನಾಡುತ್ತಾರೆ. ಕಚ್ಚಾವಸ್ತುಗಳನ್ನು ತಂದು ಬಲೆಯನನು ನೇಯ್ದು ಮಾರುತ್ತಾರೆ. ಬಲೆಗಳ ಆಧಾರದ ಮೇಲೆ ಬೆಲೆಯನ್ನು ನಿಗಧಿ ಮಾಡಲಾಗುತ್ತದೆ. ಹೆಚ್ಚು ಬಲೆಗಳನ್ನು ನೇಯ್ಯುವವರು ಹತ್ತಿರ ಪಟ್ಟಣಗಳಿಗೆ ತಂದು ಮಾರುತ್ತಾರೆ. ಇಲ್ಲವೆ ತಮ್ಮ ಗ್ರಾಮ ಅಥವಾ ಹತ್ತಿರ ಗ್ರಾಮದಲ್ಲಿರುವ ಮೀನುಗಾರರ ಸಹಕಾರ ಸಂಘಗಳಿಗೆ ಮಾರುವುದುಂಟು. ಸರ್ಕಾರದವರು ಹಾಗೂ ಖಾಸಗಿ ಸಂಘ ಸಂಸ್ಥೆಗಳು ಬಲೆ ನೇಯ್ಯುವ ತರಬೇತಿಯ ಶಿಬಿರಗಳನ್ನು ಜಿಲ್ಲಾ ಮಟ್ಟದಲ್ಲಿ ನಡೆಸಿರುವುದುಂಟು.

ಮೀನುಗಾರಿಕೆ ವಿವಿಧ ರೀತಿಯ, ವಿಭಿನ್ನವಾದ ಬಲೆಗಳನ್ನ ನೇಯ್ಯುವುದುಂಟು. ಸಣ್ಣ ಮೀನುಗಳಿಂದ ಹಿಡಿದು ದೊಡ್ಡ ದೊಡ್ಡ ಮೀನುಗಳು, ಸೀಗಡಿ, ವಿವಿಧ ರೀತಿಯ ಮೀನುಗಳನ್ನ ಹಿಡಿಯುವುದಕ್ಕೆ ಅಗತ್ಯವಾದ ಬಲೆಗಳನ್ನು ತಯಾರಿಸುತ್ತಾರೆ. ಮೀನುಗಳ ಬೇಟೆಯ ಜೊತೆಗೆ ಪ್ರಾಣಿ–ಪಕ್ಷಿಗಳನ್ನ ಬೇಟೆಯಾಡಲು ಅಥವಾ ಶಿಕಾರಿ ಮಾಡಲು ಬೇಕಾಗುವ ಬಲೆಗಳನ್ನ ನೇಯ್ಯುತ್ತಾರೆ. ಮೊಲ, ನರಿ, ಕಾಡುಬೆಕ್ಕು, ಕಾಡು ಇಲಿ, ತೋಡ ಇಂತಹ ಪ್ರಾಣಿಗಳನ್ನು ಬೇಟೆಯಾಡಲು ಬೇಕಾಗುವ ಬಲೆಯನ್ನು ತಯಾರಿಸುತ್ತಾರೆ. ಪ್ರಾಣಿಗಳಲ್ಲದೆ ಪಕ್ಷಿಗಳನ್ನು ಬೇಟೆಯಾಡುವುದುಂಟು. ಪಕ್ಷಿಗಳನ್ನು ಬೇಟೆಯಾಡಲು ಕತ್ತರಿ ಉರುಳುಗಳನ್ನು ಸಿದ್ಧಪಡಿಸುತ್ತಾರೆ. ಬಿದಿರಿನ ಕಡ್ಡಿ ಮತ್ತು ಪ್ಲಾಸ್ಟಿಕ್ ದಾರದಿಂದ ತಯಾರಿಸುತ್ತಾರೆ. ಇದು ಕತ್ತರಿಯಾಕಾರದಲ್ಲಿ ಇರುವುದರಿಂದ ಕತ್ತರಿ ಉರುಳು ಎಂದು ಕರೆಯುತ್ತಾರೆ. ಗೌಜಲಹಕ್ಕಿ, ನವಿಲು, ನೀರಿನ ಪಕ್ಷಿ, ನೀರಿನ ಕೋಳಿ, ನಾಮಕೋಳಿ, ಗೊರವನ ಹಕ್ಕಿ ಇತ್ಯಾದಿ ಪಕ್ಷಿಗಳನ್ನು ಕತ್ತರಿ ಉರುಳುಗಳ ಮೂಲಕ ಬೇಟೆಯಾಡುತ್ತಾರೆ. ಹೀಗೆ ಪ್ರಾಣಿ–ಪಕ್ಷಿಗಳ ಬೇಟೆಗೆ ಬೇಕಾಗುವ ಬಲೆಗಳನ್ನು ತಯಾರಿಸಿ ಮಾರುತ್ತಾರೆ. ಇದರಿಂದಾಗಿ ಕುಟುಂಬ ನಿರ್ವಹಣೆಗೆ ಬೇಕಾಗುವ ಅಲ್ಪ ಸ್ವಲ್ಪ ಖರ್ಚು ಇದರಿಂದ ಸರಿದೂಗುತ್ತದೆ. "ಬೇರೆ ಉದ್ಯೋಗಗಳ ಜೊತೆಗೆ ಬಲೆ ನೇಯ್ಯುವುದನ್ನು

ರೂಢಿಸಿಕೊಂಡಿರುವುದರಿಂದ ಅದರ ಆದಾಯದ ಜೊತೆಗೆ ಇದರ ಆದಾಯವು ಸೇರಿ ಜೀವನ ಸಾಗಿಸಲು ಅನುಕೂಲವಾಗಿದೆ"[೨೩] ಎಂದು ವಕ್ತೃ ಚಿಕ್ಕಬೋರಯ್ಯ ಹೇಳುತ್ತಾರೆ. ಹೀಗೆ ಇವರ ಆರ್ಥಿಕ ಸ್ಥಿತಿ-ಗತಿಯಲ್ಲಿ ಬಲೆ ನೇಯ್ಯುವ ಕಾಯಕವು ಪಾತ್ರವಹಿಸುತ್ತದೆ.

## ಕೈತೋಟದ ಕೃಷಿ

ಗಂಗಾಮತಸ್ಥರು ಹೆಚ್ಚಿನ ಜಮೀನನ್ನು ಹೊಂದಿಲ್ಲದ ಕಾರಣ ಬದುಕಲು ಹಲವು ದಾರಿಗಳನ್ನು ಕಂಡುಕೊಂಡಿದ್ದಾರೆ. ಅದರಲ್ಲಿ ಕೈತೋಟದ ಕೃಷಿಯು ಬಹಳ ಮುಖ್ಯವಾದುದ್ದು. ಇವರು ಮನೆಯ ಹಿಂದೆ ಇರುವ ಸ್ಥಳದಲ್ಲಿ ಅಥವಾ ಬೇರೆ ಕಡೆ ಇರುವ ಮೂರು-ನಾಲ್ಕು ಗುಂಟೆ ಜಮೀನಿನಲ್ಲಿ ಕೈತೋಟದ ಬೆಳೆಗಳನ್ನು ಬೆಳೆಯುತ್ತಾರೆ. ಸೊಪ್ಪು, ತರಕಾರಿ, ಹೂವು, ಹಣ್ಣು, ಇತ್ಯಾದಿ ಬೆಳೆಗಳನ್ನ ಬೆಳೆಯುತ್ತಾರೆ. ಮನೆಯ ಹಿಂದಿರುವ ಜಾಗದಲ್ಲಿ ಸಪ್ಪಸೀಗೆ ಸೊಪ್ಪು, ಕೊತ್ತಂಬರಿ ಸೊಪ್ಪು, ಕೀರೆ ಸೊಪ್ಪು, ದಂಟಿನ ಸೊಪ್ಪು, ಪಾಲಾಕ್ ಸೊಪ್ಪು, ಕಿಲ್‌ಕೀರೆ ಸೊಪ್ಪು ಇತ್ಯಾದಿ ಸೊಪ್ಪುಗಳನ್ನು ಬೆಳೆಯುತ್ತಾರೆ. ತರಕಾರಿಗಳಾದ ಬಿಳಿ ಮೂಲಂಗಿ, ಬೀನಿಸ್, ಹೀರೆಕಾಯಿ, ಹಿತ್ತಲ ಅವರೆಕಾಯಿ, ಕುಂಬಳಕಾಯಿ, ಬದನೆ, ಟೊಮೋಟೊ, ಮೆಣಸಿನಕಾಯಿ ಇತ್ಯಾದಿ ತರಕಾರಿಗಳನ್ನ ಬೆಳೆಯುತ್ತಾರೆ. ಪರಂಗಿಹಣ್ಣು, ಸೀತಾಫಲ, ಸೀಬೆಹಣ್ಣು, ಹಲಸಿನಹಣ್ಣು, ಮಾವು ಇತ್ಯಾದಿ ಹಣ್ಣುಗಳನ್ನ ತಮಗಿರುವ ಚಿಕ್ಕದಾದ ಸ್ಥಳದಲ್ಲಿ ಬೆಳೆಯುವುದುಂಟು. ಇಷ್ಟೇ ಅಲ್ಲದೆ ಹೂವಿನ ತೋಟವನ್ನು ಚಿಕ್ಕದಾಗಿ ಮಾಡಿಕೊಂಡಿರುತ್ತಾರೆ. ಮಲ್ಲಿಗೆ ಮೆಳೆ, ಕನಕಾಂಬರ, ಚಂಡಿನ ಹೂ, ಸೇವಂತಿಗೆ, ಜಾಜಿ ಮಲ್ಲಿಗೆ, ದುಂಡು ಮಲ್ಲಿಗೆ, ಹೂವುಗಳನ್ನ ಬೆಳೆಯುತ್ತಾರೆ.

ಕೈ ತೋಟದಲ್ಲಿ ಬೆಳೆಯುವ ಬೆಳೆಗಳಿಗೆ, ತಾವೇ ಸಾಕಿರುವ ಜಾನುವಾರುಗಳಿಂದ ಬಂದ ಗೊಬ್ಬರವನ್ನು ಹಾಕುತ್ತಾರೆ. ನೀರನ್ನು ಬಾವಿಯಿಂದ ಅಥವಾ ಗುಂಡಿಗಳಿಂದ ಗುಂಬದ ಮೂಲಕ ತೆಗೆದು ಉಯ್ಯುತ್ತಾರೆ. ಈ ಕೆಲಸಗಳನ್ನು ಸಂಜೆಯ ವೇಳೆಯಲ್ಲಿ ಇಲ್ಲವೇ ಮುಂಜಾನೆಯ ವೇಳೆಯಲ್ಲಿ ಮಾಡಿ, ನಂತರ ತಮ್ಮ ಮುಂದಿನ ಕೆಲಸಗಳಿಗೆ ಹೋಗುತ್ತಾರೆ. ಬೆಳೆದ ಸೊಪ್ಪನ್ನ ಕಂತೆ ಕಟ್ಟಿ ಮನೆಯಲ್ಲಿರುವ ಮಕ್ಕಳೋ, ಅಥವಾ ತಂದೆ, ತಾಯಿಯರೋ ಮಕ್ಕರಿಯಲ್ಲಿ ಮಾರುತ್ತಾರೆ. ಒಂದು ಕಂತೆ ಸೊಪ್ಪು ೧ ರೂ.ಗಳಂತೆ ಮಾರುತ್ತಾರೆ. ತಾವು ಮಾರಲು ಸಾಧ್ಯವಿಲ್ಲದಿದ್ದಾಗ ಮಾರಲು ಹೋಗುವ ಅದೇ ಜನಾಂಗದವರಿಗೆ ೧ ಕಟ್ಟಿಗೆ ೮೦ ಪೈಸೆಗೆ ಒಟ್ಟಾಗಿ ಮಾರುತ್ತಾರೆ. ತಮ್ಮ ಊರಿನಲ್ಲೋ ಅಥವಾ ಹತ್ತಿರವಿರುವ ಊರುಗಳಲ್ಲಿ ಮಾರಲು ನಡೆದೋ ಇಲ್ಲವೇ ಬೈಸಿಕಲ್‌ನಲ್ಲೋ ಹೋಗಿ ಮಾರಾಟ ಮಾಡುತ್ತಾರೆ. ಹೆಂಗಸರು ಮಾರಲು

ಹೋದರೆ ದಿನಸಿ ಧಾನ್ಯಗಳಿಗೂ ಸೊಪ್ಪನ್ನ ಮಾರುವುದುಂಟು. ಸೊಪ್ಪನ್ನು ಬೆಳಗ್ಗೆ ಇಲ್ಲವೆ ಸಾಯಂಕಾಲದ ವೇಳೆಯಲ್ಲಿ ವ್ಯಾಪಾರ ಮಾಡಲು ಹೋಗುತ್ತಾರೆ.

ತರಕಾರಿಯನ್ನು ಗಂಡಸರಾದರೆ ಬೈಸಿಕಲ್‌ಗೆ ಬುಟ್ಟಿ ಕಟ್ಟಿಕೊಂಡು ಪಕ್ಕದ ಗ್ರಾಮಗಳಿಗೆ ಹೋಗಿ ಮಾರುವುದುಂಟು. ಹೆಂಗಸರು ಸಹ ಕುಕ್ಕೆಯಲ್ಲಿ ತರಕಾರಿ ತುಂಬಿಕೊಂಡು ತಲೆಯ ಮೇಲೆ ಹೊತ್ತು ಅದೇ ಗ್ರಾಮದಲ್ಲಿ ಅಥವಾ ಬೇರೆ ಗ್ರಾಮಗಳಿಗೆ ಹೋಗಿ ಮಾರುತ್ತಾರೆ. ಇವರು ಬೆಳೆಯುವ ತರಕಾರಿಯನ್ನ, ಬೆಳೆಯುವವರೇ ಮಾರುತ್ತಾರೆ. ಇನ್ನು ಕೆಲವರು ಬೇರೆಯವರಿಂದ ಕೊಂಡು ಮಾರಾಟ ಮಾಡುತ್ತಾರೆ. ಅವರೇ ಹೇಳುವಂತೆ ತರಕಾರಿಯನ್ನ ಬೆಳೆಯುವುದರಿಂದ ಅವರ ಕುಟುಂಬದ ನಿರ್ವಹಣೆಗೆ ಅಲ್ಪ-ಸ್ವಲ್ಪ ಸಹಾಯವಾಗುತ್ತದೆ. ಇದರಿಂದಾಗಿ ಹೆಚ್ಚಿನ ಲಾಭವಿಲ್ಲದಿದ್ದರೂ ನಾವು ದುಡಿಯುವುದಕ್ಕೆ ಕೂಲಿಯಾದರೂ ಉಳಿಯುತ್ತದೆ ಎನ್ನುತ್ತಾರೆ. ಬಿಳಿ ಮೂಲಂಗಿ, ಬೀನಿಸ್, ಹೀರೇಕಾಯಿ, ಹಿತ್ತಲಅವರೆಕಾಯಿ, ಕುಂಬಳಕಾಯಿ, ಬದನೆ, ಟೊಮೋಟೊ, ಮೆಣಸಿನಕಾಯಿ, ಹಾಗಲಕಾಯಿ ಸಾಮಾನ್ಯವಾಗಿ ಬೆಳೆಯುವ ತರಕಾರಿಗಳು. ಇವುಗಳಲ್ಲಿ ಹೆಚ್ಚಿನ ರೀತಿಯಲ್ಲಿ ಬದನೆಕಾಯಿ, ಟೊಮೋಟೊವನ್ನು ಬೆಳೆಯುತ್ತಾರೆ. ಅವರೇ ಹೇಳುವಂತೆ ಕೊಟ್ಟಿಗೆ ಗೊಬ್ಬರವನ್ನು ಹಾಕುವುದರಿಂದ ಹೆಚ್ಚಿನ ಖರ್ಚು ತರಕಾರಿಯನ್ನ ಬೆಳೆಯಲು ಆಗುವುದಿಲ್ಲವಂತೆ. ವರ್ಷದ ಎಲ್ಲಾ ದಿನಗಳಲ್ಲೂ ತರಕಾರಿಯನ್ನ ಬೆಳೆಯುವುದುಂಟು. ಆದರೆ ಸಂಪೂರ್ಣವಾಗಿ ಇದನ್ನೇ ನಂಬಿಕೊಂಡು ಕೂರುವುದಿಲ್ಲ. ಈ ಕೆಲಸವನ್ನು ಮುಂಜಾನೆ ಮತ್ತು ಸಂಜೆಯ ವೇಳೆಯಲ್ಲಿ ಮಾಡಿ, ಉಳಿದಂತೆ ಬೇರೆ ವೇಳೆಯಲ್ಲಿ ಕೂಲಿ ಅಥವಾ ಇತರೇ ಕೃಷಿ ಚಟುವಟಿಕೆಗಳಿಗೆ ಹೋಗುತ್ತಾರೆ. ಇವರು ತರಕಾರಿಗಳನ್ನ ಹಣಕ್ಕಲ್ಲದೆ, ದವಸ ಧಾನ್ಯಗಳಿಗೂ ಕೊಡುತ್ತಾರೆ. ಹೀಗೆ ಇವರ ಪ್ರಮುಖ ವೃತ್ತಿಯಲ್ಲದಿದ್ದರು ಜೀವನೋಪಾಯ ಸಾಗಿಸಲು ಕೆಲವರಾದರೂ ಕೈತೋಟದ ಕೃಷಿಯನ್ನ ನಂಬಿದ್ದಾರೆ.

ಹೂವುಗಳನ್ನ ತಮ್ಮ ಕೈತೋಟದಲ್ಲಿ ಬೆಳೆದು, ಅದನ್ನು ಕಟ್ಟಿ ಮಾರುವುದು ಮಂಡ್ಯ ಜಿಲ್ಲೆಯಲ್ಲಿರುವ ಗಂಗಾಮತಸ್ಥರ ಕಾಯಕಗಳಲ್ಲಿ ಪಾರಂಪರಿಕವಾಗಿ ಬಂದಿರುವುದನ್ನು ಕಾಣಬಹುದು. ತಮ್ಮ ಮನೆಯ ಹಿಂದಿರುವ ಹಿತ್ತಲಿನಲ್ಲಿ ಇಲ್ಲವೇ ಮನೆಯ ಮುಂದೆ ದುಂಡು ಮಲ್ಲಿಗೆ ಮೆಳೆಯನ್ನ ಹಾಕಿರುತ್ತಾರೆ. ಹಿತ್ತಲಿನಲ್ಲಿ ವಿಶಾಲವಾದ ಸ್ಥಳವಿದ್ದರೆ ಕನಕಾಂಬರ, ಚಂಡಿನ ಹೂಗಳನ್ನು ಬೆಳೆಯುತ್ತಾರೆ. ಕೆಲವರು ಮನೆಯಿಂದ ಸ್ವಲ್ಪ ದೂರದಲ್ಲಿ ಎರಡು ಮೂರು ಗುಂಟೆ ಜಮೀನಿದ್ದರೆ ಅಂತಹ ಕಡೆಗಳಲ್ಲಿ ಸೇವಂತಿಗೆ, ಜಾಜಿಮಲ್ಲಿಗೆ, ಕನಕಾಂಬರ, ಚಂಡಿನ ಹೂಗಳನ್ನು ಬೆಳೆಯುತ್ತಾರೆ. ಇವುಗಳಿಗೆ ನೀರನ್ನು ಹತ್ತಿರದಲ್ಲಿರುವ ಸಾರ್ವಜನಿಕ ಬೋರ್‌ವೆಲ್‌ಗಳಿಂದ, ಇಲ್ಲವೆ ಅದೇ ಸ್ಥಳದಲ್ಲಿ ಚಿಕ್ಕದಾದ ಒಂದು ಗುಂಡಿಯನ್ನು ಮಾಡಿ, ಅದರಿಂದ ನೀರನ್ನು ಮಣ್ಣಿನ ಬಿಂದಿಗೆ

ಅಥವಾ ಕುಂಭಗಳಲ್ಲಿ ತೆಗೆದುಕೊಂಡು ಉಯ್ಯುತ್ತಾರೆ. ಹೂವಿನ ಬೆಳೆಯನ್ನು ಬೆಳೆಯುವುದಕ್ಕೆ ಅತ್ಯಂತ ಹೆಚ್ಚಿನ ಖರ್ಚಾಗುವುದಿಲ್ಲ. ತಾವು ಬೆಳೆದ ಹೂವುಗಳನ್ನ ಮನೆಯಲ್ಲಿ ಹೆಂಗಸರು, ಮಕ್ಕಳೆಲ್ಲ ಸೇರಿ ಕಟ್ಟಿ ಮೊಳದ ಲೆಕ್ಕದಲ್ಲಿ ಮಾರುತ್ತಾರೆ. ಹಾರಗಳನ್ನು ಸುಂದರವಾಗಿ ಕಟ್ಟುತ್ತಾರೆ. ಹಬ್ಬ–ಹರಿದಿನಗಳಲ್ಲಿ, ಮದುವೆಯ ಕಾಲದಲ್ಲಿ ಹೂವುಗಳಿಗೆ ಹೆಚ್ಚಿನ ಬೆಲೆ ಇರುವುದರಿಂದ ಕೆಲವು ಬಾರಿ ಹೆಚ್ಚಿನ ಲಾಭವು ಸಿಗುತ್ತದೆ. ಕೆಲವು ಸಂದರ್ಭಗಳಲ್ಲಿ ಮಾರಾಟವಾಗದೆ ಹೂವು ಹಾಳಾಗುವುದುಂಟು. ಈ ವೃತ್ತಿಯನ್ನು ಕೆಲವರು ಅವಲಂಬಿಸಿರುವುದರಿಂದ ಅನ್ವರ್ಥವಾಗಿ ಅವರ ಹೆಸರಿನ ಮುಂದೆ 'ಹೂವು' ಎಂಬ ಪದವನ್ನು ಸೇರಿಸಿ ಕರೆಯುತ್ತಾರೆ. ಉದಾಹರಣೆಗೆ ಹೇಳುವುದಾದರೆ ಹೂವಿನ ಚೌಡ, ಹೂವಯ್ಯನ ಬೋರ, ಹೂವಿನ ಚನ್ನಿ ಎಂಬಿತ್ಯಾದಿ ಹೆಸರುಗಳು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ತಿಳಿದು ಬಂದಿರುತ್ತದೆ. ಹೀಗೆ ಹೂವಿನ ಬೆಳೆಯೂ ಕೂಡ ಅಲ್ಪ ಪ್ರಮಾಣದಲ್ಲಿ ಹಿಂದಿನಿಂದ ಬಂದ ವೃತ್ತಿಗಳ ಸಾಲಿಗೆ ಸೇರುತ್ತದೆಂದು ಹೇಳಬಹುದು.

ಮಂಡ್ಯ ಜಿಲ್ಲೆಯ ಗಂಗಾಮತಸ್ಥರು ಕೈ ತೋಟದ ಕೃಷಿಯನ್ನು ಅವಲಂಬಿಸಿಕೊಂಡು ಜೀವನ ಸಾಗಿಸುವ ಕೆಲವು ಕುಟುಂಬಗಳನ್ನ ನೋಡಬಹುದಾಗಿದೆ. ಜಿಲ್ಲೆಯ ಏಳು ತಾಲ್ಲೂಕುಗಳಲ್ಲಿಯೂ ಕೈತೋಟದ ಕೃಷಿ ಅವಲಂಬಿಸಿರುವವರನ್ನು ಕಾಣಬಹುದಾದರೂ, ಮಳವಳ್ಳಿ, ಮದ್ದೂರು, ಮಂಡ್ಯ, ಶ್ರೀರಂಗಪಟ್ಟಣ, ಪಾಂಡವಪುರ ತಾಲ್ಲೂಕುಗಳಲ್ಲಿ ಹೆಚ್ಚಿನ ಕುಟುಂಬದವರು ಅವಲಂಬಿಸಿಕೊಂಡಿದ್ದಾರೆ. ಇದರ ಅವಲಂಬನೆಯ ಜೊತೆಗೆ ಬೇರೆ ಉದ್ಯೋಗವನ್ನು ಅವಲಂಬಿಸಿಕೊಂಡಿದ್ದಾರೆ. ಆದ್ದರಿಂದ ದಿನನಿತ್ಯದ ಜೀವನ ನಿರ್ವಹಣೆಗೆ ಸಹಾಯವಾಗಿರುವುದು ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ವಕ್ತೃಗಳೇ ಹೇಳಿದ್ದಾರೆ.

**ಪಶುಪಾಲನೆ**

ಪಶು ಸಂಪತ್ತು ಬೆನ್ನೆಲುಬು ಎಂಬುದು ಸರ್ವವಿಧಿತ. ನಮ್ಮ ದೇಶದಲ್ಲಿ ವ್ಯವಸಾಯಕ್ಕೆ ಎತ್ತುಗಳೇ ಆಧಾರ. ಅಲ್ಲದೆ ರೈತರಿಗೆ ಆರ್ಥಿಕವಾಗಿಯೂ ಜಾನುವಾರುಗಳು ಅತ್ಯಾವಶ್ಯಕವಾಗಿ ಬೇಕಾಗಿದೆ. "ಪಶುಪಾಲನೆ ಮಾನವನ ಎರಡನೇ ಕಸುಬಾಗಿತ್ತು. ಹಾಗೆಂದ ಮಾತ್ರಕ್ಕೆ ಎಲ್ಲ ಮೂಲ ಬೇಟೆಗಾರರು ಪಶುಪಾಲಕರಾದರೆಂದರ್ಥವಲ್ಲ. ಬೇಟೆಗಾರರಲ್ಲಿಯೂ ಹಲವರು ಪಶುಪಾಲಕರಾದರೆಂದು ತಿಳಿದರೆ ಸಾಕು. ಕರುಸಾಕಣೆ, ಮೇಕೆ ಸಾಕಣೆ, ದನಕರುಗಳ ಪಾಲನೆ, ಎಮ್ಮೆ ಕರುಗಳ ಪಾಲನೆಯತ್ತ ಮುಂದುವರೆದು ವಿಸ್ತಾರಗೊಂಡಿತು. ಕುರಿ, ಮೇಕೆಗಳ ಪಾಲನೆಗಿಂತಲೂ ಎಮ್ಮೆ ದನಗಳ ಪಾಲನೆ ಸ್ವಲ್ಪ ಸರಳ ಹಾಗೂ ಹೆಚ್ಚಿನ ಲಾಭದಾಯಕವಾಗಿತ್ತು"[೨೪] ಈ ಹಿನ್ನೆಲೆಯಲ್ಲಿ ನೋಡುವುದಾದರೆ ಗಂಗಾಮತಸ್ಥರು ಇಂದಿಗೂ

ಪಶುಪಾಲನೆಯನ್ನು ಮಾಡುತ್ತಾ ಬಂದವರಲ್ಲಿ ಇವರೂ ಸಹ ಇದ್ದಾರೆ. ವ್ಯವಸಾಯಕ್ಕಾಗಿ ಎತ್ತು, ಹಾಲಿಗಾಗಿ ಹಸು ಮತ್ತು ಎಮ್ಮೆಗಳು, ಮೊಟ್ಟೆ ಮತ್ತು ಮಾಂಸಕ್ಕಾಗಿ ಕೋಳಿ, ಉಣ್ಣೆ ಮತ್ತು ಮಾಂಸಕ್ಕಾಗಿ ಕುರಿ ಮತ್ತು ಮೇಕೆ, ಇವುಗಳ ಸಾಕಾಣಿಕೆ ವ್ಯವಸಾಯದ ಜೊತೆಯಲ್ಲಿಯೇ ಅವ್ಯಾಹತವಾಗಿ ಸಾಗಿ ಬಂದಿದೆ. ಪ್ರಸ್ತುತ ಪರಿಸ್ಥಿತಿಯಲ್ಲಂತೂ ಆರ್ಥಿಕ ಸುಧಾರಣೆಗಾಗಿ ಇವುಗಳ ಸಾಕಾಣಿಕೆ ಅತ್ಯಗತ್ಯವಾಗಿದೆ.

ಗಂಗಾಮತಸ್ಥರು "ತಮ್ಮ ಮೂಲ ವೃತ್ತಿಯೊಂದಿಗೆ ಬೇಸಾಯ ಮತ್ತು ಪಶುಪಾಲನೆಯಲ್ಲಿ ತೊಡಗಿರುತ್ತಾರೆ. ತಮ್ಮದೇ ಆದ ಮನೆ, ಬೇಸಾಯ ಭೂಮಿ, ದನಕರುಗಳು, ಕೋಳಿ, ಕುರಿ, ಮೇಕೆ ಮುಂತಾದವುಗಳನ್ನು ಹೊಂದಿದ್ದಾರೆ."[೨೫] ಇವರಲ್ಲಿ ಶೇಕಡ ೫ ರಿಂದ ೮ ರಷ್ಟು ಕುಟುಂಬಗಳಲ್ಲಿ ಪಶುಪಾಲನೆಯನ್ನ ನಂಬಿದವರಿದ್ದಾರೆ. ಇಷ್ಟೇ ಅಲ್ಲದೆ ಪ್ರತಿಶತ ೯೫ ರಷ್ಟು ಕುಟುಂಬಗಳಲ್ಲಿ ಒಂದು ಹಸುವನ್ನೋ, ಎಮ್ಮೆಯನ್ನೋ, ಒಂದೆರಡು ಕುರಿ, ಕೋಳಿ, ಮೇಕೆ ಇವುಗಳನ್ನ ಸಾಕಿರುವುದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕಂಡು ಬಂದಿರುತ್ತದೆ. ವ್ಯವಸಾಯವನ್ನ ನಂಬಿಕೊಂಡಿರುವ ಕೆಲವು ಕುಟುಂಬಗಳು ಎತ್ತುಗಳನ್ನ ಸಾಕಿರುತ್ತಾರೆ. ಕೆಲವು ಕುಟುಂಬಗಳಲ್ಲಿ ೫೦ ರಿಂದ ೧೦೦ ರವರೆಗೆ ಕುರಿ ಇಲ್ಲವೇ ಮೇಕೆಗಳನ್ನ ಸಾಕುತ್ತಾರೆ. ಇವುಗಳನ್ನು ಮೇಯಿಸುವುದಕ್ಕಾಗಿಯೇ ಅದೇ ಕುಟುಂಬದಲ್ಲಿ ಒಬ್ಬನನ್ನ ನೇಮಿಸುತ್ತಾರೆ. ಮಂಡ್ಯ ಜಿಲ್ಲೆಯ ಮಳವಳ್ಳಿ, ಮದ್ದೂರು, ಮಂಡ್ಯ ತಾಲ್ಲೂಕುಗಳಲ್ಲಿ ಬಂಡೂರು ಕುರಿ ತಳಿ ಹೆಚ್ಚಿನ ಸಂಖ್ಯೆಯಲ್ಲಿದ್ದು, ಉಳಿದ ತಾಲ್ಲೂಕುಗಳಲ್ಲಿ ಬಂಡೂರು ತಳಿ ಮತ್ತು ಇತರೆ ತಳಿಯ ಕುರಿಗಳಿರುತ್ತವೆ. ಮಳವಳ್ಳಿ ತಾಲ್ಲೂಕಿನ ದನಗೂರಿನಲ್ಲಿ, ಬಂಡೂರು ತಳಿ ಸಂವರ್ಧನಾ ಕೇಂದ್ರವಿದ್ದು, ಬಂಡೂರು ತಳಿ ಹೆಚ್ಚು ಉತ್ಪಾದಿಸಲು ಕ್ರಮ ಕೈಗೊಳ್ಳಲಾಗುತ್ತಿದೆ. ಕುರಿಯ ಗೊಬ್ಬರವೂ ಶ್ರೇಷ್ಠವಾಗಿದ್ದು ಕುರಿಯಿದ್ದವನು, "ಕುಬೇರ" ಎಂಬ ನಾಣ್ಣುಡಿಯಿದೆ. ಹಾಗಾಗಿ ಗಂಗಾಮತಸ್ಥರು ಕುರಿ ಸಾಕಾಣಿಕೆಯ ಕೆಲಸವನ್ನು ಮಾಡುತ್ತಿದ್ದು, ಸರ್ಕಾರವು ಕೂಡ ಸಹಾಯ ಮಾಡುತ್ತಿದ್ದು, ಇದರಿಂದ ಆದಾಯವನ್ನು ಗಳಿಸುತ್ತಿದ್ದಾರೆ.

ಗಂಗಾಮತಸ್ಥರು ಮೇಕೆಗಳನ್ನು ಸಹ ಸಾಕುತ್ತಾರೆ. ಕೆಲವೊಂದು ಕುಟುಂಬಗಳು ೫೦ ರಿಂದ ೧೦೦ ಮೇಕೆಗಳವರೆಗೆ ಸಾಕುತ್ತಾರೆ. ಇವುಗಳನ್ನ ಮೇಯಿಸಲು ಒಬ್ಬನನ್ನು ನೇಮಿಸಿರುತ್ತಾರೆ. ಆತನಿಗೆ ಇವುಗಳನ್ನು ಸಾಕುವ ಪೂರ್ಣ ಜವಾಬ್ದಾರಿಯನ್ನ ಕೊಟ್ಟಿರುತ್ತಾರೆ. ಆತ ಪ್ರತಿನಿತ್ಯ ಊರಿನ ಅಕ್ಕ-ಪಕ್ಕದಲ್ಲಿರುವ ಬೆಟ್ಟ-ಗುಡ್ಡಗಳ ಕಡೆಗೆ ಇಲ್ಲವೆ ಗೋಮಾಳಕ್ಕೆ ಹೊಡೆದುಕೊಂಡು ಹೋಗಿ ಮೇಯಿಸುತ್ತಾನೆ. ಇದರ ಜೊತೆಗೆ ಮೇಕೆಗಳಿಗೆ ಗಿಡ-ಮರಗಳ ಸೊಪ್ಪನ್ನು ಕಡಿದು ಹಾಕುತ್ತಾರೆ. ಕಾಡಿರುವ ಪ್ರದೇಶಗಳಲ್ಲಿ ಇವುಗಳ ಸಂಖ್ಯೆ ಹೆಚ್ಚು. ಅಲ್ಲದೆ

ಮೇಕೆಗಳಲ್ಲಿ ರೋಗ ನಿರೋಧಕ ಶಕ್ತಿ ಹೆಚ್ಚಿರುವುದರಿಂದ ಎಂತಹ ವಾತಾವರಣದಲ್ಲಿಯೂ ಬದುಕಬಲ್ಲವಾದ್ದರಿಂದ ಸಾಕಾಣಿಕೆ ಸುಲಭ. ವರ್ಷದಲ್ಲಿ ಪ್ರತಿಯೊಂದು ಆಡುಗಳು ಎರಡು ಬಾರಿ ಮರಿಯನ್ನು ಹಾಕುತ್ತವೆ. ಕೆಲವೊಂದು ಆಡುಗಳು ೪ ಮರಿಗಳವರೆವಿಗೂ ಈಯ್ಯುವುದುಂಟು. ಆದ್ದರಿಂದ ಮೇಕೆ ಸಾಕಾಣಿಕೆಯಿಂದಲೂ ಇವರು ಆದಾಯವನ್ನು ಗಳಿಸುತ್ತಿದ್ದಾರೆ.

ಕೋಳಿ ಸಾಕಾಣಿಕೆಯು ಹೆಚ್ಚಿನ ಪ್ರಮಾಣದಲ್ಲಿ ಕಂಡು ಬರುವುದಿಲ್ಲ. ಆದರೆ ತಮಗೆ ಆಹಾರಕ್ಕಾಗಿ ಬೇಕಾಗುವಂತಹ ನಾಟಿ ಕೋಳಿಗಳನ್ನು ಸಾಕುತ್ತಾರೆ. ಕೆಲವರು ನಾಟಿ ಕೋಳಿಗಳನ್ನ ಸಾಕಲು ಅಲ್ಪ-ಸ್ವಲ್ಪ ಸ್ಥಳವಿದ್ದರೆ ೧೦ ರಿಂದ ೨೦ ಕೋಳಿಗಳವರೆವಿಗೂ ಸಾಕುವುದುಂಟು. ಇವುಗಳಿಂದ ಬರುವ ಮೊಟ್ಟೆಯನ್ನು ಮತ್ತು ಮಾರಾಟಕ್ಕೆ ಯೋಗ್ಯವಾಗಿರುವ ಕೋಳಿಗಳನ್ನು ಹತ್ತಿರ ಸಂತೆಗೆ ಕೊಂಡೊಯ್ದು ಮಾರುತ್ತಾರೆ. ಇದರಿಂದ ಸಿಗುವ ಹಣದಿಂದ ಉಪ್ಪು-ಹುಡಿಯನ್ನ ಖರೀದಿಸಲು ಸಹಾಯವಾಗುತ್ತದೆ ಎನ್ನುತ್ತಾರೆ.

ಮೊಲವನ್ನು ಸಹ ಇವರು ಸಾಕುತ್ತಾರೆ. ಇದರೊಟ್ಟಿಗೆ ಗೌಜಲಹಕ್ಕಿಗಳನ್ನು ಸಾಕುವುದುಂಟು. ಇವುಗಳ ಸಾಕಾಣಿಕೆಯನ್ನು ವಿರಳವಾಗಿ ಕಾಣಬಹುದಷ್ಟೆ. ಇವುಗಳ ಸಾಕಾಣಿಕೆ ಇತ್ತೀಚಿನ ದಿನಗಳಲ್ಲಿ ಕಡಿಮೆಯಾಗಿದೆ. ಆಹಾರಕ್ಕಾಗಿ ಮತ್ತು ಮಾರುವುದಕ್ಕಾಗಿ ಮೊಲವನ್ನು ಮತ್ತು ಗೌಜಲ ಹಕ್ಕಿಗಳನ್ನ ಸಾಕುತ್ತಿದ್ದರು. ಆದರೆ ಇಂದಿನ ದಿನಗಳಲ್ಲಿ ಇವುಗಳ ಸಾಕಾಣಿಕೆಯು ಹೆಚ್ಚಾಗಿ ಕಂಡುಬರುವುದಿಲ್ಲ.

ಹಸು ಮತ್ತು ಎಮ್ಮೆಗಳನ್ನು ಹಾಲಿನ ಉತ್ಪಾದನೆಗಾಗಿ ಸಾಕುತ್ತಾರೆ. ಹಸುಗಳಲ್ಲಿ ನಾಡ ಹಸು ಮತ್ತು ವಿಲಾಯಿತಿ ಹಸುಗಳೆರಡನ್ನು ಸಾಕುತ್ತಾರೆ. ನಾಡ ಹಸುಗಳನ್ನು ಕುರಿ ಅಥವಾ ಮೇಕೆ ಮೇಯಿಸುವವರು ಅದರೊಟ್ಟಿಗೆ ಕಾಡಿಗೆ ಮೇಯ್ಯಲು ಹೊಡೆದುಕೊಂಡು ಹೋಗುತ್ತಾರೆ. ಕೆಲವರು ನಾಡ ಹಸುಗಳನ್ನು ತಮ್ಮ ದನದ ಕೊಟ್ಟಿಗೆಯಲ್ಲಿಯೇ ಕಟ್ಟಿ ಅದಕ್ಕೆ ಬೇಕಾಗುವ ಆಹಾರವನ್ನ ಹಾಕಿ ಸಾಕುವುದುಂಟು. ಇದರ ಹಾಲನ್ನು ತಮ್ಮ ಮನೆಯ ಬಳಕೆಗಾಗಿ ಬಳಸಿಕೊಳ್ಳುತ್ತಾರೆ. ಹಾಲಿನ ಉತ್ಪಾದನೆ ಹೆಚ್ಚಾಗಿದ್ದರೆ, ಹಾಲಿನ ಕೇಂದ್ರಗಳಿಗೆ ಇಲವೇ ಪಕ್ಕದ ಮನೆಯವರಿಗೆ ವರ್ತನೆಗೆ ಹಾಕಿಕೊಡುತ್ತಾರೆ. ಇತ್ತೀಚಿನ ದಿನಗಳಲ್ಲಿ, ಹೈನುಗಾರಿಕೆಯ ಅಭಿವೃದ್ಧಿಗಾಗಿ ಸರ್ಕಾರವು ವಿಲಾಯಿತಿ ಹಸುಗಳನ್ನು ಕೊಂಡುಕೊಳ್ಳಲು ಸಾಲ-ಸೌಲಭ್ಯಗಳನ್ನು ಕಲ್ಪಿಸಿಕೊಟ್ಟಿರುವುದರಿಂದ ಈ ಜನಾಂಗದ ಕೆಲವರು ಇದರ ಸದುಪಯೋಗವನ್ನು ಪಡೆದುಕೊಂಡು ವಿಲಾಯಿತಿ ಹಸುಗಳನ್ನು ಸಾಕುತ್ತಿದ್ದಾರೆ. ಆದರೆ ಇದರ ಸೌಲಭ್ಯವನ್ನ ಪಡೆದುಕೊಂಡಿರುವವರು ಶೇಕಡ ೩ ರಿಂದ ೫ ರಷ್ಟು ಜನರು ಮಾತ್ರ, ಇದರ ಸಾಕಾಣಿಕೆಗಾಗಿ ಹಾಲಿನ ಕೇಂದ್ರದವರು ರಿಯಾಯಿತಿ ದರದಲ್ಲಿ ಇಂಡಿ-ಬೂಸ, ಪೀಡ್ಸ್ ಇತ್ಯಾದಿ ಆಹಾರ ಸಾಮಗ್ರಿಗಳನ್ನು ಕೊಡುತ್ತಾರೆ. ಇದರ ಜೊತೆಗೆ ಭತ್ತದ ಒಣ

ಹುಲ್ಲು, ಸೀಮೆ ಹುಲ್ಲನ್ನು ಹಾಕಿ ಹಸುಗಳನ್ನು ಸಾಕುತ್ತಾರೆ. ಪ್ರತಿಯೊಂದು ಹಸುಗಳು ಸರಾಸರಿ ೬ ರಿಂದ ೧೦ ಲೀಟರ್ ಹಾಲನ್ನು ಬೆಳಗ್ಗೆ – ಸಂಜೆ ಕೊಡುತ್ತವೆ. ಇದರೆಲ್ಲಾ ಉಸ್ತುವಾರಿಯನ್ನ ಸಾಮಾನ್ಯವಾಗಿ ಹೆಂಗಸರೇ ನೋಡಿಕೊಳ್ಳುತ್ತಾರೆ. ಅದೇ ರೀತಿಯಲ್ಲಿ ಶೇಕಡ ೧೦ ರಷ್ಟು ಜನರು ಎಮ್ಮೆಗಳನ್ನು ಸಾಕುವುದುಂಟು. ಪ್ರತಿಯೊಂದು ಎಮ್ಮೆಗಳು ೩ ರಿಂದ ೪ ಲೀಟರ್ ಹಾಲನ್ನು ಕೊಡುತ್ತವೆ. ಎಮ್ಮೆಗಳನ್ನು ಸಾಕುವುದು ಕೂಡ ಹೆಂಗಸರೆ. ಇದರ ಮೇವಿಗಾಗಿ ಹೆಂಗಸರು ಅಥವಾ ಹುಡುಗರು ಗದ್ದೆಯ ಬದಿಯಲ್ಲಿ ಬೆಳೆಯುವ ಹಸಿರು ಹುಲ್ಲನ್ನು ಕೊಯ್ದು ತಂದು ಎಮ್ಮೆಗಳನ್ನು ಸಾಕುತ್ತಾರೆ. ಇತ್ತೀಚಿನ ದಿನಗಳಲ್ಲಿ ಹಾಲಿನ ದರ ೧೨ ರೂ.ಗಳವರೆಗೆ ಇರುವುದರಿಂದ ಹಸು, ಎಮ್ಮೆಯ ಸಾಕಾಣಿಕೆಯಿಂದ ಪ್ರತಿನಿತ್ಯ ೧೦೦ ರೂ.ಗಳಿಂದ ೨೦೦ ರೂ.ಗಳವರೆಗೆ ಆದಾಯವನ್ನ ಗಳಿಸುತ್ತಾರೆ. ಇದೇ ಆ ಕುಟುಂಬದವರ ಜೀವನಾಧಾರವು ಆಗಿರುತ್ತದೆ. ಒಟ್ಟಿನಲ್ಲಿ ಜಾನುವಾರುಗಳ ಸಾಕಾಣಿಕೆಯು ಗಂಗಾಮತಸ್ಥರ ಆರ್ಥಿಕ ಸ್ಥಿತಿ–ಗತಿಯನ್ನ ನಿರ್ಧರಿಸುತ್ತದೆ.

ಹೀಗೆ ಮಂಡ್ಯ ಜಿಲ್ಲೆಯ ಗಂಗಾಮತಸ್ಥರು ಪಶುಪಾಲನೆಯನ್ನು ತಮ್ಮ ಇತರ ಕಸುಬುಗಳ ಜೊತೆಗೆ ಮಾಡುವುದರಿಂದ ಅವರ ಜೀವನ ನಿರ್ವಹಣೆಗೆ ತುಂಬಾ ಸಹಾಯಕವಾಗಿದೆ. "ಪಶು ಸಂಪತ್ತೇ ದೇಶದ ಸಂಪತ್ತು" ಹೈನುಗಾರಿಕೆ ಅಭಿವೃದ್ಧಿ ದೇಶದ ಆರ್ಥಿಕ ಪ್ರಗತಿ ಸಮೃದ್ಧಿ ಎಂಬಂತೆ ಪಶುಪಾಲನೆಯನ್ನು ಮಾಡುತ್ತಿದ್ದಾರೆ.

### ವ್ಯಾಪಾರ

ಗಂಗಾಮತಸ್ಥರು ವಿವಿಧ ರೀತಿಯ ವ್ಯಾಪಾರಗಳನ್ನು ಅವಲಂಬಿಸಿರುವುದು ಕಂಡು ಬರುತ್ತದೆ. ಜನರ ನಿತ್ಯ ಬದುಕಿನಲ್ಲಿ ವ್ಯಾಪಾರ ಪ್ರಭಾವ ಮಾಡಿರುವುದು ಅತಿ ಹೆಚ್ಚು. ಅಂತೆಯೇ ಗಂಗಾಮತಸ್ಥರ ಮೇಲೆಯು ವ್ಯಾಪಾರ ಎಂಬುದು ಪ್ರಭಾವ ಬೀರಿದೆ. ವ್ಯಾಪಾರವೆಂದರೆ ಗ್ರಾಹಕರಿಗೆ ಅಗತ್ಯವಾದ ವಸ್ತುಗಳನ್ನು ಒದಗಿಸುವುದಾಗಿದೆ. ಇವರು ಹೂವಿನ ವ್ಯಾಪಾರ, ತರಕಾರಿ ವ್ಯಾಪಾರ, ಹಣ್ಣಿನ ವ್ಯಾಪಾರ, ಸೊಪ್ಪಿನ ವ್ಯಾಪಾರ, ವೀಳ್ಯದೆಲೆ ವ್ಯಾಪಾರ, ಬುಟ್ಟಿ ಮೊರ, ಪಾತ್ರೆಕುಕ್ಕೆ, ಮಕ್ಕರಿ ವ್ಯಾಪಾರ, ಸುಣ್ಣದ ವ್ಯಾಪಾರ, ಕರಿಮೀನು, ಸೀಗಡಿ ವ್ಯಾಪಾರ ಇತ್ಯಾದಿ ವ್ಯಾಪಾರಗಳನ್ನು ಮಾಡುತ್ತಾರೆ.

ಹಣ್ಣು, ತರಕಾರಿ, ಹೂವುಗಳನ್ನು ಬೆಳೆಯುವವರು ಸ್ವತಃ ತಾವೇ ವ್ಯಾಪಾರವನ್ನು ಮಾಡುವವರಾಗಿದ್ದರೆ, ಉಳಿದವರು ಹತ್ತಿರದ ಪೇಟೆ ಅಥವಾ ಸಂತೆಗಳಿಂದ ಖರೀದಿಸಿ ತಂದು ವ್ಯಾಪಾರವನ್ನ ಮಾಡುತ್ತಾರೆ. ತಾವು ವಾಸಿಸುವ ಗ್ರಾಮಗಳಲ್ಲಿಯೇ ಕೆಲವರು ವ್ಯಾಪಾರ

ಮಾಡಿದರೆ, ಇನ್ನು ಕೆಲವರು ಅಕ್ಕ-ಪಕ್ಕ ಊರುಗಳಿಗೆ ತೆರಳಿ ವ್ಯಾಪಾರ ಮಾಡುವುದುಂಟು. ಸ್ತ್ರೀಯರು ಮಕ್ಕರಿಯಲ್ಲಿ ವೀಳ್ಯದೆಲೆ ವ್ಯಾಪಾರ ಮಾಡುವುದುಂಟು. ಸ್ತ್ರೀಯರು ಮಕ್ಕರಿಯಲ್ಲಿ ವೀಳ್ಯದೆಲೆ, ಸೊಪ್ಪು, ತರಕಾರಿ, ಹಣ್ಣು ಇವುಗಳನ್ನು ಹೊತ್ತುಕೊಂಡು ಪಕ್ಕದೂರಿಗೆ ಹೋಗಿ ವ್ಯಾಪಾರ ಮಾಡುತ್ತಾರೆ. ಇದರಿಂದ ಅಲ್ಪ-ಸ್ವಲ್ಪ ಆದಾಯ ಸಿಗುತ್ತದೆಂದು ವಕ್ತೃ ಪುಳಚಮ್ಮ ಹೇಳುತ್ತಾರೆ. ಕೆಲವು ಹೆಂಗಸರು ಸೀಗಡಿ, ಕರಿಮೀನುಗಳನ್ನ ಪಾವು, ಸೇರಿನ ಲೆಕ್ಕದಲ್ಲಿ ಮಾರಾಟ ಮಾಡುತ್ತಾರೆ. ಇದರಿಂದ ಅವರ ಬಂಡವಾಳದ ಮೇಲೆ ಹೆಚ್ಚೆಂದರೆ ಒಟ್ಟು ವ್ಯಾಪಾರದಲ್ಲಿ ೧೦೦ ರಿಂದ ೧೫೦ ರೂ.ಗಳವರೆಗೆ ಆದಾಯ ಸಿಗುತ್ತದೆಂದು ಹೇಳುತ್ತಾರೆ. ಮಕ್ಕರಿ, ಕುಕ್ಕೆಯ ವ್ಯಾಪಾರದಲ್ಲಿ ಹೆಂಗಸರು – ಗಂಡಸರು ಇಬ್ಬರೂ ಭಾಗವಹಿಸುವುದನ್ನು ಕಾಣಬಹುದು.

ಜಿಲ್ಲೆಯ ಪ್ರಮುಖ ಕೇಂದ್ರಗಳಲ್ಲಿ, ತಾಲ್ಲೂಕುಗಳಲ್ಲಿ, ಪಟ್ಟಣಗಳಲ್ಲಿ ಇವರು ಮಾಂಸದ ಅಂಗಡಿ ಮತ್ತು ಮೀನು ಮಾರಾಟ ಕೇಂದ್ರಗಳನ್ನ ಹೊಂದಿದ್ದಾರೆ. ಕುರಿ, ಮೇಕೆಗಳನ್ನ ಸಂತೆಯಿಂದ ಕೊಂಡುತಂದು, ಅದರ ಮಾಂಸವನ್ನ ಮಾರುವುದುಂಟು. ಕೆಲವು ಸಂದರ್ಭದಲ್ಲಿ ಕುರಿ ಮತ್ತು ಮೇಕೆಯ ಒಡೆಯನಿಂದ ನೇರವಾಗಿ, ಕೊಂಡು ತಂದು ಕುರಿ, ಮೇಕೆ ಮಾಂಸ ಮಾರಲಾಗುತ್ತದೆ. ಆ ಸಂದರ್ಭದಲ್ಲಿ ಕೆ.ಜಿ. ಮಾಂಸಕ್ಕೆ ೫ ರಿಂದ ೧೦ ರೂ.ಗಳವರೆಗೆ ಕಮೀಷನ್ ಹಣವನ್ನು ಕೊಡುತ್ತಾರೆ. ಈ ರೀತಿಯ ವ್ಯಾಪಾರವು ಉಂಟು. ಮೀನಿನ ವ್ಯಾಪಾರಕ್ಕೆ ಸಂಬಂಧಿಸಿದಂತೆ ಮೀನಿನ ಮಳಿಗೆಗಳನ್ನ ತಮ್ಮ ಸಂಘಗಳ ವತಿಯಿಂದ ತೆರೆಯಲಾಗಿರುತ್ತದೆ. ಇಂತಹ ಕಡೆಗಳಲ್ಲಿ ಮೀನುಗಳನ್ನ ಮಾರಲಾಗುತ್ತದೆ. ಈ ಮಳಿಗೆಗಳಲ್ಲಿ ಹತ್ತರಿಂದ ಇಪ್ಪತ್ತು ಅಂಗಡಿಗಳವರೆಗೂ ಇರುತ್ತವೆ. ಇಲ್ಲಿ ವ್ಯಾಪಾರ ಮಾಡುವವರು ತಾವೇ ಸ್ವತಃ ತಮ್ಮ ಗುತ್ತಿಗೆ ಕೆರೆಯಿಂದ ಹಿಡಿದಿರುವ ಮೀನುಗಳನ್ನ ಮಾರಾಟ ಮಾಡಿದರೆ, ಇನ್ನು ಕೆಲವರು ಬೇರೆಯವರು ಹಿಡಿದಿರುವ ಮೀನುಗಳನ್ನ ಕೊಂಡುಕೊಂಡು, ತಮ್ಮ ಅಂಗಡಿಯಲ್ಲಿ ವ್ಯಾಪಾರ ಮಾಡುತ್ತಾರೆ. ಮೀನು ಹಿಡಿದು ತಂದವರಿಗೆ ೪೦ ರೂ.ಗಳಿಂದ ೫೦ ರೂ.ಗಳವರೆಗೆ ೧ ಕೆ.ಜಿ.ಗೆ ಹಣ ಕೊಡುತ್ತಾರೆ. ಮಾರಾಟ ಮಾಡುವವರು ೮೦ ರೂ.ಗಳಿಂದ ೧೦೦ ರೂ.ಗಳವರೆವಿಗೂ ಮಾರಾಟ ಮಾಡುತ್ತಾರೆ. ಮಾರಾಟ ಮಾಡುವವರಿಗೆ ಕೆಲವು ಸಂದರ್ಭದಲ್ಲಿ ಹೆಚ್ಚಿನ ಲಾಭ ಸಿಗುತ್ತದೆ. ಮೀನಿನ ಮಳೀಗೆಯಲ್ಲಿ ಅಂಗಡಿಯನ್ನ ಹೊಂದಿರುವವರು ತಮ್ಮ ಜನಾಂಗದ ಸಂಘಕ್ಕೆ ಇಂತಿಷ್ಟು ಹಣವನ್ನು ಕೊಡಬೇಕಾಗುತ್ತದೆ. ಇದು ಒಂದು ರೀತಿಯಲ್ಲಿ ಸುಂಕವಿದ್ದಂತೆ. ಇವರ ವ್ಯಾಪಾರಗಳಲ್ಲಿ ಪ್ರಮುಖವಾದುದ್ದೆಂದರೆ ಮೀನು ಮಾರಾಟವಾಗಿದೆ.

ಗಂಡಸರು ಸುಣ್ಣವನ್ನು ಸುಟ್ಟರೆ, ಆ ಸುಟ್ಟ ಸುಣ್ಣವನ್ನ ಹೆಂಗಸರು ಮಕ್ಕರಿಯಲ್ಲಿ ಹೊತ್ತುಕೊಂಡು ವ್ಯಾಪಾರ ಮಾಡುತ್ತಾರೆ. ಇದರ ಜೊತೆಗೆ ಹೆಚ್ಚಾಗಿ ಸಂತೆಯಲ್ಲಿ ಸುಣ್ಣದ

ವ್ಯಾಪಾರ ಮಾಡುತ್ತಾರೆ. ವಾರಕ್ಕೊಮ್ಮೆ ನಡೆಯುವ ಸಂತೆಯಲ್ಲಿ ಗಂಗಾಮತಸ್ಥರು ವಿವಿಧ ರೀತಿಯ ವ್ಯಾಪಾರವನ್ನು ಮಾಡುವುದುಂಟು. ಸಂತೆಯಲ್ಲಿ ತರಕಾರಿ, ಸೊಪ್ಪು, ಹಣ್ಣು, ತೆಂಗಿನಕಾಯಿ, ಹೂವು, ಸೀಗಡಿ, ಕರಿಮೀನು, ನಾಟಿಕೋಳಿ, ಮೊಟ್ಟೆ, ಗಿರಿರಾಜ ಕೋಳಿ ಇವುಗಳನ್ನು ಮಾರುತ್ತಾರೆ. ಸಂತೆಯಲ್ಲಿ ವ್ಯಾಪಾರ ಮಾಡುವವರು ಸುಂಕವನ್ನ ಕಟ್ಟಬೇಕಾಗುತ್ತದೆ. ಭಾನುವಾರ ಹಲಗೂರು ಸಂತೆ, ಶುಕ್ರವಾರ ಮಳವಳ್ಳಿ ಸಂತೆ, ಶನಿವಾರ ಕಿರುಗಾವಲು ಸಂತೆ, ಗುರುವಾರ ಮಂಡ್ಯ ಸಂತೆ, ಮದ್ದೂರು ಸಂತೆ ಇತ್ಯಾದಿ ಕಡೆಗಳಲ್ಲಿ ವ್ಯಾಪಾರ ಮಾಡುತ್ತಾರೆ. ಇಷ್ಟೇ ಅಲ್ಲದೆ ಜಿಲ್ಲಾ ಮತ್ತು ತಾಲ್ಲೂಕು ಮಟ್ಟದಲ್ಲಿರುವ ತರಕಾರಿ ಮಾರುಕಟ್ಟೆಯಲ್ಲಿ ವ್ಯಾಪಾರ ಮಾಡುತ್ತಾರೆ. ಇವರ ಮತ್ತೊಂದು ಪ್ರಮುಖ ವ್ಯಾಪಾರವೆಂದರೆ ಹೂವಿನ ವ್ಯಾಪಾರ. ವಿವಿಧ ತರಹದ ಹೂವುಗಳನ್ನ ಕೊಂಡು ತಂದು ಹಾರ, ಕಟ್ಟಿದ ಹೂವು, ಬಿಡಿ ಹೂವು ಇವುಗಳನ್ನ ಮಾರಾಟ ಮಾಡುತ್ತಾರೆ. ಹೂವಿನ ವ್ಯಾಪಾರ ಮಾಡುವವರು ಗಂಡಸರಿಗಿಂತ ಹೆಂಗಸರೇ ಹೆಚ್ಚಾಗಿದ್ದಾರೆ. ಹೂವುಗಳನ್ನ ಸ್ಥಳೀಯ ಹೂವಿನ ತೋಟಗಳಿಂದ, ಇಲ್ಲವೆ ಮಾರುಕಟ್ಟೆಯಿಂದ ಖರೀದಿಸುತ್ತಾರೆ. ಹೀಗೆ ಹೂವಿನ ವ್ಯಾಪಾರವನ್ನ ಮಾಡುವವರಲ್ಲಿ ಅತ್ಯಂತ ಹೆಚ್ಚಿನವರು ಗಂಗಾಮತಸ್ಥರಾಗಿದ್ದಾರೆ.

ಜಿಲ್ಲೆಯಲ್ಲಿರುವ ಪ್ರಮುಖ ದೇವಾಲಯಗಳನ್ನೊಳಗೊಂಡಂತೆ ಸ್ಥಳೀಯ ದೇವಾಲಯಗಳಲ್ಲಿಯೂ ಸಹ ಗಂಗಾಮತಸ್ಥರೇ ವ್ಯಾಪಾರ ಮಾಡುವವರು. ಆ ದೇವಾಲಯದ ಆಡಳಿತ ಮಂಡಳಿಯವರಿಂದ ಪರವಾನಿಗೆ ಪಡೆದು ವ್ಯಾಪಾರ ಮಾಡುತ್ತಾರೆ. ದೇವರ ಪೂಜೆಗೆ ಬೇಕಾಗುವ ಹಣ್ಣು-ಕಾಯಿ, ಗಂಧದ ಕಡ್ಡಿ, ಕರ್ಪೂರ, ಧೂಪ, ನಿಂಬೆಹಣ್ಣು, ತಡೆಬಳೆ ಮಾರುತ್ತಾರೆ. ಇಷ್ಟೇ ಅಲ್ಲದೆ ತಿಂಡಿ ಪದಾರ್ಥಗಳನ್ನು ಮಾರುತ್ತಾರೆ. ಸಿಹಿ ತಿಂಡಿ, ಕಡಲೆ ಪುರಿ, ಕಾರ, ಹೂವು ಇತ್ಯಾದಿಗಳನ್ನು ದೇವಾಲಯಗಳ ಹೊರಗೆ ವ್ಯಾಪಾರ ಮಾಡುತ್ತಾರೆ. ಈ ರೀತಿಯ ವ್ಯಾಪಾರಗಳಿಂದ ಅಲ್ಪ-ಸ್ವಲ್ಪ ಲಾಭ ಸಿಗುತ್ತದೆ. ಕೆಲವು ಸಂದರ್ಭದಲ್ಲಿ ಹೂವು ಹಣ್ಣುಗಳು ಇವುಗಳ ವ್ಯಾಪಾರವು ಆಗದಿದ್ದಾಗ ನಷ್ಟವು ಉಂಟಾಗುತ್ತದೆ. ವರ್ಷಪೂರ್ತಿ ದೇವಾಲಯಗಳನ್ನೆ ನಂಬಿಕೊಂಡು ವ್ಯಾಪಾರ ಮಾಡಿ ಬದುಕುತ್ತಿರುವ ಜನರನ್ನು ನೋಡಬಹುದು. ಮಳವಳ್ಳಿಗೆ ಸಂಬಂಧಿಸಿದಂತೆ ದಂಡಿನ ಮಾರಮ್ಮ ದೇವಸ್ಥಾನ, ಉಕ್ಕಡದ ಮಾರಮ್ಮ, ಯತ್ತಂಬಾಡಿಯ ಕಾಳದೇವರು, ಮದ್ದೂರಿನ ಮದ್ದೂರಮ್ಮ ಹೀಗೆ ಇತ್ಯಾದಿ ದೇವಾಲಯಗಳನ್ನ ಹೆಸರಿಸಬಹುದು. ಇಷ್ಟೇ ಅಲ್ಲದೆ ಹಬ್ಬ-ಹರಿದಿನಗಳು, ಜಾತ್ರೆಗಳು ಇಲ್ಲೆಲ್ಲ ಇವರು ವ್ಯಾಪಾರವನ್ನು ಮಾಡುತ್ತಾರೆ. ಕೆಲವು ಬಾರಿ ಇವರು ಸಹ ದಳ್ಳಾಳಿಗಳ ಅಥವಾ ಮಧ್ಯವರ್ತಿಗಳಿಂದ ತೊಂದರೆಗೆ ಒಳಗಾಗುತ್ತಾರೆ. ಇಂತಹ ಸಂದರ್ಭದಲ್ಲಿ ನಷ್ಟ ಸಂಭವಿಸುತ್ತದೆ.

ಒಟ್ಟಾರೆಯಾಗಿ ಹೇಳುವುದಾದರೆ ಜಿಲ್ಲೆಯ ಗಂಗಾಮತಸ್ಥರ ಆರ್ಥಿಕ ಸ್ಥಿತಿ-ಗತಿಯನ್ನ ನಿರ್ಧರಿಸುವುದರಲ್ಲಿ ವ್ಯಾಪಾರವು ಒಂದಾಗಿದೆ. ಸಣ್ಣ-ಪುಟ್ಟ ವ್ಯಾಪಾರಗಳ ಜೊತೆಗೆ ಶೇಕಡ ೨ ರಿಂದ ೩ ರಷ್ಟು ಜನರು ದೊಡ್ಡ ಪ್ರಮಾಣದಲ್ಲಿ ವ್ಯಾಪಾರ ಮಾಡುತ್ತಾರೆ. ಭತ್ತದ ವ್ಯಾಪಾರ, ಕಬ್ಬಿನ ವ್ಯಾಪಾರ, ಜಾನುವಾರುಗಳ ವ್ಯಾಪಾರ, ದಿನಸಿ ಅಂಗಡಿ, ಕಬ್ಬಿಣ, ಸಿಮೆಂಟು ಇತ್ಯಾದಿ ಪ್ರಮುಖ ವ್ಯಾಪಾರಗಳಲ್ಲಿ ತೊಡಗಿದ್ದಾರೆ. ಇಂತಹ ವ್ಯಾಪಾರಸ್ಥರ ಜೀವನ ಸ್ಥಿತಿ ಬೇರೆಯವರಿಗಿಂತ ಉತ್ತಮವಾಗಿದೆ.

### ಕೂಲಿ ಕೆಲಸ

ಜೀವನ ಸಾಗಿಸಲು ಶೇಕಡ ೮೫ ರಷ್ಟು ಜನರು ಕೂಲಿಯನ್ನ ಅವಲಂಬಿಸಿಕೊಂಡಿದ್ದಾರೆ. ದಿನ ನಿತ್ಯದ ಸಾಮಾನ್ಯ ಕೆಲಸ ಕೂಲಿಯೇ ಆಗಿದೆ. ತಮ್ಮ ಮೂಲ ಕಸುಬನ್ನ ಅವಲಂಬಿಸಿರುವ ಕೆಲವರನ್ನು ಹೊರತು ಪಡಿಸಿದರೆ, ಉಳಿದವರು ಕೂಲಿ ಮಾಡಿಯೇ ಜೀವನ ಸಾಗಿಸಬೇಕಾಗಿದೆ. ಗಂಡಸರು ಕಬ್ಬಿನ ಗದ್ದೆ ಅಗತೆ ಮಾಡುವುದು, ಗೊಬ್ಬರ ಹಾಕುವುದು, ಗಾರೆ ಕೆಲಸ, ಕಬ್ಬು ಕಡಿಯುವುದು ಇತ್ಯಾದಿ ಕೆಲಸಗಳಿಗೆ ಹೋಗುತ್ತಾರೆ. ಹೆಂಗಸರು ಗದ್ದೆಗಳಲ್ಲಿ ಕಳೆ ಕೀಳುವುದು, ಭತ್ತದ ನಾಟಿ, ಭತ್ತ ಕೊಯ್ಯುವುದು, ಕಬ್ಬು ಕಟ್ಟುವುದು, ಗಾರೆ ಹೊರುವುದು, ಇಟ್ಟಿಗೆ ಕುಯ್ಯುವುದು ಮುಂತಾದ ಕೂಲಿ ಕೆಲಸಕ್ಕೆ ಹೋಗುತ್ತಾರೆ. ಗಂಡಸರಿಗೆ ಗದ್ದೆಯ ಕೆಲಸಕ್ಕೆ ೧೦೦ ರೂ.ಗಳನ್ನು ಕೊಟ್ಟರೆ, ಹೆಂಗಸರು ಮಾಡುವ ಕೂಲಿಯ ಕೆಲಸಕ್ಕೆ ೮೦ ರೂ.ಗಳನ್ನು ಕೊಡುತ್ತಾರೆ. ದಿನದ ಮಧ್ಯಾಹ್ನದ ಊಟ ಮತ್ತು ಎರಡು ಬಾರಿ ಟೀ ವ್ಯವಸ್ಥೆಯನ್ನು ಜಮೀನಿನ ಒಡೆಯ ಮಾಡುತ್ತಾನೆ. ಇವರಿಗೆ ಕಬ್ಬು ಕಡಿಯುವ ಸಂದರ್ಭದಲ್ಲಿ ಕಾಫಿ-ಟೀ ವ್ಯವಸ್ಥೆಯನ್ನು ಬಿಟ್ಟರೆ ಊಟದ ವ್ಯವಸ್ಥೆ ಇರುವುದಿಲ್ಲ. ಊಟದ ವ್ಯವಸ್ಥೆಯನ್ನು ಕಬ್ಬು ಕಡಿಯುವ ಆಳುಗಳೇ ಮಾಡಿಕೊಳ್ಳುತ್ತಾರೆ. ಇವರು ಜಿಲ್ಲಾದ್ಯಂತ ಕಬ್ಬು ಕಡಿಯಲು ಹೋಗುತ್ತಾರೆ. ಗಂಡ ಕಬ್ಬು ಕಡಿದರೆ ಹೆಂಡತಿ ಕಬ್ಬು ಕಟ್ಟುತ್ತಾಳೆ. ಇದು ಸಾಮಾನ್ಯವಾಗಿರುವುದು ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಕಂಡು ಬಂದಿದೆ. ಗಂಡ-ಹೆಂಡತಿ ಇಬ್ಬರು ಕಬ್ಬು ಕಡಿಯುವ ಕೆಲಸದಲ್ಲಿ ನಿರತರಾಗಿರುವುದರಿಂದ ತಿಂಗಳುಗಟ್ಟಲೆ ಊರು ಬಿಟ್ಟು ಬೇರೆ ಊರಿಗೆ ಹೋಗುವುದು ಸಾಮಾನ್ಯವಾಗಿದೆ. ಇಂತಹ ಸಂದರ್ಭದಲ್ಲಿ ಆ ಗುಂಪಿನವರೆಲ್ಲಾ ಸೇರಿಕೊಂಡು ಒಟ್ಟಿಗೆ ಅಡುಗೆ ಮಾಡಿಕೊಂಡು ಊಟ ಮಾಡುತ್ತಾರೆ. ಕಬ್ಬಿನ ಗದ್ದೆಯ ಮಾಲೀಕ ಅಡುಗೆ ಮಾಡಲು ಬೇಕಾದ ಪದಾರ್ಥಗಳನ್ನ ಒದಗಿಸಿಕೊಡುತ್ತಾನೆ. ಕಬ್ಬು ಕಡಿಯುವ ಉದ್ಯೋಗ ವರ್ಷದಲ್ಲಿ ೧೦ ತಿಂಗಳು ಇರುತ್ತದೆ. ಇವರಿಗೆ ಮೇಸ್ತ್ರಿ ವಾರಕ್ಕೊಮ್ಮೆ ಹಣವನ್ನು ಕಾರ್ಖಾನೆಯಿಂದ ತಂದು ಕೊಡುತ್ತಾನೆ. ಗದ್ದೆಯ

ಮಾಲೀಕನಿಂದ, ಕಾರ್ಖಾನೆಗೆ ಕಬ್ಬು ಹೊಡೆದ ಪತ್ರವನ್ನು ಮೇಸ್ತ್ರಿ ಪಡೆದು, ಒಟ್ಟು ಟನ್ನಿಗೆ ಅನುಗುಣವಾಗಿ ಹಣವನ್ನು ಪಡೆದುಕೊಂಡು, ಗುಂಪಿನಲ್ಲಿರುವ ಕೂಲಿಯಾಳಿಗೆ ಹಂಚಲಾಗುತ್ತದೆ. ಇದರಲ್ಲಿ ಮೇಸ್ತ್ರಿಗೂ ಕೂಡ ಸಮನಾಗಿ ಹಂಚಿಕೆಯಾಗುತ್ತದೆ. ಗುಂಪಿನಲ್ಲಿರುವವರಿಗೆ ಮುಂಗಡ ಹಣ ಬೇಕಾದರೆ ಮೇಸ್ತ್ರಿ ಕೊಡುತ್ತಾನೆ. ಗಂಗಾಮತಸ್ಥರು ಈ ಉದ್ಯೋಗವನ್ನು ಸಾಂಪ್ರದಾಯಿಕ ಉದ್ಯೋಗದಂತೆ ರೂಢಿಸಿಕೊಂಡಿರುವುದು ಜಿಲ್ಲಾದ್ಯಂತ ಕಂಡು ಬರುತ್ತದೆ. ಶೇಕಡ ೬೦ ಕ್ಕಿಂತಲೂ ಹೆಚ್ಚಿನ ಕುಟುಂಬಗಳು ಕಬ್ಬು ಕಡಿಯುವ ವೃತ್ತಿಯನ್ನು ಅವಲಂಬಿಸಿಕೊಂಡಿರುವುದು ಗೋಚರವಾಗುತ್ತದೆ. ಈ ವೃತ್ತಿಯನ್ನ ಅವಲಂಬಿಸಿಕೊಂಡಿರುವವರು ಜೀವನ ಮಟ್ಟ ಅಷ್ಟು ಉತ್ತಮವಾಗಿಲ್ಲ. ಇವರ ಜೀವನ ಪರಿಶಿಷ್ಟ ಜಾತಿಯವರಿಗಿಂತಲೂ ತೀರಾ ಕೆಳಮಟ್ಟದಲ್ಲಿದೆ. ಬೆಳಗ್ಗೆ ೯ ಗಂಟೆಗೆ ಕೂಲಿ ಕೆಲಸಕ್ಕೆ ಹೋದರೆ ಸಂಜೆ ೫ ಗಂಟೆಯವರೆಗೆ ದುಡಿಯಬೇಕಾಗುತ್ತದೆ. ಕೂಲಿಯ ಹಣವನ್ನು ಆ ದಿನವೇ ಪಡೆದುಕೊಳ್ಳುತ್ತಾರೆ. ಗಾರೆ ಕೆಲಸ ಮಾಡುವ ಗಂಡಸರಿಗೆ ದಿನಕ್ಕೆ ೨೦೦ ರೂ.ಗಳು ಸಿಗುತ್ತದೆ. ಅವರಿಗೆ ಬೆಳಗ್ಗೆ ತಿಂಡಿ, ಮಧ್ಯಾಹ್ನ ಊಟದ ವ್ಯವಸ್ಥೆಯನ್ನು ಮಡಿರುತ್ತಾರೆ. ಗಾರೆ ಹೊರುವ ಹೆಂಗಸರಿಗೆ ೧೦೦ ರೂ.ಗಳನ್ನ ಕೊಡಲಾಗುತ್ತದೆ.

ಭತ್ತದ ಕುಯ್ಲಿನ ಕಾಲದಲ್ಲಿ ಭತ್ತ ಕುಯ್ಯಲು ಹೋಗುತ್ತಾರೆ. ಹೆಚ್ಚಾಗಿ ಹೆಂಗಸರು ಭತ್ತ ಕಟಾವಿಗೆ ಹೋದರೆ, ಗಂಡಸರು ಹುಲ್ಲು ಒಕ್ಕಲು, ಬಡಿಯಲು ಹೋಗುತ್ತಾರೆ. ಇದಕ್ಕೆ ಕೂಲಿಯಾಗಿ ದಿನಕ್ಕೆ ೮೦ ರಿಂದ ೧೦೦ರೂ.ಗಳನ್ನು ಕೊಡುತ್ತಾರೆ. ಹೀಗೆ ಕೂಲಿಗೆ ಬಂದು ಕೆಲಸ ಮಾಡುವವರಿಗೆ ಹಣದ ಜೊತೆಗೆ ಮೂರು-ನಾಲ್ಕು ಇಬ್ಬಳಿಗೆ ಭತ್ತವನ್ನು ಕೊಡುತ್ತಾರೆ. ಹೀಗೆ ಹಲವು ಕಡೆ ಸುಗ್ಗಿಯ ಕಾಲದಲ್ಲಿ ಕೂಲಿಗೆ ಹೋಗುವುದರಿಂದ ಮೂರು-ನಾಲ್ಕು ಕ್ವಿಂಟಾಲ್ ಭತ್ತವನ್ನು ಸಂಗ್ರಹಿಸುವುದುಂಟು. ಭತ್ತದ ನಾಟಿ ಮತ್ತು ಕಳೆಯನ್ನು ಕೀಳುವ ಸಂದರ್ಭದಲ್ಲಿ ಹೆಂಗಸರಿಗೆ ಅತ್ಯಂತ ಹೆಚ್ಚಿನ ಬೇಡಿಕೆ ಇರುತ್ತದೆ.

ಕಬ್ಬು ಕಡಿಯುವ ಉದ್ಯೋಗದಲ್ಲಿ ನಿರತರಾಗಿರುವರಲ್ಲಿ ಶೇಕಡ ೯೦ ರಷ್ಟು ಜನರು ಗಂಗಾಮತಸ್ಥರೇ ಆಗಿದ್ದಾರೆ. ಕಬ್ಬು ಕಡಿಯಲು ೮ ರಿಂದ ೧೦ ಜನರು ಸೇರಿಕೊಂಡು ಒಂದೊಂದು ಗುಂಪುಗಳನ್ನಾಗಿ ಮಾಡಿಕೊಂಡಿರುತ್ತಾರೆ. ಇವರಿಗೆ ಒಬ್ಬ ಮೇಸ್ತ್ರಿ ಇರುತ್ತಾನೆ. ಆತನೇ ಎಲ್ಲೆಲ್ಲಿ "ಯಾವಾಗ ಕಬ್ಬು ಕಡಿಯಲು ಹೋಗಬೇಕು, ಒಂದು ಟನ್ ಕಬ್ಬು ಕಡಿಯಲು ಎಷ್ಟು ಕೂಲಿ ಎಂಬಿತ್ಯಾದಿ ವಿಚಾರಗಳನ್ನು ತಿಳಿಸುತ್ತಾನೆ. ಮೇಸ್ತ್ರಿ ಕಬ್ಬು ಕಡಿಸಲು ಕಬ್ಬಿನ ಫ್ಯಾಕ್ಟರಿಯಿಂದ ಅನುಮತಿಯನ್ನು ಪಡೆದಿರುತ್ತಾನೆ. ಆತನಿಗೆ ಪ್ರತಿ ಟನ್ನಿಗೆ ಫ್ಯಾಕ್ಟರಿಯ ವತಿಯಿಂದ ಒಂದು ರೂ.ಗಳ ಬೋನಸ್ ಹಣವನ್ನು ಕೊಡಲಾಗುತ್ತದೆ ಎನ್ನುತ್ತಾನೆ ವಕ್ತೃ ಮಹದೇವು".[೨೬] ಪ್ರತಿ ಟನ್ನಿಗೆ ಕೂಲಿ ೧೫೦ ರೂ.ಗಳಿಂದ ೨೦೦ ರೂ.ಗಳವರೆವಿಗೂ ಕೆಲವರಿಗಂತೂ ಮನೆ

ಇಲ್ಲದಿರುವುದು ಕಂಡು ಬರುತ್ತದೆ. ಇಂತಹ ವ್ಯಕ್ತಿಗಳಿಗೆ ಸರ್ಕಾರ ವಿಶೇಷ ಸೌಲಭ್ಯಗಳನ್ನು ಕಲ್ಪಿಸಿಕೊಡುವುದು ತೀರಾ ಅಗತ್ಯವಾಗಿದೆ.

## ಸರ್ಕಾರಿ ಮತ್ತು ಖಾಸಗಿ ಹುದ್ದೆಗಳು

ಗಂಗಾಮತಸ್ಥರು ಇತ್ತೀಚಿನ ದಿನಗಳಲ್ಲಿ ಸರ್ಕಾರಿ ಉದ್ಯೋಗಗಳಲ್ಲಿರುವುದು ಅಲ್ಲಲ್ಲಿ ಕಂಡುಬರುತ್ತದೆ. ಸರ್ಕಾರ ನೀಡಿರುವ ಮೀಸಲಾತಿಯ ಸದುಪಯೋಗವನ್ನು ಬಳಸಿಕೊಂಡು ಕೆಲಸವನ್ನು ಗಿಟ್ಟಿಸಿಕೊಂಡಿದ್ದಾರೆ. ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಸಿಕ್ಕ ಮಾಹಿತಿಯಂತೆ ಕೆಲವು ಗ್ರಾಮಗಳನ್ನ ಹೊರತುಪಡಿಸಿದರೆ ಉಳಿದಂತೆ ಪಟ್ಟಣ ಪ್ರದೇಶಕ್ಕೆ ಹತ್ತಿರವಿರುವ ಹಾಗೂ ಅಭಿವೃದ್ಧಿ ಹೊಂದಿರುವ ಗ್ರಾಮಗಳಲ್ಲಿ ಹಾಗೂ ಶಾಲಾ-ಕಾಲೇಜುಗಳಿರುವ ಗ್ರಾಮ ಮತ್ತು ಸುತ್ತ ಮುತ್ತಲಿನ ಗ್ರಾಮಗಳಲ್ಲಿ ಒಬ್ಬಿಬ್ಬರು ಸರ್ಕಾರಿ ಉದ್ಯೋಗದಲ್ಲಿದ್ದಾರೆ. ಶ್ರೀರಂಗಪಟ್ಟಣ, ಗಂಜಾಂ, ಮಳವಳ್ಳಿ, ಹುಸ್ಕೂರು, ಕಲ್ಕುಣಿ, ಕೆ.ಆರ್.ಪೇಟೆ, ಮಂಡ್ಯ, ಗಾಮನಹಳ್ಳಿ, ಪಾಂಡವಪುರ, ನಾಗಮಂಗಲ, ಮದ್ದೂರು, ಶಿವಪುರ, ದೇಶವಹಳ್ಳಿ ಬೆಸಗರ ಹಳ್ಳಿ, ಮರಡಿಪುರ, ಹೊಳಲು, ದುದ್ದ, ತಡಗನ ಪುರ, ಮೆಣಸಗೆರೆ, ಆಲಬುಜನಹಳ್ಳಿ, ಅಕ್ಕಿಹೆಬ್ಬಾಳ, ಇತ್ಯಾದಿ ಗ್ರಾಮಗಳಲಿ ಸರ್ಕಾರಿ ಕೆಲಸದಲ್ಲಿ ಇದ್ದಾರೆ.

ಪೋಲಿಸ್ ಇಲಾಖೆ, ಸಾರಿಗೆ ಇಲಾಖೆ, ಪ್ರಾಥಮಿಕ ಶಾಲಾ ಶಿಕ್ಷಕರು, ಪ್ರೌಢಶಾಲೆ ಶಿಕ್ಷಕರು, ಉಪನ್ಯಾಸಕರು, ಆರೋಗ್ಯ, ಬ್ಯಾಂಕ್, ತಾಲ್ಲೂಕು ಆಫೀಸ್, ಗ್ರಾಮಪಂಚಾಯಿತಿ, ಅಲ್ಲಲ್ಲಿ ಇಂಜಿನಿಯರ್, ಡಾಕ್ಟರ್‌ಗಳು, ಆಹಾರ ಇಲಾಖೆ, ರೈಲ್ವೆ ಇಲಾಖೆ ಹೀಗೆ ಸರ್ಕಾರದ ಎಲ್ಲಾ ಇಲಾಖೆಗಳಲ್ಲೂ ಇವರು ಕೆಲಸ ನಿರ್ವಹಿಸುತ್ತಿದ್ದಾರೆ. ಸರ್ಕಾರಿ ಕೆಲಸದಲ್ಲಿರುವವರು ಶೇಕಡ ೨ ರಿಂದ ೩ ರಷ್ಟು ಜನರು ಮಾತ್ರ. ಏಕೆಂದರೆ ಇವರಿಗೆ ಸರ್ಕಾರ ಒಟ್ಟು ಹುದ್ದೆಗಳಿಗೆ ಅನುಗುಣವಾಗಿ ಕೊಟ್ಟಿರುವ ಮೀಸಲಾತಿಯೇ ಶೇಕಡ ೩ ರಷ್ಟು ಮಾತ್ರ ಆಗಿದೆ. ಸರ್ಕಾರ ಇವರಿಗೆ ಹೆಚ್ಚಿನ ಮೀಸಲಾತಿಯನ್ನು ಕಲ್ಪಿಸಿಕೊಟ್ಟಾಗ ಮಾತ್ರ ಬೇರೆ ಜನಾಂಗದವರಂತೆ ಇವರು ಹೆಚ್ಚಿನ ಪ್ರಮಾಣದಲ್ಲಿ ಉದ್ಯೋಗ ಗಿಟ್ಟಿಸಿಕೊಂಡು ಉತ್ತಮ ಜೀವನ ನಡೆಸಲು ಸಾಧ್ಯವಾಗುತ್ತದೆ. ಇವರೆಲ್ಲ ತೀರಾ ಕೆಳಹುದ್ದೆಗಳಲ್ಲಿ ಅಂದರೆ 'ಡಿ' ವರ್ಗದ ನೌಕರಿಯಲ್ಲಿರುವವರೆ ಹೆಚ್ಚಾಗಿದ್ದಾರೆ. ಉನ್ನತ ಹುದ್ದೆಗಳನ್ನ ಪಡೆದುಕೊಳ್ಳಲು ಸರ್ಕಾರ ಇವರಿಗೆ ಸ್ಪರ್ಧಾತ್ಮಕ ಪರೀಕ್ಷೆ ತೆಗೆದುಕೊಳ್ಳಲು ವಿಶೇಷ ಸೌಲಭ್ಯವನ್ನು ಕಲ್ಪಿಸಿಕೊಡಬೇಕಾದ ಅಗತ್ಯತೆ ಇದೆ.

ಖಾಸಗಿ ಉದ್ಯೋಗಕ್ಕೆ ಸಂಬಂಧಿಸಿದಂತೆ ಹೋಟೆಲ್‌ಗಳಲ್ಲಿ ದುಡಿಯುವುದು, ಕಾರ್ಖಾನೆ, ಗಾರ್ಮೆಂಟ್ಸ್, ಖಾಸಗಿ ವಾಹನಗಳಿಗೆ ಡ್ರೈವರ್ ಆಗಿರುವುದು, ಕಂಡೆಕ್ಟರ್, ಬಟ್ಟೆ ಅಂಗಡಿಯಲ್ಲಿ

ಕೆಲಸ, ಹೆಂಗಸರು ಸಮುದಾಯ ಭವನಗಳಲ್ಲಿ ಸ್ವಚ್ಛಗೊಳಿಸುವ ಕೆಲಸ, ಇತ್ತೀಚೆಗೆ ಕೇಂದ್ರ ಸರ್ಕಾರ ಜಾರಿಗೆ ತಂದಿರುವ ರಾಷ್ಟ್ರೀಯ ಉದ್ಯೋಗ ಖಾತ್ರಿ ಯೋಜನೆಯಡಿಯಲ್ಲಿ ಜಾಬ್ ಕಾರ್ಡ್ ಮಾಡಿಸಿಕೊಂಡು ನೂರು ದಿನಗಳ ಕಡ್ಡಾಯ ಕೆಲಸ, ದೇವಸ್ಥಾನಗಳಲ್ಲಿ ಪೂಜಾರಿ ಕೆಲಸ, ಅಂಗನವಾಡಿಯಲಿ ಮತ್ತು ಶಾಲೆಯಲ್ಲಿ ನಡೆಯುವ ಬಿಸಿಊಟದ ಸಹಾಯಕರಾಗಿ ಇತ್ಯಾದಿ ಖಾಸಗಿ ಉದ್ಯೋಗದಲ್ಲಿ ಇರುವುದು ಕಂಡು ಬರುತ್ತದೆ.

### ಇತರೆ ವೃತ್ತಿಗಳು

ಈ ಮೊದಲೇ ವಿವರಿಸಿದ ವೃತ್ತಿಗಳು ಮಾತ್ರವಲ್ಲದೆ ಗಂಗಾಮತಸ್ಥರು ಇನ್ನಿತರ ವೃತ್ತಿಗಳನ್ನೂ ಸಹ ಮಾಡುವವರಾಗಿದ್ದಾರೆ. ಹೊಳೆಗಳು, ನದಿಗಳು ಇರುವ ಪ್ರದೇಶದಲ್ಲಿ ವಾಸಿಸುವ ಗಂಗಾಮತಸ್ಥರು ದೋಣಿ ಅಥವಾ ತೆಪ್ಪ ನಡೆಸುವ ಕಾಯಕದಲ್ಲೂ ತೊಡಗಿಸಿಕೊಂಡಿದ್ದಾರೆ. ನದಿ ಹರಿಯುವ ಗ್ರಾಮದಿಂದ ಸಾರಿಗೆ ವ್ಯವಸ್ಥೆ ಇರುವ ಕಡೆಗೆ ಜನರನ್ನ ತೆಪ್ಪದಲ್ಲಿ ಸಾಗಿಸುತ್ತಾರೆ. ಇವರಿಗೆ ಇಂತಿಷ್ಟು ಹಣವನ್ನು ಕೊಡಬೇಕಗುತ್ತದೆ. ೫ ರೂ.ಗಳಿಂದ ೧೦ ರೂ.ಗಳವರೆಗೆ ಹಣವನ್ನು ದೋಣಿ ನಡೆಸುವನಿಗೆ ಪಯಣಿಗರು ಕೊಡುತ್ತಾರೆ. ಇತ್ತೀಚಿನ ದಿನಗಳಲ್ಲಿ ಮನೆಕಟ್ಟುವ ಕೆಲಸವನ್ನು ಈ ಜನಾಂಗದವರು ಮಾಡುತ್ತಿದ್ದಾರೆ. ಮನೆಗಳಿಗೆ ಸುಣ್ಣ-ಬಣ್ಣ ಹೊಡೆಯುವ ಕೆಲಸವನ್ನು ಮಾಡುತ್ತಾರೆ. ಈ ಕೆಲಸ ಮಾಡುವ ಸಂದರ್ಭದಲ್ಲಿ ಹುಂಡಿಯಾಗಿ ಮಾತನಾಡಿಕೊಂಡು ಕೆಲಸ ನಿರ್ವಹಿಸುತ್ತಾರೆ. ಹೀಗೆ ಇವರು ಹಲವು ರೀತಿಯ ಕೂಲಿ ಕೆಲಸಗಳನ್ನು ಮಾಡುತ್ತಿದ್ದಾರೆ. ಕೆರೆಗಳ ಹೂಳೆತ್ತುವ ಕೆಲಸ, ಕಾಡಿನಿಂದ ಒಣ ಸೌದೆಗಳನ್ನು ತಂದು ಮಾರುವ ಕೆಲಸ, ಜಿಲ್ಲಾ ಪಂಚಾಯಿತಿ ಸದಸ್ಯರು, ಪುರಸಭೆ ಸದಸ್ಯರು, ನಗರಸಭಾ ಸದಸ್ಯರು, ಗ್ರಾಮ ಪಂಚಾಯಿತಿ ಅಧ್ಯಕ್ಷರಾಗಿರುವುದು, ಸಿನಿಮಾ ಥಿಯೇಟರ್‌ನಲ್ಲಿ ಕೆಲಸ ಮಾಡುವವರು, ಫೋಟೋಗ್ರಾಫರ್‌ಗಳು, ಸಮಾಜ ಕಾರ್ಯಕರ್ತರು, ಬೇರೆಯವರ ಮನೆಗಳಲ್ಲಿ ಮನೆಗೆಲಸಕ್ಕೆ ಇರುವವರು ಮುಂತಾದ ಕಾರ್ಯಗಳಲ್ಲಿ ಇವರು ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಹೀಗೆ ಹಲವು ರೀತಿಯ ಕೆಲಸಗಳಲ್ಲಿ ನಿರತರಾಗಿದ್ದಾರೆ. ಇವರು ಮಾಡುವ ಹುದ್ದೆಗಳು ಬೃಹತ್ ಪ್ರಮಾಣದ ಲಾಭ ತಂದುಕೊಡುವ ಹುದ್ದೆಗಳಲ್ಲದ್ದರಿಂದ ಇವರೂ ಸಹ ಆರ್ಥಿಕವಾಗಿ ತುಂಬ ದುಸ್ಥಿತಿಯಲ್ಲಿ ಇರುವವರಾಗಿದ್ದಾರೆ.

## ಗಂಗಾಮತಸ್ಥರ ಸಾಂಪ್ರದಾಯಿಕ ವೃತ್ತಿ ಸಮಸ್ಯೆಗಳು ಮತ್ತು ಪರಿಹಾರ

ಗಂಗಾಮತಸ್ಥರ ಸಾಂಪ್ರದಾಯಿಕವಾಗಿ ಅವಲಂಬಿಸಿಕೊಂಡು ಬಂದಿರುವ ಕೆಲವು ಉದ್ಯೋಗಗಳನ್ನು ಗುರುತಿಸಬಹುದು. ಮೀನುಗಾರಿಕೆ, ಸುಣ್ಣ ಸುಡುವುದು, ವೀಳ್ಯದೆಲೆ ಬೆಳೆಯುವುದು ಇವು ಹಿಂದಿನಿಂದಲೂ ಬಂದಿರುವ ವೃತ್ತಿಗಳು. ಈ ವೃತ್ತಿಗಳನ್ನು ಅವಲಂಬಿಸಿರುವ ಇವರು ಹಲವು ಸಮಸ್ಯೆಗಳನ್ನು ಸಹ ಎದುರಿಸುವರಿದ್ದಾರೆ. ಮೀನುಗಾರಿಕೆಗೆ ಸಂಬಂಧಿಸಿದಂತೆ ಸರ್ಕಾರ ಕೊಡುತ್ತಿರುವ ಸೌಲಭ್ಯಗಳು ಎಲ್ಲಾ ಮೀನುಗಾರರಿಗೂ ತಲುಪುತ್ತಿಲ್ಲ. ಕೆಲವು ಮಂದಿಗಳು ಮಾತ್ರ ಸರ್ಕಾರದ ಸೌಲಭ್ಯಗಳನ್ನು ಪಡೆದುಕೊಳ್ಳುತ್ತಿದ್ದಾರೆ. ಇವರಿಗೆ ಸರ್ಕಾರ ಅಥವಾ ಸ್ಥಳೀಯ ಸಂಸ್ಥೆಗಳು ಗುತ್ತಿಗೆ ಆಧಾರದ ಮೇಲೆ ಕೊಡುತ್ತಿರುವ ಕೆರೆಗಳಿಗೆ ಅತಿಯಾದ ಬೆಲೆಯನ್ನು ನಿಗಧಿ ಮಾಡುವುದು. ಆ ನಿಗಧಿಗೊಳಿಸಿದ ಹಣವನ್ನು ಪ್ರಾರಂಭದ ದಿನದಲ್ಲೇ ಕಟ್ಟಬೇಕೆಂದು ನಿಯಮವಿರುವುದು. ರಾಜಕೀಯ ವ್ಯಕ್ತಿಗಳ ಪ್ರಭಾವ ಬೀರುವುದು. ಕೆಲವು ಸಲ ಕೆರೆಗಳಲ್ಲಿ ಸಾಕಿರುವ ಮೀನುಗಳು ರೋಗಕ್ಕೆ ತುತ್ತಾಗಿ ಸಾಯುವುದು, ಉತ್ತಮ ತಳಿಗಳನ್ನು ಕೊಡದಿರುವುದು, ಮೀನುಗಾರರಿಗೆ ತರಬೇತಿಯನ್ನ ಕಾಲದಿಂದ ಕಾಲಕ್ಕೆ ನೀಡದಿರುವುದು, ಮೀನುಗಾರಿಕೆ ಇಲಾಖೆಯವರು ನಿರ್ಲಕ್ಷಿಸುವುದು ಇತ್ಯಾದಿ ಹಲವು ತೊಂದರೆಗಳನ್ನ ಇವರು ಇಂದಿಗೂ ಎದುರಿಸುತ್ತಿದ್ದಾರೆ.

ಸುಣ್ಣ ಸುಡುವ ಸಂಸ್ಕೃತಿಯನ್ನ ಇಂದಿಗೂ ಕೆಲವು ಮಂದಿ ಅವಲಂಬಿಸಿಕೊಂಡಿದ್ದಾರೆ. ಸಾಂಪ್ರದಾಯಿಕವಾದ ಹಿಂದಿನ ಹಳೆಕಾಲದ ಪದ್ಧತಿಯನ್ನ ಈ ಪ್ರವೃತ್ತಿಯಲ್ಲಿ ಕಾಣಬಹುದು. ಇದರಿಂದ ಹೆಚ್ಚಿನ ಶ್ರಮವನ್ನ ಅವರು ಪಡುತ್ತಾರೆ. ಅಲ್ಲದೆ ಆಧುನಿಕವಾಗಿ ಕಾರ್ಖಾನೆಯಲ್ಲಿಯೇ ಸುಣ್ಣದ ತಯಾರಿ ನಡೆದಿರುವುದರಿಂದ ಇವರಿಗೆ ತೊಂದರೆಯುಂಟಾಗಿದೆ. ಸಾಂಪ್ರದಾಯಿಕವಾಗಿ ಬಂದಿರುವ ಮತ್ತೊಂದು ಪ್ರಮುಖ ವೃತ್ತಿಯೆಂದರೆ ವೀಳ್ಯದೆಲೆ ಬೆಳೆಯುವುದಾಗಿದೆ. ಬೇಸಿಗೆ ಕಾಲದಲ್ಲಿ ನೀರಿನ ಸಮಸ್ಯೆ, ಬೆಲೆಯಲ್ಲಿ ಏರಿಳಿತಗಳು, ಸಾರಿಗೆ ಸಮಸ್ಯೆ, ಕೃಷಿ ಇಲಾಖೆಯವರು ವೀಳ್ಯದೆಲೆ ಬೆಳೆಯುವ ರೈತರಿಗೆ ಬೇಕಾಗುವ ತರಬೇತಿ, ಉಪಕರಣಗಳನ್ನ ನೀಡದಿರುವುದು ಇತ್ಯಾದಿ ಹಲವು ಸಮಸ್ಯೆಗಳನ್ನ ಎದುರಿಸುತ್ತಿದ್ದಾರೆ.

ಗಂಗಾಮತಸ್ಥರು ಎದುರಿಸುತ್ತಿರುವ ಸಮಸ್ಯೆಗಳಿಗೆ ಸರ್ಕಾರ ಗಮನವರಿಸಿದಾಗ ಮಾತ್ರ ಅವರ ಆರ್ಥಿಕ ಸ್ಥಿತಿಯನ್ನ ಉತ್ತಮಪಡಿಸಲು ಸಾಧ್ಯ. ಮೀನುಗಾರರಿಗೆ ಬೇಕಾದ ವಿಶೇಷ ಸಾಲ ಸೌಲಭ್ಯ ಒದಗಿಸುವುದು, ಕೆರೆಗಳನ್ನ ಉಚಿತವಾಗಿ ಕೊಡುವುದು, ತರಬೇತಿ ವ್ಯವಸ್ಥೆ, ಬೋಟಿನ ವ್ಯವಸ್ಥೆ, ಆರ್ಥಿಕ ಭದ್ರತೆ ಒದಗಿಸುವುದು. ಮುಂತಾದ ವಿಶೇಷ ಸೌಲಭ್ಯಗಳನ್ನು ಕಲ್ಪಿಸಿಕೊಡಬೇಕಾಗುತ್ತದೆ. ಇಂದಿನ ಪ್ರಪಂಚಕ್ಕೆ ಹೊಂದಿಕೊಂಡಂತೆ ಸುಣ್ಣ ಸುಡುವ ತರಬೇತಿ,

ಇದರಿಂದ ಹೆಚ್ಚಿನ ಆದಾಯಗಳಿಸುವುದು, ಇಲ್ಲವೇ ಸುಣ್ಣದ ಕಾರ್ಖಾನೆಗಳಲ್ಲಿ ಉದ್ಯೋಗ ಕಲ್ಪಿಸುವಿಕೆ ಮುಂತಾದ ಕ್ರಮವನ್ನ ಸರ್ಕಾರ ಕೈಗೊಳ್ಳಬೇಕು. ಇನ್ನು ವೀಳ್ಯದೆಲೆ ತೋಟಕ್ಕೆ ಸಂಬಂಧಿಸಿದಂತೆ ಆಧುನಿಕ ರೀತಿಯ ಬೇಸಾಯದ ಮೂಲಕ ವೀಳ್ಯದೆಲೆ ಬೆಳೆಯುವಿಕೆ, ರಿಯಾಯಿತಿಯಲ್ಲಿ ಗೊಬ್ಬರ, ನೀರಾವರಿ ಸೌಲಭ್ಯ ಕಲ್ಪಿಸುವುದು ಮುಂತಾದ ವಿಶೇಷ ಸೌಲಭ್ಯಗಳನ್ನು ಸರ್ಕಾರ ನೀಡಬೇಕಾಗಿದೆ. ಹೀಗೆ ನೀಡಿದಾಗ ಮಾತ್ರ ಅವರ ಸಾಂಪ್ರದಾಯಿಕ ಉದ್ಯೋಗಗಳಿಂದ ಹೆಚ್ಚಿನ ಆದಾಯ ಗಳಿಸಿ ಆರ್ಥಿಕವಾಗಿ ಉತ್ತಮರಾಗಲು ಸಾಧ್ಯವಾಗುತ್ತದೆ.

**ಕೃಷಿ ಹಾಗೂ ಸರ್ಕಾರದ ವೃತ್ತಿ ಸಮಸ್ಯೆಗಳು ಮತ್ತು ಪರಿಹಾರ**

ಗಂಗಾಮತಸ್ಥರ ಕೃಷಿ ಭೂಮಿಯ ಪ್ರತಿ ಎಕರೆ ಉತ್ಪಾದನೆ ಕಡಿಮೆ ಮಟ್ಟದಲ್ಲಿ ಇದೆ. ಇದಕ್ಕೆ ಕಾರಣ ಇವರಿಗೆ ಕಡಿಮೆ ಜಮೀನಿರುವುದು. ಇವರು ಹೊಂದಿರುವ ಭೂಮಿ ತುಂಡು ತುಂಡಾಗಿರುವುದರಿಂದ ಹೆಚ್ಚು ಇಳುವರಿಯನ್ನ ಪಡೆಯಲು ಸಾಧ್ಯವಾಗುತ್ತಿಲ್ಲ. ಅಲ್ಲದೆ ನೀರಾವರಿ ಸಮಸ್ಯೆ, ವೈಜ್ಞಾನಿಕವಾದ ಬೇಸಾಯದ ಪದ್ಧತಿ ಇಲ್ಲದಿರುವುದು, ಆರೋಗ್ಯಪೂರ್ಣವಾದ ಬಿತ್ತನೆ ಬೀಜ ಹಾಕದಿರುವುದು, ಬೇಸಾಯದ ಬಗ್ಗೆ ಆಧುನಿಕ ಜ್ಞಾನ ಇಲ್ಲದಿರುವುದು ಇತ್ಯಾದಿ ಸಮಸ್ಯೆಗಳಿವೆ. ಸರಕಾರ ಹೆಚ್ಚಿಗೆ ಆಸಕ್ತಿ ವಹಿಸಿ ಕೃಷಿ ಅಭಿವೃದ್ಧಿಗಾಗಿ ಹಲವಾರು ಯೋಜನೆಗಳನ್ನು ಅನುಷ್ಠಾನಗೊಳಿಸಿ, ಇವರ ಬೇಸಾಯಕ್ಕೆ ಆರ್ಥಿಕವಾಗಿ ಸಹಕಾರದ ಜೊತೆಗೆ, ಒಳ್ಳೆಯ ಗುಣಮಟ್ಟದ ಬಿತ್ತನೆ ಬೀಜಗಳನ್ನು ನೀರಾವರಿ ಸೌಲಭ್ಯಗಳನ್ನು, ರಸಗೊಬ್ಬರಗಳನ್ನು ಪೂರೈಸಬೇಕಾಗುತ್ತಿದೆ. ಈ ಮೂಲಕ ಭೂ ಸುಧಾರಣೆಯ ಬಗ್ಗೆ ಕ್ರಮ ವಹಿಸುವುದು ಅಗತ್ಯವಿದೆ. ಅಲ್ಲದೆ ಗಂಗಾಮತಸ್ಥರು ಯಾಂತ್ರೀಕೃತ ಬೇಸಾಯವನ್ನು ಅಳವಡಿಸಿಕೊಳ್ಳಲು ಉತ್ತೇಜನಗಳನ್ನು ಅಂದರೆ ಸಾಲ ಸೌಲಭ್ಯಗಳನ್ನು ಕಲ್ಪಿಸಿಕೊಡಬೇಕಾಗುತ್ತದೆ.

ಗಂಗಾಮತಸ್ಥರು ಸಣ್ಣ ಮತ್ತು ಅತಿ ಸಣ್ಣ ಪ್ರಮಾಣದ ಭೂ ಹಿಡುವಳಿಯನ್ನು ಹೊಂದಿರುವ ರೈತರಾಗಿದ್ದು, ಇವರಿಗೆ ಉತ್ತಮ ಬಿತ್ತನೆ ಬೀಜಗಳ ವಿತರಣೆಯಾಗಿಲ್ಲ. ಈ ಕಾರಣದಿಂದ ಇವರ ಭೂ ಹಿಡುವಳಿಗಳು ಕಡಿಮೆ ಉತ್ಪಾದಕತೆಯನ್ನು ಹೊಂದಿರುವುದು ಕಂಡು ಬರುತ್ತದೆ. ಸರಕಾರ ಇದರ ಬಗ್ಗೆ ಹೆಚ್ಚಿನ ಗಮನವನ್ನು ವಹಿಸಿ ಇವರ ಆರ್ಥಿಕ ಬೆಳವಣಿಗೆಗೆ ಕಾರಣವಾಗಬೇಕಾಗಿದೆ. ನೀರಾವರಿ ಸೌಲಭ್ಯ, ಕೊಳವೆ ಬಾವಿ ತೆಗೆಸಿಕೊಡುವುದು, ವಿದ್ಯುತ್ ಸೌಲಭ್ಯ, ರಸಗೊಬ್ಬರದ ಸೌಲಭ್ಯ ಹೀಗೆ ವಿಶೇಷ ಸೌಲಭ್ಯಗಳನ್ನ ಕಲ್ಪಿಸಿಕೊಟ್ಟು, ಕೃಷಿ ಚಟುವಟಿಕೆಗಳಿಗೆ ಪ್ರೋತ್ಸಾಹ ನೀಡಬೇಕಾದ ಪರಿಸ್ಥಿತಿ ಇದೆ. ಇಷ್ಟೇ ಅಲ್ಲದೆ ಪಶುಸಂಗೋಪನೆಗೂ ಸಹ ವಿಶೇಷವಾದ ಎಲ್ಲಾ ರೀತಿಯ ಸೌಲಭ್ಯಗಳನ್ನ ಸರಕಾರ ಕಲ್ಪಿಸಿಕೊಡಬೇಕಾಗಿದೆ.

ಸರಕಾರದ ಮಟ್ಟದಲ್ಲಿ ಗಂಗಾಮತಸ್ಥರು ಉದ್ಯೋಗವನ್ನು ಪಡೆದುಕೊಳ್ಳುವುದು ಕಷ್ಟಸಾಧ್ಯದ ಮಾತಾಗಿದೆ. ಕಾರಣವೆಂದರೆ ಇವರಲ್ಲಿರುವ ಬಡತನ, ಹೆಚ್ಚಿನ ಶಿಕ್ಷಣ ಪಡೆಯಲು ಸಾಧ್ಯವಾಗದೇ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಉತ್ತೀರ್ಣರಾಗುವುದು ಕಷ್ಟವಾಗಿದೆ. ಆದ್ದರಿಂದ ಇವರಿಗೆ ಇರುವ ಮೀಸಲಾತಿಯನ್ನು ಸರ್ಕಾರ ಹೆಚ್ಚಿಸಬೇಕು. ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಉಚಿತವಾದ ತರಬೇತಿಯನ್ನು ನೀಡಬೇಕು. ಹೆಚ್ಚಿನ ಮಟ್ಟದ ವಿದ್ಯಾರ್ಥಿವೇತನ ನೀಡಬೇಕು. ಮೀನುಗಾರಿಕೆ ಇಲಾಖೆಯಲ್ಲಿ ಈ ಜನಾಂಗದವರಿಗೆ ಹೆಚ್ಚಿನ ಮೀಸಲಾತಿಯನ್ನು ನೀಡಬೇಕು. ಸರಕಾರ ಇವರಿಗೆ ಪರಿಶಿಷ್ಟ ಜಾತಿ ಮತ್ತು ವರ್ಗದವರಿಗೆ ಸಿಗುವ ಸೌಲಭ್ಯಕ್ಕಿಂತಲೂ ಹೆಚ್ಚಿನ ಸವಲತ್ತುಗಳನ್ನು ಒದಗಿಸಿದಾಗ ಮಾತ್ರ ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಉತ್ತಮ ಜೀವನ ನಡೆಸಲು ಸಾಧ್ಯವಾಗುತ್ತದೆ. ನನ್ನ ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಭೇಟಿ ಮಾಡಿದ ಪ್ರತಿಯೊಬ್ಬ ವಕ್ತೃಗಳು ಸಹ ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಈ ನಿಟ್ಟಿನಲ್ಲಿ ಸರ್ಕಾರ ಚಿಂತನೆ ನಡೆಸಬೇಕಾಗಿದೆ.

**೩.೩ ಶಿಕ್ಷಣ :**

ಶಿಕ್ಷಣವು ಇಡೀ ಸಮಾಜವನ್ನು ಬದಲಾವಣೆ ಮಾಡುವ ಶಕ್ತಿಯನ್ನ ಹೊಂದಿದೆ. ಶೈಕ್ಷಣಿಕ ಸಾಧನೆಯಲ್ಲಿ ಸಾಕ್ಷರತೆಯು ಅಪರಿಮಿತವಾದ ಪ್ರಾಮುಖ್ಯತೆಯನ್ನು ಹೊಂದಿದೆ. ಪ್ರಶಾಂತ್ ಹೆಚ್.ಡಿ. ಅವರು ಹೇಳುವಂತೆ, "ಸಾಕ್ಷರತೆಯು ಮಾನವ ಬಂಡವಾಳವನ್ನು ಅಭಿವೃದ್ಧಿಪಡಿಸುವ ಸಾಧನ. ಸಾಕ್ಷರತೆಯು ಜನರನ್ನು ಸುಶಿಕ್ಷಿತರನ್ನಾಗಿಸುವ ಮೂಲಕ ಅವರ ಆರ್ಥಿಕ ದುಡಿಮೆ ಹೆಚ್ಚಾಗುತ್ತದೆ. ಸಾಕ್ಷರತೆಯು ಆಧುನೀಕರಣ ಕೈಗಾರೀಕರಣ ಪ್ರಕ್ರಿಯೆಗಳ ಸಾಮಾಜೀಕರಣವನ್ನು ಹೇಳಿಕೊಡುವ ಒಂದು ಪ್ರಮುಖ ಸಾಧನವೆಂದು ಹೇಳಲಾಗುತ್ತದೆ."[೨೭] ಈ ಹಿನ್ನೆಲೆಯಲ್ಲಿ ಮಕ್ಕಳು ಒಂದು ನಿರ್ದಿಷ್ಟ ವಯಸ್ಸಿನವರೆಗೆ ಶಾಲೆಯಲ್ಲಿ ಕಲಿಯಬೇಕಾಗುತ್ತದೆ. ಆದ್ದುದರಿಂದ ಭಾರತ ಸರ್ಕಾರವು ಸಂವಿಧಾನದ ನಾಲ್ಕನೆಯ ಪರಿಚ್ಛೇದದ ನಿರ್ದೇಶಕ ಸೂತ್ರಗಳಲ್ಲಿ ಬರುವ ೪೫ನೇ ವಿಧಿಯ ಪ್ರಕಾರ ೬ ರಿಂದ ೧೪ ವರ್ಷದ ವಯೋಮಾನದವರೆಗಿನ ಎಲ್ಲ ಮಕ್ಕಳಿಗೂ ಉಚಿತ & ಕಡ್ಡಾಯ ಪ್ರಾಥಮಿಕ ಶಿಕ್ಷಣ ಒದಗಿಸಲು ಶ್ರಮವಹಿಸುತ್ತದೆ.

ಭಾರತ ಸರ್ಕಾರವು ಎಲ್ಲರಿಗೂ ಶಿಕ್ಷಣ ತಲುಪಿಸಬೇಕೆಂಬ ಉದ್ದೇಶದಿಂದ ಹಲವು ಹೊಸ ಹೊಸ ಯೋಜನೆಗಳನ್ನ ಜಾರಿಗೆ ತಂದಿದೆ. ಮಧ್ಯಾಹ್ನದ ಬಿಸಿಊಟದ ಯೋಜನೆ, ೮ನೇ ತರಗತಿ ವಿದ್ಯಾರ್ಥಿಗಳಿಗೆ ಉಚಿತ ಬೈಸಿಕಲ್, ಬಟ್ಟೆ, ಪುಸ್ತಕ, ವಿದ್ಯಾರ್ಥಿವೇತನ ಇತ್ಯಾದಿ ಸೌಲಭ್ಯಗಳನ್ನು ಕಲ್ಪಿಸಿಕೊಟ್ಟಿದೆ. ಶಾಲೆ ಬಿಟ್ಟ ಮಕ್ಕಳನ್ನು ಕಲಿಕೆಗೆ ಕರೆತರುವುದಕ್ಕಾಗಿ ಚಿಣ್ಣರ ಅಂಗಳ, ಬಾ ಬಾಲೆ

ಶಾಲೆಗೆ, ಕೂಲಿಯಿಂದ ಶಾಲೆಗೆ ಇತ್ಯಾದಿ ಯೋಜನೆಗಳನ್ನು ಜಾರಿಗೆ ತಂದಿದೆ. ಆದರೆ ಗಂಗಾಮತಸ್ಥರಿಗೆ ಇದ್ಯಾವುದರ ಅರಿವೂ ಇಲ್ಲದೆ ಶಿಕ್ಷಣದ ಕಡೆ ಹೆಚ್ಚಿನ ಗಮನವನ್ನು ನೀಡದಿರುವುದು ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಕಂಡುಬಂದಿದೆ. ಈ ಜನಾಂಗದ ೩೦ ವರ್ಷ ಮೇಲ್ಪಟ್ಟವರಲ್ಲಿ ಶೇಕಡ ೪೦ ರಷ್ಟು ಜನರು ಅನಕ್ಷರಸ್ಥರಾಗಿದ್ದರೆ, ಇನ್ನೂ ಶೇಕಡ ೪೦ ರಷ್ಟು ಜನರು ೫ನೇ ತರಗತಿಯಿಂದ ೧೦ನೇ ತರಗತಿಯ ಮಧ್ಯದಲ್ಲಿಯೇ ಬಿಟ್ಟವರಾಗಿದ್ದಾರೆ. ಇನ್ನು ಉಳಿದ ಶೇಕಡ ೨೦ ರಷ್ಟು ಜನರು ಪದವಿಹಂತದವರೆಗೆ, ಇಲ್ಲವೆ ಐಟಿಐ, ಡಿ.ಇಡಿ, ಜೆ.ಓ.ಸಿ., ಪಿಯುಸಿ, ಡಿಪ್ಲೊಮ ಇತ್ಯಾದಿ ಕೋರ್ಸ್‌ಗಳನ್ನು ಅಧ್ಯಯನ ಮಾಡಿದವರಾಗಿದ್ದಾರೆ. ಇಂದಿಗೂ ಈ ಜನಾಂಗದವರು ಮಕ್ಕಳನ್ನು ಶಾಲೆಗೆ ಕಳುಹಿಸುತ್ತಿದ್ದರೂ ಕೂಡ ಇವರ ಕೆಲಸವಿದ್ದ ವೇಳೆ ವಾರಗಟ್ಟಲೆ ಮಕ್ಕಳನ್ನ ಶಾಲೆಗೆ ಕಳುಹಿಸುವುದಿಲ್ಲ. ಸಣ್ಣ–ಪುಟ್ಟ ಕೂಲಿ ಕೆಲಸಕ್ಕೆ ಅಥವಾ ತರಕಾರಿ–ಸೊಪ್ಪು ವ್ಯಾಪಾರಕ್ಕೆ ಕಳುಹಿಸುತ್ತಾರೆ.

ಅಕ್ಷರಸ್ಥರ ಸಂಖ್ಯೆ ಯಾವ ಪ್ರದೇಶದಲ್ಲಿ ಕಡಿಮೆ ಇರುತ್ತದೋ ಅಂತಹ ಕಡೆಗಳಲ್ಲಿ ಮನುಷ್ಯ ಜೀವನ ಸಾಗಿಸುವ ಅವಕಾಶಗಳು ಸಹ ಕಡಿಮೆ ಇರುತ್ತವೆ. ಅಲ್ಲದೆ ಅಲ್ಲಿ ಬಡತನವು ತೀವ್ರವಾಗಿರುತ್ತದೆ ಎಂದು ಹೇಳಬಹುದು. ಆದರೆ ಇತ್ತೀಚೆಗೆ ಈ ಸಮುದಾಯದವರಲ್ಲಿ ಸಮಾಜ ಸಂಘಟನೆಯ ಕೆಲಸವು ಪ್ರಗತಿಯ ಪಥದತ್ತ ಸಾಗುತ್ತಿರುವುದರಿಂದ ಈ ಸಮುದಾಯದವರು ಶಿಕ್ಷಿತರಾಗಿ ಮುಂದೆ ಬರುವಲ್ಲಿ ಪ್ರಯತ್ನಿಸುತ್ತಿದ್ದಾರೆ. ಆದರೆ ಇಂಥ ಪ್ರಯತ್ನಗಳಿಗೆ ಪೂರಕವಾದ ವಾತಾವರಣ ದೊರೆಯುತ್ತಿಲ್ಲ. ವಕ್ತೃ ಚಿಕ್ಕಚನ್ನಯ್ಯ ಹೇಳುವಂತೆ "ಓದಲು ಕಳುಹಿಸಿದರೆ ಕುರಿಗಳನ್ನ ಮೇಯಿಸುವವರು ಯಾರು? ನಮಗೆ ಜೀವನದ ಆಧಾರವೇ ಕುರಿಗಳ ಸಾಕಾಣಿಕೆ. ಆದ್ದರಿಂದ ಓದಿದರೆ ಸರ್ಕಾರಿ ಉದ್ಯೋಗವು ಸಿಗುತ್ತದೆ ಎಂಬ ಖಾತ್ರಿಯೂ ಇಲ್ಲ. ಓದಿಸಲು ಹಣವು ಇಲ್ಲ. ನಮಗೆ ಓದಿಗಿಂತ ಹೊಟ್ಟೆಪಾಡು ಮುಖ್ಯ"[೨೮] ಎಂದು ಹೇಳುತ್ತಾರೆ. ಇನ್ನು ಕೆಲವರು ಹೇಳುವುದನ್ನ ಆಧರಿಸಿ ಹೇಳುವುದಾದರೆ ಇವರಲ್ಲಿ ಇನ್ನು ಅನಕ್ಷರತೆ ಇರಲು ಕಾರಣವೆಂದರೆ ಪ್ರಮುಖವಾಗಿ ಬಡತನ. ಇವರಿಗೆ ಸರ್ಕಾರ ಕೊಡುವ ಸೌಲಭ್ಯಗಳು ಕೂಡ ತಿಳಿದಿಲ್ಲ. ಮೀನು ಹಿಡಿಯುವವರು ಮಕ್ಕಳನ್ನು ಜೊತೆಯಲ್ಲಿ ಕರೆದುಕೊಂಡು ಹೋಗುವುದರಿಂದ, ಆತನು ಅದೇ ಹಾದಿಯನ್ನ ಹಿಡಿಯುತ್ತಾನೆಯೇ ಹೊರತು, ಶಿಕ್ಷಣದ ಕಡೆ ಆಸಕ್ತಿಯನ್ನ ತೋರುವುದಿಲ್ಲ. ಇನ್ನು ಕಬ್ಬು ಕಡಿಯುವ ಕೂಲಿಗೆ ಹೋಗುವ ಗಂಡ–ಹೆಂಡತಿಯರು ಮಗುವನ್ನು ಸಹ ಜೊತೆಯಲ್ಲಿಯೇ ಎತ್ತಿಕೊಂಡು ಹೋಗುವುದರಿಂದ, ಮಗುವಿಗೆ ಓದಿನ ಬಗೆಗಿನ ಆಸಕ್ತಿಗಿನ್ನ, ತಂದೆಯಂತೆ ಕಬ್ಬು ಕಡಿಯುವುದಕ್ಕೆ ಹೋಗುತ್ತಾನೆ.

ಗಂಗಾಮತಸ್ಥರ ಮನೆಯ ವಾತಾವರಣವು ಕೂಡ ಶಿಕ್ಷಣದ ಮೇಲೆ ಪ್ರಭಾವ ಬೀರುತ್ತದೆ. ಮನೆ ಹಂದಿ ಗೂಡಿನಂತೆ ಇರುವುದರಿಂದ ಶಾಲೆಗೆ ಹೋಗುವ ವಿದ್ಯಾರ್ಥಿ, ಮನೆಯಲ್ಲಿ ಓದಲು-ಬರೆಯಲು ಸಾಧ್ಯವಾಗುವುದಿಲ್ಲ. ಆದ್ದರಿಂದ ವಿದ್ಯಾರ್ಥಿ ಕಲಿಕೆಯಲ್ಲಿ ಹಿಂದೆ ಉಳಿಯುತ್ತಾನೆ. ಹೀಗೆ ಕಲಿಕೆಯಲ್ಲಿ ಹಿಂದೆ ಉಳಿಯುವುದರಿಂದ ಶಾಲೆಯನ್ನು ಮಧ್ಯದಲ್ಲಿಯೇ ಬಿಡುವ ಪರಿಸ್ಥಿತಿ ನಿರ್ಮಾಣವಾಗುತ್ತದೆ. ಇವರು ಹೆಚ್ಚಾಗಿ ಗ್ರಾಮಾಂತರ ಪ್ರದೇಶದಲ್ಲಿ ವಾಸಿಸುವವರಾಗಿದ್ದು, ಮೀನುಗಾರರು, ಕೃಷಿಕರು, ಕೃಷಿ ಕಾರ್ಮಿಕರು, ಕೆಲಸಗಾರರು, ಕೂಲಿಗಾರರು ಆಗಿರುವುದರಿಂದ ಇವರಲ್ಲಿ ಬಹುಮಂದಿಗೆ ವಿದ್ಯಾಭ್ಯಾಸದಲ್ಲಿ ಆಸಕ್ತಿಯಿಲ್ಲ. ಬಹುಜನರ ಅಭಿಪ್ರಾಯದಲ್ಲಿ, ಇಂದಿನ ವಿದ್ಯಾವಂತ ತರುಣರು ಹೊಲಗದ್ದೆಗಳಲ್ಲಿ ಕೆಲಸ ಮಾಡಲೊಪ್ಪುವುದಿಲ್ಲ. ಇದರಿಂದ ಕೃಷಿ ಹಾಗೂ ಇತರ ಕೆಲಸಗಳು ನಿಂತು ಹೋಗುವುದು. ದುಡಿಯುವ ತಮಗೆ ಸಹಾಯಕರಿಲ್ಲದಂತಾಗುತ್ತದೆ. ಈ ಭಯ ಅವರಲ್ಲಿ ಹೊಕ್ಕು ನಿಂತಿದೆ. ಇದನ್ನು ಪೂರ್ಣವಾಗಿ ಅಲ್ಲಗಳೆಯುವಂತಹದೂ ಅಲ್ಲ. "ಬೆಳೆಯುತ್ತಿರುವ ಗಂಡು ಅಥವಾ ಹೆಣ್ಣು ಮಕ್ಕಳನ್ನು ಶಾಲೆಗೆ ಕಳುಹಿಸಿಕೊಡುವುದು, ಮೂಲದಲ್ಲಿ ಅವರ ಅರ್ಥವ್ಯವಸ್ಥೆಗೆ ಮತ್ತು ಸಾಂಪ್ರದಾಯಿಕ ಶ್ರಮವಿಭಜನೆಗೆ ಅಡ್ಡ ಬರುತ್ತದೆ"[೨೯] ಎಂಬ ಹೇಳಿಕೆಯಲ್ಲಿ ಸತ್ಯಾಂಶವಿದೆ. ಕಡ್ಡಾಯ ಶಿಕ್ಷಣದ ಅಡಿಯಲ್ಲಿ ಶಾಲೆಗೆ ಸೇರಿದರು ಎಷ್ಟೋ ಹುಡುಗ-ಹುಡುಗಿಯರು ಶಾಲೆಗೆ ಬರುವುದೇ ಇಲ್ಲ. ಬಂದವರೂ ಉಳಿಯುವುದಿಲ್ಲ. ಮಧ್ಯೆ ಬಿಟ್ಟು ಹೋಗುತ್ತಾರೆ. ಬಡತನ ಹಾಗೂ ಮನೆಯಲ್ಲಿನ ಕೆಲಸವೇ ಅದಕ್ಕೆ ಪ್ರಮುಖ ಕಾರಣಗಳು. ಬಡತನ ಪೀಡಿತ ಕುಟುಂಬಕ್ಕೆ ಆರ್ಥಿಕ ಸಹಾಯವೊದಗಿಸುವುದು ಅಗತ್ಯ. ಪರಿಶಿಷ್ಟ ಜಾತಿ, ವರ್ಗಗಳಿಗೆ ಸರ್ಕಾರ ನೀಡುವ ಸಹಾಯಗಳನ್ನು ಈ ಜನಾಂಗದ ಮಕ್ಕಳಿಗೂ ಕಲ್ಪಿಸಿಕೊಟ್ಟಾಗ ಮಾತ್ರ, ಇವರು ಸಹ ಎಲ್ಲರಂತೆ ಸುಶಿಕ್ಷಿತರಾಗಲು ಸಾಧ್ಯವಾಗುತ್ತದೆ.

ಪಟ್ಟಣ ಪ್ರದೇಶಗಳಲ್ಲಿಯೂ ಕೂಡ ಶಿಕ್ಷಣದಲ್ಲಿ ಪ್ರಗತಿಯನ್ನು ಕಾಣಲು ಸಾಧ್ಯವಾಗುತ್ತಿಲ್ಲ. ಹುಡುಗರು ಎಸ್.ಎಸ್.ಎಲ್.ಸಿ. ಅಥವಾ ಪಿ.ಯು.ಸಿ. ಮುಗಿಯುತ್ತಿದ್ದಂತೆ ಆಟೋ ಡ್ರೈವರ್ ವೃತ್ತಿಯನ್ನು ಅಥವಾ ಇನ್ನಾವುದೋ ಕಸುಬನ್ನ ಅವಲಂಬಿಸುತ್ತಾರೆ. ಇದರಿಂದಾಗಿ ಇವರು ಉನ್ನತ ವಿದ್ಯಾಭ್ಯಾಸದ ಕಡೆಗೆ ಹೆಚ್ಚಿನ ಗಮನವನ್ನ ಕೊಡುವುದಿಲ್ಲ. ಮಂಡ್ಯ ಜಿಲ್ಲೆಯಲ್ಲಿ ಇರುವ ಎಲ್ಲಾ ಜನಾಂಗಗಳಲ್ಲಿ ಅತ್ಯಂತ ಕಡಿಮೆ ಶಿಕ್ಷಣವನ್ನ ಹೊಂದಿರುವ ಜನಾಂಗವೆಂದರೆ, ಗಂಗಾಮತಸ್ಥರಾಗಿದ್ದಾರೆ. ಉನ್ನತ ಶಿಕ್ಷಣಕ್ಕೆ ಪರಿಶಿಷ್ಟರಿಗೆ ಕಲ್ಪಿಸಿಕೊಡುವ ಸೌಲಭ್ಯಗಳನ್ನ ಗಂಗಾಮತಸ್ಥರಿಗೂ ಕಲ್ಪಿಸಿಕೊಡಬೇಕಾಗಿದೆ. ಏಕೆಂದರೆ ಜಿಲ್ಲೆಯಲ್ಲಿ ಪರಿಶಿಷ್ಟ ಜಾತಿಯವರಿಗಿಂತಲೂ ತೀರಾ ಕೆಳಮಟ್ಟದ ಶಿಕ್ಷಣ ಮತ್ತು ಕೆಳಮಟ್ಟದ ಜೀವನವನ್ನು ಇವರು

ಸಾಗಿಸುತ್ತಿದ್ದಾರೆ. ಹೆಣ್ಣುಮಕ್ಕಳ ಶಿಕ್ಷಣವಂತೂ ಹೇಳಲು ಸಾಧ್ಯವಾಗದಂತಿದೆ. ಕೆಲವು ಕುಟುಂಬಗಳಲ್ಲಿ ೮ನೇ ತರಗತಿ ಓದುತ್ತಿದ್ದಂತೆ ಮದುವೆ ಮಾಡಿಬಿಡುತ್ತಾರೆ. ಹೆಚ್ಚೆಂದರೆ ಹತ್ತನೇ ತರಗತಿ ಓದಿಸುವುದೇ ಕಷ್ಟ ಸಾಧ್ಯವಾಗಿದೆ. ಹೆಣ್ಣು ಮಕ್ಕಳು ಉನ್ನತ ಶಿಕ್ಷಣವನ್ನು ಮಾಡುವುದು ಬೆರಳೆಣಿಕೆಯಷ್ಟು ಮಂದಿಗಳು ಮಾತ್ರವಾಗಿದೆ. ಆದ್ದರಿಂದ ಸರ್ಕಾರ ಮೊದಲಿಗೆ ಇವರ ಬಡತನ ನಿರ್ಮೂಲನೆ ಮಾಡುವುದರ ಮೂಲಕ, ಗಂಗಾಮತಸ್ಥ ಜನಾಂಗದ ಶಿಕ್ಷಣದ ಕಡೆ ಹೆಚ್ಚಿನ ಗಮನವನ್ನ ಕೊಡಬೇಕಾಗಿದೆ. ಬೇರೆ ಜನಾಂಗಕ್ಕೆ ಹೋಲಿಸಿದರೆ ಅತ್ಯಂತ ಹಿಂದುಳಿದವರು ಈ ಗಂಗಾಮತಸ್ಥರೇ ಆಗಿದ್ದಾರೆ ಎಂದು ಹೇಳಬಹುದು.

### ೩.೪ ಮಹಿಳೆಯರ ಸ್ಥಾನ-ಮಾನ

ಭಾರತೀಯ ಸಮಾಜ ಪುರುಷ ಪ್ರಧಾನವಾದುದು ಎಂಬ ಆರೋಪವಿದೆ. ಇದರಿಂದಾಗಿ ಮಹಿಳೆಯರಿಗೆ ಸಲ್ಲಬೇಕಾದ ಸ್ಥಾನ ಮಾನಗಳು, ಅವಕಾಶಗಳು ದೊರೆಯಲಿಲ್ಲವೆಂಬ ಅಭಿಪ್ರಾಯ ರೂಪಿತವಾಯಿತು. ಈ ಆರೋಪ, ಅಭಿಪ್ರಾಯಗಳು ಕೆಲವು ವಿಷಯಗಳಿಗೆ ಸಂಬಂಧಿಸಿದಂತೆ ನಿಜವೂ ಹೌದು. ಆದರೆ ಪ್ರಾಚೀನ ಕಾಲದಿಂದ ಭಾರತಕ್ಕೆ ಬಂದು ಹೋದ ಪ್ರವಾಸಿಗರ ಹೇಳಿಕೆಗಳನ್ನು ಗಮನಿಸಿದರೆ ಭಾರತೀಯ ಸಮಾಜದಲ್ಲಿ ಮಹಿಳೆಯರಿಗೆ ಉನ್ನತವಾದ ಸ್ಥಾನವೇ ಇದ್ದಿತೆಂದು ತಿಳಿಯುತ್ತದೆ. ನಮ್ಮ ಮೊದಲ ದೇವತೆಯೆ ಹೆಣ್ಣು. ಅಲ್ಲಿಂದ ಇಲ್ಲಿಯವರೆಗೆ ನಮ್ಮ ಸಮಾಜದಲ್ಲಿನ ಮಹಿಳೆಯರ ಸ್ಥಾನಮಾನಗಳು ಉನ್ನತವೂ, ಜವಾಬ್ದಾರಿಯುತವೂ ಆಗಿದ್ದವೆನಿಸುತ್ತದೆ. ಮಾನವ ಸಂಸ್ಕೃತಿಯ ಇತಿಹಾಸದಲ್ಲಿ ಹೆಣ್ಣಿಗೆ ಒಂದು ವಿಶಿಷ್ಟ ಸ್ಥಾನಮಾನವಿದೆ. ಮಾನವ ಶಾಸ್ತ್ರಜ್ಞರು ಕಂಡುಕೊಂಡಂತೆ ಆದಿಮ ಸಮಾಜದ ಕುಟುಂಬ ಪರಿಕಲ್ಪನೆ ತಾಯಿ ಮತ್ತು ಮಕ್ಕಳದು. ಮಗುವೊಂದು ಜನ್ಮ ತಳೆಯುವ ಮುನ್ನ ಭ್ರೂಣ ಸ್ಥಿತಿಯಿಂದಲೇ ತಾಯಿಯ ಆಸರೆಯಲ್ಲಿ ಬೆಳೆಯುತ್ತದೆ. ಮುಂದೆ ಕೂಡ ಅದು ತನ್ನ ವ್ಯಕ್ತಿತ್ವವನ್ನು ಬಹುಮಟ್ಟಿಗೆ ತಾಯಿಯಿಂದ ಪಡೆದು ಬೆಳೆಯುತ್ತದೆ. ಏಕೆಂದರೆ ಮಗು ತನ್ನ ಬಾಲ್ಯಾವಸ್ಥೆಯನ್ನು ಬಹುತೇಕ ತಾಯಿಯ ಜೊತೆಯಲ್ಲಿ ಕಳೆಯುತ್ತದೆ. ಮಗುವು ತಾಯಿಯಿಂದ ಪಡೆಯುವ ವ್ಯಕ್ತಿತ್ವದ ಸ್ವರೂಪವನ್ನು 'ನೂಲಿನಂತೆ ಸೀರೆ, ತಾಯಿಯಂತೆ ಮಕ್ಕಳು' ಎನ್ನುವ ಗಾದೆ ವಿವರಿಸುತ್ತದೆ.

ಪಿತೃಪ್ರಧಾನ ಕುಟುಂಬ ವ್ಯವಸ್ಥೆಯು ಸ್ಥಾಪನೆಯಾಗಿ ಕುಟುಂಬದಲ್ಲಿ ಹೆಣ್ಣು ಗಂಡಿಗೆ ತಾರತಮ್ಯ ಉಂಟಾಗಲು ಕಾರಣವಾಗಿದೆ. ಕುಟುಂಬದಲ್ಲಿ ಹೆಣ್ಣು ಮತ್ತು ಗಂಡು ಮಕ್ಕಳಿಬ್ಬರು ಇದ್ದರೂ ಕೂಡ, ಗಂಡು ಮಗನಿಗೆ ವಿಶೇಷವಾದ ಆದ್ಯತೆಯನ್ನು ಕೊಡಲಾಗುತ್ತದೆ. ಆದರೆ ಹೆಣ್ಣು ಮಗಳು ಮಾತ್ರ ಪರರ ಮನೆಯ ಸೊತ್ತು ಎಂದು ಭಾವಿಸಲಾಗಿದೆ. ಆದ್ದರಿಂದ ಅವಳಿಗೆ

ಆಸ್ತಿಯಲ್ಲಾಗಲೀ, ಅಧಿಕಾರದಲ್ಲಾಗಲೀ ಭಾಗವಹಿಸಲು ಅವಕಾಶವನ್ನು ಕೊಡುವುದಿಲ್ಲ. ಸಮಾಜದ ದೈನಂದಿನ ಆರ್ಥಿಕ ಕ್ರಿಯೆ-ಪ್ರಕ್ರಿಯೆಗಳಲ್ಲಿ ಮಹಿಳೆ ತನ್ನ ಸತತ ಶ್ರಮದಿಂದಾಗಿ ಸಮಾಜದ ಆರ್ಥಿಕ ತಳಹದಿಯನ್ನು ಕ್ರಮಬದ್ಧವಾಗಿ ಇರುವಂತೆ ಮಾಡಿದ್ದಾಳೆ. ಆದರೂ ಸಹ ಪುರುಷನಿಗೆ ಸರಿಸಮಾನವಾಗಿ ಮಹಿಳೆಯು ದುಡಿಯುತ್ತಿದ್ದಾಳೆ. ಪ್ರತಿಯೊಂದು ಕ್ಷೇತ್ರದಲ್ಲಿ ಮಹಿಳೆಯರ ಪಾಲುಗಾರಿಕೆ ಕಂಡುಬರುತ್ತದೆ. ಆದರೆ ಅವಳ ಪಾಲುದಾರಿಕೆಯಲ್ಲಿ ಮಹಿಳೆಯರನ್ನು ಗೌಣ ಮಾಡಲಾಗಿದೆ. ವೃತ್ತಿಗಳೊಂದಿಗೆ ಜೀವನ ಕ್ರಮವನ್ನು ಆರಂಭಿಸಿದ ಮಹಿಳೆ ಅನೇಕ ರೀತಿಯ ಸಮಾಜಗಳ ನಿರ್ಮಾಣಕ್ಕೆ ಕಾರಣಳಾಗಿದ್ದಾಳೆ. ಇಂದಿಗೂ ಮಹಿಳೆ ದುಡಿಮೆಯಲ್ಲಿ ಹೊಣೆಗಾರಿಕೆ ಗಂಡಸರಿಗಿಂತ ಪ್ರಧಾನವಾಗಿ, ನಿರಂತರವಾಗಿ ಮುಂದುವರೆದಿದೆ. ಸಾಮಾನ್ಯವಾಗಿ ಮನೆಯಲ್ಲಿ ಪುರುಷರೆಲ್ಲರೂ ಊಟ ಮಾಡಿದ ಮೇಲೆಯೇ ಉಳಿದವರನ್ನು ಊಟ ಮಾಡಿಸಿ, ಉಳಿದ ಊಟವನ್ನು ಮಾಡುತ್ತಾಳೆ. ಇಲ್ಲದಿದ್ದರೆ ತಂಗಳು ತಿಂದು ನೀರು ಕುಡಿದು ಮಲಗುತ್ತಾಳೆ. ತನ್ನ ಜವಾಬ್ದಾರಿಯುತ ಕೆಲಸ ಮಾಡಿ, ಗಂಡ ಮಕ್ಕಳು ಉಂಡು ಸಂತೋಷವಾಗಿರಲಿ ಎಂದು ಅನುಕಂಪದ ಹೃದಯ ಸದಾ ಅವರಿಗಾಗಿ ಮಿಡಿಯುತ್ತಿರುತ್ತದೆ.

ಸ್ತ್ರೀ ಸಂಸಾರದ ಕಣ್ಣು. ಇಂತಹ ಸಂಸಾರದ ಆಧಾರವಾದ ಮಹಿಳೆಯ ಮೇಲೆ ಪುರುಷರು ಸಾಧಿಸಿದ್ದ ನಿಯಂತ್ರಣವು ವೈಯಕ್ತಿಕ ನೆಲೆಯಿಂದ ಹಿಡಿದು ಸಾಮಾಜಿಕ ನೆಲೆಯವರೆಗೆ ವ್ಯಾಪಿಸಿದೆ. ಇಂದಿಗೂ ಸಹ ಲಿಂಗ ತಾರತಮ್ಯವನ್ನು ಕಾಣಬಹುದಾಗಿದೆ. ಸಾಮಾಜಿಕವಾಗಿ, ಆರ್ಥಿಕವಾಗಿ ಹಾಗೂ ರಾಜಕೀಯವಾಗಿ ಸಾಕಷ್ಟು ಬದಲಾವಣೆಗಳಾದರೂ ದುಡಿಮೆಗಳಿಂದ ಮಹಿಳೆಗೆ ಮುಕ್ತಿ ದೊರೆತಿಲ್ಲ. ಅವಳ ಶ್ರಮವು ಕಣ್ಣಿಗೆ ಕಂಡರೂ ಕಾಣದಂತೆ, ಗಣನೆಗೆ ಬಾರದಂತೆ ಅಗೋಚರವಾಗಿದೆ. ಪುರುಷರಿಗೆ ಸಂಬಂಧಿಸಿದಂತೆ ಸಾಮಾಜಿಕವಾಗಿದ್ದರೆ, ಮಹಿಳೆಗೆ ಸಂಬಂಧಿಸಿದಂತೆ ಜೈವಿಕವಾಗಿದೆ. ಮಹಿಳೆಯರ ದುಡಿಮೆಯು ಕುಟುಂಬದ ಹಿತಾಸಕ್ತಿಗಳನ್ನು ಪೂರೈಸುವಲ್ಲಿಗೆ ಸೀಮಿತವಾಗಿರದೆ, ಆರ್ಥಿಕ ಸ್ಥಾನ-ಮಾನವನ್ನು ನಿರ್ಧರಿಸುತ್ತದೆ. ಕುಟುಂಬದಲ್ಲಿ ಗಂಡನಿಗೆ, ಮಕ್ಕಳಿಗೆ, ಅತ್ತೆ-ಮಾವಂದಿರು ಹಾಗೂ ಇತರ ಸದಸ್ಯರ ಕಡೆ ಗಮನ ಹರಿಸಬೇಕಾಗುತ್ತದೆ. ಕುಟುಂಬದ ಸಂಪೂರ್ಣ ಹೊಣೆಗಾರಿಕೆಯೇ ಮಹಿಳೆಯದಾಗಿರುತ್ತದೆ. ಕುಟುಂಬದಲ್ಲಿ ಬರುವ ಎಲ್ಲಾ ಕೆಲಸ-ಕಾರ್ಯಗಳನ್ನೊಳಗೊಂಡಂತೆ, ಎಲ್ಲರನ್ನು ಪ್ರೀತಿ-ವಿಶ್ವಾಸದಿಂದ ಕಾಣುವ ಜವಾಬ್ದಾರಿ ಮಹಿಳೆಗಿದೆ.

ಜನಪದರಲ್ಲಿ ಹೆಣ್ಣಿಗೆ ವಿಶಿಷ್ಟವಾದ ಸ್ಥಾನವನ್ನು ಕಲ್ಪಿಸಿಕೊಡಲಾಗಿದೆ. "ಸಂಸ್ಕೃತದ 'ಗೃಹಸ್ಥೆ'ಯೆ ಕನ್ನಡದ ಗರತಿಯಾಗಿದ್ದಾಳೆ. ಹಿಂದೂ ಸಮಾಜದಲ್ಲಿ ಗೃಹಸ್ಥೆಯ ಹೊಣೆಗಾರಿಕೆ ಅಷ್ಟಿಷ್ಟಲ್ಲ. ಧರ್ಮ ಪರಿಪಾಲನೆಯಲ್ಲಿ ಮುಕ್ತಿ ಸಾಧನೆಯಲ್ಲಿ ಗೃಹಸ್ಥ ಎಷ್ಟು ಜವಾಬ್ದಾರನೋ

ಗೃಹಸ್ಥೆಯೂ ಅಷ್ಟೇ ಜವಾಬ್ದಾರಳು"[೩೦] ಎಂಬ ವಿಚಾರ ಅಷ್ಟೇ ಸತ್ಯವಾದುದ್ದಾಗಿದೆ. ಗಂಗಾಮತಸ್ಥ ಮಹಿಳೆ ಸಮಾಜದ ಇತರ ಜನಾಂಗದ ಮಹಿಳೆಯರಿಗಿಂತ ಭಿನ್ನವಾಗಿದ್ದಾಳೆ. ಮಹಿಳೆಯ ಸ್ಥಾನ ಮಾನ ಬೇರೆಲ್ಲಾ ಜನಾಂಗದ ಮಹಿಳೆಯರಿಗಿಂತ ಉತ್ತಮವಾದ ರೀತಿಯಲ್ಲಿಯೂ ಇದೆ ಎಂದು ಹೇಳಬಹುದು. ಕುಟುಂಬದಲ್ಲಿ ಮಹಿಳೆಯ ಪಾತ್ರ ಪ್ರಮುಖವಾದುದ್ದಾಗಿದೆ. ಸಾಮಾನ್ಯವಾಗಿ ಮನೆಯ ಯಜಮಾನಿಕೆ ಹಿರಿಯ ಹೆಂಗಸು ಅಥವಾ ತಾಯಿಯದು ಆಗಿರುತ್ತದೆ. ನನ್ನ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಶೇಕಡ ೭೦ ರಷ್ಟು ಕುಟುಂಬಗಳ ನಿರ್ವಹಣೆ ಹೆಂಗಸಿನದಾಗಿರುವುದು ಕಂಡು ಬಂದಿದೆ. ಇದಕ್ಕೆ ಅವರು ಹೇಳುವ ಕಾರಣವೆಂದರೆ ಗಂಡಸರು ಹಲವು ರೀತಿಯ ಕೆಟ್ಟ ಚಟಗಳಿಗೆ ಬಲಿಯಾಗಿ, ಕುಟುಂಬದ ಬಗ್ಗೆ ಹೆಚ್ಚಿನ ಗಮನವನ್ನು ಅವರು ಕೊಡುವುದಿಲ್ಲ. ಆದ್ದರಿಂದ ಕುಟುಂಬದ ಜವಾಬ್ದಾರಿಯನ್ನ ಸಹಜವಾಗಿ ಮಹಿಳೆಯೇ ಹೊರಬೇಕಾಗುತ್ತದೆ. ಈ ಜನಾಂಗದ ಮಹಿಳೆ ವಂಶಪಾರಂಪರ್ಯವಾಗಿಯೇ ಕುಟುಂಬವನ್ನು ನಡೆಸಿಕೊಂಡು ಬರುವ ಸಾಮರ್ಥ್ಯವನ್ನ ಬೆಳೆಸಿಕೊಂಡು ಬಂದಿರುತ್ತಾಳೆ. ಇಷ್ಟೇ ಅಲ್ಲದೆ ಕುಟುಂಬದ ಕಷ್ಟ–ಸುಖದ ಅನುಭವ ಗಂಡಸಿಗಿಂತ ಹೆಂಗಸಿಗೆ ಹೆಚ್ಚಿನ ಅನುಭವವಿರುವುದರಿಂದ ಹೆಂಗಸೆ ಯಜಮಾನಿಯಾಗಿರುತ್ತಾಳೆ. ಕುಟುಂಬದಲ್ಲಿ ಗಂಡ, ಮಕ್ಕಳು, ಅತ್ತೆ–ಮಾವ, ಇತರರನ್ನ ಈಕೆ ನೋಡಿಕೊಳ್ಳಬೇಕು. ಮಹಿಳೆ ಮುಂಜಾನೆಯಿಂದ ಸಂಜೆಯತನಕ ದುಡಿದು ತಂದರೂ ಅವಳು ಬಂದ ಮೇಲೆ ಮನೆಕೆಲಸ, ಅಡಿಗೆ ಕೆಲಸ ಮಾಡಿ ನೀರು ತಂದು ಮೊದಲಾದ ಕೆಲಸಗಳನ್ನು ಮಾಡಬೇಕಾಗುತ್ತದೆ. ಇದರ ಜೊತೆಗೆ ಮಕ್ಕಳ ಪೋಷಣೆ, ಹಿರಿಯರ ಬಗ್ಗೆ ಗಮನ, ಜೀವನೋಪಾಯಕ್ಕೆ ಬೇಕಾಗುವ ಪರಿಕರಗಳು, ಇದಕ್ಕಾಗಿ ಆದಾಯದ ಮೂಲಗಳು, ಎಲ್ಲಾ ಜವಾಬ್ದಾರಿಯು ಹೆಂಗಸಿನದೇ ಆಗಿರುತ್ತದೆ.

ಗಂಡಸರು, ಹೆಂಗಸರು ಸರಿಸಮಾನವಾಗಿ ದುಡಿಯುತ್ತಾರೆ. ಇಬ್ಬರು ಸಮನಾಗಿಯೇ ಆದಾಯವನ್ನು ಗಳಿಸುವ ಶಕ್ತಿಯನ್ನು ಹೊಂದಿದ್ದಾರೆ. ಮನೆಯ ಹೊರಗೆ ಹೋಗಿ ದುಡಿಯಲು ಶಕ್ತರಲ್ಲದ ಮಹಿಳೆಯರು ಕುಟುಂಬದಲ್ಲಿರುವ ಸಣ್ಣ ಮಕ್ಕಳನ್ನು ನೋಡಿಕೊಳ್ಳುತ್ತಾರೆ. ಉಳಿದವರು ಕೂಲಿಗೆ ಅಥವಾ ತಮಗೆ ಸಂಬಂಧಿಸಿದ ಜಮೀನಿನ ಕೆಲಸಕ್ಕೆ ಹೋಗಿ ದುಡಿಯುತ್ತಾರೆ. ಕಬ್ಬು ಕಡಿಯುವುದು, ನಾಟಿ, ಕಳೆ ಕೀಳುವುದು, ಮಣ್ಣು ಹೊರುವುದು ಮುಂತಾದ ಕೂಲಿಯಲ್ಲಿ ಈ ಜನಾಂಗದ ಮಹಿಳೆಯರು ನಿರತರಾಗಿದ್ದಾರೆ. ಇವರು ದಿನಗೂಲಿ ಕೆಲಸವನ್ನು ಮಾಡುತ್ತಾರೆ. ಕೆಲವು ಸಂದರ್ಭದಲ್ಲಿ ಗುತ್ತಿಗೆಗೆ ಒಟ್ಟು ಕೆಲಸವನ್ನು ಪಡೆದುಕೊಂಡು ಮಹಿಳೆಯರ ಒಂದು ತಂಡ ಅದನ್ನು ಹಂಚಿಕೊಂಡು ದುಡಿಯುತ್ತಾರೆ. ಇದರಿಂದಾಗಿ ದಿನವೊಂದಕ್ಕೆ ನೂರು ರೂ.ಗಳಿಂದ ನೂರ ಐವತ್ತು ರೂಗಳವರೆಗೆ ಆದಾಯವನ್ನು ಗಳಿಸುವುದುಂಟು. ಗಂಡ–ಹೆಂಡತಿ ಇಬ್ಬರು

ಒಂದೇ ಕಡೆಯಲ್ಲಿ ಕೂಲಿ ಕೆಲಸಕ್ಕಾಗಿ ಹೋಗುತ್ತಾರೆ. ಗಂಡ ತನ್ನ ಕೂಲಿಯ ಹಣದಲ್ಲಿ ಸ್ವಲ್ಪ ಹಣವನ್ನು ತನ್ನ ಬಳಿ ಇಟ್ಟುಕೊಂಡು ಉಳಿದ ಹಣವನ್ನು ಹೆಂಡತಿಗೆ ಕೊಡುತ್ತಾನೆ. ಮಹಿಳೆಯರು ಸಂಪಾದಿಸಿದ ಹಣ ಮತ್ತು ಗಂಡ ಕೊಟ್ಟ ಹಣದಿಂದ ಆಕೆಯೇ ಕುಟುಂಬವನ್ನು ನಡೆಸಿಕೊಂಡು ಹೋಗಬೇಕಾಗುತ್ತದೆ. ಕೆಲವು ಕುಟುಂಬಗಳಲ್ಲಿ ಗಂಡ-ಹೆಂಡತಿ ಮಕ್ಕಳಿದ್ದರೆ, ಇನ್ನು ಕೆಲವು ಕುಟುಂಬಗಳಲ್ಲಿ ಅತ್ತೆ-ಮಾವ, ಇತರ ಸದಸ್ಯರು ಇರುತ್ತಾರೆ. ಇವರನ್ನು ಸಾಕುವ ಹೊಣೆ ಮಹಿಳೆಗೆ ಇರುತ್ತದೆ.

ಕೆಲವು ಮಹಿಳೆಯರು ಮಾತ್ರ ಮನೆಯಲ್ಲಿ ಇರುತ್ತಾರೆ. ಇವರು ತಮಗೆ ಸಂಬಂಧಿಸಿದ ಜಮೀನಿನಲ್ಲಿ ಕೆಲಸವನ್ನು ಮಾಡಬೇಕಾಗುತ್ತದೆ. ತರಕಾರಿ-ಸೊಪ್ಪು ಬೆಳೆಯುವುದು, ಹೂವಿನ ತೋಟದ ಜವಾಬ್ದಾರಿ, ವ್ಯವಸಾಯದ ಕಡೆಗೆ ಗಮನ ಹರಿಸಬೇಕು. ಗಂಡ ಕೂಲಿಗೆ ಹೋದರೆ ಕೆಲವು ಹೆಂಗಸರು ವ್ಯಾಪಾರಕ್ಕೆ ಹೋಗುತ್ತಾರೆ. ಬೆಳಗ್ಗೆ ೬ ಗಂಟೆಗೆ ಹೊರಟು ಸುತ್ತ-ಮುತ್ತಲಿನ ಗ್ರಾಮಗಳಿಗೆ ಹೋಗಿ ಹಣ್ಣು-ತರಕಾರಿ, ಸೊಪ್ಪು, ಸೀಗಡಿ, ಕರಿಮೀನು, ಸುಣ್ಣ, ರಂಗೋಲಿ ಪುಡಿ, ಮಕ್ಕರಿ, ಕುಕ್ಕೆ, ವೀಳ್ಯದೆಲೆ ಇತ್ಯಾದಿ ವ್ಯಾಪಾರವನ್ನು ಬೆಳಗ್ಗೆ ೧೦ ಗಂಟೆಯಷ್ಟರಲ್ಲಿ ಮುಗಿಸಿ ಮನೆಗೆ ವಾಪಸ್ಸು ಬರುತ್ತಾರೆ. ನಂತರದಲ್ಲಿ ಮನೆಯ ಕೆಲಸದಲ್ಲಿ ನಿರತರಾಗುತ್ತಾರೆ. ಇಷ್ಟರಲ್ಲಿ ಕೆಲಸಕ್ಕೆ ಹೋಗುವ ಗಂಡ ತಂಗಳನ್ನು ಊಟ ಮಾಡಿ ಹೋಗಿರುತ್ತಾನೆ. ವಕ್ತೃ ನಿಂಗಮ್ಮ ಹೇಳುವಂತೆ "ವ್ಯಾಪಾರದಿಂದ ದಿನ ನಿತ್ಯದ ಜೀವನ ನಿರ್ವಹಣೆಗೆ ಅನುಕೂಲವಾಗಿದೆ. ಮಕ್ಕಳನ್ನು ಓದಿಸಲು, ಬಟ್ಟೆ-ಬರೆ ತೆಗೆದುಕೊಳ್ಳಲು, ಉಪ್ಪು-ಹುಡಿಗೆ ಸಹಾಯವಾಗುವುದರಿಂದ ವ್ಯಾಪಾರಕ್ಕೆ ಹೋಗ್ತೇವೆ"[೩೧] ಎಂದು ಹೇಳುತ್ತಾಳೆ. ಅಲ್ಲದೆ ಗಂಡ ಕುಟುಂಬ ನಿರ್ವಹಣೆಗಾಗಿ ಹಣವನ್ನು ಕೊಡದಿದ್ದಾಗಲೂ ಸಹ ಹೇಗೋ ಮಹಿಳೆ ವ್ಯಾಪಾರದಿಂದ ಬರುವ ಆದಾಯದಿಂದ ಕುಟುಂಬದ ಖರ್ಚು-ವೆಚ್ಚವನ್ನು ಸರಿದೂಗಿಸುತ್ತಾಳೆ. ಕ್ಷೇತ್ರ ಕಾರ್ಯದ ಅಧ್ಯಯನದ ಸಂದರ್ಭದಲ್ಲಿ ಕಂಡು ಬಂದ ಮತ್ತೊಂದು ಪ್ರಮುಖ ಅಂಶವೆಂದರೆ ಸಾಮಾನ್ಯವಾಗಿ ಗಂಡ-ಹೆಂಡತಿಯರಿಬ್ಬರು ಪರಸ್ಪರ ಅರಿತು, ಗಂಡು-ಹೆಣ್ಣು ಎಂಬ ಬೇಧ ಭಾವವಿಲ್ಲದೆ ಬದುಕು ಸಾಗಿಸುವುದು. ಇದಕ್ಕೆ ಕಾರಣ ಆಕೆಯು ಸಹ ಗಂಡಸಷ್ಟೇ ಎಲ್ಲಾ ಕೆಲಸ ಕಾರ್ಯಗಳಲ್ಲಿ ಭಾಗಿಯಾಗಿರುವುದರಿಂದ. ಅಷ್ಟೇ ಅಲ್ಲದೆ ಗಂಡಸರಷ್ಟೇ ಹೆಂಗಸರು ಕೂಡ ಗಟ್ಟಿ-ಮುಟ್ಟಾಗಿದ್ದಾರೆ. ಈ ಜನಾಂಗದಲ್ಲಿ ಗಂಡಸರಿಗಿಂತ ಹೆಂಗಸರೆ ಹೆಚ್ಚಿನ ಬುದ್ಧಿವಂತರಾಗಿರುತ್ತಾರೆ. ಅಲ್ಲದೆ ಈಕೆ ಗದ್ದೆಯ ಕೆಲಸದಿಂದ ಹಿಡಿದು, ಕೂಲಿಯ ಕೆಲಸದವರೆಗೂ ಮಾಡುತ್ತಾಳೆ. ಇವರಲ್ಲಿ ಹೆಣ್ಣು ಮಗು ಜನಿಸಿತು ಎಂಬ ಚಿಂತೆಯು ಸಹ ಇರುವುದಿಲ್ಲ. ಹೆಣ್ಣಾದರೇನು? ಗಂಡಾದರೇನು? ಇವು ನಮ್ಮ ಮಕ್ಕಳಲ್ಲವೇ, ದೇವರು ಕರುಣಿಸಿದ್ದು ಎಂಬ ಭಾವನೆ ಇವರಲ್ಲಿ ಇದೆ. ಮಕ್ಕಳ ಪೋಷಣೆಯ ಹೊಣೆಯು ಕೂಡ

ಈಕೆಯದೆ. ಗಂಡಸು ಮಕ್ಕಳ ಬಗ್ಗೆ ಯಾವುದೇ ರೀತಿಯ ಚಿಂತೆಯನ್ನೇ ಮಾಡುವುದಿಲ್ಲ. ಕೂಲಿಗೆ ಹೋಗುವ ಹೆಂಗಸರು ಮಕ್ಕಳನ್ನು ತಮ್ಮ ಅತ್ತೆ–ಮಾವರ ಬಳಿ ಇಲ್ಲವೇ ಪಕ್ಕದ ಮನೆಯವರ ಬಳಿಬಿಟ್ಟು ಅಥವಾ ಕೂಲಿ ಕೆಲಸದ ಸ್ಥಳಕ್ಕೆ ಎತ್ತಿಕೊಂಡು ಹೋಗುತ್ತಾರೆ. ಇತ್ತೀಚೆಗೆ ಅಂಗನವಾಡಿ, ಬಾಲವಾಡಿಗಳಲ್ಲಿ ಮಕ್ಕಳನ್ನು ಬಿಟ್ಟು ತಮ್ಮ ಕೆಲಸಕ್ಕೆ ಹೋಗುತ್ತಾರೆ.

ಕುಟುಂಬದ ಪ್ರತಿಯೊಂದು ಕಷ್ಟ–ನಷ್ಟಗಳನ್ನು ಸಹನೆಯಿಂದ ನೋಡಿಕೊಂಡು ಹೋಗುತ್ತಾಳೆ. ಪತಿಗೆ ವಿಶ್ವಾಸದಿಂದ ಇರುತ್ತಾಳೆ. ಕುಟುಂಬದಲ್ಲಿ ಪುರುಷನಿಲ್ಲದಿದ್ದರೆ ಸ್ತ್ರೀಯರು ಮನೆಯ ಸಂಪೂರ್ಣವಾದ ಜವಾಬ್ದಾರಿಯನ್ನು ನೋಡಿಕೊಳ್ಳಬೇಕಾಗುತ್ತದೆ. ದುಡಿಮೆ ಎಂಬುದು ಜೀವನದ ಉಳಿವಿಗಾಗಿ ಬದುಕುವುದಕ್ಕಾಗಿ ನಡೆಯುತ್ತಿರುತ್ತದೆ. ಮಹಿಳೆಯು ಮನೆಯ ಒಳಿತಿಗಾಗಿ, ಸುಖದಿಂದ ಇರಲು ಕೆಲಸ ಮಾಡುತ್ತಿರುತ್ತಾಳೆ. ಕೂಲಿಗೆ ಹೋಗುವುದಕ್ಕಿಂತ ಮೊದಲು ಮನೆಯಲ್ಲಿ ಅಡುಗೆ ಮಾಡಿ ಹೋಗುತ್ತಾಳೆ. ಕೂಲಿಯ ಕೆಲಸ ಮುಗಿಸಿ ಬಂದ ನಂತರದಲ್ಲಿ ರಾತ್ರಿ ಅಡುಗೆ ಮಾಡಿ ಎಲ್ಲರಿಗೂ ಬಡಿಸಿ, ಮಕ್ಕಳನ್ನು ಮಲಗಿಸಿ ತದ ನಂತರದಲ್ಲಿ ತಾನೂ ಉಳಿದಿದ್ದನ್ನ ತಿಂದು ಮಲಗುತ್ತಾಳೆ. ಮಕ್ಕಳ ಶಿಕ್ಷಣದಿಂದ ಹಿಡಿದು ಮದುವೆ ಮಾಡುವ ಎಲ್ಲದರ ಹೊಣೆ ಈಕೆಯದು. ಇದಕ್ಕಾಗಿ ಈಕೆ ಕುಟುಂಬದ ನಿರ್ವಹಣೆಯ ಜೊತೆಗೆ ಮಕ್ಕಳ ಭವಿಷ್ಯಕ್ಕಾಗಿ ಹಣವನ್ನು ಉಳಿಸಬೇಕಾಗುತ್ತದೆ. ಇದರಿಂದಾಗಿ ಆಕೆ ಹೊಟ್ಟೆ–ಬಟ್ಟೆಯನ್ನು ಕಟ್ಟಿಕೊಂಡು ದುಡಿದು ಉಳಿಸುತ್ತಾಳೆ. ಮಗಳ ಮದುವೆಯಿಂದ ಪ್ರಾರಂಭಗೊಂಡು, ಬಾಣಂತನ, ಮೊಮ್ಮಕ್ಕಳ ಲಾಲನೆ–ಪಾಲನೆಯವರೆವಿಗೂ ಆಕೆಯದೆ ಜವಾಬ್ದಾರಿ.

ಗಂಗಾಮತಸ್ಥ ಮಹಿಳೆಯ ಶಿಕ್ಷಣ ೧೯೯೦ಕ್ಕಿಂತ ಹಿಂದೆ ಶೇಕಡ ೫ ರಿಂದ ೧೦ ರಷ್ಟಿತ್ತು. ಅವರು ಓದಿದ್ದರು ೫ ರಿಂದ ೭ನೇ ತರಗತಿಯವರೆಗೆ ಅಷ್ಟೇ. ಯಾರೋ ಅಲ್ಲೊಬ್ಬರು – ಇಲ್ಲೊಬ್ಬರು ಮಾತ್ರ ಪದವಿಯವರೆಗೆ ಓದಿದವರು ಇದ್ದಾರೆ. ಇವರನ್ನು ಕೇವಲ ಪಟ್ಟಣ ಪ್ರದೇಶಗಳಲ್ಲಿ ಮಾತ್ರ ಕಾಣಲು ಸಾಧ್ಯವಾಗಿತ್ತು. ಆದರೆ ಇತ್ತೀಚಿನ ದಿನಗಳಲ್ಲಿ ಸರ್ಕಾರ ಹಲವಾರು ಸೌಲಭ್ಯಗಳನ್ನು ಕಲ್ಪಿಸಿಕೊಟ್ಟಿದ್ದರೂ ಹೆಣ್ಣು ಮಕ್ಕಳ ಶಿಕ್ಷಣ ಅಷ್ಟಕ್ಕಷ್ಟೇ. ಪ್ರೌಢಶಾಲೆಯ ಹಂತದವರೆಗೆ ಮಾತ್ರ ಓದಿಸುತ್ತಾರೆ. ಆರ್ಥಿಕವಾಗಿ, ಶೈಕ್ಷಣಿಕವಾಗಿ ಸಬಲರಾಗಿರುವ ಕೆಲವರು ಮಾತ್ರ ಪದವಿ ಅಥವಾ ಉನ್ನತ ವ್ಯಾಸಂಗದವರೆಗೆ ಓದಿಸುತ್ತಾರೆ. ಇದು ಶೇಕಡ ೩ ರಷ್ಟನ್ನು ಕಾಣಲು ಸಾಧ್ಯವಾಗಿದೆ. ಹೆಣ್ಣು ಮಕ್ಕಳು ೧೦ನೇ ತರಗತಿಯವರೆಗೆ ಓದುತ್ತಿದ್ದಾರೆ ಎಂದರೆ ಸಾಮಾನ್ಯವಾಗಿ ಮದುವೆ ಮಾಡಿ ಬಿಡುತ್ತಾರೆ. ಇಲ್ಲವೇ ಮನೆಯ ಕೆಲಸಗಳಿಗೆ ಬಳಸಿಕೊಳ್ಳುತ್ತಾರೆ. ಬೇರೆ ಜನಾಂಗದವರಿಗಿಂತ ಗಂಗಾಮತಸ್ಥ ಮಹಿಳೆಯ ಶಿಕ್ಷಣದ ಮಟ್ಟ ತೀರಾ ಕಡಿಮೆಯಾಗಿದೆ. ಇತ್ತೀಚಿನ ದಿನಗಳಲ್ಲಿ ಮೀಸಲಾತಿಯ ಸೌಲಭ್ಯವನ್ನು ಸರ್ಕಾರ ಕಲ್ಪಿಸಿಕೊಟ್ಟಿರುವುದರಿಂದಾಗಿ

ಬೆರಳೆಣಿಕೆಯಷ್ಟು ಮಹಿಳೆಯರು ಸರ್ಕಾರಿ ಉದ್ಯೋಗದಲ್ಲಿದ್ದಾರೆ. ಆದುದ್ದರಿಂದಾಗಿ ಸರ್ಕಾರ ಗಂಗಾಮತಸ್ಥ ಮಹಿಳೆಯರ ಬಗ್ಗೆ ಹೆಚ್ಚಿನ ಗಮನವನ್ನು ಕೊಡಬೇಕಾಗುತ್ತದೆ. ಇವರಿಗಾಗಿ ವಿಶೇಷ ಸೌಲಭ್ಯಗಳನ್ನು ಶಿಕ್ಷಣ ಕ್ಷೇತ್ರದಲ್ಲಿ, ಉದ್ಯೋಗಗಳಲ್ಲಿ ಕಲ್ಪಿಸಿದಾಗ ಮಾತ್ರ ಬೇರೆ ಜನಾಂಗದ ಸ್ತ್ರೀಯರಂತೆ ಇವರು ಕೂಡ ನೆಮ್ಮದಿಯ ಸುಖ ಜೀವನವನ್ನು ನಡೆಸಲು ಸಾಧ್ಯವಾಗುತ್ತದೆ.

ಮಹಿಳೆ ತನ್ನ ಕಾಲಿನ ಮೇಲೆ ತಾನು ನಿಂತಾಗ ಯಾರಿಗೂ ಹೊರೆಯಾಗುವುದಿಲ್ಲ. ಕೆಲವರು ಮದುವೆ ಮಾಡಿದರೆ ತಲೆಯ ಹೊರೆ ಹೋದಂತೆ ಆಗುತ್ತದೆ ಎಂದು ಹೇಳುತ್ತಿರುತ್ತಾರೆ. ಅದೇ ಹೆಣ್ಣು ಮಕ್ಕಳಿಗೆ ಶಿಕ್ಷಣ ಕೊಟ್ಟು ಉದ್ಯೋಗದಲ್ಲಿ ಇರುವಂತೆ ಮಾಡಿದರೆ ಯಾರಿಗೂ ಹೆಣ್ಣು ಹೊರೆಯಾಗುವುದಿಲ್ಲ. ಮುಂದಿನ ಭವಿಷ್ಯ ಸುಖಕರವಾಗಿರುತ್ತದೆ. ಬದಲಿಗೆ ಅವಳು ತನ್ನ ಕುಟುಂಬದ ಊರುಗೋಲು ಆಗುತ್ತಾಳೆ ಎಂಬುದನ್ನು ತಿಳಿದುಕೊಳ್ಳಬೇಕಾಗುತ್ತದೆ. ಮನುಷ್ಯನಿಗೆ ಬೇಕಾಗಿರುವುದು ಮನುಷ್ಯತ್ವ ಮತ್ತು ಮಾನವೀಯತೆ ಹೊರತು ಅಗೌರವಗಳಲ್ಲ. ಮಹಿಳೆಯರು ಸಾಕ್ಷರತೆಯ ಜೊತೆಗೆ ದಿನಪತ್ರಿಕೆಗಳು, ಮಾಧ್ಯಮಗಳಿಂದ ತಿಳುವಳಿಕೆ ಪಡೆಯಬಹುದು. ಈ ರೀತಿಯಾಗಿ ಮಹಿಳೆಯು ಸುಶಿಕ್ಷಿತಳಾಗಿ, ಕುಟುಂಬದ ಕಣ್ಣಾಗಿ, ಸಮಾಜದ ಬದಲಾವಣೆಗೆ ದಾರಿದೀವಿಗೆಯಾಗುತ್ತಾಳೆ. ಸಮಾಜದ ವಾಸ್ತವ ಸಂಗತಿಯ ಬದುಕನ್ನು ತಿಳಿದುಕೊಳ್ಳಲು ವಿದ್ಯಾಭ್ಯಾಸವು ಮುಖ್ಯವಾಗುತ್ತದೆ. ಇಂದಿನ ವಿಚಾರವಂತ ಮನಸ್ಸುಗಳು ಆರ್ಥಿಕ ಸ್ವಾವಲಂಬಿತನ ಮನಸ್ಸಿನ ಮೂಲೆಯಲ್ಲಿ ಮಲಗಿದ್ದ ಸ್ತ್ರೀ ಪ್ರಜ್ಞೆಯನ್ನು ಜಾಗೃತಗೊಳಿಸುತ್ತಿದೆ. ಕೆಲವರು ಮನೆಯ ಜವಾಬ್ದಾರಿಯೇ ಸಾಕು, ಹೆಚ್ಚು ಓದಬೇಕಾಗಿಲ್ಲ ಎಂದು ಹೇಳುತ್ತಾರೆ. ಮಹಿಳೆಯರಿಗೆ ಈ ಸಂಸಾರವೇ ಒಂದು ಪ್ರಪಂಚವಾಗಿದೆ. ಹೆಚ್ಚು ಓದುವುದರಿಂದ ಗೌರವವೂ ಮರ್ಯಾದೆಯೂ ಇರುತ್ತದೆ. ಆದರೆ ಮನೆಯ ಆರ್ಥಿಕತೆಯ ಅಭಾವದಿಂದಾಗಿಯೇ ಹೆಚ್ಚು ಓದಿಸಲು ಆಗಿಲ್ಲ ಎಂದು ಕೆಲವರು ಹೇಳಿಕೊಳ್ಳುತ್ತಾರೆ. ಮತ್ತು ಎಷ್ಟೇ ಓದಿದರೂ ಗಂಡನ ಮನೆಯಲ್ಲಿ ಮುಸುರೆ ತಿಕ್ಕುವುದು ತಪ್ಪುವುದಿಲ್ಲ ಬಿಡಮ್ಮ ಎಂದು ಹೇಳುತ್ತಾರೆ. ಇವರಿಗೆ ದುಡಿಯುವುದೇ ಒಂದು ಮುಖ್ಯ ಗುರಿಯಾಗಿರುತ್ತದೆ. ಸಣ್ಣ ವಯಸ್ಸಿನಿಂದಲೇ ಅವರಿಗೆ ದುಡಿಯುವುದನ್ನು ಕಲಿಸಿರುತ್ತಾರೆ. ವಿದ್ಯಾವಂತರು, ಹಣ ಉಳ್ಳವರು ತಮ್ಮ ಮಕ್ಕಳನ್ನು ಓದಿಸಲು ಮುಂದಾಗುವುದುಂಟು. ಆದ್ದುದರಿಂದ ಈ ಜನಾಂಗದ ಎಲ್ಲ ಮಹಿಳೆಯರಿಗೂ ಉತ್ತಮವಾದ ಶಿಕ್ಷಣ–ಸೌಲಭ್ಯಗಳು ದೊರಕಬೇಕಾಗಿರುವುದು ಅತ್ಯಗತ್ಯವಾಗಿದೆ.

ಹೆಣ್ಣು ಮಕ್ಕಳ ಮದುವೆಯ ಸಂದರ್ಭದಲ್ಲಿ ಮನೆಯ ಯಜಮಾನಿಯದೇ ಹೆಚ್ಚಿನ ಪಾತ್ರವಾಗಿರುತ್ತದೆ. ಮದುವೆಯ ಖರ್ಚು–ವೆಚ್ಚದಿಂದಿಡಿದು, ಒಳ್ಳೆಯ ಕಡೆಗೆ ಮಗಳನ್ನು ಕೊಡುವ ಜವಾಬ್ದಾರಿಯವರೆಗೆ, ಮಹಿಳೆಯದೆ ಆಗಿರುತ್ತದೆ. ಗಂಗಾಮತಸ್ಥರಲ್ಲಿ ಹತ್ತು ವರ್ಷಗಳ ಹಿಂದೆ

ಬಾಲ್ಯವಿವಾಹ ಪದ್ಧತಿ ಇದ್ದಂತೆ ಕಂಡು ಬರುತ್ತದೆ. ವಕ್ತೃ ಮಹದೇವಮ್ಮ ಹೇಳುವಂತೆ "ನನಗೆ ೭ವರ್ಷಕ್ಕೆ ಕಲ್ಕುಣಿಯ ಮಹದೇವಸ್ವಾಮಿಗೆ ಮದುವೆ ಮಾಡಿದರು. ಆಗ ನನಗೆ ಏನು ತಿಳಿಯದು ನಮ್ಮ ಅವ್ವ-ಅಪ್ಪ ಹೇಳಿದರು ಮದುವೆಯಾದೆ" ಎಂದು ಹೇಳುತ್ತಾಳೆ.[೩೨] ಅಂದರೆ ಒಂದೆ ಬಾಲ್ಯವಿವಾಹ ಪದ್ಧತಿ ಈ ಜನಾಂಗದವರಲ್ಲಿ ಹೆಚ್ಚಾಗಿ ಕಂಡುಬರುತ್ತಿತ್ತು. ಆದರೆ ಇಂದು ಸಹ ಅಲ್ಲಲ್ಲಿ ಬಾಲ್ಯವಿವಾಹ ನಡೆಯುವುದುಂಟು. ಸಾಮಾನ್ಯವಾಗಿ ಹೆಣ್ಣು ಮಕ್ಕಳನ್ನ ಗ್ರಾಮೀಣ ಭಾಗದಲ್ಲಿ ೧೪ ವರ್ಷದಿಂದ ಪ್ರಾರಂಭವಾಗಿ ಗರಿಷ್ಠವೆಂದರೆ ೨೨ ವರ್ಷದೊಳಗೆ ಮದುವೆ ಮಾಡಿಬಿಡುತ್ತಾರೆ. ಇದಕ್ಕೆ ಕಾರಣ ಅನಕ್ಷರತೆ, ತಿಳುವಳಿಕೆಯ ಕೊರತೆ. ಪಟ್ಟಣ ಪ್ರದೇಶಗಳಲ್ಲಿ ಸುಶಿಕ್ಷಿತರಾಗಿರುವ ಗಂಗಾಮತಸ್ಥ ಸಮುದಾಯದವರು ಹೆಣ್ಣು ಮಕ್ಕಳನ್ನು ಓದಿಸಿ ೨೦ ರಿಂದ ೨೫ ವರ್ಷದೊಳಗೆ ಸಾಮಾನ್ಯವಾಗಿ ವಿವಾಹ ಮಾಡುತ್ತಾರೆ. ಗ್ರಾಮೀಣ ಭಾಗದಲ್ಲಿ ವಾಸಿಸುವ ಗಂಗಾಮತಸ್ಥರಿಗೆ ಸರ್ಕಾರ ಬಾಲ್ಯವಿವಾಹದಿಂದಾಗುವ ಅನಾಹುತಗಳ ಬಗ್ಗೆ ಅರಿವನ್ನ ಮೂಡಿಸಬೇಕಾಗಿದೆ. ಆದರೆ ಗಂಗಾಮತಸ್ಥರು ಬಾಲ್ಯವಿವಾಹದ ಬಗ್ಗೆ ಹೇಳುವುದೇನೆಂದರೆ ಮಗಳ ಮದುವೆಯನ್ನು ಬೇಗ ಮಾಡಿಬಿಟ್ಟರೆ ನಮಗಿರುವ ಹೊರೆ ಕಡಿಮೆಯಾಗುತ್ತದೆ. ಅಲ್ಲದೆ ಮಗಳಿಗೆ ವಯಸ್ಸಾದಂತೆ ನಮಗೆ ಹೆಚ್ಚಿನ ಚಿಂತೆ ಉಂಟಾಗುತ್ತದೆ. ಆದ್ದರಿಂದ ಮಗಳನ್ನ ಬೇಗ ಮದುವೆ ಮಾಡಿಬಿಡುತ್ತೇವೆ ಎಂದು ಅವರು ಹೇಳುತ್ತಾರೆ. ಇವರಿಗೆ ಬಾಲ್ಯ ವಿವಾಹದಿಂದುಂಟಾಗುವ ಸಮಸ್ಯೆಗಳ ನೈಜತೆಯನ್ನು ಮೂಡಿಸಬೇಕಾದ ಅನಿವಾರ್ಯತೆ ಇದೆ.

ಗಂಗಾಮತಸ್ಥ ಮಹಿಳೆಯರು ಇತ್ತೀಚಿನ ದಿನಗಳಲ್ಲಿ ಸಂಘ-ಸಂಸ್ಥೆಗಳನ್ನು ಕಟ್ಟಿಕೊಳ್ಳುವುದರ ಮೂಲಕ ಅಭಿವೃದ್ಧಿಯನ್ನ ಹೊಂದುವುದರತ್ತ ಚಿಂತಿಸುತ್ತಿರುವಂತೆ ಕಂಡು ಬರುತ್ತದೆ. ಮಂಡ್ಯ ಜಿಲ್ಲೆಯಲ್ಲಿ ಹಲವಾರು ಸಂಘ-ಸಂಸ್ಥೆಗಳನ್ನ ಬೇರೆ ಸಮುದಾಯದ ಮಹಿಳೆಯರು ಕಟ್ಟಿಕೊಂಡಿದ್ದಾರೆ. ಅದರಂತೆಯೇ ಗಂಗಾಮತಸ್ಥ ಸ್ತ್ರೀಯರು ಇದರಿಂದ ಹೊರತೇನಲ್ಲ. ಗಂಗಾಮತಸ್ಥರು ವಾಸಿಸುವ ಪ್ರತಿಯೊಂದು ಹಳ್ಳಿ ಮತ್ತು ಪಟ್ಟಣಗಳಲ್ಲೂ ಮಹಿಳಾ ಸಂಘಗಳಿರುವುದು ಕಂಡುಬರುತ್ತದೆ. ತಮ್ಮ ಕುಲದೇವತೆಯಾದ ಗಂಗಾದೇವಿಯ ಹೆಸರಿನಲ್ಲಿ ಸಂಘವನ್ನ ಕಟ್ಟಿಕೊಂಡಿದ್ದಾರೆ. ಸಾಮಾನ್ಯವಾಗಿ ಎಲ್ಲಾ ಕಡೆಯಲ್ಲೂ "ಶ್ರೀ ಗಂಗಾಪರಮೇಶ್ವರಿ ಮಹಿಳಾ ಸಂಘ" ಎಂಬ ಹೆಸರಿನಡಿಯಲ್ಲಿ ೧೦ ರಿಂದ ೨೦ ಮಹಿಳೆಯರು ಸಂಘದಲ್ಲಿ ಸದಸ್ಯತ್ವವನ್ನ ಹೊಂದಿರುತ್ತಾರೆ. ಈ ಸಂಘದಲ್ಲಿ ೨೦ ಜನರಲ್ಲಿ ಪ್ರಮುಖರಾದ ಒಬ್ಬರನ್ನು ಸಂಘದ ಪ್ರತಿನಿಧಿಯಾಗಿ ಆಯ್ಕೆ ಮಾಡಿಕೊಂಡಿರುತ್ತಾರೆ. ಇವರೆಲ್ಲರು ಪ್ರತಿವಾರ ೨೦ ರೂ.ಗಳನ್ನ ಸಂಘಕ್ಕೆ ಕಟ್ಟುತ್ತಾರೆ. ಸಂಘದ ಹೆಸರಿನಲ್ಲಿ ಹತ್ತಿರದ ಬ್ಯಾಂಕಿನಲ್ಲಿ ಖಾತೆಯನ್ನ ತೆರೆದಿರುತ್ತಾರೆ. ಆ ಬ್ಯಾಂಕಿನ ಖಾತೆಯ ಮೂಲಕ ಹಣಕಾಸಿನ ವ್ಯವಹಾರವನ್ನು ಮಾಡುತ್ತಾರೆ. ಪ್ರತಿ ವಾರ ಅಥವಾ

ಪ್ರತಿ ತಿಂಗಳು ಸಂಘದ ಸದಸ್ಯರಿಂದ ಹಣವನ್ನು ಸಂಗ್ರಹಿಸಿ ಬ್ಯಾಂಕಿನಲ್ಲಿ ಕಟ್ಟುತ್ತಾರೆ. ಎರಡು ವರ್ಷಗಳು ತುಂಬಿದ ಸಂಘಗಳಿಗೆ ಬ್ಯಾಂಕಿನ ವತಿಯಿಂದ ಸಾಲ-ಸೌಲಭ್ಯಗಳನ್ನು ಕೊಡಲಾಗುತ್ತದೆ. ಇದರ ಸದುಪಯೋಗವನ್ನು ಸಂಘದ ಮಹಿಳೆಯರು ಪಡೆದುಕೊಂಡು, ಹಸು, ಎಮ್ಮೆ, ಕುರಿ, ಮೇಕೆ, ವ್ಯಾಪಾರ ವ್ಯವಹಾರಗಳಿಗೆ ಸಂಘದಿಂದ ಕೊಡುವ ಹಣವನ್ನು ಬಳಸಿಕೊಳ್ಳುತ್ತಾರೆ. ಈ ಹಣಕ್ಕೆ ಕಟ್ಟುವ ಬಡ್ಡಿಯು ಕನಿಷ್ಠದ್ದಾಗಿರುತ್ತದೆ. ಅಲ್ಲದೆ ತಿಂಗಳಿಗೆ ಒಮ್ಮೆ ಇಲ್ಲವೇ ವಾರಕ್ಕೆ ಒಮ್ಮೆ ಮಾತ್ರ ಸಾಲದ ಕಂತಿನ ಹಣವನ್ನು ನಿಗಧಿಗೊಳಿಸಿದಂತೆ ಕಟ್ಟುತ್ತಾರೆ. ಇದರಿಂದಾಗಿ ಮಹಿಳೆಯರು ಸ್ವಾವಲಂಬನೆಯ ಜೀವನವನ್ನು ನಡೆಸಲು ಸಹಾಯವಾಗುತ್ತಿದೆ. ವಕ್ತೃ ಲೀಲಾವತಿ ಹೇಳುವಂತೆ "ಮಹಿಳೆಯರು ಕಟ್ಟಿರುವ ಸಂಘಗಳು, ಮಹಿಳೆಯರಲ್ಲಿ ಬದುಕುವ ಗೌರವದ ಆತ್ಮಸ್ಥೈರ್ಯವನ್ನು ಮೂಡಿಸಿವೆ. ಇತ್ತೀಚಿನ ದಿನಗಳಲ್ಲಿ ಸಂಘಗಳಿಂದಾಗಿ ನಮ್ಮ ಜನಾಂಗದ ಮಹಿಳೆಯರು ತಿಳುವಳಿಕೆಯಸ್ಥರಾಗುತ್ತಿದ್ದಾರೆ. ಸರ್ಕಾರದವರು ಇನ್ನು ಹೆಚ್ಚಿನ ಸೌಲಭ್ಯವನ್ನ ಕಲ್ಪಿಸಿಕೊಟ್ಟರೆ ನಾವು ಬೇರೆ ಜನಾಂಗದ ಮಹಿಳೆಯರಂತೆ ಜೀವನ ನಡೆಸಲು ಸಹಾಯವಾಗುತ್ತದೆ"[೩೩] ಎನ್ನುತ್ತಾರೆ.

ಕೆಲವು ಗ್ರಾಮಗಳಲ್ಲಿ ಎರಡು ಮೂರು ಸಂಘಗಳನ್ನ ಕಟ್ಟಿಕೊಂಡಿರುವ ಕಡೆಗಳಲ್ಲಿ, ಗ್ರಾಮದೇವತೆಯ ಹೆಸರನ್ನು ಸಂಘಕ್ಕೆ ಇಟ್ಟಿರುತ್ತಾರೆ. ಉದಾಹರಣೆಗೆ 'ಪಟಾಲದಮ್ಮ ಮಹಿಳಾ ಸ್ವ-ಸಹಾಯ ಸಂಘ', 'ದಂಡಿನ ಮಾರಮ್ಮ ಮಹಿಳಾ ಸಂಘ', 'ಬಳಗೆರೆ ಹುಚ್ಚಮ್ಮ ಮಹಿಳಾ ಸಂಘ', 'ಅಹಲ್ಯದೇವಿ ಮಾರಮ್ಮ ಮಹಿಳಾ ಸಂಘ' ಹೀಗೆ ತಮ್ಮ ಪ್ರಮುಖ ವಾದ ದೇವತೆಗಳ ಹೆಸರನ್ನು ಜಿಲ್ಲೆಯಾದ್ಯಂತ ಕಾಣಬಹುದು. ಆದರೆ ಪ್ರಮುಖವಾಗಿ ಮೇಲೆ ಹೇಳಿದಂತೆ "ಶ್ರೀ ಗಂಗಾಪರಮೇಶ್ವರಿ ಮಹಿಳಾ ಸ್ವ-ಸಹಾಯ ಸಂಘ" ಎಂಬ ಹೆಸರಿನ ಸಂಘವೇ ಜಿಲ್ಲೆ ವ್ಯಾಪಿ ಇದೆ. ಹೀಗೆ ಸಂಘಗಳ ಮೂಲಕ ಆರ್ಥಿಕವಾಗಿ ಹಣಕಾಸಿನ ಉಳಿತಾಯದ ಬಗ್ಗೆ ಅರಿವು, ಸಾಲಪಡೆದು, ಅದನ್ನು ಜಾನುವಾರುಗಳ ಸಾಕಾಣಿಕೆಗೆ ಅಥವಾ ವ್ಯಾಪಾರ-ವ್ಯವಹಾರಗಳಿಗೆ ಬಳಸಿಕೊಂಡು, ಅದರಿಂದ ಬರುವ ಆದಾಯದಿಂದ ಸಾಲವನ್ನು ತೀರಿಸಿ ಆರ್ಥಿಕವಾಗಿ ಸಬಲೀಕರಣ ಹೊಂದುವುದರತ್ತ ಗಂಗಾಮತಸ್ಥಮಹಿಳೆಯರು ಮುಂದಾಗುತ್ತಿದ್ದಾರೆ. ಈ ನಿಟ್ಟಿನಲ್ಲಿ ಸರ್ಕಾರದ ಸಹಕಾರ ಹೆಚ್ಚಿನ ರೀತಿಯಲ್ಲಿ ಈ ಜನಾಂಗದ ಮಹಿಳೆಯರಿಗೆ ಆಗಬೇಕಾಗಿದೆ.

ಗಂಗಾಮತಸ್ಥ ಮಹಿಳೆಯ ಸ್ಥಾನ-ಮಾನ ಸಾಂಪ್ರದಾಯಿಕ ಆಚರಣೆಗಳಲ್ಲಿ ಪ್ರಮುಖವಾದುದ್ದು. ಮದುವೆಯ ಸಂದರ್ಭದಲ್ಲಿ ಮಹಿಳೆಯರಿಗೆ ವಿಶೇಷವಾದ ಆದ್ಯತೆಯಿರುತ್ತದೆ. ಮದುವೆಯ ಉಸ್ತುವಾರಿಯನ್ನು ಕೂಡ ಈಕೆಯೇ ವಹಿಸಿಕೊಂಡಿರುವ ಸಂದರ್ಭಗಳು ಇವೆ. ಗಂಡಿನ ಕಡೆಯವರಾದರೆ ಗಂಡಿನ ತಾಯಿ ಹೆಣ್ಣನ್ನ ನೋಡಿ ತಮ್ಮ ಕುಟುಂಬಕ್ಕೆ ಸರಿಯಾಗಿ

ಹೊಂದಾಣಿಕೆಯಾಗುತ್ತದೆಯೇ, ಶಾಸ್ತ್ರಗಳು ಸರಿಯಾಗಿದೆಯೇ, ಹೆಣ್ಣಿನ ಮನೆಗೆ ಹೋಗಿ ಬರುವ ಸಂಪ್ರದಾಯಗಳು, ವೀಳ್ಯಶಾಸ್ತ್ರ, ಹೂ ಮುಡಿಸುವ ಶಾಸ್ತ್ರ, ಹೆಣ್ಣಿನ ಮನೆಯವರು ಗಂಡಿನ ಮನೆಗೆ ಬಂದಾಗ ಅವರ ಮುತುವರ್ಜಿ ಇತ್ಯಾದಿ ಎಲ್ಲಾ ಪ್ರಮುಖ ಕೆಲಸಗಳನ್ನು ಮಹಿಳೆಯೇ ನಿರ್ವಹಿಸುತ್ತಾಳೆ. ಹೆಣ್ಣು, ಗಂಡಿನ ಬಟ್ಟೆ, ಚಿನ್ನದ ಆಭರಣ, ಉಡುಗೆ-ತೊಡುಗೆ, ಇವೆಲ್ಲವನ್ನ ಮಹಿಳೆಯರೇ ನಿರ್ಧರಿಸುತ್ತಾರೆ. ನೆಂಟರಿಷ್ಟರನ್ನು ಕರೆಯುವುದು, ಅವರನ್ನ ಪ್ರೀತಿಯಿಂದ ಮಾತನಾಡಿಸಿ ಊಟೋಪಚಾರಗಳನ್ನು ನೋಡಿಕೊಳ್ಳುವುದು, ಹತ್ತಿರದ ನೆಂಟರಿಗೆ ಬಟ್ಟೆ-ಬರೆ ತೆಗೆಯುವುದು, ಇತ್ಯಾದಿ ಕರ್ತವ್ಯಗಳು ಮಹಿಳೆಯರದೇ ಆಗಿರುತ್ತದೆ.

ಮದುವೆಯ ಸಂದರ್ಭದಲ್ಲಿ ಮಾಡುವ ಶಾಸ್ತ್ರಗಳ ಪೂರ್ಣಜವಾಬ್ದಾರಿ ಮಹಿಳೆಯರದು. ಅದರಲ್ಲೂ ಮುತ್ತೈದೆಯರು ಇಲ್ಲಿ ಪ್ರಮುಖರಾಗುತ್ತಾರೆ. ಹೂ ಮುಡಿಸುವ ಶಾಸ್ತ್ರ, ಮನೆಶಾಸ್ತ್ರ, ಚಪ್ಪರದ ಶಾಸ್ತ್ರಗಳು, ದೇವರು ತರುವ ಶಾಸ್ತ್ರ, ಮದುವೆಗೆ ಬರುವ ನೆಂಟರಿಷ್ಟರನ್ನ ಆತ್ಮೀಯವಾಗಿ ಸ್ವಾಗತಿಸುವುದು ಇಲ್ಲೆಲ್ಲ ಮಹಿಳೆಯರು, ಅದರಲ್ಲೂ ಮುತ್ತೈದೆಯರು ಪ್ರಮುಖರೆನಿಸುತ್ತಾರೆ. ಮದುವೆಯ ಖರ್ಚು-ವೆಚ್ಚಗಳನ್ನು ಸಾಮಾನ್ಯವಾಗಿ ಮಹಿಳೆಯರೇ ಕೆಲವು ಸಂದರ್ಭದಲ್ಲಿ ಮಾಡುತ್ತಾರೆ. ಇದಕ್ಕೆ ಕಾರಣವೆಂದರೆ ಗಂಡಸರು ಅನಗತ್ಯವಾಗಿ ಖರ್ಚುಮಾಡುತ್ತಾರೆ. ಇದರಿಂದ ನಾವು ಸಾಲಗಾರರಾಗುತ್ತೇವೆ ಎಂಬ ಉದ್ದೇಶ. ಆದುದ್ದರಿಂದ ಮಹಿಳೆಯರು ಯಾವುದಕ್ಕೆ ಎಷ್ಟೆಷ್ಟು ಖರ್ಚನ್ನು ಮಾಡಬೇಕು ಎಂಬುದನ್ನು, ಮೊದಲೇ ಪಟ್ಟಿಮಾಡಿಕೊಂಡು ಅದರಂತೆ ವೆಚ್ಚ ಮಾಡುತ್ತಾರೆ. ಪ್ರಮುಖವಾಗಿ ಈ ಜನಾಂಗದ ಶೇಕಡ ೫೦ ಕ್ಕಿಂತಲೂ ಹೆಚ್ಚಿನ ಕುಟುಂಬಗಳಲ್ಲಿ, ಮದುವೆಯ ಖರ್ಚಿಗೆಂದೇ ಮಹಿಳೆಯರು ಹಣವನ್ನು ಸಂಗ್ರಹಿಸಿಟ್ಟುಕೊಂಡಿರುತ್ತಾರೆ. ಅದರಂತೆ ಕೂಡಿಟ್ಟ ಹಣ ಹಾಗೂ ಆರ್ಥಿಕ ಪರಿಸ್ಥಿತಿಗನುಗುಣವಾಗಿ ಮದುವೆಯನ್ನು ಮಾಡುತ್ತಾರೆ. ಒಟ್ಟಾರೆಯಾಗಿ ಗಂಗಾಮತಸ್ಥ ಸಮುದಾಯಗಳಲ್ಲಿ ಮದುವೆಯ ಹೆಚ್ಚಿನ ಜವಾಬ್ದಾರಿಯನ್ನ ಗಂಡಸರಿಗಿಂತ ಹೆಂಗಸರೇ ನಿರ್ವಹಿಸುತ್ತಾರೆ.

ಮಗಳನ್ನು ಮದುವೆ ಮಾಡಿಕೊಟ್ಟ ಮೇಲೆ, ಅವರ ಜವಾಬ್ದಾರಿ ಮುಗಿದು ಹೋಗುವುದಿಲ್ಲ. ಅವಳು ಬಾಣಂತನಕ್ಕೆ ಬಂದಾಗ ಮಹಿಳೆಯ ಜವಾಬ್ದಾರಿ ಹೆಚ್ಚಿನದಾಗಿರುತ್ತದೆ. ಹೆರಿಗೆಯ ಸಂದರ್ಭದಲ್ಲಿ ಅದೇ ಜನಾಂಗದ ಸೂಲಗಿತ್ತಿಯ ಪಾತ್ರ ಪ್ರಮುಖವಾಗಿರುತ್ತದೆ. ಹೆರಿಗೆಯ ನೋವು ಕಾಣಿಸಿಕೊಂಡಾಗ ಅದೇ ಗ್ರಾಮದಲ್ಲಿರುವ ಸೂಲಗಿತ್ತಿಯನ್ನ ಕರೆದು ತರುತ್ತಾರೆ. ಅವಳು ಆ ಗರ್ಭಿಣಿಯನ್ನ ನೋಡಿ, ಪರಿಸ್ಥಿತಿಗೆ ಅನುಗುಣವಾಗಿ ಹೆರಿಗೆಯನ್ನು ಮಾಡಿಸುತ್ತಾಳೆ. ಹೆರಿಗೆಯು ತೊಂದರೆಯಿಂದಿದ್ದರೆ ಅವಳನ್ನು ಆಸ್ಪತ್ರೆಗೆ ಕಳುಹಿಸುವಂತೆ ಸಲಹೆ ಮಾಡುತ್ತಾಳೆ. ತೊಂದರೆ ಇಲ್ಲದಿದ್ದರೆ ಆ ಸೂಲಗಿತ್ತಿಯೇ ಹೆರಿಗೆಯನ್ನು ಮಾಡಿಸುತ್ತಾಳೆ. ಹೀಗೆ

ಹೆರಿಗೆಯನ್ನ ಮಾಡಿಸುವ ಸೂಲಗಿತ್ತಿಯರ ಸಂಖ್ಯೆ ಇತ್ತೀಚಿನ ದಿನಗಳಲ್ಲಿ ಕ್ಷೀಣಿಸುತ್ತಿದೆ. ಇದಕ್ಕೆ ಕಾರಣ ಆಸ್ಪತ್ರೆಗಳ ಸಂಖ್ಯೆ ಹೆಚ್ಚಾಗುತ್ತಿರುವುದಾಗಿದೆ. ಏನೇ ಆಗಲಿ ಗ್ರಾಮಗಳಲ್ಲಿ ವಾಸಿಸುವ ಆ ಸೂಲಗಿತ್ತಿಯರಿಗೆ ವಿಶೇಷವಾದ ಸ್ಥಾನ-ಮಾನವನ್ನ ನೀಡಲಾಗಿರುತ್ತದೆ. ಹೆರಿಗೆಯನ್ನ ಮಾಡಿಸಿದಾಗ ಆಕೆಗೆ ೧೦೦ ರೂ.ಗಳಿಂದ ೨೦೦ ರೂ.ಗಳವರೆಗೂ ಹಣವನ್ನ ಕೊಡಲಾಗುತ್ತದೆ. ಇಷ್ಟೇ ಅಲ್ಲದೆ ಬಟ್ಟೆ-ಬರೆ, ದವಸ-ಧಾನ್ಯಗಳನ್ನು ಕೊಡುತ್ತಾರೆ. ವಕ್ತೃ ಸಿದ್ದಮ್ಮ ಹೇಳುವಂತೆ "ಹೆರಿಗೆಯನ್ನ ಮಾಡಿಸುವುದು ಪುಣ್ಯದ ಕೆಲಸ. ಹಣ ಇಲ್ಲಿ ಪ್ರಮುಖವಲ್ಲ, ಎರಡು ಜೀವವನ್ನ ಅಂದರೆ ತಾಯಿ ಮತ್ತು ಮಗುವನ್ನು ಕಾಪಾಡಿದ ಪುಣ್ಯ ಸಿಗುತ್ತದೆ"[೩೪] ಎನ್ನುತ್ತಾಳೆ. ಆ ಸೂಲಗಿತ್ತಿಗೆ ಹಣಕ್ಕಿಂತಲೂ ಪ್ರಮುಖವಾಗಿ ಜೀವ ಉಳಿಸುವುದಾಗಿದೆ. ಆದುದ್ದರಿಂದಲೇ ಗಂಗಾಮತಸ್ಥರ ಮಹಿಳೆಯರಲ್ಲಿ ಸೂಲಗಿತ್ತಿಯರಿಗೆ ವಿಶೇಷವಾದ ಸ್ಥಾನವನ್ನು ಕಲ್ಪಿಸಿಕೊಡಲಾಗಿದೆ.

ಮಕ್ಕಳ ಪೋಷಣೆಯ ವಿಚಾರದಲ್ಲಿ ಮಹಿಳೆಯರದೇ ಪ್ರಮುಖವಾದ ಪಾತ್ರ. ಮಕ್ಕಳನ್ನ ಹಡೆದ ಮೇಲೆ ಅದರ ಲಾಲನೆ-ಪಾಲನೆ ಎಲ್ಲವೂ ಮಹಿಳೆಯರದೇ. ಹುಟ್ಟಿದ ಮಗುವಿಗೆ ನಂತರದ ದಿನಗಳಲ್ಲಿ ಸ್ನಾನ ಮಾಡಿಸುವ ಜವಾಬ್ದಾರಿಯಿಂದ ಹಿಡಿದು, ಆಹಾರ ಔಷದೋಪಚಾರಗಳು, ಬಾಣಂತಿಯ ಯೋಗಕ್ಷೇಮ, ಆರೈಕೆ ಎಲ್ಲದರ ಹೊಣೆ ಮಹಿಳೆಯದೆ. ಇದಿಷ್ಟೇ ಅಲ್ಲದೆ ಮೊಮ್ಮಕ್ಕಳನ್ನು ಸಾಕುವ ಹೊಣೆಯನ್ನು ಆ ಹೆಂಗಸೆ ಹೊರುತ್ತಾಳೆ. ಸಾಮಾನ್ಯವಾಗಿ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕಂಡುಬಂದ ವಿಚಾರವೆಂದರೆ ಮಗಳ ಮಕ್ಕಳನ್ನ ಸಾಕುವ ಜವಾಬ್ದಾರಿಯನ್ನು ಆಕೆಯೇ ವಹಿಸಿಕೊಂಡಿರುತ್ತಾಳೆ. ಎರಡು ವರ್ಷದಿಂದ ಐದು-ಆರು ವರ್ಷದವರೆವಿಗೂ ಸಾಕಿ ನಂತರದಲ್ಲಿ ಮಗಳ ಮನೆಗೆ ಕಳುಹಿಸುತ್ತಾರೆ. ಕೆಲವರು ಆತ ಬೆಳೆದು ದೊಡ್ಡವನಾಗಿ, ಓದಿಸಿ, ಆತನ ಮದುವೆಯ ಕಾರ್ಯವನ್ನೂ ಮಾಡಿ, ಮತ್ತೊಬ್ಬ ಮಗನಂತೆ ಸಾಕುವವರು ಇದ್ದಾರೆ. ಇದೆಲ್ಲದರ ಕಾರ್ಯಭಾರವನ್ನು ಯಜಮಾನಿಯೇ ವಹಿಸಿಕೊಂಡಿರುತ್ತಾಳೆ. ಇಷ್ಟಲ್ಲದೆ ಮಗಳಿಗೆ ಕಷ್ಟ-ಸುಖಗಳಲ್ಲಿ ಸ್ಪಂದಿಸುವವಳು ಮಹಿಳೆಯೇ. ಅವಳಿಗಿಲ್ಲದಿದ್ದರು ತನ್ನ ಮಗಳು ಸುಖವಾಗಿರಲೆಂದು ಎಲ್ಲವನ್ನು ತ್ಯಾಗ ಮಾಡುವ ತ್ಯಾಗಮಹಿಯಾಗಿ ಹೆಣ್ಣು ಕಂಡು ಬರುತ್ತಾಳೆ.

ಹಬ್ಬ-ಹರಿದಿನಗಳ ಸಂದರ್ಭದಲ್ಲಿ ಮಹಿಳೆಯರದೇ ಪ್ರಮುಖ ಪಾತ್ರವಿರುತ್ತದೆ. ಯಾವುದೇ ಹಬ್ಬಗಳನ್ನ ಆಚರಿಸುವಾಗ, ಮನೆಯನ್ನ ಸ್ವಚ್ಛಗೊಳಿಸುವುದರಿಂದ ಪ್ರಾರಂಭಗೊಂಡಂತೆ ಹಬ್ಬದೂಟ ಸಿದ್ಧಪಡಿಸುವವರೆಗೆ ಮಹಿಳೆಯರದೇ ಕಾರುಬಾರು. ಯಾವ ಯಾವ ಹಬ್ಬದಂದು ಯಾವ ಯಾವ ಅಡುಗೆ ಮಾಡಬೇಕು ಎಂಬುದರ ನಿರ್ಣಯವೂ ಕೂಡ ಮಹಿಳೆಯದೆ. ನೆಂಟರಿಷ್ಟರಿಗೆ ಹೇಳುವ, ಅವರನ್ನು ಪ್ರೀತಿ-ಆದರದಿಂದ ಕಾಣುವುದು ಕೂಡ

ಮಹಿಳೆಯ ಜವಾಬ್ದಾರಿ. ಅದರಲ್ಲೂ ಗೌರಿ ಹಬ್ಬದಲ್ಲಿ ಮಹಿಳೆಯರ ಪಾತ್ರ ಪ್ರಮುಖವಾಗಿರುತ್ತದೆ. ಗಂಗಾದಡದಿಂದ ಗಂಗೆಯನ್ನ ಪೂಜೆ ಮಾಡಿ, ಹೊಸದಾಗಿ ನೀರು ತಂದು ಮೀಸಲು ಮಾಡುತ್ತಾರೆ. ಗಂಗಾದಡದಿಂದ ನೀರನ್ನ ತಂದ ನಂತರದಲ್ಲಿಯೇ ಮನೆಯಲ್ಲಿ ಇತರ ಕೆಲಸಗಳನ್ನ ಕೈಗೊಳ್ಳುತ್ತಾರೆ. ಸಾಮಾನ್ಯವಾಗಿ ಪ್ರತಿಯೊಂದು ಹಬ್ಬಗಳಲ್ಲೂ ಗಂಗೆಯನ್ನ ಪೂಜಿಸುತ್ತಾರೆ. ಗಂಗಾತಡಿಯಿಂದ ಗಂಗೆಯನ್ನು ತರುವಾಗ ಶಾಸ್ತ್ರವನ್ನು ಮಾಡುತ್ತಾರೆ. ಇದನ್ನು "ಗಂಗೆ ಶಾಸ್ತ್ರ" ಎಂದು ಕರೆಯುತ್ತಾರೆ. ಈ ಸಂದರ್ಭದಲ್ಲಿ ಕೆಲವು ಮಹಿಳೆಯರು ಗಂಗೆಯನ್ನ ಕುರಿತು ಹಾಡನ್ನು ಹಾಡಿದರೆ, ಮುತ್ತೈದೆಯರು ಕಳಸ ಪೂಜಿಸಿ, ಗಂಗೆಯನ್ನು ಪೂಜೆ ಮಾಡುತ್ತಾರೆ. ಈ ಎಲ್ಲ ಸಂದರ್ಭಗಳಲ್ಲೂ ಮಹಿಳೆಯೇ ಪ್ರಮುಖಳಾಗುತ್ತಾಳೆ.

ಜನಾಂಗದ ಸಂಪ್ರದಾಯಗಳನ್ನ ಕಾಪಾಡುವ ಸಂದರ್ಭದಲ್ಲಿ ಮಹಿಳೆಯರದೆ ಹೆಚ್ಚಿನ ಮಹತ್ವ ಹಿಂದಿನಿಂದಲೂ ಮುತ್ತೈದೆಯರು ತೊಡುವ ಬಳೆ, ಹಣೆಯ ಕುಂಕುಮ, ಮೂಗುತಿ, ಓಲೆ, ಹೂವು, ಕಾಲುಂಗುರ ಇವುಗಳು ಪ್ರಮುಖ. ಈ ಸ್ತ್ರೀಯರು ಕಾಪಾಡಿಕೊಂಡು ಮುಂದುವರಿಸುತ್ತಿರುವ ಸಂಪ್ರದಾಯಗಳಾಗಿವೆ. ಇವರು ಆರ್ಥಿಕವಾಗಿ ದುರ್ಬಲರಾದರೂ ಸಂಪ್ರದಾಯಗಳ ಆಚರಣೆಯಲ್ಲಿ ನೀತಿ-ನಿಯಮಗಳನ್ನ ಪಾಲಿಸುವುದರಲ್ಲಿ ಬಹಳ ಕಟ್ಟು-ನಿಟ್ಟಾಗಿದ್ದಾರೆ. ಮುಂಜಾನೆ ಎದ್ದು ಮನೆಯ ಮುಂದೆ ಸಗಣಿ ನೀರು ಹಾಕಿ ರಂಗೋಲಿ ಹಾಕಿದ ನಂತರವೇ ತಮ್ಮ ಇತರೆ ಕೆಲಸಗಳಲ್ಲಿ ನಿರತರಾಗುತ್ತಾರೆ. ಪ್ರತಿನಿತ್ಯ ಸಂಜೆ ಮುಖ ತೊಳೆದು ದೇವರಿಗೆ ಗಂಧದ ಕಡ್ಡಿ ಹಚ್ಚಿ ಕೈಮುಗಿಯುವುದನಂತೂ ಮರೆಯುವುದಿಲ್ಲ. ಅಷ್ಟರ ಮಟ್ಟಿಗೆ ಇವರು ತಮ್ಮ ಎಲ್ಲಾ ಸಂಪ್ರದಾಯಗಳನ್ನ ಕಾಪಾಡಿಕೊಂಡು ಬರುವುದರಲ್ಲಿ ಮಹಿಳೆಯರು ಮುಂದಾಗಿದ್ದಾರೆ. ಪ್ರತಿನಿತ್ಯ ದೇವರ ಮುಂದೆ ದೀಪವನ್ನು ಬೆಳಗಿಸುತ್ತಾರೆ. ಹೀಗಾಗಿ ಸಂಪ್ರದಾಯಗಳ ಉಳಿಯುವಿಕೆಯಲ್ಲೂ ಮಹಿಳೆಯರದೇ ಪ್ರಮುಖ ಪಾತ್ರವಿದೆ ಎಂದು ಹೇಳಬಹುದು.

ಗಂಗಾಮತಸ್ಥ ಮಹಿಳೆಯ ಸ್ಥಾನ-ಮಾನ ಬೇರೆ ಜನಾಂಗಕ್ಕೆ ಹೋಲಿಸಿದರೆ ಉತ್ತಮವಾಗಿದೆ. ಇಲ್ಲಿಯ ಸ್ತ್ರೀಯರು ಗಂಡಸರಷ್ಟೇ, ಸ್ವತಂತ್ರರು. ಕಾರಣ ಗಂಡಸರಷ್ಟೇ-ಹೆಂಗಸರು ಸರಿಸಮಾನವಾಗಿ ದುಡಿಯುವುದೇ ಇದಕ್ಕೆ ಪ್ರಮುಖವಾದ ಕಾರಣವಾಗಿದೆ. ಇವರಲ್ಲಿ ಬಡತನ ಇದ್ದರೂ ಪ್ರೀತಿ-ವಿಶ್ವಾಸಗಳಿಗೇನು ಕೊರತೆಯಿಲ್ಲ. ಆದರೂ ಇವರಲ್ಲೂ ಮಾನವ ಸಹಜವಾದ ದ್ವೇಷಗಳು ಇರುವುದು ಸಹ ಕಂಡುಬರುತ್ತದೆ. ಹೆಣ್ಣಿಗೆ-ಹೆಣ್ಣು ಶತ್ರು ಎಂಬಂತೆ ಕೆಲವು ಸಂದರ್ಭದಲ್ಲಿ ಅತ್ತೆ-ಸೊಸೆಯರ ಜಗಳ, ಅವ್ವ-ಮಗಳ ಜಗಳ, ಅಕ್ಕ-ಪಕ್ಕದ ಮನೆಯವರೊಂದಿಗಿನ ಜಗಳ, ಇತ್ಯಾದಿಯಾದ ತೊಂದರೆಗಳು ಕಂಡುಬರುವುದುಂಟು. ಇದನ್ನು

ಅರಿತು ಅವರು ಸುಖ ಜೀವನವನ್ನ ನಡೆಸುವುದರತ್ತ ಗಮನಕೊಡಬೇಕಾಗಿದೆ. ಈ ಸಮುದಾಯದವರು ಹೆಣ್ಣು-ಗಂಡಿಗೆ ಸರಿಸಮಾನವಾದ ಗೌರವಗಳನ್ನು ನೀಡಿದ್ದಾರೆ. ಗಂಡು-ಹೆಣ್ಣು ಎಂಬ ತಾರತಮ್ಯ ಇವರಲ್ಲಿ ಇಲ್ಲ. ಮಹಿಳೆಯರಿಗೆ ಗಂಗಾಮತಸ್ಥರಲ್ಲಿ ವಿಶೇಷವಾದ ಸ್ಥಾನ-ಮಾನವನ್ನ ಕಲ್ಪಿಸಿಕೊಡಲಾಗಿದೆ.

### ೩.೫ ಆಹಾರ ಪದ್ಧತಿ

ಮನುಷ್ಯ ಬದುಕಲು ಆಹಾರ ಸೇವಿಸಲೇಬೇಕು. ತನ್ನ ಹೊಟ್ಟೆಪಾಡಿಗಾಗಿ ಏನೆಲ್ಲಾ ಹೋರಾಟ ಅತ್ಯಗತ್ಯ. "ಎಲ್ಲಾರು ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ" ಎಂಬ ದಾಸರವಾಣಿ ಸರ್ವಕಾಲಿಕ ಸತ್ಯವಾದುದು. "ಉದರ ನಿಮಿತ್ತಂ ಬಹುಕೃತ ವೇಷಂ"[೩೫] ಎಂಬ ಮಾತಿನಂತೆ ಮನುಷ್ಯ ಹೊಟ್ಟೆಪಾಡಿಗಾಗಿ ಹಲವಾರು ವೃತ್ತಿಗಳನ್ನು ಮಾಡುತ್ತಾನೆ, ಇದಕ್ಕಾಗಿ ನಿತ್ಯ ದುಡಿಯುತ್ತಾನೆ. ಒಂದು ಕಾಲಕ್ಕೆ ಕೇವಲ ಹಸಿಯಾದ ಆಹಾರ ಪದಾರ್ಥಗಳನ್ನು ಸೇವಿಸುತ್ತಿದ್ದನು. ಬೆಂಕಿಯ ಅವಿಷ್ಕಾರದ ನಂತರ ರುಚಿಯ ಬೆನ್ನು ಹತ್ತಿ ಬಗೆಬಗೆಯ ಅಡುಗೆ ಮಾಡಿಕೊಳ್ಳುತ್ತ ಸಾವಿರಾರು ರೀತಿಯ ಆಹಾರ ಪದಾರ್ಥಗಳನ್ನು ಕಂಡುಹಿಡಿದ. ಹೀಗಾಗಿ ಅಡುಗೆಯ ಅಭಿರುಚಿ ವ್ಯಕ್ತಿಯಿಂದ ವ್ಯಕ್ತಿಗೆ ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗುತ್ತ ವೈವಿಧ್ಯತೆ ಅಪಾರವಾಗಿ ಬೆಳೆದು ನಿಂತಿತು.

ಮಾನವನ ಮೂಲಭೂತ ಅಗತ್ಯತೆಗಳಲ್ಲಿ ಆಹಾರಕ್ಕೆ ಪ್ರಥಮ ಸ್ಥಾನ. ಆಹಾರವಿಲ್ಲದೆ ಜಗತ್ತಿನ ಯಾವ ಪ್ರಾಣಿಯೂ ಬದುಕಿ ಉಳಿಯಲು ಅಸಾಧ್ಯ. ಮಾನವನ ಇತಿಹಾಸವನ್ನು ನೋಡಿದರೆ, ಆತ ಅಲೆಮಾರಿತನವನ್ನು ಬಿಟ್ಟು ಸ್ಥಿರವಾಗಿ ನೆಲೆಯೂರಿ ಕೃಷಿಯನ್ನು ಕಂಡುಹಿಡಿದು ತನಗೆ ಬೇಕಾದ ಆಹಾರೋತ್ಪನ್ನವನ್ನು ರೂಢಿಸಿಕೊಂಡ ನಂತರವೇ ನಾಗರೀಕತೆ ಸಂಸ್ಕೃತಿಗಳು ರೂಪುಗೊಂಡಿವೆ. ಭಾರತ ಕೃಷಿ ಪ್ರಧಾನವಾದ ರಾಷ್ಟ್ರವಾದ್ದರಿಂದ ಶೇಕಡ ೮೦ರಷ್ಟು ಜನರು ಕೃಷಿಯನ್ನು ಆಧರಿಸಿಯೇ ಜೀವನ ಸಾಗಿಸುತ್ತಿದ್ದಾರೆ.

ಮಂಡ್ಯ ಜಿಲ್ಲೆಯಲ್ಲಿರುವ ಗಂಗಾಮತಸ್ಥರ ಆಹಾರ ಪದ್ಧತಿಯಲ್ಲಿ ಅಂತಹ ಭಿನ್ನತೆಯನ್ನು ಗುರುತಿಸಲು ಸಾಧ್ಯವಾಗುವುದಿಲ್ಲ. ಆದರೂ ಬೇರೆ ಜನಾಂಗಕ್ಕಿಂತ ಸೂಕ್ಷ್ಮವಾದ ವಿಶೇಷತೆಗಳನ್ನ ಗಮನಿಸಬಹುದು. "ಅಡುಗೆ ಪದ್ಧತಿ ಒಂದು ನಾಡಿನ ಸಂಸ್ಕೃತಿಯ ಅನೇಕ ಅಂಶಗಳನ್ನು ಹೊರಗೆಡಹುತ್ತದೆ. ಅಡುಗೆಗೆ ಬಳಸುವ ವಸ್ತುಗಳು, ತಯಾರಿಕೆಯ ವಿಧಾನ, ಉಪಯೋಗಿಸುವ ಬಗೆ, ಶೇಖರಿಸಿಡುವ ರೀತಿ, ಅಡುಗೆಗಳ ಹೆಸರುಗಳು ದೇಶದಿಂದ ದೇಶಕ್ಕೆ, ಸಮಾಜದಿಂದ ಸಮಾಜಕ್ಕೆ, ಸ್ಥಳದಿಂದ ಸ್ಥಳಕ್ಕೆ, ಕಾಲದಿಂದ ಕಾಲಕ್ಕೆ ಬೇರೆಯಾಗುತ್ತವೆ. ಒಂದು ಭೌಗೋಳಿಕ

ಪರಿಸರಕ್ಕೆ ಹೊಂದಿಕೊಂಡ ಒಂದು ಸಮಾಜ ತನಗೇ ವಿಶಿಷ್ಟವಾದ ಒಂದು ಪರಂಪರೆಯನ್ನು ನಿರ್ಮಿಸಿಕೊಳ್ಳುತ್ತದೆ.[೩೬] ಆಹಾರ ಪದ್ಧತಿಯಲ್ಲಿ ಒಂದೇ ಸ್ಥಳದಲ್ಲಿ ವಾಸಿಸುವ ವಿವಿಧ ಸಮುದಾಯದವರಲ್ಲಿ ಅಲ್ಪ-ಸ್ವಲ್ಪ ವ್ಯತ್ಯಾಸವನ್ನಾದರೂ ಗುರುತಿಸಬಹುದು. ಇದಕ್ಕೆ ಹೊಂದಿಕೊಂಡಂತೆ ಹೇಳುವುದಾದರೆ ಮಂಡ್ಯ ಜಿಲ್ಲೆಯಲ್ಲಿರುವ ಗಂಗಾಮತಸ್ಥರ ಆಹಾರ ಪದ್ಧತಿಯಲ್ಲಿ ಸೂಕ್ಷ್ಮವಾದ ವಿಶೇಷತೆಗಳನ್ನ ಮಾತ್ರ ಗಮನಿಸಬಹುದು. ಉಳಿದಂತೆ ಎಲ್ಲಾ ಸಮುದಾಯದವರಂತೆ ಅವರು ಕೂಡ ಸಾಮಾನ್ಯವಾದ ಆಹಾರವನ್ನು ಸೇವಿಸುತ್ತಾರೆ.

ಭೂರಚನೆ, ಮಣ್ಣಿನ ಗುಣ, ಫಲವತ್ತತೆ, ಮಳೆಯ ಪ್ರಮಾಣ, ವಾತಾವರಣಗಳನ್ನು ಅವಲಂಬಿಸಿ ಬೆಳೆಗಳಲ್ಲಿ ಪ್ರಾದೇಶಿಕ ಭಿನ್ನತೆ ಕಂಡುಬರುತ್ತದೆ. ಹೆಚ್ಚು ಜನರು ಬಳಸುವ ಆಹಾರ ಧಾನ್ಯಕ್ಕೆ ಸಹಜವಾಗಿಯೇ ಬೇಡಿಕೆ ಹೆಚ್ಚಿದ್ದು ಬೆಲೆಯೂ ಹೆಚ್ಚಿರುತ್ತದೆ. ಹಾಗೆಯೇ ಕಡಿಮೆ ಜನರ ಆಹಾರ ಧಾನ್ಯಕ್ಕೆ ಬೇಡಿಕೆ, ಬೆಲೆ ಎರಡೂ ಕಡಿಮೆ. ಹೀಗಾಗಿ ಭತ್ತ ಬೆಳೆಯುವವರು, ನಿತ್ಯದ ಆಹಾರಕ್ಕೆ ಅಕ್ಕಿಯನ್ನು ಬಳಸುವವರು 'ದೊಡ್ಡವ'ರೆನಿಸಿಕೊಂಡರೆ, ರಾಗಿ ಬೆಳೆಯುವವರು ಮತ್ತು ಅದನ್ನು ಆಹಾರವಾಗಿ ಉಪಯೋಗಿಸುವವರು ಬಡವರೆನಿಸಿಕೊಳ್ಳುತ್ತಾರೆ.

ಮಂಡ್ಯ ಜಿಲ್ಲೆಯ ಗಂಗಾಮತಸ್ಥರ ಆಹಾರ ಪದ್ಧತಿ ಸಾಂಪ್ರದಾಯಿಕವಾಗಿದ್ದು, ಸ್ಥಳೀಯ ಗುಣವನ್ನು ಹೊಂದಿದೆ. ಇವರ ಆಹಾರ ಪದ್ಧತಿಯನ್ನು ಮುಖ್ಯವಾಗಿ ಮೂರು ವರ್ಗಗಳಾಗಿ ವಿಂಗಡಿಸಿಕೊಳ್ಳಬಹುದು.

೧. ದೈನಂದಿನ ಆಹಾರ ಪದ್ಧತಿ
೨. ಜೀವನಾವರ್ತನ ಆಹಾರ ಪದ್ಧತಿ
೩. ವಾರ್ಷಿಕಾವರ್ತನ ಆಹಾರ ಪದ್ದತಿ

### ೧. ದೈನಂದಿನ ಆಹಾರ ಪದ್ಧತಿ:

ಮಂಡ್ಯ ಜಿಲ್ಲೆಯ ಗಂಗಾಮತಸ್ಥರ ದೈನಂದಿನ ಆಹಾರ ಪದ್ಧತಿಯಲ್ಲಿ ಪ್ರಮುಖವಾದುದ್ದು, ರಾಗಿಮುದ್ದೆ, ಅನ್ನ, ರಾಗಿರೊಟ್ಟಿ, ಸಾರು ಇವು ಸಾಮಾನ್ಯವಾಗಿರುತ್ತವೆ. ಇವುಗಳ ನಡುವೆ ಮಾಂಸ, ಮೀನು, ಕರಿಮೀನು, ಸೀಗಡಿ ಮುಂತಾದವುಗಳನ್ನು ಸೇವಿಸುತ್ತಾರೆ. "ರಾಗಿರೊಟ್ಟಿ, ರಾಗಿಮುದ್ದೆ, ಅನ್ನ, ಇವು ದಕ್ಷಿಣ ಕರ್ನಾಟಕದ ದಿನನಿತ್ಯದ ಆಹಾರ. ಹೇರಳವಾಗಿ ರಾಗಿ ಬೆಳೆಯುವ ಈ ಪ್ರದೇಶದಲ್ಲಿ ರಾಗಿ ಅಡುಗೆಯೇ ಮುಖ್ಯವಾದುದ್ದು".[೩೭] ಅದರಲ್ಲೂ ಮಂಡ್ಯ ಜಿಲ್ಲೆಯ ಎಲ್ಲಾ ಸಮುದಾಯದವರ ದಿನನಿತ್ಯದ ಆಹಾರ ರಾಗಿಮುದ್ದೆಯೇ ಆಗಿದೆ.

ಮುದ್ದೆಯನ್ನು ಹಿಟ್ಟು ಎಂದೂ ಕರೆಯುತ್ತಾರೆ. ಮುದ್ದೆ ಎಂದರೆ ಉಂಡೆ ಎಂದರ್ಥ. ಹಿಟ್ಟು ಎಂಬುವುದಕ್ಕೆ ಹಸೀಟು ಎನ್ನುತ್ತಾರೆ. ಅದನ್ನು ಬೇಯಿಸಿ ಉಂಡೆ ಮಾಡಿದ್ದು ಎಂಬ ಎರಡೂ ಅರ್ಥಗಳಿವೆ. ಹಾರಕ, ಜೋಳ, ಅಕ್ಕಿ ಮುದ್ದೆಗಳಿದ್ದರೂ ಮುದ್ದೆ ಎಂದರೆ ಅದು 'ರಾಗಿಮುದ್ದೆ' ಎಂಬಷ್ಟರ ಮಟ್ಟಿಗೆ ಹಳೆ ಮೈಸೂರು ಭಾಗದಲ್ಲಿ ಹೆಸರಾಗಿದೆ. ಸ್ವಲ್ಪವೇ ಹಸಿ ಹಿಟ್ಟನ್ನು ಗಂಟಿಲ್ಲದಂತೆ ಕಲೆಸಿ ಕುದಿಸಿದ ನೀರಿಗೆ (ಹಿಟ್ನೆಸ್ರು) ಹಸಿ ಹಿಟ್ಟನ್ನು ಸುರಿದು ಹದವರಿತು ಬೇಯಿಸಿ ಹಿಟ್ಟಿನ ಕೋಲಿನಿಂದ ಗಂಟಿಲ್ಲದಂತೆ ತಿರುವಿ ಉಂಡೆ ಮಾಡಿದ್ದು ಮುದ್ದೆ. ಮುದ್ದೆ ಮಾಡಲು ಹೆಚ್ಚು ಸಮಯ ಶ್ರಮ ಬೇಕಿಲ್ಲದಿದ್ದರೂ ಸೂಕ್ಷ್ಮತೆ ಬೇಕು. ಬಂದ ನೆಂಟರು ಕೈ-ಕಾಲು ತೊಳೆದು ಊಟಕ್ಕೆ ಕೂರುವಷ್ಟರಲ್ಲಿ ಬಿಸಿ ಬಿಸಿ ಮುದ್ದೆ ಸಿದ್ಧವಾಗಿಬಿಡುತ್ತದೆ. ಆದರೆ ದೊಡ್ಡ ಮನೆಗಳಲ್ಲಿ ಮುದ್ದೆ ತಿರುಗುವುದು ಸುಲಭದ ಮಾತಲ್ಲ. ಹಿಟ್ಟು ಮಾಡುವ ಹೆಂಗಸರ ರಟ್ಟೆ ಗಟ್ಟಿ ಇದ್ದರಷ್ಟೆ ಕೆಲಸವಾದೀತು. ಇಲ್ಲದಿದ್ದರೆ ಹಿಟ್ಟೆಲ್ಲ ಗಂಟು.

ಮುದ್ದೆ ತಿರುಗುವ ಕೆಲಸವನ್ನು ಸಾಮಾನ್ಯವಾಗಿ ಅನುಭವಸ್ಥ ಮಹಿಳೆ ಮಾಡುತ್ತಾಳೆ. ಹೊಸದಾಗಿ ಹಿಟ್ಟು ಮಾಡುವವರು ಹಲವು 'ಹಿಟ್ಟಿನ ಮಡಕೆ'ಗಳನ್ನು ಹೊಡೆದು ಹಾಕುತ್ತಾರೆ. ಇತ್ತೀಚೆಗೆ ಸಿಲೆವಾರ್ ಅಲ್ಯುಮಿನಿಯಂ ತಪ್ಪಲೆಗಳನ್ನು ಬಳಸುತ್ತಾರೆ. ಹಿಟ್ಟಿನೆಸರು ಹೆಚ್ಚು ಕಡಿಮೆಯಾಗಿ ಅಥವಾ ಸರಿಯಾಗಿ ಒಂದಿಸಿ ತಿರುಗದೆ 'ಗಂಟಿಟ್ಟು' ಮಾಡಿ, ಹೆಚ್ಚು ಕಡಿಮೆ ಬೇಯಿಸಿ 'ಪಿಸಕಲಿಟ್ಟು' ಮಾಡಿ ಮನೆಮಂದಿಯಿಂದೆಲ್ಲಾ ಬೈಸಿಕೊಳ್ಳುವುದು ಸಾಮಾನ್ಯ.

ಗಂಗಾಮತಸ್ಥರು ಮೈಮುರಿದು ದುಡಿಯುವವರಾದ್ದರಿಂದ ಮೂರೊತ್ತು ಅಡುಗೆ ಮಾಡಲು, ಉಣ್ಣಲೂ ಪುರಸೊತ್ತಿರದು. ಬೆಳಗ್ಗೆ ಉಂಡು ಕೂಲಿಗೆ, ಮೀನುಗಾರಿಕೆಗೆ, ಹೊಲ-ಗದ್ದೆಗಳಿಗೆ ಹೋದರೆ ಕೆಲಸ ಕೈ ಬಿಡುವವರೆಗೆ ಹಸಿವಾಗದಂತಿರಬೇಕು. ಆದ್ದುದರಿಂದ ಅವರ ಆಹಾರ ಮುದ್ದೆ. ಅದು ಗಟ್ಟಿಯಾಗಿರಬೇಕು, ತೆಳ್ಳಗಿರಬಾರದು. ಹಾಗೆಂದು ಮುದ್ದೆಯನ್ನು ಗೋಡೆಗೆ ಹೊಡುದ್ರೆ ಅದು ಹಿಂತಿರುಗಿ ಬರಬೇಕು' ಅನ್ನುವವರೂ ಇದ್ದಾರೆ. ದುಡಿದು ತಿನ್ನುವ ವರ್ಗದವರ ಆಹಾರವಾದ ಮುದ್ದೆಯನ್ನು ಕುಳಿತು ಉಣ್ಣುವವರು ಅರಗಿಸಿಕೊಳ್ಳಲಾರರು. ಬಿಸಿಲು, ಮಳೆ, ಗಾಳಿ, ಹಗಲು-ರಾತ್ರಿ ಎನ್ನದೆ ದುಡಿಯುವ ವರ್ಗಕ್ಕೆ ಅನ್ನದಂಥ ಮೃದು ಆಹಾರ ಕೊಟ್ಟರೆ ಬಳಲಿಬಿದ್ದಾರು. ಇಡ್ಲಿ, ದೋಸೆಯಂಥವನ್ನು ೧೫-೨೦ ಕೊಟ್ಟರೂ ಎರಡು-ಮೂರು ಗಂಟೆಯಷ್ಟೇ ಆದೀತು. ಮುದ್ದೆಯನ್ನು ಮಧ್ಯಾಹ್ನ ಉಂಡರೆ ಉಂಡರು, ಇಲ್ಲವಾದರೆ ರಾತ್ರಿ ೮ ಗಂಟೆಗೆ ಮುದ್ದೆಯನ್ನು ತಿಂದು ಮಲಗುತ್ತಾರೆ. ಮಧ್ಯಾಹ್ನ ಊಟ ಮಾಡುವವರ ಸಂಖ್ಯೆ ಕಡಿಮೆ. ತಿಂದರೂ ಸ್ವಲ್ಪ ಮುದ್ದೆ ತಿಂದು, ಅದರ ಮೇಲೆ ಸ್ವಲ್ಪ ಅನ್ನ ಉಣ್ಣುತ್ತಾರೆ. ಜಿಲ್ಲೆಯಲ್ಲಿ ಮುದ್ದೆ ಉಣ್ಣುವ ಸ್ಪರ್ಧೆಗಳೂ ನಡೆಯುತ್ತಿವೆ. ಆರೇಳು ಕೆ.ಜಿ. ತೂಕದ ಮುದ್ದೆ ಉಂಡು ಬಹುಮಾನ

ಪಡೆದವರು ಹಲವರಿದ್ದಾರೆ. ಇಂತಹ ಸ್ಪರ್ಧೆಗಳಲ್ಲಿ ಗಂಗಾಮತಸ್ಥ ಜನಾಂಗದ ಹಲವರು ಭಾಗವಹಿಸಿ ಬಹುಮಾನವನ್ನು ಗಳಿಸಿದ್ದಾರೆ.

ವೈಜ್ಞಾನಿಕವಾಗಿ ರಾಗಿಹಿಟ್ಟಿನ ಬಗ್ಗೆ ಹೇಳುವುದಾದರೆ, ಪೋಷಕಾಂಶ ಒಳಗೊಂಡ, ಜೀವಕ್ಕೆ ತಂಪಾದ ಆಹಾರ. ಸಮಶೀತೋಷ್ಣ ಆಹಾರವೆನಿಸಿರುವ, ಕ್ಯಾಲ್ಸಿಯಂಯುಕ್ತ ರಾಗಿ ಶಕ್ತಿವರ್ಧಕ. ಹಾಗೆಂದೇ 'ಹಿಟ್ಟಂ ತಿಂದಂ ಬೆಟ್ಟಂ ಕಿತ್ತಿಟ್ಟಂ', 'ಹಿಟ್ಟಂ ಬಿಟ್ಟಂ ತಾ ಕೆಟ್ಟಂ' ಎಂಬಂತ ಮಾತುಗಳಿವೆ. 'ರಾಗಿ ತಿಂದೋನು ನಿರೋಗಿ' ಎಂಬ ಮಾತೂ ಗಮನಾರ್ಹ. 'ರಾಮಧಾನ್ಯ ಚರಿತ್ರೆ'ಗೆ ರಾಗಿ ಪ್ರೇರಕವಾಗಿರಬಹುದು. 'ಅಂಬಲಿ ಕುಡಿದೋನು ಮಡಕೆ' ಎಂಬ ಗಾದೆ ಮುದ್ದೆಯ ಹೆಚ್ಚುಗಾರಿಕೆಯನ್ನು ಹೇಳಿದೆ. ಇಲ್ಲಿ ಮುದ್ದೆಯ ಮಹತ್ವವನ್ನ ಮನಗಾಣಬಹುದಾಗಿದೆ. ಮನೆಗಳಲ್ಲಿ ಹಿಟ್ಟಿನ ಮಡಕೆಗಳಲ್ಲಿ ಮುದ್ದೆ ತಿರುವಿದರೆ, ಸಾಮೂಹಿಕ ಕಾರ್ಯಗಳಲ್ಲಿ ಹಿಟ್ಟಿನ ತಪ್ಪಲಿಗಳಲ್ಲಿ, ದೊಡ್ಡ ಕಾರ್ಯಗಳಾದರೆ ಕೊಪ್ಪರಿಕೆಗಳಲ್ಲಿ ನಾಲ್ಕಾರು ಜನ ಗಂಡಸರು ಉದ್ದನೆಯ ದೊಣ್ಣೆಗಳನ್ನು ಕತ್ತರಿಯಂತೆ ಹಿಡಿದು ತಿರುವುತ್ತಾರೆ. ತಿರುಗಿದ ಹಿಟ್ಟನ್ನು ಒಂದಿಸಿ ಮುದ್ದೆ ಕಟ್ಟುವುದು ಕೂಡ ನಿಪುಣತೆಯ ಕೆಲಸ. ಮನೆಗಳಲ್ಲಿ ಮುದ್ದೆಯನ್ನು ಹಸೆಕಲ್ಲು ಅಥವಾ ಹಿಟ್ಮುದ್ದೆ ಚಟ್ನಿ ಮರದ ಬಟ್ಟಲುಗಳಲ್ಲಿ ಕಟ್ಟಿದರೆ ಕಾರ್ಯಗಳಲ್ಲಿ ಹಲಗೆಗಳ ಮೇಲೆ ಕಟ್ಟುತ್ತಾರೆ. ಮುದ್ದೆ ಕಟ್ಟುವವರ ಎಡಬಲದಲ್ಲಿ ನೀರು ಇದ್ದೇ ಇರಬೇಕು. ಸುಟ್ಟ ಕೈಗಳನ್ನು ಅದ್ದಲು, ಮನೆಗಳಲ್ಲಿ ಹಿಟ್ಟು ಕೆರೆಯುವ ಚಿಪ್ಪಿನಿಂದ ಮಡಕೆಯೊಳಗಿಂದ ಹಿಟ್ಟನ್ನು ತೆಗೆದರೆ ಕೊಪ್ಪರಿಕೆಗಳಿಂದ ಹಿಟ್ಟು ತೆಗೆಯಲು ಗುದ್ದಲಿಗಳನ್ನೇ ಬಳಸುತ್ತಾರೆ.

"ಮುದ್ದೆ ಕಟ್ಟಿದ ಮೇಲೆ ಅದೇ ಮಡಕೆಗೆ ತುಂಬಿ, ನೀರಿನಿಂದ ಮಡಕೆಯನ್ನು ಒರೆಸಿ ಅದರ ಹೊಟ್ಟೆ ಮೇಲೆ ಒಲೆ ಬೂದಿಯಿಂದ ಮೂರು ಪಟ್ಟಿ ಬಳಿದು ನಮಸ್ಕರಿಸುತ್ತಾರೆ. ಈ ಪದ್ಧತಿ ಶೈವ ಸಂಸ್ಕೃತಿಯ ಪ್ರಾಚೀನತೆಯನ್ನು ಹೇಳುತ್ತದೆ. ಕಾರ್ಯಗಳಲ್ಲಾದರೆ ಮುದ್ದೆರಾಶಿಗೆ ಪೂಜೆ ಮಾಡಿದ ನಂತರ ಬಡಿಸುತ್ತಾರೆ. ಕರಕಲು ಹಿಟ್ಟನ್ನು ಗಂಡಸರಿಗೆ ಕೊಡುವುದಿಲ್ಲ. ಹೊಟ್ಟೆ ಒಳಗೆ ಕಲ್ಲು ಸೇರಿಬಿಡುತ್ತವೆ ಎಂಬ ಹೆದರಿಕೆ"[೩೮]. ಸಂಜೆ ವೇಳೆಯಲ್ಲಿ ಹಸಿದ ಮಕ್ಕಳಿಗೆ ಹಿಟ್ಟಿನ ಸೀಕು ತಿನಿಸಾಗಿತ್ತು. ಹಿಟ್ಟಿನ ಮಡಿಕೆಯನ್ನು ಒದೆಯಬಾರದು ಎಂಬ ನಂಬಿಕೆ ಮಡಿಕೆಯ ಬಾಳಿಕೆಗೆ ಸಂಬಂಧಿಸಿರಬಹುದು. ಹಿಟ್ಟಿನ ಮಡಿಕೆ ಖಾಲಿ ಇರಬಾರದು, ಮನೆಗೆ ದರಿದ್ರ ಎಂಬ ನಂಬಿಕೆ ಸಮೃದ್ಧಿಯನ್ನು ಬಯಸುವ ಹಿನ್ನೆಲೆಯ ಮನಸ್ಸಿನದು. ಹಿಟ್ಟಿನ ಊಟಕ್ಕಿಂತ ಮೊದಲು ತಟ್ಟೆಯಲ್ಲಿರುವ ಹಿಟ್ಟನ್ನು ಮುಟ್ಟಿ ನಮಸ್ಕರಿಸಿ ನಂತರ ಊಟ ಮಾಡುತ್ತಾರೆ. ಆಹಾರಗಳಲ್ಲೇ ಜಿಲ್ಲೆಯ ಗಂಗಾಮತಸ್ಥರ ಮುದ್ದೆ ಊಟಕ್ಕೆ ಹೆಚ್ಚಿನ ಮಹತ್ವವನ್ನ ಕೊಟ್ಟಿದ್ದಾರೆ.

"ಜೋಳ ತಿಂದವ ತೋಳದಂತಾಗುವ

ರಾಗಿ ತಿಂದವ ನಿರೋಗಿಯಾಗುವ
ಅನ್ನ ಉಂಡವ ಹೆಣ್ಣಿಗನಾಗುವ"

– ಎಂಬ ಜನಪದರ ನುಡಿ

"ಹಿಟ್ಟು ಮಾಡಿ ಸೊಪ್ಪು ಮಾಡಿ
ಎಲೆ ನಾರಿ ಹಿಟ್ಟಿಕ್ಕದೆಲ್ಲಿ ಪೋದೆ"

ಪಲ್ಲವಿಯ ಜನಪದ ಗೀತೆ ತುಂಬಾ ಜನಪ್ರಿಯವಾಗಿದೆ.

'ರಾಗಿ ಮುದ್ದೆಯ ಗುಂಡು
ಉಂಡು ನೋಡೊಂದು ಚಂಡು'

– ಲಾವಣಿ ಮುದ್ದೆಯ ಇತಿಹಾಸ, ವೈಶಿಷ್ಟ್ಯಗಳನ್ನು ತಿಳಿಸುತ್ತದೆ.

ಜಿಲ್ಲೆಯಲ್ಲಿ ರಾಗಿಯ ಆಹಾರಕ್ಕೆ ವಿಶೇಷವಾದ ಸ್ಥಾನವನ್ನ ಕಲ್ಪಿಸಿಕೊಡಲಾಗಿದೆ. ಮುದ್ದೆಯಲ್ಲದೆ, ರಾಗಿ ರೊಟ್ಟಿಯನ್ನು ಮಾಡುತ್ತಾರೆ. ಉಚ್ಚಳ್ಳ ಚಟ್ನಿಯೊಂದಿಗೆ ರಾಗಿ ರೊಟ್ಟಿಯನ್ನ ತಿನ್ನುತ್ತಿದ್ದರೆ ಸ್ವರ್ಗಸುಖದ ಅನುಭವವಾಗುತ್ತದೆ. ಮೀನು ಹಿಡಿಯಲು, ಕಬ್ಬು ಕಡಿಯಲು, ಹೊಲ ಗದ್ದೆಗಳಲ್ಲಿ ದುಡಿಯುವ, ಕೂಲಿ ಕೆಲಸಕ್ಕೆ ಹೋಗುವ ಸಂದರ್ಭದಲ್ಲಿ ಸಾಮಾನ್ಯವಾಗಿ ರಾಗಿ ರೊಟ್ಟಿಯ ಬುತ್ತಿಯನ್ನು ತೆಗೆದುಕೊಂಡು ಹೋಗುತ್ತಾರೆ. ಜಿಲ್ಲೆಯಲ್ಲಿರುವ ಎಲ್ಲಾ ಸಮುದಾಯದವರು ರಾಗಿ ಮುದ್ದೆಯನ್ನು ಇಷ್ಟ ಪಡುತ್ತಾರೆ. ಅದರಲ್ಲೂ ವಿಶೇಷವಾಗಿ ಗಂಗಾಮತಸ್ಥರಿಗೆ ರಾಗಿ ಮುದ್ದೆ, ಬಡವರ ಬಾದಾಮಿ ಇದ್ದಂತೆ ಎಂದು ಹೇಳಬಹುದು.

ಗಂಗಾಮತಸ್ಥರ ದಿನನಿತ್ಯದ ಆಹಾರಗಳಲ್ಲಿ 'ಅನ್ನ'ವು ಒಂದಾಗಿದೆ. ಗಂಗಾಮತಸ್ಥರು ಆರ್ಥಿಕವಾಗಿ ಉತ್ತಮವಾಗಿಲ್ಲದ ಕಾರಣ 'ಅನ್ನ' ಉಣ್ಣುವುದು ವಿಶೇಷ ದಿನಗಳಲ್ಲಿ ಮಾತ್ರ ಆಗಿತ್ತು. ಕಾರಣವೆಂದರೆ ಅಕ್ಕಿಯ ಬೆಲೆ ಒಂದು ಕೆ.ಜಿ.ಗೆ ೨೫ ರಿಂದ ૩೫ ರೂ.ಗಳವರೆಗೆ ಇರುತ್ತದೆ. ಅದೇ ರಾಗಿಯ ಬೆಲೆ ಒಂದು ಕೆ.ಜಿ.ಗೆ ೬ ರೂ.ಗಳಿಂದ ೮ ರೂ.ಗಳವರೆಗೆ ಇದೆ. ಆದ್ದರಿಂದ ರಾಗಿಯ ಆಹಾರವನ್ನೇ ಹೆಚ್ಚಾಗಿ ಸೇವಿಸುತ್ತಾರೆ. ಅನ್ನವೇನಿದ್ದರೂ ಹಬ್ಬ-ಹುಣ್ಣಿಮೆ, ಮದುವೆ-ಮುಂಜಿಗಳಲ್ಲಿ ಮಾತ್ರ. ಅಂದಿನ ವಿಶೇಷವೇ ಅನ್ನವಾಗಿದ್ದ ಕಾಲವೂ ಇತ್ತು. ಆದರೆ ಮುದ್ದೆಯೊಂದಿಗೆ ಅನ್ನ ಮಾಡುವ ಕುಟುಂಬಗಳ ಸಂಖ್ಯೆ ಕಡಿಮೆ ಇತ್ತು. ಆದುದ್ದರಿಂದ ಅನ್ನ ಮಾಡದ ಮನೆಗಳವರು ಚಿಕ್ಕ ಮಕ್ಕಳಿಗಾಗಿ ಅನ್ನ ಈಸಿಕೊಳ್ಳುತ್ತಿದ್ದುಂಟು. ಕಾರ್ಯಗಳಲ್ಲಿ 'ಹೊಟ್ಟೆ ತುಂಬ ಹಿಟ್ಟು, ಬಾಯಿ ತುಂಬ ಅನ್ನ' ಎನ್ನುತ್ತ ಕೊನೆಯಲ್ಲಿ ಹಿಡಿಯಷ್ಟು ಮಾತ್ರ ಅನ್ನ ಹಾಕುತ್ತಿದ್ದರು. "ಅಕ್ಕಿಯ ಅನ್ನವನ್ನು ಎರಡು ರೀತಿ ತಯಾರಿಸಲಾಗುತ್ತದೆ. ತಮಗೆ ಬೇಕಾಗುವ ಪ್ರಮಾಣದಲ್ಲಿ ಮೊದಲು ಅಕ್ಕಿಯನ್ನು ತೊಳೆದುಕೊಳ್ಳಬೇಕು. ತೊಳೆದ ಅಕ್ಕಿಯನ್ನು ಪಾತ್ರೆಗೆ

ಹಾಕಿಕೊಂಡು ಅದಕ್ಕೆ ತಕ್ಕ ಪ್ರಮಾಣದಲ್ಲಿ ನೀರು ಹಾಕಿ ಕುದಿಸಿ ಅನ್ನವನ್ನು ತಯಾರಿಸಲಾಗುತ್ತದೆ. ಇನ್ನೊಂದು ಬಗೆಯೆಂದರೆ ಕುದಿಯುವ ನೀರಿನಲ್ಲಿ ಅಕ್ಕಿಯನ್ನು ಸುರವಿ ಅನ್ನವನ್ನು ತಯಾರಿಸುವುದು.[೬೯]

ಬಡತನದ ಬವಣೆಯಿಂದಾಗಿ ಇವರಿಗೆ ಅನ್ನ ಅಪರೂಪದ ಆಹಾರವಾಗಿತ್ತು. ವಿಶೇಷ ದಿನಗಳಲ್ಲಿ ಮಾತ್ರ ಅನ್ನವನ್ನ ಊಟ ಮಾಡುತ್ತಿದ್ದರು. ಆದರೆ ಇತ್ತೀಚಿನ ದಿನಗಳಲ್ಲಿ ಸರ್ಕಾರ ಕಲ್ಪಿಸಿಕೊಟ್ಟಿರುವ ಅಂತ್ಯೋದಯ ರೇಷನ್ ಕಾರ್ಡ್‌ನಿಂದ ಸರ್ಕಾರಿ ನ್ಯಾಯಬೆಲೆ ಅಂಗಡಿಯಲ್ಲಿ ಕುಟುಂಬದಲ್ಲಿರುವ ಸಂಖ್ಯೆಗೆ ಅನುಗುಣವಾಗಿ ತಿಂಗಳಿಗೆ ೩೫ ಕೆ.ಜಿ.ಯವರೆಗೂ ಅಕ್ಕಿಯನ್ನು ಕೊಡಲಾಗುತ್ತದೆ. ಪ್ರತಿ ಕೆ.ಜಿ.ಗೆ ೩ರೂ. ಬೆಲೆ ಇರುವುದರಿಂದ ಗಂಗಾಮತಸ್ಥರು ಕೊಂಡುಕೊಳ್ಳಲು ಸಾಧ್ಯವಾಗಿದೆ. ಆದುದ್ದರಿಂದ ಇಂದು ಗಂಗಾಮತಸ್ಥರ ಪ್ರತಿಯೊಂದು ಕುಟುಂಬದಲ್ಲೂ 'ಅನ್ನ'ವನ್ನ ಮಾಡುತ್ತಾರೆ. ಆದರೆ ಪ್ರತಿನಿತ್ಯ ಅನ್ನ, ಹಿಟ್ಟು ಎರಡನ್ನು ಮಾಡುತ್ತಾರೆ. ಮೊದಲು ಹಿಟ್ಟನ್ನು ತಿಂದು ಸ್ವಲ್ಪ ಅನ್ನವನ್ನ ನಂತರದಲ್ಲಿ ಊಟ ಮಾಡುತ್ತಾರೆ.

ಉಪ್ಪು ಹಾಕಿ ಸುಟ್ಟ ರೊಟ್ಟಿಗೆ ಈರುಳ್ಳಿಯೋ, ಮೆಣಸಿನಕಾಯಿಯೋ ಸಾಕಾಗಿತ್ತು. ಕಾರ ತಾಳ್ದ ಮತ್ತಷ್ಟು ರುಚಿಯೆನಿಸಿತು. ಹಿಟ್ಟು ಉಣ್ಣಲು ಮೆಣಸಿನಕಾಯಿ, ಹುಣಸೆ ಹಣ್ಣು ಸೇರಿಸಿ ಅರೆದ ಕಾರವಾದರೂ ಆದೀತು. ಆದರೆ ಅನ್ನಕ್ಕೆ ಸಾರು ಅಗತ್ಯವೆನಿಸಿತು. ಮೊದಲಿಗೆ ಗೊಡ್ಡುಕಾರಕ್ಕೆ ನೀರು ಬೆರೆಸಿ ತೆಳ್ಳಗೆ ಮಾಡಿಕೊಂಡಿರಬೇಕು. ಅದೇ ಇಂದಿಗೂ ಮಂಡ್ಯ ಜಿಲ್ಲೆಯಲ್ಲಿ ಅತ್ಯಂತ ಹೆಚ್ಚಿನ ಪ್ರಮಾಣದಲ್ಲಿ ಉಪಯೋಗದಲ್ಲಿರುವ "ಉಪ್ಪೆಸ್ರು" ಅನ್ನಲು ಅಡ್ಡಿಯಿಲ್ಲ. ಹಿಟ್ಟು ಉಣ್ಣಲು ಮಾಡಿಕೊಳ್ಳುತ್ತಿದ್ದ ಕಾಳು ತರಕಾರಿಗಳ 'ಗೊಜ್ಜು' ಮುಂದೆ ಸಾರಿನ ರೂಪ ಪಡೆದಿರಬೇಕು.

ಗಂಗಾಮತಸ್ಥರು ಸೀಗಡಿಯನ್ನು ಕೆಲವರು ಉಪ್ಸಾರಿನ ಕಾರಕ್ಕೆ ಬಳಸಿಕೊಂಡರೆ, ಕೆಲವರು ಉಪ್ಸಾರನ್ನ ಮಾಡುವಾಗಲೇ, ಮೊದಲು ಸೀಗಡಿಯನ್ನ ಬಾಣಲಿಯಲ್ಲಿ ಹುರಿದುಕೊಂಡು ನಂತರ ಎಣ್ಣೆ, ಬೆಳ್ಳುಳ್ಳಿ ಹಾಕಿ ಹುರಿದು ಇದಕ್ಕೆ ಕಾಳನ್ನು ಹಾಕಿ ಉಪ್ಸಾರನ್ನು ಮಾಡುತ್ತಾರೆ. ಇದು ಹಿಟ್ಟನ್ನು ಉಣ್ಣಲು ಬಹಳ ರುಚಿಯಾಗಿರುತ್ತದೆ. ಆರೋಗ್ಯಕ್ಕೂ ಹಿತಕರವಾಗಿರುತ್ತದೆ. ಇವರ ಮನೆಗಳಲ್ಲಿ ಯಾವಾಗಲೂ ಸೀಗಡಿ, ಕರಿಮೀನು ಇದ್ದೇ ಇರುತ್ತವೆ. ಅನ್ನವನ್ನು ಉಣ್ಣಲು ಉಪ್ಸಾರು ರುಚಿಯಗಿರುತ್ತದೆ. ಕಾರವನ್ನು ಉಳಿದರೆ ಅದನ್ನು ಹೊರ ಹಾಕುವುದಿಲ್ಲ. ಏಕೆಂದರೆ ಎರಡು-ಮೂರು ದ್ಧಿನಗಳ ಕಾಲ ಇಟ್ಟುಕೊಂಡಿದ್ದರೂ, ರುಚಿಯಲ್ಲಿ ಯಾವುದೇ ವ್ಯತ್ಯಾಸವಾಗುವುದಿಲ್ಲ. ರಾಗಿರೊಟ್ಟಿಗೂ ಉಪ್ಪೆಸ್ರು ಕಾರ ಒಳ್ಳೆಯ ನೆಂಚಿಕೆ. ಆದುದ್ದರಿಂದ ರೊಟ್ಟಿಗೂ ಇದೇ ಕಾರವನ್ನು ಬಳಸುತ್ತಾರೆ.

ಉಪ್ಪೆಸ್ರು ದಿನನಿತ್ಯದ ಸಾರಾದರೂ ದಿನದಿಂದ ದಿನಕ್ಕೆ ಕಾಳುಗಳು ಬದಲಾಗುತ್ತಿರುತ್ತವೆ. ತಾವೇ ಬೆಳೆದುಕೊಳ್ಳುವ ಅವರೆ, ತಗಣಿ, ಹುರುಳಿ ಕಾಳುಗಳೊಂದಿಗೆ ತೊಗರಿ ಬೇಳೆಯನ್ನು ಬಳಸುತ್ತಾರೆ. ದಂಟು, ಕೀರೆ, ಸಬ್ಬಸೀಗೆ, ಕಿಲ್‌ಕೀರೆ ಸೊಪ್ಪು, ಹೊನಗೊನೆ ಸೊಪ್ಪು ಹಾಗೂ ಬೆರಕೆ ಸೊಪ್ಪನ್ನು ಉಪಯೋಗಿಸುತ್ತಾರೆ. ಉಪ್ಪೆಸರಿಗೆ ಈರೇಕಾಯಿ, ಬದನೆಕಾಯಿ, ಹಿತ್ತಲ ಅವರೆಕಾಯಿಗಳನ್ನು ಬಳಸುತ್ತಾರೆ. ಒಣಗಿದ ಕಾಳುಗಳನ್ನು ಹುರಿದು ಬೇಯಿಸಿ ಮಾಡಿದ್ದು ಹುರಿದ ಅವರೆ, ತಗಣಿ, ಹುರುಳಿಕಾಳು ಉಪ್ಪೆಸ್ರು. ಕೆಲವು ಕಾಳುಗಳನ್ನು ಬೇಳೆ ಮಾಡಿಯೂ ಉಪಯೋಗಿಸುತ್ತಾರೆ. ಹುರುಳಿ ಕಟ್ಟಿಗೆ ಸುಟ್ಟ ಮೆಣಸಿನಕಾಯಿ ಅಥವಾ ಹಸಿ ಮೆಣಸಿನ ಕಾಯಿ, ಉಪ್ಪು, ಹುಳಿ ಕಿವುಚಿದರಷ್ಟೇ ಸಾಕು ಊಟ ಮಾಡಲು.

ಗಂಗಾಮತಸ್ಥರು ವಿವಿಧ ರೀತಿಯ ಸೊಪ್ಪುಗಳನ್ನು ಬೆಳೆಯುತ್ತಾರೆ. ಅದರೊಂದಿಗೆ ಆರೋಗ್ಯಕ್ಕೆ ಹಿತಕರವಾದ ಸೊಪ್ಪುಗಳನ್ನು ಗದ್ದೆಗಳ ಕಡೆ ಕೋಯ್ದು ತಂದು ಸೊಪ್ಪುಸಾರು ಮಾಡುತ್ತಾರೆ. ಬೆರಕೆ ಸೊಪ್ಪಿನ ಸಾರು ವಿಶಿಷ್ಟವಾದುದು. "ಹೊಲ-ಗದ್ದೆ, ತೋಟ-ತುಡಿಕೆಗಳಲ್ಲಿ ತಾವಾಗಿಯೇ ಬೆಳೆಯುವ ಕನ್ನೆಸೊಪ್ಪು, ಅಣ್ಣೆಸೊಪ್ಪು, ಹೊನಗಾನೆ ಸೊಪ್ಪು, ಹಕ್ಕಿಮರಿಸೊಪ್ಪು, ಅಡಕಚಿಟ್ಟನ ಸೊಪ್ಪು, ಯಾಗೀರೆಸೊಪ್ಪು, ಮುಳ್ಳಗೀರೆಸೊಪ್ಪು, ತುಪ್ಪಗೀರೆಸೊಪ್ಪು, ಕಿಲ್ಕೀರೆ ಸೊಪ್ಪು, ಸೀದುಂಬೆ ಸೊಪ್ಪು, ಕೃಷ್ಣಕಾಂತಿ ಸೊಪ್ಪು, ಕರ್ಗೋಣಿಸೊಪ್ಪು, ದೊಡ್ಡಗೋಣಿ ಸೊಪ್ಪು, ತೊಗರಿ ಸೊಪ್ಪು, ಕರಿಗಣಿಕೆ ಸೊಪ್ಪು, ಕೆಂಪುಗಣಿಕೆ ಸೊಪ್ಪು, ದಾಗಡಿಸೊಪ್ಪು, ದೊಡ್ಡಿಸೊಪ್ಪು, ಬಾಯಿಬೊಸಳೆ ಸೊಪ್ಪು, ಮರಣ್ಣೆಕುಡಿ, ಪುಣ್ಣೆಕುಡಿ, ನಗ್ಗಲುಕುಡಿ, ಗಿಡಗಡಲೆಕುಡಿ ಮೊದಲಾದ ಸೊಪ್ಪು ಈ ಎಲ್ಲಾ ಬಗೆಯ ಸೊಪ್ಪುಗಳು ಒಣ ಭೂಮಿಯಲ್ಲಿ ಮಾತ್ರ ಕಾಣಸಿಗುತ್ತವೆ. ಕುಡಿಗಳಲಿ ಕೆಲವನ್ನಾದರೂ ಕಿತ್ತುತಂದು ಬೇಯಿಸಿ ಮಾಡಿದ "ಬೆರಕೆ ಸೊಪ್ಪಿನ ಸಾರಿ"ನ ಮುಂದೆ ಯಾವ 'ಟಾನಿಕ್ಕೂ' ಬೇಡ ಎನ್ನುತ್ತಾರೆ.[೪೦] ಈ ಸೊಪ್ಪುಗಳಿಂದ ಉಪ್ಸಾರು, ಬಸ್ಸಾರು, ಮಸ್ಸೊಪ್ಪು ಮಾಡುತ್ತಾರೆ. ಆರೋಗ್ಯಕ್ಕೆ, ಅದರಲ್ಲೂ ಕಣ್ಣಿನ ದೃಷ್ಟಿಗೆ ರಾಮಬಾಣವಿದ್ದಂತೆ ಎಂದು ಹೇಳುತ್ತಾರೆ. ಮಸ್ಸೊಪ್ಪಿಗೆ ಬದನೆಕಾಯಿ, ಹಸಿ ಅವರೆಕಾಳು, ಹುರಿದ ಅವರೆಕಾಳುಗಳಂಥವನ್ನು ಸೇರಿಸುವುದರಿಂದ ಸಾರಿನ ರುಚಿ ಹೆಚ್ಚುವುದಲ್ಲದೆ, ನೆಂಚಿಕೆಯೂ ಆಗುತ್ತದೆ.

ಮಂಡ್ಯ ಜಿಲ್ಲೆಯ ಗಂಗಾಮತಸ್ಥರು ಮಾಂಸಾಹಾರಿಗಳಾಗಿದ್ದಾರೆ. ಮೀನುಗಾರಿಕೆಯಲ್ಲಿ ತೊಡಗಿರುವ ಇವರು, ವಾರದಲ್ಲಿ ಎರಡು ಮೂರು ಬಾರಿಯಾದರೂ ಮೀನಿನ ಸಾರನ್ನು ಮಾಡುತ್ತಾರೆ. ಕರಿಮೀನು, ಸೀಗಡಿ ಸಾರು ವಾರದಲ್ಲಿ ಒಂದೆರಡು ದಿನ ಇರುತ್ತದೆ. ಅವರೇ ಹೇಳುವಂತೆ, ಅವರ ಮನೆಯಲ್ಲಿ ಗಬ್ಬಿನ ವಾಸನೆ ಇರುತ್ತದೆ ಎನ್ನುತ್ತಾರೆ. ಕುರಿ, ಕೋಳಿ, ಆಡು, ಹಂದಿಗಳ ಮಾಂಸ ಉಪಯೋಗಿಸುತ್ತಾರೆ. ಕಾಡು ಪ್ರದೇಶವಿರುವ ಭಾಗಗಳಲ್ಲಿ ಮೊಲ, ಜಿಂಕೆ,

ಕಾಡುಹಂದಿ, ಕಾಡುಬೆಕ್ಕು, ಕೀರ, ಉಡ, ನವಿಲು, ಗೌಜಲಕ್ಕಿ, ಆಮೆ, ಕಾಡುಇಲಿ, ನೀರಕೋಳಿ, ಗುಳ್ಳೆನರಿ, ಕಾಡುಬೆಕ್ಕು, ನಳ್ಳಿ ಮೊದಲಾದ ಕಾಡು ಪ್ರಾಣಿ, ಪಕ್ಷಿಗಳ ಮಾಂಸವನ್ನು ತಿನ್ನುತ್ತಾರೆ. ಕರಿಮೀನು ಸಾರಿಗೆ ಅವರೆಕಾಳು, ಬದನೆಕಾಯಿ ಒಳ್ಳೆಯ ಹೊಂದಾಣಿಕೆ.

ಸಣ್ಣ-ಸಣ್ಣ ಮೀನುಗಳನ್ನು ಬಿಸಿಲಿನಲ್ಲಿ ಒಣಹಾಕಿ, ಅವುಗಳನ್ನು ಕರಿಮೀನು ಮಾಡುತ್ತಾರೆ. ಪ್ರಾಣಿಗಳ ಮಾಂಸ ಹೆಚ್ಚಾಗಿ ಇದ್ದರೆ ಅದನ್ನು ಸಣ್ಣ ಸಣ್ಣಗೆ ಕತ್ತರಿಸಿ, ಮನೆಯ ಮೇಲೆ ಬಿಸಲಿಗೆ ಒಣಗಿ ಹಾಕುತ್ತಾರೆ. ಪಕ್ಷಿಗಳು ಅವುಗಳನ್ನು ತಿನ್ನದಂತೆ, ಅದರ ಮೇಲೆ ಬಲೆಯನ್ನು ಹಾಕುತ್ತಾರೆ. ಹೀಗೆ ನಾಲ್ಕೈದು ದಿನಗಳ ಕಾಲ ಒಣಗಿಸುತ್ತಾರೆ. ಇನ್ನು ಕೆಲವರು ಮನೆಯ ಒಳಗೆ ದಾರವನ್ನು ಕಟ್ಟಿ, ಮಾಂಸವನ್ನು ಮಧ್ಯಕ್ಕೆ ಕತ್ತರಿಸಿ, ಆ ದಾರಕ್ಕೆ ತಗಲು ಹಾಕುತ್ತಾರೆ. ಹುಳುಗಳು ಬೀಳದಂತೆ, ಹಾಗೂ ಮಾಂಸ ಹಾಳಾಗದಂತೆ, ಉಪ್ಪು, ಕಾರದಪುಡಿಯನ್ನು ಸವರುತ್ತಾರೆ. ನಾಲ್ಕೈದು ದಿನಗಳ ಕಾಲ ಒಣಗಿಸಿ ಅದನ್ನು ಶೇಖರಿಸಿಡುತ್ತಾರೆ. ತಿನ್ನಬೇಕೆಂದಾಗ ಅವುಗಳನ್ನು ಬೆಂಕಿಕೆಂಡದಲ್ಲಿ ಸುಟ್ಟು ತಿನ್ನುತ್ತಾರೆ. ಇಂತಹ ಒಣಗಿಸಿದ ಮಾಂಸಗಳಿಗೆ ಉಪ್ಪಿನಕಂಡ ಎಂದು ಹೇಳುತ್ತಾರೆ. ಅವರೇ ಹೇಳುವಂತೆ ತಿನ್ನಲು ಬಹಳ ರುಚಿಯಾಗಿರುತ್ತವಂತೆ. ಸಾಮಾನ್ಯವಾಗಿ ಜಿಂಕೆ, ಮೊಲ, ಆಡು, ಕುರಿ, ಬೆಕ್ಕು, ನರಿ, ಕಡವೆ ಇತ್ಯಾದಿ ಪ್ರಾಣಿಗಳ ಮಾಂಸವನ್ನು ಉಪ್ಪಿನಕಂಡ ಮಾಡಿಕೊಳ್ಳುತ್ತಾರೆ. ಜಿಲ್ಲೆಯ ಗಂಗಾಮತಸ್ಥರು ತರಕಾರಿ ಸಾರಿಗಿಂತಲೂ, ಹೆಚ್ಚಿನದಾಗಿ ಮಾಂಸದ ಸಾರನ್ನು ಮಾಡುತ್ತಾರೆ. ಅವರಿಗೆ ಗಬ್ಬಿನ ಸಾರೆಂದರೆ ಬಲು ಇಷ್ಟವಂತೆ. ಕಾರಣವೆಂದರೆ ನಾವು ಮೀನುಗಾರರಲ್ಲವೇ. ಹಿಂದಿನಿಂದಲೂ ಬೇಟೆಯಾಡಿದ ಮಾಂಸದ ರುಚಿ ನಮ್ಮನ್ನ ಬಿಡುತ್ತಿಲ್ಲ. ಆದ್ದರಿಂದ ನಾವು ವಾರಕ್ಕೆ ನಾಲ್ಕು ದಿನವಾದರೂ ಮಾಂಸವನ್ನು ತಿನ್ನುತ್ತೇವೆ ಎನ್ನುತ್ತಾರೆ.

ಅಡುಗೆ ಮನೆಯಲ್ಲಿ ಮಾಂಸವನ್ನು ಬೇಯಿಸುವವರ ಸಂಖ್ಯೆ ಕಡಿಮೆ. ಇದಕ್ಕೆ ಕಾರಣ ಅಡುಗೆ ಮನೆಯಲ್ಲೆ ದೇವರ ಮನೆಯೂ ಇರುತ್ತದೆ. ಇಲ್ಲವೇ ಅಡುಗೆ ಮನೆಯ ಪಕ್ಕದಲ್ಲೇ ದೇವರ ಕೋಣೆ ಇರುವುದರಿಂದ, ಮಾಂಸವನ್ನು ನೀರು ಮನೆಯಲ್ಲೋ, ಕೊಟ್ಟಿಗೆಯಲ್ಲೋ, ಪಡಸಾಲೆಯಲ್ಲೋ ಬೇಯಿಸುವುದುಂಟು. ಬಾಡಿನ ಒಲೆ, ಮಡಕೆ, ಸೌಟುಗಳೂ ಪ್ರತ್ಯೇಕವಾಗಿರುವುದಿದೆ. ಹಂದಿ ಬಾಡಾದರಂತೂ ಬಹಳ ಕಟ್ಟುನಿಟ್ಟು. ಇದಕ್ಕೆಂದೇ ಬೇರೆ ಮಡಕೆ, ಸೌಟಾಗಿರುತ್ತದೆ. ಊಟದ ನಂತರ ಕೆಲವರು ಸ್ನಾನ ಮಾಡುತ್ತಾರೆ.

ಗಂಗಾಮತಸ್ಥರಲ್ಲಿ ದಿನನಿತ್ಯದ ಆಹಾರದ ವಿಶೇಷವೇ ಮಾಂಸವಾಗಿದೆ. ಬೇರೆ ಸಮುದ್ರಾಯದವರು ಇವರಷ್ಟು ಮಾಂಸಾಹಾರಿಗಳಲ್ಲ. ಅಲ್ಲದೆ ಗಂಗಾಮತಸ್ಥರು ತಿನ್ನುವ ಪ್ರಾಣಿ ಪಕ್ಷಿಗಳ ಮಾಂಸವನ್ನು ಬೇರೆ ಜನರು ತಿನ್ನುವುದಿಲ್ಲ. ಮುದ್ದೆ, ಅನ್ನ, ಸಾರು ಇವುಗಳು ಜಿಲ್ಲೆಯಲ್ಲಿರುವ ಎಲ್ಲಾ ಜನರ ಸಾಮಾನ್ಯವಾದ ಆಹಾರವಾಗಿರುತ್ತದೆ. ಆದರೆ ಇವರು ತಿನ್ನುವ

ಕೆಲವೊಂದು ಸೊಪ್ಪುಗಳು, ಗೆಡ್ಡೆಗೆಣಸುಗಳು ಈ ಸಮುದಾಯದವರು ಮಾತ್ರ ತಿನ್ನುತ್ತಾರೆ. ಬಿದುರಿನ ಚಿಗುರಾದ ಕರುಳೆಯನ್ನು ಇವರು ಉಪಯೋಗಿಸುತ್ತಾರೆ. ಮರದ ಗೆಣಸನ್ನು ಸಾರಿಗಾಗಿ ಬಳಸಿಕೊಳ್ಳುತ್ತಾರೆ. ಜಿಲ್ಲೆಯ ಎಲ್ಲಾ ವರ್ಗದವರಿಗಿಂತ ಊಟೋಪಚಾರಗಳಲ್ಲಿ ಗಂಗಮತಸ್ಥರು ವಿಶೇಷವಾಗಿದ್ದಾರೆ ಎಂದು ಹೇಳಬಹುದು.

## ಜೀವನಾವರ್ತನ ಆಹಾರ ಪದ್ಧತಿ

ಗಂಗಾತಮಸ್ಥರು ತಮ್ಮ ಜೀವನಾವರ್ತನ ಸಂದರ್ಭದಲ್ಲಿ ಕಂಡು ಬರುವ ಜನನ, ನಾಮಕರಣ, ಕಿವಿಚುಚ್ಚುವುದು, ಋತುಮತಿ, ಮದುವೆ, ಬಾಣಂತನ, ನಿಶ್ಚಿತಾರ್ಥ, ಚಪ್ಪರ, ತಿಥಿ, ಮುಂತಾದ ಆಚರಣೆಗಳ ಸಂದರ್ಭದ ಆಹಾರದಲ್ಲಿ ವಿಶೇಷತೆಯನ್ನ ಗುರುತಿಸಬಹುದು. ಆರೋಗ್ಯ ಹದಗೆಟ್ಟಾಗ ಊಟದಲ್ಲಿ ಬದಲಾವಣೆಯನ್ನ ಕಾಣಬಹುದು. ಈ ಎಲ್ಲಾ ಸಂದರ್ಭಗಳಲ್ಲೂ, ದಿನನಿತ್ಯದ ಊಟೋಪಚಾರಗಳಿಗಿಂತ ಆಹಾರದಲ್ಲಿ ಭಿನ್ನತೆ ಇರುತ್ತದೆ.

ಜನನದ ಸಂದರ್ಭದಲ್ಲಿ, ಹನ್ನೊಂದನೆ ದಿನಕ್ಕೆ ಸೂತಕವನ್ನು ತೆಗೆದುಹಾಕಿ, ಅಕ್ಕ ಪಕ್ಕದ ಮನೆಯವರಿಗೆ, ನೆಂಟರಿಷ್ಟರಿಗೆ ಊಟವನ್ನು ಹಾಕುತ್ತಾರೆ. ದಾಸ ಒಕ್ಕಲಿನವರು, ಜೋಗಯ್ಯದಿರು ದೇವರ ಪೂಜೆಯನ್ನು ಮಾಡಿಸುತ್ತಾರೆ. ಸಕ್ಕರೆ, ಕೊಬ್ಬರಿ, ಹುರಿಗಡಲೆ, ಸೇರಿಸಿ ಪ್ಯಾಕ್ ಮಾಡಿ ಎಲ್ಲರಿಗೂ ಹಂಚುತ್ತಾರೆ. ಗಂಗೆ ತಡಿಯಿಂದ ನೀರು ತಂದು ಸಾಯಂಕಾಲ ವಿಶೇಷವಾದ ಅಡುಗೆ ಮಾಡುತ್ತಾರೆ. ಅನ್ನ, ಸಾರು, ಪಾಯಸ, ಬೋಂದಿ ಇಲ್ಲವೆ ಹೋಳಿಗೆಯನ್ನು ಮಾಡುತ್ತಾರೆ. ತಡಗುಣಿ, ಆಲೂಗೆಡ್ಡೆ, ಬದನೆಕಾಯಿ ಹಾಕಿ ಕೂಟನ್ನು ಮಾಡುತ್ತಾರೆ. ನಾಮಕರಣದ ಸಂದರ್ಭದಲ್ಲೂ ಇದೇ ರೀತಿಯ ಅಡುಗೆಯನ್ನು ಮಾಡುತ್ತಾರೆ.

**ಋತುಮತಿ:** ಹೆಣ್ಣುಮಕ್ಕಳು ಋತುಮತಿಯಾದ ಸಂದರ್ಭದಲ್ಲಿ ಪೌಷ್ಟಿಕವಾದ ಆಹಾರ ಪದಾರ್ಥಗಳನ್ನು ಕೊಡುತ್ತಾರೆ. ಶೀತದ ಪದಾರ್ಥಗಳನ್ನು ಕೊಡುವುದಿಲ್ಲ. ಉಷ್ಣದ ಆಹಾರ ಪದಾರ್ಥಗಳನ್ನು ಕೊಡುತ್ತಾರೆ. ಕೊಬ್ಬರಿ, ಬೆಲ್ಲ, ಗೋಧಿ ಹಿಟ್ಟಿನಿಂದ ಮಾಡಿದ ಆಹಾರವನ್ನು ನೀಡುತ್ತಾರೆ. ದಿನ ಬಿಟ್ಟು ದಿನ ಸೀಗಡಿ ಉಪ್ಸಾರು ಮತ್ತು ಸೀಗಡಿ ಸಾರನ್ನು ಮಾಡುತ್ತಾರೆ. ಕೋಳಿ ಮಾಂಸ, ನಾಟಿಕೋಳಿ, ಆಡಿನ ಮಾಂಸ, ಮೊಲ, ಉಡದ ಮಾಂಸ, ಗೌಜಲಹಕ್ಕಿ ಮಾಂಸ ಇತ್ಯಾದಿ ಮಾಂಸದ ಆಹಾರವನ್ನು ನೀಡುತ್ತಾರೆ. ಇಷ್ಟೇ ಅಲ್ಲದೆ ಆಡಿನ ಕಾಲನ್ನು ವಾರದಲ್ಲಿ ಮೂರು ಬಾರಿ ಅಡುಗೆ ಮಾಡುತ್ತಾರೆ. ಆಡಿನ ಕಾಲಿನ ಸೂಪನ್ನು ಕುಡಿಯಲು ನೀಡುತ್ತಾರೆ. ಅಲ್ಲದೆ ತರಕಾರಿ, ಬೆಲ್ಲದ ಹಿಟ್ಟು, ಕೊಬ್ಬರಿ, ತುಪ್ಪ, ಬೆಲ್ಲ ಹಾಕಿ ಮಾಡಿದ ಸಜ್ಜಿಗೆ ಆಹಾರವನ್ನು

ಕೊಡುತ್ತಾರೆ. ಕನಿಷ್ಠ ೨೦ ದಿವಸಗಳಿಂದ ಒಂದು ತಿಂಗಳುಗಳ ತನಕ ಪೌಷ್ಟಿಕವಾದ ಆಹಾರವನ್ನು ನೀಡುತ್ತಾರೆ.

**ಬಾಣಂತನ :** ಗಂಗಾಮತಸ್ಥರು ಬಾಣಂತನದ ದಿನಗಳಲ್ಲಿ ಬಹಳ ಎಚ್ಚರಿಕೆಯಿಂದ, ಆಕೆಗೆ ಒಗ್ಗುವ ಆಹಾರವನ್ನು ಮಾಡಿಕೊಡುತ್ತಾರೆ. ಪ್ರಾರಂಭದ ಒಂದು ವಾರಗಳ ಕಾಲ ಸಪ್ಪೆ ಆಹಾರವನ್ನು ನೀಡುತ್ತಾರೆ. ಅನ್ನವನ್ನು ಹುಚ್ಚಳ್ಳೆಣ್ಣೆ ಹಾಕಿ ವಗ್ಗರಣೆ ಮಾಡುತ್ತಾರೆ. ಕುಡಿಯಲು ಕಾಫಿಯನ್ನು ಕೊಡುತ್ತಾರೆ. ಗೋಧಿಯ ರೊಟ್ಟಿಯನ್ನ, ಅಕ್ಕಿ, ರವೆಯ ರೊಟ್ಟಿಯನ್ನು ಮಾಡಿಕೊಡುತ್ತಾರೆ. ಒಣ ಮೆಣಸಿನಕಾಯಿ, ಹುಣಸೆಹಣ್ಣು, ಬೆಳ್ಳುಳ್ಳಿ, ಮೆಣಸು, ಸೀಗಡಿ ಹಾಕಿ ಮಾಡಿದ ಕಾರವನ್ನು ರೊಟ್ಟಿಯೊಂದಿಗೆ ನೆಂಚಿಕೊಂಡು ತಿನ್ನಲು ಕೊಡುತ್ತಾರೆ. ಕುಡಿಯಲು ಬಿಸಿ ನೀರನ್ನು ಕೊಡುವುದುಂಟು. ಗೋಧಿ ಹಿಟ್ಟು ಮತ್ತು ಬೆಲ್ಲ, ಕೊಬ್ಬರಿಹಾಕಿ ಮಾಡಿದ ಸಜ್ಜಗೆಯನ್ನು ತಿನ್ನಲು ಕೊಡುತ್ತಾರೆ. ಫಾರಂ ಕೋಳಿ, ನಾಟಿ ಕೋಳಿ ಮಾಂಸ, ಆಡಿನ ಮಾಂಸ, ಮೊಲ, ಉಡ, ನವಿಲು, ಗೌಜನಹಕ್ಕಿ, ಕಾಡುಬೆಕ್ಕು, ಜಿಂಕೆ, ನರಿ ಮುಂತಾದ ಪ್ರಾಣಿ ಪಕ್ಷಿಗಳ ಮಾಂಸವನ್ನು ತಿನ್ನುತ್ತಾರೆ. ಆಡಿನ ಕಾಲಿನ ಸೂಪನ್ನು ಕುಡಿಯಲು ಕೊಡುತ್ತಾರೆ. ಕ್ಯಾರೇಟು, ಬೀಟ್‌ರೇಟ್, ಬೀನಿಸ್ ಪಲ್ಯ, ಜೀರಿಗೆ ಸಾರನ್ನು ಮಾಡುತ್ತಾರೆ. ಬಾಣಂತಿಗೆ ಪೌಷ್ಟಿಕ ಆಹಾರವನ್ನು ಕೊಟ್ಟರೆ ತಾಯಿಯ ಎದೆಯಲ್ಲಿ ಹಾಲು ಹೆಚ್ಚಾಗುತ್ತದೆ. ಇದರಿಂದಾಗಿ ಮಗು ಹಾಲು ಕುಡಿದು ದಷ್ಟ-ಪುಷ್ಟವಾಗಿ ಬೆಳೆಯಲು ಸಾಧ್ಯವಾಗುತ್ತದೆ. ಸಾಲವನ್ನಾದರೂ ಮಾಡಿ ಬಾಣಂತನದ ದಿನಗಳಲ್ಲಿ ಕನಿಷ್ಟ ೬ ತಿಂಗಳುಗಳವರೆಗೆ ಆರೈಕೆಯನ್ನು ಮಾಡುತ್ತಾರೆ.

**ನಿಶ್ಚಿತಾರ್ಥ :** ಗಂಗಾಮತಸ್ಥರು ನಿಶ್ಚಿತಾರ್ಥ, ಅಥವಾ ಮನೆಶಾಸ್ತ್ರದ ಸಂದರ್ಭದಲ್ಲಿ ವಿಶೇಷವಾದ ಆಹಾರವನ್ನು ಸಿದ್ದಪಡಿಸುತ್ತಾರೆ. ಸಿಹಿ ಊಟವನ್ನು ನಿಶ್ಚಿತಾರ್ಥದ ದಿವಸ ಮಾಡಿಸುತ್ತಾರೆ. ಅನ್ನ, ಸಾರು, ಪಾಯಸ, ಬೋಂದಿ, ಲಾಡು, ಹಪ್ಪಳ, ಉಪ್ಪಿನಕಾಯಿ, ಬಾತು, ಹೆಸರುಬೇಳೆ, ಅವರೆ ಕಾಳು ಇಲ್ಲವೆ ತಡಗುಣಿಕಾಳಿನ ಕೂಟನ್ನು ಮಾಡಿಸುತ್ತಾರೆ.

**ಮದುವೆ :** ಗಂಗಾಮತಸ್ಥರು ಮದುವೆ ಮಾಡುವಾಗ ಊಟದ ವ್ಯವಸ್ಥೆಯಲ್ಲಿ ವಿಶೇಷತೆ ಕಂಡುಬರುತ್ತದೆ. ಇತ್ತೀಚಿನ ದಿನಗಳಲ್ಲಿ ಮದುವೆ ಮಾಡುವುದು ಕಷ್ಟಕರದ ಸ್ಥಿತಿಯಾಗಿದೆ. ಹೆಚ್ಚುತ್ತಿರುವ ಪದಾರ್ಥಗಳ ಬೆಲೆಯೇ ಇದಕ್ಕೆ ಕಾರಣವಾಗಿದೆ. ಅಲ್ಲದೆ ಎಲ್ಲಾ ಸಮುದಾಯದವರು ಆಧುನೀಕರಣಗೊಂಡು ಮದುವೆಗೆ, ಛತ್ರಕ್ಕೆ ಹೆಚ್ಚಿನ ಹಣವನ್ನು ಖರ್ಚು

ಮಾಡುತ್ತಾರೆ. ಆದರೆ ಇದ್ಯಾವುದರ ಬಗ್ಗೆ ಗಮನಕೊಡದೇ, ತಮ್ಮ ಹಿಂದಿನ ಸಂಪ್ರದಾಯವನ್ನೇ ಮದುವೆಯ ಊಟೋಪಚಾರದಲ್ಲಿ ಉಳಿಸಿಕೊಂಡಿದ್ದಾರೆ.

ಮದುವೆ ದಿವಸ ಸಿಹಿ ಊಟವನ್ನು ಮಾಡಿಸುತ್ತಾರೆ. ಕೆಲವರು ಮಾಂಸದೂಟವನ್ನು ಮಾಡಿಸುವವರಿದ್ದಾರೆ. ರಾಗಿಮುದ್ದೆ, ಅವರೆಕಾಳಿನ ಕೂಟು, ಅನ್ನ ಸಾಂಬಾರು, ಹಪ್ಪಳ, ಉಪ್ಪಿನ ಕಾಯಿ ಇತ್ಯಾದಿ ಪರಿಕರಗಳಿರುತ್ತವೆ. ಕೆಲವರು ಪಾಯಸ ಬೋಂದಿ, ಬಾತು, ಅನ್ನ ಸಾಂಬಾರು, ಮಜ್ಜಿಗೆ, ಹಪ್ಪಳ, ಉಪ್ಪಿನಕಾಯಿ, ಹೆಸರುಬೇಳೆ, ಹಾಲುಕೀರು, ಬಾದಶಹ, ಮೈಸೂರು ಪಾಕ್ ಮುಂತಾದ ಸಿಹಿ ತಿಂಡಿಗಳನ್ನು ಮಾಡಿಸುತ್ತಾರೆ. ಅವರವರ ಶಕ್ತಿಗನುಸಾರವಾಗಿ ಊಟದ ವ್ಯವಸ್ಥೆಯನ್ನು ಕಲ್ಪಿಸುತ್ತಾರೆ. ಒಳಗೆರೆ ಉಚ್ಚಮ್ಮನ ದೇವರ ಒಕ್ಕಲಿನವರು ಸಾಮಾನ್ಯವಾಗಿ ಮಾಂಸದ ಊಟವನ್ನು ಮದುವೆಯ ದಿನ ಮಾಡಿಸುತ್ತಾರೆ. "ಮನೆಯ ಹಿರಿಯ ಮಗನ ಮದುವೆ ಮಾಡುವಾಗ ಕಡ್ಡಾಯವಾಗಿ ಮಾಂಸದ ಊಟ ಮಾಡಿಸುತ್ತಾರೆ. ಮದುವೆಯನ್ನು ಮಾಡುವುದು ಇನ್ನು ಒಂದೆರಡು ವರ್ಷಗಳಿದೆ ಎನ್ನುವಾಗಲೇ ದೇವರ ಹೆಸರಿನಲ್ಲಿ 'ಹೋತ'ವನ್ನು ಹರಿಕೆ ಬಿಟ್ಟಿರುತ್ತಾರೆ. ಆದುದ್ದರಿಂದ ಮದುವೆಯ ದಿನ ಮಾಂಸದೂಟವನ್ನು ಮಾಡಿಸುತ್ತೇವೆ"[೪೧] ಎಂದು ಹೇಳುತ್ತಾರೆ.

ಮದುವೆ ದಿನದಂದು ಬೆಳಗ್ಗೆ ದೇವರ ಹೆಸರಿನಲ್ಲಿ ಹರಕೆಯ ಮರಿಯನ್ನು ಕಡಿಯುತ್ತಾರೆ. 'ಮರಿ' ಮಾಂಸದ ಜೊತೆಗೆ ಕೋಳಿ ಮಾಂಸ, ಮೀನಿನ ಮಾಂಸವನ್ನು ಮಾಡಿಸುತ್ತಾರೆ. ಇದರ ಜೊತೆಗೆ ಅನ್ನ, ಮುದ್ದೆ, ಸೌತೆಕಾಯಿ, ಈರುಳ್ಳಿ, ನಿಂಬೆಹಣ್ಣಿನ ಚೂರು, ಕೋಳಿ ಮೊಟ್ಟೆಯನ್ನು ಬಡಿಸುತ್ತಾರೆ. ಬಂದವರಿಗೆಲ್ಲಾ ಇದೇ ಊಟವನ್ನು ಹಾಕುತ್ತಾರೆ. ಊಟ ಮಾಡದವರಿಗೆ ಎಳನೀರು, ಬಾಳೆಹಣ್ಣಿನ ವ್ಯವಸ್ಥೆಯನ್ನು ಮಾಡಿರುತ್ತಾರೆ. ಒಟ್ಟಿನಲ್ಲಿ ಮದುವೆ ದಿನದಂದು ಮಾಂಸದ ಊಟವನ್ನು ಗಂಗಾಮತಸ್ಥರು ಮಾಡುವ ಪದ್ಧತಿ ಇಂದಿಗೂ ಇದೆ.

**ತಿಥಿ :** ಗಂಗಾಮತಸ್ಥರು ತಿಥಿಯ ಸಂದರ್ಭದಲ್ಲಿ ಸಾಮಾನ್ಯ ವ್ಯಕ್ತಿಗಳು ಸತ್ತರೆ ಅವರೆಕಾಳು-ಮುದ್ದೆಯ ಊಟವನ್ನು ಮಾಡಿಸುತ್ತಾರೆ. ದೇವರ ಗುಡ್ಡರು, ದಾಸಯ್ಯ, ಜೋಗಯ್ಯ, ಕೆಲವು ದೇವರ ಒಕ್ಕಲಿನವರು ಸತ್ತರೆ ಮಾಂಸದ ಊಟವನ್ನು ಮಾಡುತ್ತಾರೆ. ಅವರೆಕಾಳಿನ ಕೂಟು, ವಡೆ, ಮುದ್ದೆ, ಅನ್ನ, ಸಾರು ಇದು ಸಸ್ಯಾಹಾರಿ ಊಟವಾಗಿದೆ. ಅಂತೆಯೇ ಮಾಂಸದ ಊಟ ಮಾಡಿಸುವವರು, ಮರಿ ಮಾಂಸ ಇಲ್ಲವೇ ಕುರಿಮಾಂಸ, ಇದರ ಜೊತೆಗೆ ಕೋಳಿ ಮಾಂಸ, ಮೀನು, ಇವುಗಳ ಅಡುಗೆಯನ್ನು ಮಾಡಿಸುವರು. ಇದರೊಂದಿಗೆ ಬೋಟಿ ಗೊಜ್ಜನ್ನು ಮಾಡಿಸುತ್ತಾರೆ. ಮುದ್ದೆ, ಅನ್ನ, ಮಾಂಸದ ಸಾರು, ಮೀನಿನ ಕಬಾಬ್, ಕೋಳಿ ಮಾಂಸ ಚಾಪ್ಸ್,

ಇರುತ್ತವೆ. ಬಡವರಾದರೆ ಒಂದು ಮರಿಯನ್ನು ಕತ್ತರಿಸಿ ಸಾರುಮಾಡಿ ಅದರ ಮಾಂಸವನ್ನು ಬಾಳೆಕಾಯಿ–ಕಡಲೆಕಾಳಿನ ಗೊಜ್ಜಿನೊಂದಿಗೆ ಬೆರಸಿ ಬಡಿಸುತ್ತಾರೆ. ಹೀಗೆ ಗಂಗಾಮತಸ್ಥರು ಸಸ್ಯಹಾರದ ಊಟಕ್ಕಿಂತಲೂ ಮಾಂಸಹಾರದ ಊಟವನ್ನು ಇತ್ತೀಚಿನ ದಿನಗಳಲ್ಲಿ ತಿಥಿಯ ಕಾರ್ಯದಲ್ಲಿ ಮಾಡುತ್ತಾರೆ. ತಿಥಿಯ ದಿನ ಆತಸ ಎಡೆಗೆ ಇಡಲು ಕರಿಮೀನು ಮತ್ತು ಸೀಗಡಿಯ ಸಾರನ್ನೂ ಸಹ ಮಾಡುತ್ತಾರೆ.

**ಆರೋಗ್ಯ ಕೆಟ್ಟಾಗ** : ಗಂಗಾಮತಸ್ಥರು ಆರೋಗ್ಯ ಕೆಟ್ಟಾಗ, ರೋಗಕ್ಕೆ ಅನುಗುಣವಾಗಿ ಆಹಾರ ಪದಾರ್ಥಗಳನ್ನು ತಯಾರಿಸುತ್ತಾರೆ. ಅದರಲ್ಲಿ ಪಜ್ಜಿಯೂ ಒಂದು ಸುಟ್ಟ ಈರುಳ್ಳಿ, ಬೆಳ್ಳುಳ್ಳಿ ಜೊತೆಗೆ ಜೀರಿಗೆ ಮೆಣಸು, ಹುಚ್ಚಳ್ಳು, ತೆಂಗಿನಕಾಯಿ ಚೂರು ಕುದಿಸಿ ಹಾಲು ಹಾಕಿ ಮರಳಿಸಿದರೆ ಹಾಲು ಪಜ್ಜಿಯಾಯಿತು. ಪಜ್ಜಿ ಸಾರುಗಳಲ್ಲಿ ಹಲವು ಬಗೆ, ಅಣಬೆ ಪಜ್ಜಿ–ಬೇರಣಬೆ, ಮಟ್ಟಣಬೆ, ಹುಲ್ಲಣಬೆ, ಹುತ್ತದ ಹೂ–ಕಾಯಿ ಪಜ್ಜಿ, ಗಣಕೆ ಸೊಪ್ಪಿನ ಪಜ್ಜಿ, ತೊಗರಿ ಬೇಳೆ ಪಜ್ಜಿ, ಬದನೆಕಾಯಿ ಪಜ್ಜಿ, ಹುಚ್ಚಳ್ಳು ಪಜ್ಜಿ, ಹುರುಳಿಕಾಳು ಪಜ್ಜಿ, ಒಂದಲಗಿನಸೊಪ್ಪಿನ ಪಜ್ಜಿ, ಕೈಗರ್ಕೆ ಸೊಪ್ಪಿನ ಪಜ್ಜಿ, ಗುಳಕಾಯಿ ಪಜ್ಜಿ, ಜೀರಿಗೆ ಪಜ್ಜಿ, ಮೆಣಸಿನಕಾಯಿ ಪಜ್ಜಿ, ಬೆಳ್ಳುಳ್ಳಿ ಪಜ್ಜಿ, ಹಾಗಲಕಾಯಿ ಪಜ್ಜಿ, ನರಲೆಕುಡಿ ಪಜ್ಜಿ, ಸೀಗಡಿ ಪಜ್ಜಿ ಇತ್ಯಾದಿ.

ಪಜ್ಜಿ ಸಾರಿಗೆ ಸೊಪ್ಪನ್ನು ತೆವೆಯ ಮೇಲೆ ಹುರಿದುಕೊಂಡು, ಸಪ್ಪೆ ಬೇಯಿಸಿಕೊಂಡು ಅಥವಾ ಹಸಿಯದನ್ನೇ ರುಬ್ಬಿಕೊಳ್ಳುವ ಕ್ರಮಗಳಿವೆ. ಬದನೆಕಾಯಿ, ಹಾಗಲಕಾಯಿ, ಗುಳಕಾಯಿಗಳನ್ನು ಬೆಂಬೂದಿಯಲ್ಲಿ ಸುಟ್ಟು ಜೀರಿಗೆ ಪಜ್ಜಿ, ಮೆಣಸಿನ ಪಜ್ಜಿ, ಬೆಳ್ಳುಳ್ಳಿ ಪಜ್ಜಿಗಳಂಥವಕ್ಕೆ ಉಪ್ಪೆಸರಿನ ಕಾರವನ್ನೂ ಉಳಿದವಕ್ಕೆ ಮಸಾಲೆಯನ್ನೂ ಸೇರಿಸುತ್ತಾರೆ. ಹಾಲುಪಜ್ಜಿಯಲ್ಲದೆ ಅಣಬೆ, ಗಣಕೆಸೊಪ್ಪಿನ ಪಜ್ಜಿಗಳಿಗೆ ಹಾಲು ಬಿಡುವುದರಿಂದ ಹುಳಿ ಬಿಡುವಂತಿಲ್ಲ.

ಪಜ್ಜಿ ಸಾರುಗಳಲ್ಲಿ ಹಲವು ನೆಗಡಿ, ಶೀತ, ಕೆಮ್ಮು, ತಲೆತಿರುಗು, ಪಿತ್ತ ಮೊದಲಾದ ಸಾಮಾನ್ಯ ದೈಹಿಕ ತೊಂದರೆಗಳಿಗೆ ಔಷಧವೂ ಹೌದು; ಬಾಣಂತಿಯರಿಗೆ ಪಥ್ಯದ ಸಾರು ಕೂಡ. ಮೆಣಸು, ಜೀರಿಗೆ, ಮೆಣಸಿನಕಾಯಿ, ಬೆಳ್ಳುಳ್ಳಿ ಕುಟ್ಟಿ ಒಗ್ಗರಣೇ ಹಾಕಿ ಕುದಿಸಿ ಉಪ್ಪಾಕಿ, ಹುಳಿಬಿಟ್ಟು ಮಾಡಿದ 'ಮೆಣಸಿನ ಸಾರು' ಶೀತ, ನೆಗಡಿ, ಕೆಮ್ಮಿಗೆ ತುಂಬಾ ಒಳ್ಳೆಯದು. ಜ್ವರ, ನೆಗಡಿ, ಮೈಕೈ ನೋವಿನ ಸಂದರ್ಭದಲ್ಲಿ ಮೇಕೆ ಕಾಲಿನ ಸಾರನ್ನು ಮಾಡಿಸಿಕೊಂಡು ಕುಡಿಯುತ್ತಾರೆ. ಬೇಧಿ, ವಾಂತಿ ಆದಾಗ ಊರಿನ ಮಾರಮ್ಮನಿಗೆ ಮೊಸರನ್ನ ಮಾಡಿಸಿ ಪೂಜೆ

ಸಲ್ಲಿಸಿ ಊಟ ಮಾಡಿಸುತ್ತಾರೆ. ಆರೋಗ್ಯ ಕೆಟ್ಟಾಗ ಅದಕ್ಕನುಗುಣವಾಗಿ ಆಹಾರವನ್ನು ಮಾಡಿಕೊಂಡು ಸೇವಿಸುತ್ತಾರೆ.

ಇಷ್ಟಲ್ಲದೆ ಹಸು, ಎಮ್ಮೆ, ಕರುವನ್ನು ಹಾಕಿದಾಗ ಎಂಟು ದಿನಗಳ ಕಾಲ ಗಿಣ್ಣಿನ ಹಾಲು ದೊರೆಯುತ್ತದೆ. ಆ ಹಾಲನ್ನು ಅಕ್ಕಿಯೊಂದಿಗೆ ಬೇಯಿಸಿ, ಅದಕ್ಕೆ ಬೆಲ್ಲ, ಒಣಶುಂಠಿ, ಏಲಕ್ಕಿಕಾಯಿ ಹಾಕಿ, ಗಿಣ್ಣನ್ನವನ್ನು ಮಾಡುತ್ತಾರೆ. ಕೆಲವರು ಅಕ್ಕಿಯನ್ನ ಹುರಿದು, ನಂತರ ರಾಗಿ ಕಲ್ಲಿನಲ್ಲಿ ನುಚ್ಚಾಗುವಂತೆ ಬೀಸುತ್ತಾರೆ. ನೀರು, ಬೆಲ್ಲ, ಗಿಣ್ಣಿನ ಹಾಲನ್ನು ಹಾಕಿ ಚೆನ್ನಾಗಿ ಕುದಿಸುತ್ತಾರೆ. ನಂತರ ಅದಕ್ಕೆ ತಕ್ಕಂತೆ ಅಕ್ಕಿನುಚ್ಚನ್ನ ಹಾಕಿ ಚೆನ್ನಾಗಿ ಹಿಟ್ಟಿನ ದೊಣ್ಣೆಯಿಂದ ತಿರುಗುತ್ತಾರೆ. ಇದಕ್ಕೆ ಶುಂಠಿಯ ಪುಡಿ, ಏಲಕ್ಕಿ ಕಾಯಿಯ ಪುಡಿ, ಕಡಲೆಬೀಜ, ಬಿಳಿಎಳ್ಳು, ತೆಂಗಿನಕಾಯಿ ತುರಿಯನ್ನು ಹಾಕುತ್ತಾರೆ. ಇದನ್ನು ಚೆನ್ನಾಗಿ ಹಿಟ್ಟಿನ ದೊಣ್ಣೆಯಿಂದ ಹೊಂದಿಸಿ ನಂತರ ಮುದ್ದೆಯನ್ನು ಕಟ್ಟುತ್ತಾರೆ. ಇದನ್ನು ಎರಡು-ಮೂರು ದಿನಗಳ ಕಾಲ ಇಟ್ಟುಕೊಂಡು ತಿನ್ನುತ್ತಾರೆ. ಇದು ಆರೋಗ್ಯದ ದೃಷ್ಟಿಯಿಂದ ತುಂಬಾ ಒಳ್ಳೆಯ ಆಹಾರವಾಗಿದೆ. ದೇಹಕ್ಕೆ ಉತ್ತಮವಾದ ಪೋಷಕಾಂಶ ದೊರೆಯುತ್ತದೆ. ಈ ಆಹಾರವನ್ನು ಸಾಮಾನ್ಯವಾಗಿ ತಿಂಗಳಿಗೆ ಒಮ್ಮೆಯಾದರೂ ಗಂಗಾಮತಸ್ಥರು ಮಾಡುತ್ತಾರೆ. ಏಕೆಂದರೆ ಎಮ್ಮೆ, ಹಸುಗಳನ್ನು ಸಾಕಿರುತ್ತಾರೆ. ಅಲ್ಲದೆ ಅಕ್ಕಪಕ್ಕದ ಮನೆಯವರು ಕರು ಹಾಕಿದ ಸಂದರ್ಭದಲ್ಲಿ ಕೊಡುವುದರಂದ ಆಗಿಂದಾಗ್ಗೆ ಗಿಣ್ಣಿನ ಅನ್ನವನ್ನು ಮಾಡುವರು.

ಗಂಗಾಮತಸ್ಥರು ದಿನ ನಿತ್ಯದ ಊಟಕ್ಕಾಗಿ ಹುರುಳಿಕಾಳು, ಅವರೆಕಾಳು, ಕಡಲೆಕಾಳು ಇವುಗಳನ್ನು ನೀರಿನಲ್ಲಿ ನೆನೆಯಾಕಿ, ಅವನ್ನು ಬಟ್ಟೆಯಲ್ಲಿ ಕಟ್ಟಿರುತ್ತಾರೆ. ಎರಡು ದಿನಗಳಲ್ಲಿ ಆ ಕಾಳುಗಳಲ್ಲಿ ಮೊಳಕೆ ಬಂದಿರುತ್ತವೆ. ನಂತರ ಆ ಕಾಳುಗಳನ್ನು ಉಪ್ಸಾರಿಗೆ ಕೆಲವರು ಬಳಸುತ್ತಾರೆ. ಇನ್ನು ಕೆಲವರು ಸಾಂಬಾರಿಗೆ ಬಳಸಿಕೊಳ್ಳುತ್ತಾರೆ. ಕಾಳಿನ ಜೊತೆಯಲ್ಲಿ ಆಲುಗಡ್ಡೆ, ಬದನೆಕಾಯಿ, ತೆಂಗಿನಕಾಯಿಯ ತುರಿ ಹಾಕಿ ಸಾರು ಮಾಡುತ್ತಾರೆ. ಇದು ಬಹಳ ರುಚಿಯಾಗಿದ್ದು, ಆರೋಗ್ಯದ ದೃಷ್ಟಿಯಿಂದ ಉತ್ತಮವಾಗಿರುತ್ತದೆ. ಮೊಳೆಬಂದ ಕಾಳುಗಳನ್ನು ವಾರಗಟ್ಟಲೆ ಇಟ್ಟುಕೊಳ್ಳುತ್ತಾರೆ. ಮನೆಯಲ್ಲಿ ಕಾಳುಗಳನ್ನ ತೆಳುವಾಗಿ ಒಣಗಿ ಹಾಕಿರುತ್ತಾರೆ. ಊಟದ ವಿಚಾರದಲ್ಲಿ ಪೌಷ್ಟಿಕವಾದ ಆಹಾರವನ್ನೇ ಗಂಗಾಮತಸ್ಥರು ಸೇವಿಸುತ್ತಾರೆ.

### ವಾರ್ಷಿಕಾವರ್ತನ ಆಹಾರ ಪದ್ಧತಿ

ಗಂಗಾಮತಸ್ಥರು ವಾರ್ಷಿಕಾವರ್ತನವಾಗಿ ಆಚರಿಸುವ ಹಬ್ಬ, ಜಾತ್ರೆ, ಹರಕೆ ಇವುಗಳಿಗೆ ಸಂಬಂಧಿಸಿದಂತೆ ಆಹಾರ ಪದ್ಧತಿಯಲ್ಲಿ ವಿಶೇಷತೆಯನ್ನ ನೋಡಬಹುದಾಗಿದೆ. ಒಂದೊಂದು ಹಬ್ಬಗಳಿಗೆ, ಒಂದೊಂದು ರೀತಿಯ ವಿಶೇಷ ಅಡುಗೆಯನ್ನು ಮಾಡುತ್ತಾರೆ. ಜಾತ್ರೆಯ ಸಂದರ್ಭದಲ್ಲಿಯೂ ಸಹ ವಿಶೇಷ ಊಟವನ್ನ ಸಿದ್ಧಪಡಿಸುತ್ತಾರೆ.

### ಹಬ್ಬಗಳು

ಹಬ್ಬ ಹರಿದಿನಗಳು ಇವರ ಬೇಸರವನ್ನು ಕಳೆಯುವ ದಿನಗಳಲ್ಲಿ ಒಳ್ಳೆಯ ತಿಂಡಿ-ತಿನಿಸುಗಳನ್ನು ಮಾಡಿ, ತಮ್ಮ ಕಷ್ಟಗಳನ್ನು ಮರೆತು ಮನೆಯವರೆಲ್ಲಾ ಒಂದೆಡೆ ಕಲೆತು ಊಟ ಮಾಡುವ ಸಂಭ್ರಮದ ದಿನ. ಸಂಬಂಧಿಗಳೊಂದಿಗೆ ಹರ್ಷಪಡುವ ಸಂದರ್ಭಗಳು. ಆ ದಿನಗಳಲ್ಲಿ ತಮ್ಮೆಲ್ಲ ಕೆಲಸ ಕಾರ್ಯಗಳಿಗೆ ಬಿಡುವು. ಹಬ್ಬದ ಅಂಗವಾಗಿ ವಿಶೇಷ ತಿಂಡಿ ತಿನಿಸುಗಳು ಸಿದ್ಧಗೊಳ್ಳುತ್ತವೆ. ಒಂದೊಂದು ಹಬ್ಬಕ್ಕೂ ಒಂದೊಂದು ಭಕ್ಷ್ಯ ಮೀಸಲಿರುವುದುಂಟು. ಯುಗಾದಿ, ಶ್ರೀರಾಮನವಮಿ, ಗೌರಿ ಹಬ್ಬ, ಮಕರ ಸಂಕ್ರಾಂತಿ, ಶಿವರಾತ್ರಿ, ಮಹಾಲಯ ಅಮಾವಾಸ್ಯೆ, ಪಿತೃಪಕ್ಷ, ಕಾರ ಹಬ್ಬ, ಮಾರಿ ಹಬ್ಬ, ಜೋರೇದೇವರ ಹಬ್ಬ ಇವುಗಳು ಗಂಗಾಮತಸ್ಥರ ದೊಡ್ಡ ಹಬ್ಬಗಳು.

**ಯುಗಾದಿ** : ಹೊಸದಾದ ದಾರಿಯನ್ನ ತೋರಿಸಿ, ಬಾಳಿನಲ್ಲಿ ಸುಖ-ದುಃಖಗಳು ಸಮನಾಗಿರಲೆಂದು ಬೇಡಿಕೊಳ್ಳುವ ದಿನ ಯುಗಾದಿ. 'ಬೇವು-ಬೆಲ್ಲ' ಸೇವಿಸುವ ದಿನ. ದೇವರಿಗೆ ನಮಸ್ಕರಿಸಿ ಬೆಳಗ್ಗೆಯೇ ಬೇವು-ಬೆಲ್ಲವನ್ನು ಸೇವಿಸುತ್ತಾರೆ. ಆಲೂಗಡ್ಡೆಯ ಪಲ್ಯ, ಕಡಲೆಬೇಳೆ, ಕಾಯಿ, ಬೆಲ್ಲ ಹಾಕಿ ಒಬ್ಬಟ್ಟನ್ನು ಸಿದ್ಧಪಡಿಸುತ್ತಾರೆ. ಅಕ್ಕಿ ಅಥವಾ ರವೆಯಿಂದ ಪಾಯಸವನ್ನು ತಯಾರಿಸುತ್ತಾರೆ. ಅನ್ನ-ಸಾರು, ಇರುತ್ತದೆ. ಹಬ್ಬದ ಮಾರನೆಯ ದಿವಸ ಮಾಂಸದೂಟವನ್ನು ಮಾಡುತ್ತಾರೆ. ಆಡು, ಕುರಿ, ಕೋಳಿ, ಕೆಲವರು ಬೇಟೆಯಾಡಿ ದೊರೆತ ಪ್ರಾಣಿಯ ಮಾಂಸದ ಅಡುಗೆಯನ್ನು ಮಾಡಲಾಗುತ್ತದೆ.

**ಶ್ರೀರಾಮನವಮಿ** : ಮಂಡ್ಯ ಜಿಲ್ಲೆಯ, ಮಳವಳ್ಳಿ, ಮದ್ದೂರು, ಮಂಡ್ಯ, ಶ್ರೀರಂಗಪಟ್ಟಣ ತಾಲ್ಲೂಕುಗಳಲ್ಲಿ ಶ್ರೀರಾಮನವಮಿ ಹಬ್ಬವನ್ನು ವಿಶೇಷವಾಗಿ ಆಚರಿಸುತ್ತಾರೆ. ಹಿಂದೆ ಗಂಗಾಮತಸ್ಥರು ಸೋಮರಸವನ್ನು ತಯಾರಿಸಿ ಕುಡಿಯುತ್ತಿದ್ದುದುಂಟು. ಮಜ್ಜಿಗೆ, ಪಾನಕವನ್ನು

ಮಾಡುತ್ತಾರೆ. ಹೆಸರಬೇಳೆಯನ್ನು ಸಹ ಮಾಡಲಾಗುವುದು. ಶ್ರೀರಾಮನಿಗೆ ಅಭಿಷೇಕ ಮಾಡಿ ಬಂದಂತಹ ಭಕ್ತರಿಗೆಲ್ಲಾ ವಿತರಿಸಲಾಗುವುದು. ಕೆಲವು ಕಡೆಗಳಲ್ಲಿ ಅನ್ನ, ಸಾರು, ಪಾಯಸ, ಬೋಂದಿ, ಮಜ್ಜಿಗೆ ಊಟವನ್ನು ಮಾಡುತ್ತಾರೆ. ಮಳವಳ್ಳಿ ಪಟ್ಟಣದಲ್ಲಿ ಪ್ರತಿವರ್ಷವು ಆಚರಿಸಿ, ಊಟವನ್ನು ಹಾಕುತ್ತಾರೆ.

**ಗೌರಿ-ಗಣೇಶನ ಹಬ್ಬ** : ಗೌರಿ ಹಬ್ಬ ಮಂಡ್ಯ ಜಿಲ್ಲಾ ಗಂಗಾಮತಸ್ಥರು ಆಚರಿಸುವ ಹಬ್ಬಗಳಲ್ಲೆ ವಿಶೇಷವಾದುದ್ದು. ಆ ದಿನ ತಮ್ಮ ಹಿರಿಯರಿಗೆ ಎಡೆಯನ್ನು ಹಾಕುತ್ತಾರೆ. ಎಳ್ಳು, ಬೆಲ್ಲ, ಕಾಯಿನ ತುರಿ ಅಕ್ಕಿಯ ಹಿಟ್ಟಿನಿಂದ ಮಾಡಿದ ಸೂಸಲು ಕಡುಬನ್ನು ಮಾಡುತ್ತಾರೆ. ಅಕ್ಕಿ ಮತ್ತು ಎಳ್ಳಿನಿಂದ ತಂಬಿಟ್ಟು ಮಾಡುತ್ತಾರೆ. ಅಕ್ಕಿಯ ಹಿಟ್ಟಿನಿಂದ ಸಾವಿಗೆ, ಕಾಯಿ-ಬೆಲ್ಲ ಹಾಕಿ ಮಾಡಿದ ಕಾಯಾಲು, ತರಕಾರಿ-ಕಾಳುಗಳಿಂದ ಮಾಡಿದ ಗೊಜ್ಜು ಮಾಡುತ್ತಾರೆ. ಮಾರನೆಯ ದಿವಸ ಮಾಂಸದ ಅಡುಗೆಯನ್ನು ಮಾಡುತ್ತಾರೆ.

**ಮಕರ ಸಂಕ್ರಾಂತಿ** : ಮಕರಸಂಕ್ರಾಂತಿ ಹಬ್ಬದ ದಿನ ಬೆಳಗ್ಗೆ ಜೀರಿಗೆ ಅನ್ನವನ್ನ ಮಾಡುತ್ತಾರೆ. ರಾತ್ರಿ, ಕಡಲೆಬೇಳೆಯ ವಡೆ, ಪಾಯಸ, ಹಿತ್ತಲ ಅವರೆ ಕಾಯಿ, ಹಸಿ ಅವರೆಕಾಯಿ, ನಾಲ್ಕೈದು ರೀತಿಯ ತರಕಾರಿ ಹಾಕಿ ಪಲ್ಯ ಮಾಡುತ್ತಾರೆ. ಮಾರನೆಯ ದಿವಸ ಸಂಕ್ರಾಂತಮ್ಮನಿಗೆ ಕೋಳಿ ಕೊಯ್ದು, ಮಾಂಸದ ಊಟವನ್ನು ಮಾಡುತ್ತಾರೆ.

**ಶಿವರಾತ್ರಿ** : ಶಿವರಾತ್ರಿಯ ದಿವಸ ಸಿಹಿ ಊಟವನ್ನು ಮಾಡುತ್ತಾರೆ. ಅನ್ನ, ಸಾರು, ತರಕಾರಿ ಪಲ್ಯ, ಅಕ್ಕಿಯ ಪಾಯಸ, ಇವುಗಳು ಸಾಮಾನ್ಯವಾಗಿರುತ್ತವೆ. ಅಕ್ಕಿಯನ್ನು ಉರಿದು, ರಾಗಿ ಕಲ್ಲಿನಿಂದ ನುಚ್ಚು ಮಾಡಿ, ಬೆಲ್ಲ, ಏಲಕ್ಕಿಕಾಯಿ, ಕಡಲೆಕಾಯಿ ಬೀಜ, ಹುರಿಗಡಲೆ ಬಿಳಿಎಳ್ಳು ಹಾಕಿ, ಉರಕ್ಕಿ ತಂಬಿಟ್ಟಿನ ಉಂಡೆಯನ್ನು ಸಿದ್ದಪಡಿಸುವರು. ಮಾರನೆಯ ದಿವಸ ಮಾಂಸದ ಊಟವನ್ನು ಮಾಡುತ್ತಾರೆ.

**ಪಿತೃಪಕ್ಷ** : ಪಿತೃಪಕ್ಷವನ್ನ ಸಾಮಾನ್ಯವಾಗಿ ಮಹಾಲಯ ಅಮಾವಾಸ್ಯೆ, ಅಥವಾ ಆಯುಧ ಪೂಜೆಯ ದಿವಸ, ಇಲ್ಲವೇ ಈ ಅವಧಿಯ ನಡುವೆ ಪಿತೃಪಕ್ಷವನ್ನ ಆಚರಿಸಲಾಗುತ್ತದೆ. ಆಡಿನ ಮಾಂಸ, ಮೀನು, ನಳ್ಳಿ, ಕೋಳಿಮಾಂಸ, ಮೊಲದ ಮಾಂಸ, ಸೀಗಡಿ, ಕರಿಮೀನಿನ ಸಾರು, ಸಿಹಿ ತಿನಿಸುಗಳು ಇವು ಸಾಮಾನ್ಯವಾಗಿರುತ್ತವೆ. ಕೆಲವರು ಕಜ್ಜಾಯ, ಸಿಕ್ರುಂಡೆ, ವಡೆ, ಒಬ್ಬಟ್ಟನ್ನು ಮಾಡುತ್ತಾರೆ. ಚಕ್ಕಲಿ, ಕೋಡುಬಳೆ, ನುಪ್ಪಟ್ಟು ಇವುಗಳೂ ಸಹ ಇರುತ್ತವೆ.

**ಕಾರಹಬ್ಬ :** ಕಾರಹಬ್ಬದಲ್ಲಿ ಮಾಂಸದ ಊಟವನ್ನು ಮಾಡಲಾಗುವುದು. ಅದರಲ್ಲೂ ವಿಶೇಷವಾಗಿ ಹಂದಿ ಮಾಂಸದ ಊಟ ಮಾಡುತ್ತಾರೆ. ಇದರೊಂದಿಗೆ ಮೇಕೆ ಮಾಂಸ, ಕೋಳಿ ಮಾಂಸವನ್ನು ತಿನ್ನುತ್ತಾರೆ. ಹಂದಿ, ಸಾಕಿದ್ದು ಆಗಿರಬಹುದು, ಇಲ್ಲವೇ ಭೇಟಿ ಮಾಡಿ ತಂದದ್ದು ಆಗಿರಬಹುದು. ಈ ಹಬ್ಬ ಜಿಲ್ಲೆಯಾದ್ಯಂತ ಮಾಡುವುದಿಲ್ಲ. ಮಂಡ್ಯ ತಾಲ್ಲೂಕು, ಶ್ರೀರಂಗಪಟ್ಟಣ ತಾಲ್ಲೂಕುಗಳಲ್ಲಿ ಆಚರಿಸುತ್ತಾರೆ.

**ಮಾರಿ ಹಬ್ಬ :** ಗಂಗಾಮತಸ್ಥರು ವರ್ಷದಲ್ಲಿ ಒಮ್ಮೆ ಮಾರಿಹಬ್ಬವನ್ನು ಆಚರಿಸುವುದು ಸಾಮಾನ್ಯವಾಗಿದೆ. ಗಂಗಾಮತಸ್ಥರೆಲ್ಲಾ ಹಣವನ್ನು ಹಾಕಿ, ಒಟ್ಟಾಗಿ 'ಮರಿ'ಗಳನ್ನು ಖರೀದಿಸಿ ಗ್ರಾಮದ ಮಾರಮ್ಮನಿಗೆ ಬಲಿ ಕೊಡುತ್ತಾರೆ. ಕುಲಸ್ಥ ಹಣ ಸಂಗ್ರಹಿಸುವ ಹಾಗೂ ಕುಟುಂಬಗಳಿಗೆ ಮಾಂಸವನ್ನು ಹಂಚುವ ಕೆಲಸವನ್ನು ಮಾಡುತ್ತಾನೆ. ಆ ದಿನ ಪ್ರತಿಯೊಂದು ಕುಟುಂಬದಲ್ಲೂ ಮಾಂಸದ ಊಟ ಇರುತ್ತದೆ. ಕೆಲವರು ಮಾರಮ್ಮನಿಗೆ ಕೋಳಿಯನ್ನು ಬಲಿ ಕೊಡುತ್ತಾರೆ. 'ಮರಿ' ಮಾಂಸದ ಜೊತೆಗೆ ಕೋಳಿ ಮಾಂಸವನ್ನು ಮಾಡುತ್ತಾರೆ.

**ಬೋರೇದೇವರ ಹಬ್ಬ :** ಬೋರೇದೇವರ ಹಬ್ಬದ ವಿಶೇಷವೆಂದರೆ ಪ್ರತಿಯೊಬ್ಬರ ಮನೆಯಲ್ಲೂ ಆ ದಿನ ದೋಸೆಯನ್ನು ಮಾಡುವುದು. ಬೆಳಗ್ಗೆ ಕೊಂಡ ಆದ ನಂತರ, ಪ್ರತಿಯೊಬ್ಬರ ಮನೆಯಲ್ಲಿ ದೋಸೆಯನ್ನು ಮಾಡಿ ದೇವರಿಗೆ ತಂದು ಅರ್ಪಿಸುತ್ತಾರೆ. ನಂತರದಲ್ಲಿ ತಾವು ಮನೆಯಲ್ಲಿ ದೋಸೆಯನ್ನು ತಿನ್ನುತ್ತಾರೆ.

**ಜಾತ್ರೆಗಳು :** ಗಂಗಾಮತಸ್ಥರು ಜಾತ್ರೆಗಳಲ್ಲಿ ವಿಶೇಷವಾದ ಅಡುಗೆಯನ್ನು ಮಾಡುತ್ತಾರೆ. ಮಳವಳ್ಳಿ, ದೊಡ್ಡರಸಿನಕೆರೆ, ಮದ್ದೂರು ಇತ್ಯಾದಿ ಕಡೆಗಳಲ್ಲಿ ಸಿಡಿ ಹಬ್ಬದ ಜಾತ್ರೆ, ಯತ್ತಂಬಾಡಿ ಕಾಳದೇವರ ಜಾತ್ರೆ, ಗಾಮನಹಳ್ಳಿಯ ಬೋರೇದೇವರ ಜಾತ್ರೆ, ಉಕ್ಕಡದ ಮಾರಮ್ಮನ ಜಾತ್ರೆ, ಅರಕೇಶ್ವರಸ್ವಾಮಿಯ ಜಾತ್ರೆ ಮುಂತಾದ ಜಾತ್ರೆಗಳಲೆಲ್ಲಾ, ಜಾತ್ರೆಯ ದಿನ ಅನ್ನ, ಎಸರು, ಪಾಯಸ-ಒಬ್ಬಟ್ಟು ಇಲ್ಲವೇ ಬೋಂದಿ, ತಾಳ್ದ, ಹಪ್ಪಳ ಇವುಗಳನ್ನು ಮಾಡುತ್ತಾರೆ. ಹಬ್ಬದ ಮಾರನ್ಯೆಯ ದಿವಸ ಮಾಂಸದ ಊಟವಿರುತ್ತದೆ. ಯತ್ತಂಬಾಡಿಯ ಕಾಳದೇವರ ಜಾತ್ರೆಯಲ್ಲಿ ಹಂದಿ ಮಾಂಸದ ಊಟವನ್ನು ಮಾಡುತ್ತಾರೆ. ಹಿಂದೆ ಗಾಮನಹಳ್ಳಿಯಲ್ಲಿ ಈರಹಬ್ಬದ ಜಾತ್ರೆಯ ದಿನ ಬೇಟೆಯಾಡಿ ತಂದ ಪ್ರಾಣಿಯನ್ನು ಬಲಿ ಕೊಡುತ್ತಿದ್ದರು. ಸಾಮಾನ್ಯವಾಗಿ ಜಿಂಕೆ ಇಲ್ಲವೇ

ಕಡವೆಯನ್ನ ಬಲಿಕೊಡುತ್ತಿದ್ದ ಸಂಪ್ರದಾಯವಿತ್ತು. ಇತ್ತೀಚಿನ ದಿನಗಳಲ್ಲಿ ಸರ್ಕಾರದ ಆದೇಶದಿಂದ ಬೇಟೆಯಾಡುತ್ತಿಲ್ಲ. ಜಿಂಕೆ ಮಾಂಸದ ಊಟವನ್ನು ಮಾಡುತ್ತಿದ್ದರು.

**ಹರಕೆ** : ಹಲವು ದೇವರುಗಳಿಗೆ ಹರಕೆಯನ್ನು ಹೊರುತ್ತಾರೆ. ಆ ಹರಕೆಯು ದೇವರ ಸ್ಥಿತಿ-ಗತಿಯನ್ನು ಆಧರಿಸಿರುತ್ತದೆ. ಬಲಿ ತೆಗೆದುಕೊಳ್ಳುವ ದೇವತೆಗಳಿಗೆ ಕುರಿ, ಕೋಳಿ, ಆಡು ಇವುಗಳನ್ನು ಬಲಿ ಕೊಟ್ಟು ಸೇವೆ ಮಾಡುತ್ತೇವೆ ಎಂದು ಹರಕೆ ಕಟ್ಟಿಕೊಂಡಿರುತ್ತಾರೆ. ಬಲಿ ತೆಗೆದುಕೊಳ್ಳದ ದೇವರಿಗೆ ಒಪ್ಪತ್ತು ಬಿಡುವುದಾಗಿ ಹರಕೆ ಕಟ್ಟಿಕೊಂಡಿರುತ್ತಾರೆ. ಸಾಮಾನ್ಯವಾಗಿ ದಂಡಿನ ಮಾರಮ್ಮ, ಕಿಚ್ಚಲ ಮಾರಮ್ಮ, ಪಟಾಲದಮ್ಮ ಬೋರೇದೇವರು ಇತ್ಯಾದಿ ದೇವತೆಗಳಿಗೆ ಮಾಂಸದೂಟ ಮಾಡುತ್ತಾರೆ. ಬಲಿ ಕೊಡದ ದೇವತೆಗಳಿಗೆ ವಡೆ-ಪಾಯಸ, ಅನ್ನ-ಸಾರು ಮಾಡಿ ಒಪ್ಪತ್ತು ಬಿಡುವುದರೊಂದಿಗೆ ಹರಕೆಯನ್ನು ತೀರಿಸುತ್ತಾರೆ.

ಗಂಗಾಮತಸ್ಥರು ಚಳಿಗಾಲದಲ್ಲಿ ಹೊಂದಿಕೊಳ್ಳುವಂತಹ ಆಹಾರವನ್ನು ಸೇವಿಸುತ್ತಾರೆ. ಅತ್ಯಂತ ಹೆಚ್ಚಾಗಿ ಮೀನುಗಳನ್ನು ಸೇವಿಸುತ್ತಾರೆ. ರಾಗಿ ರೊಟ್ಟಿ, ಗೋಧಿ ರೊಟ್ಟಿ, ಅಕ್ಕಿ ರೊಟ್ಟಿಯನ್ನು ಮಾಡುತ್ತಾರೆ. ಹಂದಿ ಮಾಂಸ, ಆಡಿನ ಮಾಂಸ, ಕೋಳಿ ಮಾಂಸವನ್ನು ತಿನ್ನುತ್ತಾರೆ. ಪ್ರತಿನಿತ್ಯ ರಾಗಿ ಮುದ್ದೆಯನ್ನು ಊಟ ಮಾಡುತ್ತಾರೆ. ಕರಿಮೀನು, ಸೀಗಡಿ, ಸಾರನ್ನು ಮಾಡಿಕೊಂಡು ಉಣ್ಣುತ್ತಾರೆ. ಬೇಸಿಗೆ ಕಾಲದಲ್ಲಿ ದೇಹಕ್ಕೆ ತಂಪಾಗಲೆಂದು ಮಜ್ಜಿಗೆ, ರಾಗಿ ಹಿಟ್ಟಿನಿಂದ ಮಾಡಿದ ರಾಗಿ ಅಂಬಲಿ, ಹಂದಿ ಮಾಂಸ, ಕುರಿ ಮಾಂಸ, ನೀರುಕೋಳಿ ಮಾಂಸ ಸೇವಿಸುತ್ತಾರೆ. ಮಳೆಗಾಲದಲ್ಲಿ ಬೇಟೆಯಾಡಿ ತಂದ ಪ್ರಾಣಿ-ಪಕ್ಷಿಗಳ ಮಾಂಸವನ್ನು ಸೇವಿಸುವುದುಂಟು. ಮೊಲ, ಮುಳ್ಳಹಂದಿ, ಕೀರ, ಕಾಡು ಇಲಿ, ಹೆಗ್ಗಣ, ಕಾಡುಬೆಕ್ಕು ಗೌಜಲಹಕ್ಕಿ, ಕಾಡುಹಂದಿ ಮುಂತಾದ ಪ್ರಾಣಿ-ಪಕ್ಷಿಗಳ ಮಾಂಸವನ್ನ ಸೇವಿಸುತ್ತಾರೆ. ಈ ಹಿನ್ನಲೆಯಲ್ಲಿ ಹಬ್ಬ-ಹರಿದಿನಗಳು ಜಾತ್ರೆಗಳನ್ನ ಆಚರಿಸುವ ಸಂಪ್ರದಾಯವನ್ನು ಗಮನಿಸಬಹುದು.

### ಅಡುಗೆಗೆ ಬಳಸುವ ಪಾತ್ರೆಗಳು ಮತ್ತು ಸಲಕರಣೆಗಳು

ಇವರು ಮೊದಲು ಅಡುಗೆ ಮಾಡಲು ಬಳಸುತ್ತಿದ್ದ ಸಲಕರಣೆಗಳೆಲ್ಲವೂ ಮಣ್ಣಿನವಾಗಿದ್ದವು. ಅನ್ನ, ಹಿಟ್ಟು, ಸಾರು ಮಾಡಲು ಮಡಕೆಗಳನ್ನು ಬಳಸುತ್ತಿದ್ದರು. ನೀರನ್ನು ಹರವಿಯಲ್ಲಿ ತರುತ್ತಿದ್ದರು. ರೊಟ್ಟಿಯನ್ನು ಮಾಡಲು ಕಬ್ಬಿಣದ ರೊಟ್ಟಿ ಕಲ್ಲನ್ನು ಉಪಯೋಗಿಸುತ್ತಿದ್ದರು. ಊಟದ ತಟ್ಟೆಗಳು ಅಲ್ಯುಮಿನಿಯಂನವಾಗಿದ್ದವು. ಕೆಲವು ಮರದ

ಸಾಧನಗಳನ್ನು ಬಳಸುತ್ತಿದ್ದರು. ಕೈಬಟ್ಟಲು (ಅನ್ನ, ರೊಟ್ಟಿ, ತುಂಬಿಕೊಳ್ಳಲು ಬಳಸುವ ಸಾಧನ), ಹಿಟ್ಟಿನ ಮರಿಗೆ, ಉಪ್ಪಿನ ಅಂಡೆ ಬಿದಿರಿನದಾಗಿರುತ್ತಿತ್ತು.

ಇತ್ತೀಚಿನ ದಿನಗಳಲ್ಲಿ ಹಿತ್ತಾಳೆ ತಾಮ್ರದ ಸಾಧನಗಳಾದ ಕೈಬಟ್ಟಲು, ಊಟದ ಬಟ್ಟಲು, ಲೋಟ, ಚೆರಿಗೆ-ತಂಬಿಗೆ, ಕೊಡ ಮತ್ತು ಹಂಡೆಗಳನ್ನು ನೋಡಬಹುದು. ತಟ್ಟೆ ಲೋಟಗಳು ಸ್ಟೀಲ್‌ನವುಗಳಾಗಿವೆ. ಸಾರು, ಪಲ್ಯ ಬಡಿಸಲು ಸೊಟ್ಟಗವನ್ನ ತೆಂಗಿನಕಾಯಿ ಕರಟದಿಂದ ತಯಾರಿಸಿಕೊಂಡಿರುತ್ತಾರೆ. ತುರಿಮಣೆ, ಕಬ್ಬಿಣದ ಕತ್ತಿ, ಕುಡುಗೋಲು ಬಳಸುವಂಥದು. ಈ ದಿನಗಳಲ್ಲೂ ಮಣ್ಣಿನಿಂದ ಮಾಡಿದ ಮಡಿಕೆ, ಮಣ್ಣಿನ ಅರಬಿ, ಗುಡಾಣಗಳನ್ನು ಇವರು ಬಳಸುತ್ತಿದ್ದಾರೆ.

## ಮದ್ಯಪಾನೀಯ

ಆಹಾರದ ಜೊತೆಗೆ ಗಂಗಾಮತಸ್ಥರು ಅನೇಕ ಬಗೆಯ ಮದ್ಯಪಾನೀಯಗಳನ್ನು ಸೇವಿಸುವರು. ಈ ಜನಾಂಗದ ಶೇಕಡ ೭೦ ರಷ್ಟು ಜನರು ಈಗಲೂ ಕುಡಿಯುವವರಿದ್ದಾರೆ. ಹೆಂಡ-ಸಾರಾಯಿ ಎಂದರೆ ಇವರಿಗೆ ಪಂಚಪ್ರಾಣವಾಗಿದ್ದವು. ಇತ್ತೀಚಿನ ದಿನಗಳಲ್ಲಿ ಸಾರಾಯಿಯನ್ನು ಸರ್ಕಾರ ರದ್ದುಗೊಳಿಸಿದೆ. ಆದುದ್ದರಿಂದ ಸಾರಾಯಿ ನಿಂತ ಕಾರಣದಿಂದಾಗಿ, ನೀರಾ ಕುಡಿಯಲು ಎಲ್ಲರು ಮುಂದಾಗಿದ್ದಾರೆ. ಇಷ್ಟೇ ಅಲ್ಲದೆ ವೈನ್ ಶಾಪ್‌ಗಳು ಪ್ರತಿ ಗ್ರಾಮಗಳಲ್ಲೂ ಇಲ್ಲದ ಕಾರಣದಿಂದಾಗಿ ಅವರು ಬೇರೆ ಪಟ್ಟಣ ಪ್ರದೇಶಕ್ಕೆ ಹೋಗಿ ಕುಡಿದು ಬರುವವರ ಸಂಖ್ಯೆ ಕಡಿಮೆ. ಆದರೆ ಇವರು ವಾಸಿಸುವ ಗ್ರಾಮಗಳಲ್ಲಿ ಕದ್ದು ಮಾರುವ ನಕಲಿ ಮದ್ಯವನ್ನೇ ಕುಡಿಯುತ್ತಾರೆ. ಇದರಿಂದ ಆರೋಗ್ಯಕ್ಕೆ ಹಾನಿಯಾಗುತ್ತದೆ. ಆದರೆ ಅವರೇ ಹೇಳುವಂತೆ ಹೆಂಡ ಕುಡಿಯುವುದರಿಂದ ಆರೋಗ್ಯಕ್ಕೆ ತುಂಬಾ ಒಳ್ಳೆಯದಂತೆ. ಆದುದ್ದರಿಂದ ಹೆಚ್ಚಾಗಿ ಹೆಂಡವನ್ನೇ ಇವರು ಸೇವಿಸುತ್ತಾರೆ.

## ಇತರ ಪಾನೀಯಗಳು :

ಗಂಗಾಮತಸ್ಥ ಹೆಂಗಸರು ಮತ್ತು ಗಂಡಸರು ಹೆಚ್ಚು ಕಾಫಿ-ಟೀಯನ್ನು ಕುಡಿಯುವ ಅಭ್ಯಾಸವಿದೆ. ಇದಕ್ಕೆ ಕಾರಣ ದುಡಿಮೆಯ ಆಯಾಸವನ್ನು ನೀಗಿಸಿಕೊಳ್ಳಲು ದಿನದಲ್ಲಿ ನಾಲ್ಕರಿಂದ ಆರೇಳು ಬಾರಿ ಕುಡಿಯುವುದುಂಟು. ಹಾಲು ಮಜ್ಜಿಗೆ, ರಾಗಿಯ ಅಂಬಲಿ, ಬ್ಯಾಲದ ಹಣ್ಣಿನ ಪಾನಕ, ಮೆಣಸಿನಕಾಳು ಕಷಾಯ ಇವು ಅವರು ಕುಡಿಯುವ ಇತರ ಪಾನೀಯಗಳು.

ನೆಂಟರಿಷ್ಟರು ಇವರ ಮನೆಗೆ ಬಂದರೆ, ಪ್ರೀತಿಯಿಂದ ಕಾಣುತ್ತಾರೆ. ಆ ದಿನ ಹಬ್ಬದ ಊಟದಂತೆ ಅಡುಗೆಯನ್ನು ಮಾಡುತ್ತಾರೆ. ಹೆಚ್ಚಿನದಾಗಿ ನೆಂಟರಿಷ್ಟರು ಬಂದ ಸಂದರ್ಭದಲ್ಲಿ ಮಾಂಸದ ಅಡುಗೆಯನ್ನು ಮಾಡುತ್ತಾರೆ. ತಮ್ಮ ಮನೆಯಲ್ಲಿಯೇ ಸಾಕಿರುವ ಕೋಳಿಯನ್ನು ಕೊಯ್ಯುತ್ತಾರೆ. ಒಟ್ಟಾರೆಯಾಗಿ ಗಂಗಾಮತಸ್ಥರು ಜಿಲ್ಲೆಯಲ್ಲಿ ಬೇರೆ ಸಮುದಾಯದವರಿಗಿಂತ, ಆಹಾರ ಪದ್ಧತಿಯಲ್ಲಿ ವಿಶೇಷತೆ ಇರುವುದನ್ನ ನೋಡಬಹುದು. ಇವರ ಅಡುಗೆಗಳಲ್ಲಿ ಕೆಲವಕ್ಕೆ ವೈದ್ಯಕೀಯ ಮಹತ್ವವಿದೆ. ಉದಾಹರಣೆಗೆ ಆಮೆ, ಮೀನು, ನಳ್ಳಿ ಅಡುಗೆ ಮತ್ತು ಕಡವೆಯ ಮಾಂಸದ ಅಡುಗೆ, ಹಂದಿ ಮಾಂಸದ ಅಡುಗೆಗಳಿಗೆ ಮೂಲವ್ಯಾಧಿ ರೋಗವನ್ನು ಗುಣಪಡಿಸುವ ಶಕ್ತಿಯಿದೆ. ಕರಿಮೀನು ದಮ್ಮುರೋಗಕ್ಕೆ ಒಳ್ಳೆಯ ಮದ್ದು. ಹೊನಗೊನೆ ಸೊಪ್ಪಿನ ಸಾರು ಕಣ್ಣಿಗೆ ಒಳ್ಳೆಯದು. ಮೈ ಕೈ ನೋವಿಗೆ ಕಾಳುಮೆಣಸಿನ ಕಷಾಯ ಒಳ್ಳೆಯ ಔಷಧ. ಇವರಿಗೆ ಬಡತನವಿದ್ದರೂ ಉತ್ತಮವಾದ ಆಹಾರವನ್ನು ತಕ್ಕ ಮಟ್ಟಿಗೆ ಸೇವಿಸುತ್ತಾರೆ.

### ೩.೬ ನ್ಯಾಯ ಪದ್ಧತಿ

ಮಾನವ ಒಂದೇ ಕಡೆ ನೆಲೆನಿಂತು, ಕೃಷಿ ಚಟುವಟಿಕೆಗಳನ್ನು ಪ್ರಾರಂಭಿಸಿ ಬದುಕುವ ಕಲೆಯನ್ನು ಕಲಿತನೋ, ಅಂದಿನಿಂದಲೂ ನ್ಯಾಯ-ಪಂಚಾಯಿತಿಗಳಿದ್ದುದನ್ನ ಇತಿಹಾಸದ ಪುಟಗಳನ್ನ ತಿರುಗಿ ಹಾಕಿದಾಗ ಗೊತ್ತಾಗುತ್ತದೆ. ಸಮಾಜದಲ್ಲಿ ಗೌರವಯುತವಾಗಿ, ತಪ್ಪು ದಾರಿಗೆ ಹೋಗದಂತೆ ಜೀವನ ನಡೆಸುವುದನ್ನ ನ್ಯಾಯ-ಪಂಚಾಯಿತಿಗಳೂ ಕಲಿಸಿಕೊಡುತ್ತಿದ್ದವು. ತಪ್ಪಿಗೆ ಸರಿಯಾದ ಶಿಕ್ಷೆಯನ್ನು ವಿಧಿಸುತ್ತಿದ್ದರಿಂದ ಜನರಲ್ಲಿ ಭಯ-ಭಕ್ತಿಯಿಂದ ಬದುಕುವ ಸರಿ ದಾರಿಯನ್ನು ನ್ಯಾಯ ಪದ್ಧತಿ ತೋರಿಸಿಕೊಡುತ್ತಿತ್ತು. ನ್ಯಾಯವನ್ನು ಕೊಡುವ ವಿಧಾನಗಳು ದೇಶದಿಂದ ದೇಶಕ್ಕೆ, ಸ್ಥಳದಿಂದ ಸ್ಥಳಕ್ಕೆ, ಸಮುದಾಯದಿಂದ ಸಮುದಾಯಕ್ಕೆ ಬೇರೆಯಾಗುತ್ತವೆಂಬುದರಲ್ಲಿ ಸಂದೇಹವಿಲ್ಲ.

ಜಾತಿ ಪದ್ಧತಿಯನ್ನು ನಂಬದೆ, ಸರ್ಕಾರ ಸಾಂವಿಧಾನಿಕವಾಗಿ ರಚಿಸಿರುವ ನ್ಯಾಯಾಲಯದ ಮೊರೆ ಹೋಗುವ ಸಮುದಾಯಗಳು ಇವೆ. ಆದರೆ ಕೆಲವೊಂದು ಸಮುದಾಯಗಳು ಇಂದಿಗೂ ಜಾತಿ ಪಂಚಾಯಿತಿಯ ಬಗ್ಗೆ ಗೌರವವನ್ನು ಇಟ್ಟುಕೊಂಡಿವೆ. ಪ್ರತಿಯೊಂದು ಸಮುದಾಯವು ಶಾಂತಿ ಹಾಗೂ ಸುವ್ಯವಸ್ಥೆಯನ್ನು ಕಾಯ್ದುಕೊಂಡು ಹೋಗಲು ತಮ್ಮದೇ ಆದ ಪ್ರತ್ಯೇಕ ನ್ಯಾಯ ಪಂಚಾಯಿತಿಗಳ ವ್ಯವಸ್ಥೆಯನ್ನು ಮಾಡಿಕೊಂಡಿರುವುದಕ್ಕೆ 'ಜಾತಿ ಪಂಚಾಯಿತಿ' ಎಂದು ಕರೆಯುತ್ತಾರೆ. "ಸಮಯೋಚಿತವಾದ ನಿರ್ಣಯಗಳನ್ನು ಕೈಗೊಂಡು ಸಮಾಜದಲ್ಲಿ ಐಕ್ಯತೆಯನ್ನು ಕಾಪಾಡಿಕೊಂಡು ಬರುವುದೇ ಈ ಜಾತಿ ಪಂಚಾಯಿತಿಯ

ಉದ್ದೇಶವಾಗಿರುತ್ತದೆ"[೪೨] ಜಾತಿಗೆ ಸಂಬಂಧಪಟ್ಟ ನಿಯಮಗಳನ್ನು, ಕಟ್ಟು-ಕಟ್ಟಳೆಗಳನ್ನು ಉಲ್ಲಂಘನೆ ಮಾಡಿದರೆ ಅಂಥವರನ್ನು ಶಿಕ್ಷೆಗೆ ಒಳಪಡಿಸುತ್ತಾರೆ.

ಬುಡಕಟ್ಟುಗಳಲ್ಲಿ ಯಾರೇ ಆಗಲಿ ಅವರಿಗೆ ಒಗ್ಗಟ್ಟು ಅತ್ಯವಶ್ಯಕವಾಗಿತ್ತು. ಆದಿ ಮಾನವನ ಸಮೂಹ ಗುಂಪು ಗುಂಪಾಗಿ ಬದುಕುತ್ತಿದ್ದಾಗ ಅವರಿಗೆ ಬೇರೊಂದು ಸಂಗತಿಯ ಭಯ ಇದ್ದೇ ಇರುತ್ತಿತ್ತು. ಆ ಭಯ ಪ್ರಾಣಿ ಸಮೂಹದಿಂದ, ಬೆಂಕಿ ಅಥವಾ ನೀರಿನಿಂದ ಇದ್ದಿರಬಹುದು. ಇದು ಬಿಟ್ಟರೆ ಇನ್ನೊಂದು ಬುಡಕಟ್ಟಿನವರೊಂದಿಗೆ ಬೇಟೆಯ ವಿಷಯದಲ್ಲಿಯೋ, ಹೆಣ್ಣಿನ ವಿಷಯದಲ್ಲಿಯೋ ವೈಮನಸ್ಸು ಬಂದು ಹೊಡೆದಾಡುವ ಸಂದರ್ಭವಿರುತ್ತಿತ್ತು. ಇದಕ್ಕಾಗಿ ಒಂದೊಂದು ಬುಡಕಟ್ಟು ಸಾಕಷ್ಟು ಬಲಯುತವಾಗಿರಬೇಕಾಗಿತ್ತಿತ್ತು"[೪೩] ಆದುದ್ದರಿಂದಲೇ ಇವರಲ್ಲಿ ಒಗ್ಗಟ್ಟು ಇದ್ದುದ್ದು. ಈ ಒಗ್ಗಟ್ಟು ಬರುತ್ತಿದ್ದುದ್ದು ಸೌಹಾರ್ದತೆಯಿಂದ ಕೂಡ. ಒಂದು ವೇಳೆ ಬುಡಕಟ್ಟಿನ ಯಾವುದಾದರೂ ಮನೆತನದಲ್ಲಿ ಜಗಳ, ವ್ಯಾಜ್ಯವಾದರೆ ಅದು ಗುಂಪಿನಿಂದ ಹೊರಗೆ ಹೋಗುವಂತಿಲ್ಲ. ಅಲ್ಲೇ ತೀರ್ಮಾನವಾಗಿ ಬಿಡಬೇಕು. ಎಷ್ಟೇ ದೊಡ್ಡ ಜಗಳ ವ್ಯಾಜ್ಯವಾದರೂ ಬೇರೆಲ್ಲೊ ಇದ್ದಿರಬಹುದಾದ ಅದೇ ಬುಡಕಟ್ಟಿನ ಯಜಮಾನರುಗಳಿಂದ ಆ ವ್ಯಾಜ್ಯ ತೀರ್ಮಾನವಾಗಲೇಬೇಕಿತ್ತು. ಅಲ್ಲದೆ ಬುಡಕಟ್ಟಿನ ಎಲ್ಲ ಸದಸ್ಯರೂ ಪಂಚಾಯ್ತಿ ದೈವದವರ ತೀರ್ಮಾನಗಳಿಗೆ ತಲೆ ಬಾಗಲೇಬೇಕಿತ್ತು. ಈ ನ್ಯಾಯ ವ್ಯವಸ್ಥೆ ಹೀಗೆ ಬುಡಕಟ್ಟುಗಳಲ್ಲಿ ಬಿಗಿ ಇದ್ದುದರಿಂದಲೇ, ಯಾವುದೇ ರೀತಿಯ ಜಗಳ, ಕದನ, ವೈಮನಸ್ಸು ಏರ್ಪಡುತ್ತಿದ್ದುದಕ್ಕೆ ಅವಕಾಶವಿರಲಿಲ್ಲ. ಇದಕ್ಕೆ ಬದಲಾಗಿ ಗ್ರಾಮಗಳ ಪ್ರತಿಯೊಂದು ಜನಗಳ ನಡುವೆ ಹೆಚ್ಚು ಸೌಹಾರ್ದಯುತ ವಾತಾವರಣವಿರುವುದಕ್ಕೆ ಹೆಚ್ಚು ಸಹಕಾರಿಯಾಗುತ್ತಿತ್ತು"[೪೪] ಆದುದ್ದರಿಂದಲೇ ಗ್ರಾಮಗಳಲ್ಲಿ ಪ್ರಶಾಂತ ವಾತಾವರಣ ನಿರ್ಮಾಣವಾಗುತ್ತಿದ್ದುದ್ದು.

ಕುಟುಂಬಗಳ ಸೌಖ್ಯಕ್ಕೆ, ಹಳ್ಳಿಗಳ ಶಾಂತಿಗೆ ತಮ್ಮದೇ ಆದ ನ್ಯಾಯಪರತೆಯನ್ನು ಜನಪದರು ರೂಢಿಸಿಕೊಂಡು ಬಂದಿದ್ದಾರೆ. ಜನ ಶಾಂತಿಯಿಂದ ಬದುಕಬೇಕು ಎಂದರೆ ನೀತಿ-ನಿಯಮಗಳು ಮುಖ್ಯವಾಗಿ ಬೇಕಾಗುತ್ತವೆ. ಹಿಂದೆಲ್ಲ ರಾಜ ಅಥವಾ ಸಂಸ್ಥಾನಿಕರ ಪರವಾಗಿ ಗೌಡನೋ ಪಟೇಲನೋ ಊರಿನ ಆಡಳಿತ ವ್ಯವಸ್ಥೆಯನ್ನು ನಿಯಂತ್ರಿಸುತ್ತಿದ್ದರು. ರಾಜಕೀಯ ಕಟ್ಟಳೆಗಳಿಗಿಂತ ಸಾಮಾಜಿಕ ಕಟ್ಟಳೆಗಳೇ ಗ್ರಾಮೀಣರಿಗೆ ಹೆಚ್ಚು ಮುಖ್ಯವೆನಿಸುತ್ತವೆ. ಕಾನೂನಿನನ್ವಯ ಜಾರಿಗೆ ಬರುವ ಕಟ್ಟಳೆಗಳಿಗಿಂತ ಸಾಮಾಜಿಕ ಕಟ್ಟಳೆಗಳು ಹೆಚ್ಚು ಆತ್ಮೀಯವೆನಿಸುತ್ತವೆ.[೪೫]

ಗ್ರಾಮದ ಪ್ರಮುಖರಾದರೆ ಸಾಮಾಜಿಕ ಕಟ್ಟಳೆಗಳನ್ನು ರಚಿಸುವವರು ಒಂದೇ ಕುಟುಂಬದ ಒಳಜಗಳ, ಎರಡು ಕುಟುಂಬಗಳ ವ್ಯಾಜ್ಯ, ಓಣಿ, ಓಣಿಗಳ ಮಧ್ಯದ ಜಗಳ ಈ

ಎಲ್ಲವುಗಳಿಗೆ ಪರಿಹಾರವನ್ನು ಗ್ರಾಮದ ಪ್ರಮುಖರು ನೀಡುತ್ತಾರೆ. ಇವರು ಕೊಡುವ ನ್ಯಾಯ ಶ್ರೇಷ್ಠವಾಗಿರುತ್ತದೆಂಬ ನಂಬಿಕೆಯಿಂದ, ಇವರು ತೋರುವ ಮಾರ್ಗ ಉದಾತ್ತವಾಗಿರುತ್ತದೆಂಬ ನಂಬಿಕೆಯಿಂದ ಇವರು ಪ್ರತ್ಯಕ್ಷ ದೇವರಿದ್ದಂತೆ. ಇವರಿಗೆ 'ದೈವ'ವೆಂಬ ಹೆಸರು ರೂಢಿಯಲ್ಲಿದೆ. ಒಂದರ್ಥದಲ್ಲಿ ಇವರು ಅಧಿಕೃತ ನ್ಯಾಯಾಧೀಶರು. ಇಬ್ಬರು ಅಥವಾ ಎರಡು ಪಂಗಡದವರು ನ್ಯಾಯಬೇಕಾದರೆ ಅವರಿಬ್ಬರನ್ನು ಕರೆಯಿಸಿ, ಅವರವರ ವಿಚಾರಗಳನ್ನು ಮೊದಲು ಕೇಳಿಕೊಂಡು, ತರುವಾಯ ತಮ್ಮ ತಮ್ಮಲ್ಲಿ ಚರ್ಚಿಸಿ ತಪ್ಪು ಮಾಡಿದವನ ಅಪರಾಧ ಸಾಮಾನ್ಯ ಸ್ವರೂಪದ್ದಾಗಿದ್ದರೆ, ಬಯ್ದು ಬುದ್ಧಿ ಹೇಳಿ ಮನೆಗೆ ಕಳುಹಿಸುವುದು ಸಾಮಾನ್ಯ ಸಂಗತಿ. ತಪ್ಪು ಮನವರಿಕೆಯಾದ ಮೇಲೆ ಹೊಂದಿಕೊಂಡು ಹೋಗುವುದು ಕೆಲವು ದಿನಗಳ ಮಟ್ಟಿಗಾದರೂ ಜನಪದರಿಗೆ ಒಳ್ಳೆಯದೂ ಹೌದು, ಅನಿವಾರ್ಯವೂ ಹೌದು.

ಜಿಲ್ಲೆಯ ಗಂಗಾಮತಸ್ಥರು ತಮ್ಮ ನಡುವಣ ಕಂಡುಬರುವ ಯಾವುದೇ ರೀತಿಯ ಜಗಳ, ವ್ಯಾಜ್ಯ, ತಪ್ಪುಗಳು, ಇವುಗಳಿಗೆ ಅವರೇ ತೀರ್ಮಾನಿಸಿಕೊಳ್ಳುತ್ತಾರೆ. ಈ ಪದ್ಧತಿ ಹಿಂದಿನಿಂದಲೂ ನಡೆದುಕೊಂಡು ಬಂದಿದೆ. ಅದೇ ಸಂಪ್ರದಾಯವನ್ನು ಇಂದಿಗೂ ಉಳಿಸಿಕೊಂಡಿದ್ದಾರೆ. ತಮ್ಮ ಸಮುದಾಯವನ್ನ ನಿಯಂತ್ರಿಸುವ ಮತ್ತು ಸರಿದಾರಿಯಲ್ಲಿ ಕೊಂಡೊಯ್ಯುವ ಶಕ್ತಿ, ನ್ಯಾಯ-ಪಂಚಾಯಿತಿಗಿದೆ. ಎಂಥ ದರ್ಪಿಷ್ಟನಾದ ವ್ಯಕ್ತಿಯೂ ಅದಕ್ಕೆ ತಲೆಬಾಗಲೇಬೇಕು. ಇಲ್ಲವಾದರೆ ಅವನು ನಿಶ್ಚಿಂತೆಯಿಂದ ನಿರಾತಂಕವಾಗಿ ಬಾಳ್ವೆ ನಡೆಸುವುದು ಕಷ್ಟವಾಗುವುದರಿಂದ ಎಲ್ಲರೂ ನ್ಯಾಯ ಪಂಚಾಯಿತಿಗೆ ಬದ್ಧರಾಗಿರಲೇಬೇಕು. ದಕ್ಷಿಣ ಕನ್ನಡದಲ್ಲಿ ಮಂಗಳೂರು ಉಡುಪಿ ಮುಂತಾದ ಕಡೆಗಳಲ್ಲಿ ಗಂಗಾಮತಸ್ಥರನ್ನ ಮೊಗವೀರರು ಎಂದು ಕರೆಯುತ್ತಾರೆ. ಇವರಲ್ಲಿಯೂ ಇಂದಿಗೂ ಸಹ ನ್ಯಾಯ ಪಂಚಾಯಿತಿ ಇದೆ. "ಮೊಗವೀರರ ಸಮಾಜದ ನೀತಿಸಂಹಿತೆಯನ್ನು ಕಾಪಾಡುವವರು ಗುರಿಕಾರರು. ಜಿಲ್ಲೆಯ ಉತ್ತರ ಭಾಗದಲ್ಲಿ ಇವರನ್ನು 'ಬುದ್ವಂತ'ರೆಂದು ಕರೆಯುತ್ತಾರೆ. ಸಮಾಜದ ನೀತಿ ಸಂಹಿತೆಗೆ ತಪ್ಪಿ ನಡೆದವರನ್ನು ಶಿಕ್ಷಿಸುವ ಅಧಿಕಾರ ಇವರಿಗಿದೆ. ಸಮಾಜದ ಒಳಜಗಳಗಳನ್ನು ಇವರು ತೀರಿಸುತ್ತಾರೆ. ಗುರಿಕಾರರು ವಿಧಿಸುವ ಶಿಕ್ಷೆಗಳು ಹೆಚ್ಚಾಗಿ ದಂಡ (fine) ರೂಪದಲ್ಲಿರುತ್ತವೆ. ಅಪರಾಧಿ ಪಶ್ಚಾತ್ತಾಪ ಹೊಂದಿ ಕ್ಷಮಾಯಾಚನೆ ಮಾಡಿದರೆ ಶಿಕ್ಷೆಯ ಪರಿಮಾಣ ಲಘುವಾಗುತ್ತಾ ಹೋಗುತ್ತದೆ. ಒಟ್ಟಿನಲ್ಲಿ, ನ್ಯಾಯ ತೀರ್ಮಾನದ ಉದ್ದೇಶ ಕೇವಲ ಶಿಕ್ಷೆಯಲ್ಲ; ವ್ಯಕ್ತಿಯ ಉತ್ಕರ್ಷ ಮತ್ತು ಸಮಾಜದ ಒಗ್ಗಟ್ಟು ಎಂಬುದು ಇಲ್ಲಿ ಗಮನಾರ್ಹ ವಿಷಯ"[೪೬]

ರಾಜ್ಯದ ವಿವಿಧ ಮೂಲೆಗಳಲ್ಲಿ ವಾಸಿಸುವ, ವಿವಿಧ ಹೆಸರುಗಳಿಂದ ಕರೆಯಿಸಿಕೊಳ್ಳುವ ಗಂಗಾಮತಸ್ಥರಲ್ಲಿ ನ್ಯಾಯ-ಪಂಚಾಯಿತಿ ಇದೆ. ಆದರೆ ಈ ನ್ಯಾಯಪಂಚಾಯಿತಿ ಹಿಂದೆ ಇದ್ದ

ಕಠಿಣ ಶಿಕ್ಷೆಗಳಿಗಿಂತ ಸ್ವಲ್ಪ ಬದಲಾವಣೆಯನ್ನು ಹೊಂದಿದೆ. ಮಂಡ್ಯ ಜಿಲ್ಲೆಯಲ್ಲಿರುವ ಗಂಗಾಮತಸ್ಥ ಸಮುದಾಯದಲ್ಲಿ ಇಂದಿಗೂ ಸಹ ನ್ಯಾಯ ಪಂಚಾಯಿತಿ ಇದೆ. ವ್ಯಕ್ತಿ ಮಾಡಿದ ತಪ್ಪುಗಳಿಗೆ ಅನುಗುಣವಾಗಿ ಶಿಕ್ಷೆಯನ್ನು ವಿಧಿಸಲಾಗುತ್ತದೆ. "ಜಾತಿ ಪಂಚಾಯಿತಿ ಇವರಲ್ಲಿದೆ"[೪೭] ಎಂಬ ಮಾತು ನೂರಕ್ಕೆ ನೂರರಷ್ಟು ಗಂಗಾಮತಸ್ಥರಿಗೆ ಅನ್ವಯಿಸುತ್ತದೆ.

ಗಂಗಾಮತಸ್ಥರು ವಾಸಿಸುವ ಪ್ರತಿ ಗ್ರಾಮದಲ್ಲೂ ಸಾಮಾನ್ಯವಾಗಿ ನ್ಯಾಯ ಪಂಚಾಯಿತಿಯ ವ್ಯವಸ್ಥೆಯಿದೆ. ಗ್ರಾಮದ ವ್ಯವಸ್ಥೆಗೆ ಅನುಗುಣವಾಗಿ ನ್ಯಾಯ ಪಂಚಾಯಿತಿ ಮಾಡುವವರ ಸಂಖ್ಯೆ ನಿರ್ಧಾರವಾಗುತ್ತದೆ. ಒಬ್ಬ ದೊಡ್ಡ ಯಜಮಾನ, ಒಬ್ಬ ಚಿಕ್ಕ ಯಜಮಾನ, ನಾಲ್ಕು ಜನ ಯಜಮಾನರು ಸಾಮಾನ್ಯವಾಗಿ ಗ್ರಾಮೀಣ ಪ್ರದೇಶದಲ್ಲಿ ಕಂಡುಬರುವ ನ್ಯಾಯಪಂಚಾಯಿತಿಯ ವ್ಯವಸ್ಥೆಯಿದು. ದೊಡ್ಡಯಜಮಾನನನ್ನ "ಕುಲದ ಮುಖ್ಯಸ್ಥ" ಅಥವಾ "ಕುಲಸ್ಥ" ಎಂದು ಕರೆಯುತ್ತಾರೆ. ಪಟ್ಟಣ ಪ್ರದೇಶಗಳು ಅಥವಾ ದೊಡ್ಡ ಗ್ರಾಮಗಳಾದರೆ ಒಂದೊಂದು ಕೇರಿಗೂ ಒಬ್ಬೊಬ್ಬ ಯಜಮಾನರು ಇರುತ್ತಾರೆ. ಅಲ್ಲದೆ ಎಲ್ಲಾ ಕೇರಿಗಳಿಗೂ ಒಟ್ಟಾರೆಯಾಗಿ ಒಬ್ಬ ದೊಡ್ಡಯಜಮಾನ, ಒಬ್ಬ ಚಿಕ್ಕಯಜಮಾನರು ಇರುತ್ತಾರೆ. ಉದಾಹರಣೆಯಾಗಿ ಮಳವಳ್ಳಿ ಪಟ್ಟಣದಲ್ಲಿ "ಗಂಗಾಮತಸ್ಥರ ೧೨ ಕೇರಿಗಳಿದ್ದು, ಒಂದೊಂದು ಕೇರಿಗೂ ಒಬ್ಬ ಯಜಮಾನ ಇದ್ದು, ಒಟ್ಟಾರೆಯಾಗಿ ಒಬ್ಬ ಚಿಕ್ಕಯಜಮಾನ, ಒಬ್ಬ ದೊಡ್ಡಯಜಮಾನ ಇದ್ದಾರೆ.[೪೮] ಹೀಗೆ ಗ್ರಾಮಗಳ ಹಾಗೂ ಪಟ್ಟಣಗಳ ಸ್ಥಿತಿ-ಗತಿಗಳಿಗೆ ಅನುಗುಣವಾಗಿ ನ್ಯಾಯ ಪಂಚಾಯಿತಿಯ ಸದಸ್ಯರ ಸಂಖ್ಯೆ ಇರುತ್ತದೆ.

ದೊಡ್ಡಯಜಮಾನ ಅಥವಾ ಕುಲದ ಮುಖ್ಯಸ್ಥ ಹಾಗೂ ಯಜಮಾನರುಗಳು, ಚಿಕ್ಕಯಜಮಾನ, ಇವರು ಕುಲದ ಮನೆ (ಕುಲದ ಚಾವಡಿ)ಯಲ್ಲಿ, ನ್ಯಾಯ ಮಾಡುವ ಸಂದರ್ಭ ಒದಗಿ ಬಂದಾಗ ಎಲ್ಲರೂ ಸೇರಿಕೊಳ್ಳುತ್ತಾರೆ. ದೊಡ್ಡಯಜಮಾನ ತಪ್ಪುಮಾಡಿದವರಿಗೆ ತೀರ್ಪನ್ನು ನೀಡುವುದಕ್ಕೆ ಮೊದಲು ಯಜಮಾನರುಗಳೊಂದಿಗೆ ಚರ್ಚಿಸಿ, ಅಂತಿಮವಾಗಿ ದೊಡ್ಡಯಜಮಾನ ತಪ್ಪಿತಸ್ಥನಿಗೆ ಶಿಕ್ಷೆಯನ್ನ ವಿಧಿಸುತ್ತಾನೆ. ಚಿಕ್ಕಯಜಮಾನನ ಕೆಲಸವೆಂದರೆ, ಕುಲದ ಚಾವಡಿಯ ಮೇಲ್ವಿಚಾರಣೆಯನ್ನು ನೋಡಿಕೊಳ್ಳುವುದು, ತಪ್ಪುಗಳು ಕಂಡುಬಂದಾಗ, ಆ ವಿಷಯವನ್ನು ಕುಲದ ಮುಖ್ಯಸ್ಥನಾದ ದೊಡ್ಡಯಜಮಾನನಿಗೆ ಮತ್ತು ಯಜಮಾನರುಗಳಿಗೆ ತಿಳಿಸುವುದು. ಇಷ್ಟೇ ಅಲ್ಲದೆ ನ್ಯಾಯ-ಪಂಚಾಯಿತಿ ಇರುವ ವಿಚಾರವನ್ನು ತಮಟೆಯ ಮೂಲಕ ಸಾರಿಸುವುದು ಇತ್ಯಾದಿ ಪ್ರಮುಖವಾದ ಕೆಲಸಗಳನ್ನು ಚಿಕ್ಕಯಜಮಾನ ನಿರ್ವಹಿಸುತ್ತಾನೆ. ಪಂಚಾಯಿತಿಯ ದೊಡ್ಡಯಜಮಾನ, ಯಜಮಾನ, ಹಾಗೂ ಚಿಕ್ಕಯಜಮಾನರ ಹುದ್ದೆಗಳೆಲ್ಲವೂ

ವಂಶಪಾರಂಪರ್ಯವಾಗಿ ಬಂದಿರುತ್ತವೆ. ತಂದೆಯ ನಂತರ ಮಗ, ಮಗನ ನಂತರ ಮೊಮ್ಮಗ ಹೀಗೆ ಮುಂದುವರಿದುಕೊಂಡು ಬಂದಿವೆ.

ಪ್ರತಿಯೊಂದು ಗ್ರಾಮದಲ್ಲೂ ನ್ಯಾಯ-ಪಂಚಾಯಿತಿಗಾಗಿ ಕುಲದ ಮನೆ ಇರುತ್ತದೆ. ಇಲ್ಲದಿದ್ದ ಪಕ್ಷದಲ್ಲಿ ಗ್ರಾಮದಲ್ಲಿರುವ ರಾಮಮಂದಿರ ಅಥವಾ ಮಾರಿಗುಡಿಯಲ್ಲಿಯೇ ನ್ಯಾಯ ತೀರ್ಮಾನವನ್ನು ಮಾಡುತ್ತಾರೆ. ಗ್ರಾಮಗಳಲ್ಲಿ ನ್ಯಾಯ-ತೀರ್ಮಾನವಾಗದಿದ್ದ ಸಂದರ್ಭದಲ್ಲಿ ತಾಲ್ಲೂಕು ಮಟ್ಟದಲ್ಲಿರುವ ಅಥವಾ ಪ್ರಮುಖವಾದ ಹೋಬಳಿಗಳಲ್ಲಿರುವ ನ್ಯಾಯ-ಪಂಚಾಯಿತಿಗೆ ಹೋಗುತ್ತಾರೆ. ಇಲ್ಲೆಲ್ಲಾ ನ್ಯಾಯ ತೀರ್ಮಾನವಾಗದಿದ್ದಾಗ, ಮಂಡ್ಯ ಜಿಲ್ಲೆಗೆ ಸಂಬಂಧಿಸಿದ ಅಂತಿಮ ತೀರ್ಮಾನವನ್ನು ನೀಡುವ ಶ್ರೀರಂಗಪಟ್ಟಣ ತಾಲ್ಲೂಕಿನ ಗಂಜಾಂಗೆ ಹೋಗುತ್ತಾರೆ. "ಅಂತಿಮ ತೀರ್ಪನ್ನು ನೀಡುವ ಸ್ಥಳವಾದ ಗಂಜಾಂನಲ್ಲಿರುವ ನ್ಯಾಯ-ಪಂಚಾಯಿತಿಯ ಹೆಸರು "ತಾಯಿಗಡಿ". ಈ ಸ್ಥಳದಲ್ಲಿ ಗಂಗಾಮತಸ್ಥ ಸಮುದಾಯದವರಿಗೆ ಸಂಬಂಧಿಸಿದ ಯಾವುದೇ ಸಮಸ್ಯೆಗಳಿಗೆ ತೀರ್ಪು ನೀಡಲಾಗುವುದು. ಇಪ್ಪತ್ತನಾಲ್ಕು ಗ್ರಾಮಗಳ ಮುಖ್ಯಸ್ಥರು ಇಲ್ಲಿ ಸೇರಿಕೊಳ್ಳುತ್ತಾರೆ. ಇವರಲ್ಲಿಯು ಒಬ್ಬ ದೊಡ್ಡ ಯಜಮಾನ, ಒಬ್ಬ ಚಿಕ್ಕಯಜಮಾನ ಹಾಗೂ ಉಳಿದಂತೆ ಯಜಮಾನರುಗಳು ಇರುತ್ತಾರೆ.[೪೯] ಎಂದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ತಿಳಿಸಿದ್ದಾರೆ. "ತಾಯಿಗಡಿ" ನ್ಯಾಯ ಪಂಚಾಯಿತಿಯಲ್ಲಿ ತಪ್ಪಿಗನುಗುಣವಾಗಿ ಚಿನ್ನದಕಡ್ಡಿ, ಬೆಳ್ಳಿಕಡ್ಡಿಯಲ್ಲಿ ಸುಡುತ್ತಾರೆ. ಇಷ್ಟೇ ಅಲ್ಲದೆ ಬಹಿಷ್ಕಾರ, ಹಣದ ರೂಪದ ದಂಡ, ಜಮೀನಿನ ರೂಪದಲ್ಲೂ ದಂಡವನ್ನು ವಿಧಿಸುತ್ತಾರೆ. ಇಲ್ಲಿ ಕೊಡುವ ತೀರ್ಪನ್ನು ಎಲ್ಲರೂ ಒಪ್ಪಿಕೊಳ್ಳಲೇಬೇಕು. ಇಲ್ಲದಿದ್ದರೆ ಅವರನ್ನು ಕುಲದಿಂದ, ಗ್ರಾಮದಿಂದ ಹೊರಹಾಕುತ್ತಾರೆ. ಜಿಲ್ಲೆಯ ಎಲ್ಲಾ ತಾಲ್ಲೂಕಿನ ತೀರ್ಪಿಗೆ ಘನತೆ ಹೆಚ್ಚು. ಇದು ಗಂಗಾಮತಸ್ಥರಿಗೆ "ಹೈ ಕೋರ್ಟ್" ಇದ್ದಂತೆ. ತಮ್ಮ ದೇವತೆಗಳ ಬಗ್ಗೆ ಎಷ್ಟು ನಂಬಿಕೆಯನ್ನು ಇಟ್ಟುಕೊಂಡಿದ್ದಾರೋ, ಅಷ್ಟೇ ನಂಬಿಕೆಯನ್ನ 'ತಾಯಿಗಡಿ'ಯಿಂದ ಹೊರ ಬೀಳುವ ತೀರ್ಪನ್ನು ಒಪ್ಪಿಕೊಂಡು, ಗೌರವಿಸುತ್ತಾರೆ.

## ನ್ಯಾಯ ಪದ್ಧತಿ ಮತ್ತು ಶಿಕ್ಷೆ

ಗಂಗಾಮತಸ್ಥ ಸಮುದಾಯದವರು ಕುಲದ ಮನೆ ಅಥವಾ ಮಾರಿಗುಡಿ, ರಾಮಮಂದಿರದಲ್ಲಿ ಎಲ್ಲರೂ ನಿಗಧಿತ ಸಮಯಕ್ಕೆ ಸೇರುತ್ತಾರೆ. ದೊಡ್ಡಯಜಮಾನ, ಯಜಮಾನರು ಎತ್ತರದ ಕಟ್ಟೆಯ ಮೇಲೆ ಕುಳಿತುಕೊಂಡಿರುತ್ತಾರೆ. ಅವರ ಎದುರಿಗೆ ಸಮುದಾಯದವರೆಲ್ಲ ಕುಳಿತಿದ್ದು, ಚಿಕ್ಕಯಜಮಾನನು ಫಿರ್ಯಾದು ಬಂದ ವಿಷಯವನ್ನು ಎಲ್ಲರ ಮುಂದೆಯು ಜೋರಾಗಿ ಕೂಗಿ ಹೇಳುತ್ತಾನೆ. ನಂತರ ಫಿರ್ಯಾದು ಕೊಟ್ಟವನು ಬಲಗಡೆ ಮತ್ತು

ಅಪರಾಧಿ ಸ್ಥಾನದಲ್ಲಿರುವವನು ಎಡಗಡೆ ನಿಂತಿರುತ್ತಾನೆ. ಅಪರಾಧ ಸಾಬೀತಾದರೆ, ಅಪರಾಧಕ್ಕೆ ತಕ್ಕಂತೆ ಶಿಕ್ಷೆಯ ಪ್ರಮಾಣ ಬೇರೆಬೇರೆಯಾಗುತ್ತದೆ. ಅಪರಾಧಿಯು ಕೊಡುವ ದಂಡ ಹಣದ ರೂಪದಲ್ಲಿ, ಧಾನ್ಯಗಳ ರೂಪದಲ್ಲಿ, ಆಸ್ತಿಯ ರೂಪದಲ್ಲಿ ಇಲ್ಲವೇ ಕುಲದಿಂದ ಬಹಿಷ್ಕಾರ ಹಾಕುವ ರೂಪದಲ್ಲಿರುತ್ತದೆ. ಅಪರಾಧಗಳಿಗೆ ಅನುಗುಣವಾಗಿ, ಒಂದೊಂದು ರೀತಿಯ ಶಿಕ್ಷೆಗಳನ್ನು ವಿಧಿಸುತ್ತಾರೆ. ತಪ್ಪು-ಕ್ರೂರವಾಗಿದ್ದರೆ ಶಿಕ್ಷೆಯು ಸಹ ಕಠಿಣವಾಗಿರುತ್ತದೆ. ಇವರೇ ಹೇಳುವಂತೆ ಸಾಮಾನ್ಯವಾಗಿ ಪೋಲಿಸ್ ಠಾಣೆಯವರೆಗೆ ತಮ್ಮ ರಗಳೆಯನ್ನ ತೆಗೆದುಕೊಂಡು ಹೋಗುವುದಿಲ್ಲ. ಕಾರಣವೆಂದರೆ ಪೋಲಿಸರನ್ನು ಕಂಡರೆ ಭಯ ಎಂಬ ಅಭಿಪ್ರಾಯವನ್ನು ಸಹ ಹೊಂದಿದ್ದಾರೆ. ಆದರೆ ಇತ್ತೀಚಿನ ದಿನಗಳಲ್ಲಿ ಕೆಲವರು ಪೋಲಿಸ್ ಠಾಣೆಯ ಮೆಟ್ಟಿಲನ್ನು ಏರಿರುವ ಸನ್ನಿವೇಶಗಳು ಇವೆ. ಆದರೆ ಏನೇ ಆಗಲಿ ಗಂಗಾಮತಸ್ಥರು ತಮ್ಮ ಕುಲದ ಪಂಚಾಯಿತಿಯ ಬಗ್ಗೆ ಅಪಾರವಾದ ಗೌರವವನ್ನು ಇಟ್ಟುಕೊಂಡಿದ್ದಾರೆ.

**ಚಪ್ಪಲಿಯಲ್ಲಿ ಹೊಡೆದಾಡಿಕೊಂಡಾಗ** : ಗಂಗಾಮತಸ್ಥ ಸಮುದಾಯದಲ್ಲಿ ಚಪ್ಪಲಿ (ಮೆಟ್ಟು)ಯಲ್ಲಿ ಹೊಡೆದಾಡುವುದು ದೊಡ್ಡ ಅಪರಾಧ, ಪಾಪ ಮತ್ತು ಮೈಲಿಗೆಯಾಗಿದೆ. ಇದು ಅಪರಾಧಗಳಲ್ಲೆ ದೊಡ್ಡ ಪ್ರಮಾಣದ ಅಪರಾಧ. ಈಗಲೂ ಮೆಟ್ಟಿನಲ್ಲಿ ಹೊಡೆದವನನ್ನೂ, ಹೊಡೆಸಿಕೊಂಡವನನ್ನೂ ಕುಲದಿಂದ ಹೊರಗೆ ಹಾಕುವುದುಂಟು. ಚಪ್ಪಲಿಯಲ್ಲಿ ಹೊಡೆದಾಡಿದವರಿಬ್ಬರು "ಕುಲಸಿದ್ಧಿ"ಯನ್ನು ಮಾಡಿಸಿಕೊಳ್ಳಬೇಕು. ಇಲ್ಲದಿದ್ದರೆ ಕುಲದವರು ಬಹಿಷ್ಕಾರ ಹಾಕಿದರೆ ಜಾತಿ-ಬಾಂಧವರು ಕಾರ್ಯಗಳಲ್ಲಿ ಪ್ರವೇಶ ಕೊಡುವುದಿಲ್ಲ. ಊರವರು ಹಾಕುವ ಬಹಿಷ್ಕಾರ ಇನ್ನೂ ತೀಕ್ಷ್ಣವಾಗಿದ್ದು ಬಹಿಷ್ಕೃತಗೊಂಡವರಿಗೆ ಇಡೀ ಗ್ರಾಮದಲ್ಲೇ ಯಾರು ಬೆಂಕಿ ನೀರು ಕೊಡುವುದಿಲ್ಲ. ವಿಶೇಷವೆಂದರೆ ಇದನ್ನು ಮೀರಿ ಅವರಿಗೆ ಯಾರಾದರೂ ಸಹಾಯ ಮಾಡಿದರೆ ಇವರಿಗೂ ಬಹಿಷ್ಕಾರ ಹಾಕಬಹುದು. ಹೀಗಾಗಿ ಯಾರೂ ಬೆಂಕಿ-ನೀರು ಕೊಡುವುದಿಲ್ಲ ಈ ಸಂದರ್ಭದಲ್ಲಿ ಅಪರಾಧಿಗೆ ಕುಲಸಿದ್ಧಿಯೊಂದೇ ದಾರಿ.

ಚಪ್ಪಲಿಯಲ್ಲಿ ಹೊಡೆದಾಡಿದ ಇಬ್ಬರು ಕುಲದ ಯಜಮಾನನಿಗೆ ತಿಳಿಸಿ, ಯಾವ ದಿನ ಕುಲಸಿದ್ಧಿಯನ್ನು ಮಾಡಿಸಿಕೊಳ್ಳುತ್ತೇವೆಂದು ಹೇಳಬೇಕು. 'ಕುಲಸಿದ್ಧಿ' ಎಂದರೆ ಮೊದಲು ತಲೆಯನ್ನು ಬೋಳಿಸಿಕೊಳ್ಳಬೇಕು. ಸೀಗೆಕಾಯಿ, ಅರಿಸಿನ, ಹಸುವಿನ ಗಂಜಲ ಹಾಕಿದ ನೀರಿನಿಂದ ಸ್ನಾನಮ್ಾಡಬೇಕು. ಸೀಗೆಕಾಯಿ, ಹಸುವಿನಗಂಜಲವನ್ನು ಸ್ವಲ್ಪ ನುಂಗಬೇಕು. ಇದಾದ ನಂತರದಲ್ಲಿ 'ಮರಿ'ಯನ್ನ ಅಥವಾ ಕೋಳಿಯನ್ನು ಕೂಯ್ಯಬೇಕು. ಮಾಂಸದ ಅಡುಗೆಯನ್ನ ಸಿದ್ಧಪಡಿಸಬೇಕು. ದೊಡ್ಡಯಜಮಾನ, ಯಜಮಾನರುಗಳು ಹಾಗೂ ಚಿಕ್ಕಯಜಮಾನರುಗಳು ಬಂದು ೨೪

ವೀಳ್ಯವನ್ನು ತಿದ್ದುತ್ತಾರೆ. ದೊಡ್ಡಯಜಮಾನನಿಗೆ ಪಂಚೆ, ಟವಲ್, ಅಕ್ಕಿ-ಬೆಲ್ಲ, ಕಾಯಿ, ಬಾಳೆಹಣ್ಣು ಇದರ ಜೊತೆಗೆ ೧೦೧ ರೂ. ಕಾಣಿಕೆಯನ್ನ ವೀಳ್ಯದಲ್ಲಿ ಇಟ್ಟುಕೊಡಬೇಕು. ಉಳಿದವರಿಗೆ ವೀಳ್ಯದಲ್ಲಿ ಐದು ಕಾಲು ರೂ.ಗಳನ್ನಿಟ್ಟು, ಬಾಳೆಹಣ್ಣಿನ ಜೊತೆಗೆ ಕೊಡಬೇಕು. ಚಪ್ಪಲಿಯಲ್ಲಿ ಹೊಡೆಸಿಕೊಂಡಾತ ದೊಡ್ಡಯಜಮಾನ ಹಾಗೂ ಇತರ ಯಜಮಾನರುಗಳ ಕಾಲಿಗೆ ಬಿದ್ದು ನಮಸ್ಕರಿಸಬೇಕು. ಆ ಸಂದರ್ಭದಲ್ಲಿ ದೊಡ್ಡಯಜಮಾನ ಉಬತ್ತಿ ಗಟ್ಟಿಯಿಂದ ತನ್ನ ಕೈಯ ಮೂರು ಬೆರಳುಗಳಿಗೆ ಬಳಿದುಕೊಂಡು ಆತನ ಹಣೆಗೆ ಬಳಿಯುತ್ತಾನೆ. ಆ ಸಂದರ್ಭದಲ್ಲಿ ದೊಡ್ಡಯಜಮಾನ ಬುಡ್ತು, ಬುಡ್ತು, ಬುಡ್ತು, ಹತ್ತೂವರೆ ಸಾವಿರ ಬುಡ್ತು ಎಂದು ಹೇಳುತ್ತಾನೆ. ಇದೇ ರೀತಿಯಲ್ಲಿ ಚಪ್ಪಲಿಯಲ್ಲಿ ಹೊಡೆಸಿಕೊಂಡಾತನೂ ಹೇಳಬೇಕು. ಇದನ್ನೇ ಕುಲಸಿದ್ಧಿ ಎಂದು ಕರೆಯುತ್ತಾರೆ.

ಕುಲಸಿದ್ಧಿಯನ್ನು ನಂತರದಲ್ಲಿ ಕುಲದ ಯಜಮಾನರೆಲ್ಲರೂ ಊಟ ಮಾಡುತ್ತಾರೆ. ಕೋಳಿ ಅಥವಾ ಮೇಕೆಯನ್ನು ಕೊಯ್ಯಬೇಕು. ಇಷ್ಟೇ ಅಲ್ಲದೆ ಅಕ್ಕ-ಪಕ್ಕ ಮನೆಯವರನ್ನು ಊಟಕ್ಕೆ ಕರೆದು ಊಟ ಹಾಕುತ್ತಾರೆ. ಎಲ್ಲರು ಉಂಡು ಬಿಟ್ಟ ಎಂಜಲೆಲೆಯನ್ನು ಚಪ್ಪಲಿಯಲ್ಲಿ ಹೊಡೆದಾಡಿದವರೇ ಎತ್ತಿಕೊಂಡು ಹೊರಗೆ ಹಾಕಬೇಕು. ಇದಿಷ್ಟಲ್ಲದೆ ಚಪ್ಪಲಿಯಲ್ಲಿ ಹೊಡೆದಾಡಿದ ವ್ಯಕ್ತಿಗಳಿಬ್ಬರಲ್ಲಿ ಯಾರದು ಹೆಚ್ಚಿನದು ತಪ್ಪಾಗಿರುತ್ತದೆ ಅವರಿಗೆ ೫೦೧ ರೂ.ಗಳ ದಂಡ ವಿಧಿಸಲಾಗುತ್ತದೆ. ಈ ರೀತಿ ಬಂದಂತಹ ಹಣವನ್ನು ಕುಲದ ದೇವರ ಕಾರ್ಯಕ್ಕೆ ಉಪಯೋಗಿಸುತ್ತಾರೆ. ಚಪ್ಪಲಿಯಲ್ಲಿ ಹೊಡೆದವ ಮತ್ತು ಹೊಡೆಸಿಕೊಂಡವರಿಬ್ಬರೂ ಕುಲಸಿದ್ಧಿಯನ್ನು ಮಾಡಿಸಿಕೊಳ್ಳಬೇಕಾದ್ದು ಕಡ್ಡಾಯ. ಯಾವುದೇ ರೀತಿಯ ನಿಷ್ಪಕ್ಷಪಾತವನ್ನು ಕುಲಸ್ಥರು ತೋರದೆ ಎಲ್ಲರಿಗೂ ಸಮನಾದ ರೀತಿಯಲ್ಲಿ ಕುಲಸಿದ್ಧಿಯನ್ನು ಮಾಡಿಸುವ ಅವರ ಪ್ರಾಮಾಣಿಕತೆಯನ್ನು ತೋರಿಸುತ್ತದೆ.

**ಒಳಜಗಳಗಳು :** ಊರು-ಕೇರಿ ಅಂದಾಗ ಕೆಲವು ಸಂದರ್ಭದಲ್ಲಿ ವಿಚಾರಗಳ ವಿನಿಮಯ, ಚರ್ಚೆ ಮತ್ತು ಮಾತುಗಳ ಮಧ್ಯೆ ಘರ್ಷಣೆಯಾಗಿ ಇವರಲ್ಲಿಯೇ ಹೊಡೆದಾಟಗಳಾಗುತ್ತವೆ. ಈ ರೀತಿಯ ಒಳ ಜಗಳಗಳಿಂದ ಅನ್ಯಾಯಕ್ಕೆ ಒಳಗಾದ ವ್ಯಕ್ತಿ ಕುಲದ ಚಿಕ್ಕಯಜಮಾನನಿಗೆ ದೂರನ್ನು ಸಲ್ಲಿಸುತ್ತಾನೆ. ಮುಂದೆ ನಿಗಧಿತ ಸಮಯದಂತೆ ನ್ಯಾಯದ ಕಟ್ಟೆಗೆ ಸಭೆಯನ್ನು ಸೇರಿಸಲಾಗುವುದು. ಜಗಳವಾಡಿದ ಪರ ವಿರೋಧಿ ವ್ಯಕ್ತಿಗಳನ್ನು ಕರೆಸಿ, ಎರಡೂ ಕಡೆಗಳಲ್ಲಿ ನಿಲ್ಲಿಸಲಾಗುವುದು. ಇವರಿಬ್ಬರು ಜಗಳವಾಡಿದ್ದನ್ನು ಪ್ರತ್ಯಕ್ಷವಾಗಿ ನೋಡಿದ ಸಾಕ್ಷಿಯನ್ನು ಪರಿಶೀಲಿಸಿ ನ್ಯಾಯ ನಿರ್ಣಯವನ್ನು ಮಾಡುತ್ತಾರೆ. ಈ ಸಂದರ್ಭದಲ್ಲಿ ಜಗಳವಾಡಿದ ಮತ್ತು ಸಾಕ್ಷಿಗಳು ಇವರುಗಳನ್ನ ದೇವರ ಮೇಲೆ ಪ್ರಮಾಣ ಮಾಡಿಸುವುದುಂಟು.

ಸಾಕ್ಷಿಯನ್ನು ಹೇಳುವವರು ಜಗಳವಾಡಿರುವವರಿಗೆ ಸಂಬಂಧಿಗಳಾಗಿರಬಾರದು. ಎರಡು ಕಡೆ ಇರುವ ವ್ಯಕ್ತಿಗಳ ಗುಣಾವಗುಣಗಳ ಸ್ವಭಾವದ ಮೇಲೆಯೂ ನ್ಯಾಯ ತೀರ್ಮಾನ ಮಾಡಲಾಗುತ್ತದೆ. ತೀರ್ಪನ್ನು ನೀಡುವುದಕ್ಕೆ ಮೊದಲು ದೊಡ್ಡಯಜಮಾನ ಮತ್ತು ಯಜಮಾನರುಗಳು ಯೋಚಿಸಿ ಎಲ್ಲರು ಒಂದು ತೀರ್ಮಾನಕ್ಕೆ ಬಂದು ಅಂತಿಮವಾಗಿ ದೊಡ್ಡಯಜಮಾನ ತೀರ್ಪನ್ನು ನೀಡುತ್ತಾನೆ. ಅನ್ಯಾಯಕ್ಕೆ ಒಳಗಾಗಿರುವ ವ್ಯಕ್ತಿಗೆ ತೊಂದರೆಯುಂಟಾಗಿದ್ದರೆ, ಆ ತೊಂದರೆಗೆ ಸರಿ ಹೊಂದುವಂತೆ ತಪ್ಪಿತಸ್ಥನಿಗೆ ದಂಡ ವಿಧಿಸಲಾಗುವುದು. ಅನ್ಯಾಯಕ್ಕೆ ಒಳಗಾದ ವ್ಯಕ್ತಿಗೇನಾದರೂ ಗಾಯಗಳಾಗಿದ್ದು, ಆಸ್ಪತ್ರೆಗೆ ತೋರಿಸಬೇಕಾಗಿದ್ದರೆ, ಆ ಖರ್ಚು-ವೆಚ್ಚಗಳನ್ನೆಲ್ಲಾ ತಪ್ಪಿತಸ್ಥ ಭರಿಸಬೇಕಾಗುತ್ತದೆ. ನಷ್ಟ ಉಂಟಾಗಿದ್ದರೆ ಆ ನಷ್ಟವನ್ನು ತಪ್ಪಿತಸ್ಥ ಭರಿಸಲೇಬೇಕು. ಇಲ್ಲವೆ ತೊಂದರೆಗನುಗುಣವಾಗಿ ಕುಲಸ್ಥರು ೫೦೦ ರೂ.ಗಳಿಂದ ೫೦೦೦ ರೂ.ಗಳವರೆವಿಗೂ ಪರಿಹಾರ ಧನವನ್ನು ಕೊಡಿಸುತ್ತಾರೆ. ಕೆಲವು ಬಾರಿ ಇಬ್ಬರಿಗೂ ತೊಂದರೆಗಳಾಗಿದ್ದಾಗ ಇಬ್ಬರಿಗೂ ದಂಡ ವಿಧಿಸಲಾಗುತ್ತದೆ. ದಂಡ ೧೦೦ ರೂ.ಗಳಿಂದ ೫೦೦ ರೂ.ಗಳವರೆವಿಗೂ ಇರುತ್ತದೆ. ಈ ಹಣವನ್ನು ದೇವರುಗಳ ಅಥವಾ ಕುಲದ ಖರ್ಚಿಗೆ ಬಳಸಿಕೊಳ್ಳಲಾಗುವುದು.

**ದಾಯಾದಿಗಳ ಜಗಳ** : ಒಂದೇ ಕುಟುಂಬದ ದಾಯಾದಿಗಳಲ್ಲಿ ಆಸ್ತಿ ವಿಷಯವಾಗಿಯಾದರೋ ಅಥವಾ ಕ್ಷುಲ್ಲಕ ಕಾರಣಗಳಿಂದಾಗಿ ದಾಯಾದಿಗಳಲ್ಲೆ ಜಗಳವಾದಾಗ, ಅವರು ನ್ಯಾಯದ ಕಟ್ಟೆಗೆ ಬಂದಾಗ ಆ ವಿಚಾರವಾಗಿ ವಾದ-ವಿವಾದಗಳನ್ನು ಪರಿಶೀಲಿಸಿ ತೀರ್ಪು ನೀಡುತ್ತಾರೆ. ಸಾಮಾನ್ಯವಾಗಿ ಆಸ್ತಿ ವಿಭಜನೆಗಾಗಿ ಫಿರ್ಯಾದಿ ಬಂದಾಗ ದಾಯಾದಿಗಳಿಗೆ ನ್ಯಾಯದ ಕಟ್ಟೆಯ ದೊಡ್ಡಯಜಮಾನರು ರಾಜಿ ಮಾಡುವ ಕಾರ್ಯ ಮಾಡುತ್ತಾರೆ. ಇದಕ್ಕೂ ಮೀರಿದರೆ ಆಸ್ತಿ ವಿಭಜನೆ ಮಾಡುತ್ತಾರೆ. ಮೀನನ್ನು ಸಾಕಿರುವ ಕೆರೆ-ಕಟ್ಟೆಗಳಿಗೆ ಸಂಬಂಧಿಸಿದಂತೆ, ಬಲೆಯ ವಿಚಾರಕ್ಕೆ ಸಂಬಂಧಿಸಿದಂತೆ, ವ್ಯಾಪಾರ-ವ್ಯವಹಾರಗಳಿಗೆ ಸಂಬಂಧಿಸಿದಂತೆ, ಕೂಲಿಯ ವಿಷಯದಲ್ಲಿ ವ್ಯತ್ಯಾಸವಾದ ಸಂದರ್ಭದಲ್ಲೂ ಸಂಬಂಧಿಕರಲ್ಲೆ ಜಗಳವಾಗುವುದುಂಟು. ಅತ್ತೆ-ಸೊಸೆಯ ಜಗಳ, ಅತ್ತಿಗೆ-ನಾದಿನಿಯರ ಜಗಳ, ಅಣ್ಣ-ತಮ್ಮಂದಿರ ಜಗಳ ಮುಂತಾದವುಗಳು ಕೂಡ ಕಟಕಟ್ಟೆಯಲ್ಲಿ ಬರುತ್ತವೆ.

ಜಗಳದ ಸ್ವರೂಪವನ್ನು ಅನುಸರಿಸಿ ತೀರ್ಮಾನವನ್ನ ಕೊಡುತ್ತಾರೆ. ಅತ್ತೆ-ಸೊಸೆ, ಅತ್ತಿಗೆ-ನಾದಿನಿ, ಅಣ್ಣ-ತಮ್ಮಂದಿರು ಜಗಳವಾಡಿದ್ದಾಗ ಬುದ್ಧಿವಾದವನ್ನು ಹೇಳಿ, ಅನುಸರಿಸಿಕೊಂಡು ಹೋಗುವಂತೆ ಹೇಳಲಾಗುತ್ತದೆ. ಕೇಳದಿದ್ದ ಸಂದರ್ಭದಲ್ಲಿ ಮನೆಯನ್ನು ಭಾಗಮಾಡಿ, ಬೇರೆ

ಬೇರೆ ಅಡುಗೆ ಮಾಡಿ ಊಟ ಮಾಡುವಂತೆ ಸೂಚಿಸುತ್ತಾರೆ. ಸಾಮಾನ್ಯವಾಗಿ ದಾಯಾದಿಗಳು ಜಗಳವಾಡಿದ ಸಂದರ್ಭದಲ್ಲಿ ದಂಡ ವಿಧಿಸುವುದು ಕಡಿಮೆ.

**ಜಮೀನಿನ ತಕರಾರು :** ಗಂಗಾಮತಸ್ಥರಿಗೆ ಜಮೀನಿರುವುದೇ ಕಡಿಮೆ. ಇಂಥ ಪರಿಸ್ಥಿತಿಯಲ್ಲೂ ಜಮೀನಿನ ಒತ್ತುವರಿಗೆ ಸಂಬಂಧಿಸಿದಂತೆ ತಕರಾರುಗಳು ಬರುತ್ತವೆ. ಅಕ್ಕ-ಪಕ್ಕದ ಜಮೀನು ತಕರಾರು ಬಂದಾಗ ನ್ಯಾಯದ ತೀರ್ಮಾನಕ್ಕೆ ಕುಲದ ಚಾವಡಿಯಲ್ಲಿ ಎಲ್ಲರು ಸೇರಿಕೊಳ್ಳುತ್ತಾರೆ. ಈ ಸಭೆಗೆ ಜಮೀನಿರುವ ಅಕ್ಕ-ಪಕ್ಕದವರಿಬ್ಬರನ್ನು ಕರೆಸಲಾಗುವುದು. ಇಲ್ಲಿ ನ್ಯಾಯದ ಪರ-ವಿರೋಧವನ್ನು ಅನುಲಕ್ಷಿಸಿ ತೀರ್ಪನ್ನು ಕೊಡಲಾಗುವುದು. ಕೆಲವು ಸಂದರ್ಭದಲ್ಲಿ ದೊಡ್ಡಯಜಮಾನ, ಯಜಮಾನರೆಲ್ಲರೂ ತಕರಾರು ಆಗಿರುವ ಜಮೀನಿನ ಹತ್ತಿರಕ್ಕೆ ಹೋಗಿ, ಪರಿಶೀಲಿಸಿ, ಅವರ ಆಸ್ತಿಯ ವಿವರವನ್ನು ನೋಡಿ, ಜಮೀನಿನ ಅಳತೆಯನ್ನು ಮೋಜಣಿದಾರರಿಂದ ಅಳತೆ ಮಾಡಿಸಿ, ಸರಿಯಾದ ರೀತಿಯ ಗುರುತು ಹಾಕಿ, ಕಲ್ಲನ್ನು ನೆಡಸುವುದುಂಟು. ತಪ್ಪು ಮಾಡಿರುವವನಿಗೆ ೫೦೧ ರೂ.ಗಳ ದಂಡವನ್ನು ವಿಧಿಸಲಾಗುವುದು. ಇಂಥ ತಕರಾರುಗಳು ಬರುವುದು ಬಹಳ ಕಡಿಮೆ. ಕಾರಣ ಗಂಗಾಮತಸ್ಥರಲ್ಲಿ ಜಮೀನನ್ನು ಹೊಂದಿರುವವರೇ ವಿರಳ. ಅಪ್ಪು ಮೀರಿ ಬಂದರು ಕೋರ್ಟಿಗೂ ಕೆಲವರು ಹೋಗುತ್ತಿರುವುದನ್ನು ಇಂದಿನ ದಿನಗಳಲ್ಲಿ ನೋಡಬಹುದಾಗಿದೆ.

**ಕಳ್ಳತನ ಮಾಡಿದಾಗ :** ಸಮಾಜದಲ್ಲಿ ಕಳ್ಳತನ ಮಾಡುವವರನ್ನ ತುಂಬ ಕೆಟ್ಟ ವ್ಯಕ್ತಿಗಳ ಸಾಲಿನಲ್ಲಿ ಸೇರಿಸುತ್ತಾರೆ. ಕಳ್ಳತನ ಮಾಡಿದವನು ಸಿಕ್ಕಿ ಹಾಕಿಕೊಂಡರೇ, ಅವನಿಗೆ ದಂಡವನ್ನು ವಿಧಿಸಲಾಗುತ್ತದೆ. ಕಳ್ಳತನವಾದ ಮನೆಯವರಿಗೆ ಪರಿಹಾರವನ್ನು ಕಳ್ಳನು ಕೊಡಬೇಕಾಗುತ್ತದೆ. ಕಳ್ಳತನವಾದ ಮನೆಯಿಂದ ಕದ್ದ ವಸ್ತುಗಳನ್ನು ವಾಪಸ್ಸು ಕೊಡಬೇಕು. ಇದರೊಂದಿಗೆ ಕುಲಸ್ಥರು ವಿಧಿಸುವ ಶಿಕ್ಷೆಯನ್ನು ಅನುಭವಿಸಬೇಕು. ಕಳ್ಳತನದ ವಸ್ತುಗಳನ್ನು ವಾಪಸ್ಸು ಕೊಡದಿದ್ದ ಸಂದರ್ಭದಲ್ಲಿ ಕಳ್ಳತನವಾದ ಮನೆಯ ಒಡೆಯ ಹೇಳುವ ಆಧಾರದ ಮೇಲೆ ಕಳವಾದ ವಸ್ತುವಿನ ಬೆಲೆಯನ್ನು ಕಳ್ಳ ಕಟ್ಟಿಕೊಡಬೇಕು. ಇಲ್ಲವಾದ ಪಕ್ಷದಲ್ಲಿ ಕಳ್ಳನ ಮನೆಯ ವಸ್ತುಗಳನ್ನ ಹರಾಜು ಹಾಕಿಸಲಾಗುವುದು. ಕಳ್ಳನ ಮನೆಯಲ್ಲಿ ವಸ್ತುಗಳು ಏನು ಸಿಗದಿದ್ದಾಗ, ಕುಲಸ್ಥರು ಹೇಳಿದವರ ಮನೆಯಲ್ಲಿ ಜೀತವನ್ನು ಮಾಡಬೇಕು.

ಕಳ್ಳತನ ಮಾಡಿದವರು ನಮ್ಮ ಕುಲಕ್ಕೆ ಕಂಟಕ ಎಂಬ ಭಾವನೆ ಇವರದು. ಆದುದ್ದರಿಂದ ಇವರ ತಲೆಯನ್ನು ಬೋಳಿಸಿ ನಾಮ ಹಾಕಿ, ಕತ್ತೆಯ ಮೇಲೆ ತಮ್ಮ ಕೇರಿಯುದ್ದಕ್ಕೂ ಮೆರವಣಿಗೆ

ಮಾಡುತ್ತಿದ್ದುಂಟು. ಅಲ್ಲದೆ ಕಳ್ಳತನ ಮಾಡಿದ ಕೈಗಳಿಗೆ ಚಿನ್ನದ ಕಡ್ಡಿ, ಬೆಳ್ಳಿಕಡ್ಡಿಗಳಿಂದ ಸುಡಲಾಗುತ್ತಿತ್ತು. ನಂತರ ಆತನನ್ನು ತಮ್ಮ ಗ್ರಾಮದಲ್ಲಿ ಉತ್ತಮ ವ್ಯಕ್ತಿಯಾಗಿ ಬಾಳುವಂತೆ ಬುದ್ಧಿವಾದವನ್ನು ಹೇಳುತ್ತಿದ್ದರು. ಮತ್ತೆ ಆತ ಕಳ್ಳತನವನ್ನು ಮಾಡಿದರೆ ಊರಿನಿಂದ ಬಹಿಷ್ಕಾರವನ್ನು ಹಾಕುತ್ತಿದ್ದರು. ಆದರೆ ಇಂದು ಗಂಗಾಮತಸ್ಥರಲ್ಲಿ ಕಳ್ಳತನ ಮಾಡುವವರು ಅಷ್ಟಾಗಿ ಕಂಡುಬರುತ್ತಿಲ್ಲ. ಕಳ್ಳತನ ಮಾಡಿದವರನ್ನು ಪೋಲಿಸರಿಗೆ ಒಪ್ಪಿಸಿ ಬಿಡುತ್ತಾರೆ. ಕಳ್ಳತನ ಮಾಡಿದವನಿಗೆ ಯಾವುದೇ ಅನುಕಂಪವನ್ನ ತೋರದೆ ತಕ್ಕುದಾದ ಶಿಕ್ಷೆಯನ್ನ ವಿಧಿಸಲಾಗುತ್ತಿತ್ತು.

**ಕೊಲೆ ಮಾಡಿದಾಗ** : ಗಂಗಾಮತಸ್ಥ ಸಮುದಾಯದಲ್ಲಿ ಕೊಲೆಯಂತಹ ಘೋರ ಘಟನೆಗಳು ಸಂಭವಿಸಿದಾಗ, ಕೊಲೆ ಮಾಡಿದ ವ್ಯಕ್ತಿಯನ್ನು ವಿಚಾರಣೆ ಮಾಡಿ ಶಿಕ್ಷೆಯನ್ನ ವಿಧಿಸುತ್ತಾರೆ. ಗಂಡ ಹೆಂಡತಿಯನ್ನು ಕೊಲೆ ಮಾಡಿದಾಗ, ಆತನ ಆಸ್ತಿ, ಮನೆಯನ್ನ ಇರುವ ಮಕ್ಕಳ ಹೆಸರಿಗೆ ಬರೆದುಕೊಡಬೇಕಾಗುತ್ತದೆ. ಕೆಲವು ಸಂದರ್ಭದಲ್ಲಿ ಚಡಿ ಏಟುಗಳು ಕೂಡ ಬೀಳುತ್ತವೆ. ಅಲ್ಲದೆ ಆತ ಒಂದುವರ್ಷ ತುಂಬುವವರೆಗೆ ಬೇರೆ ಹೆಣ್ಣಿನ ಜೊತೆ ವಿವಾಹವಾಗಬಾರದು. ಈ ರೀತಿ ಕೊಲೆ ಮಾಡಿದ ವ್ಯಕ್ತಿಯನ್ನು ಯಾವುದೇ ಶುಭಕಾರ್ಯಗಳಿಗೆ ಕರೆಯುವುದಿಲ್ಲ. ಈತನನ್ನ ಸಮುದಾಯದವರೆಲ್ಲಾ ಕೆಟ್ಟ ದೃಷ್ಟಿಯಿಂದಲೇ ನೋಡುತ್ತಾರೆ. ಅಲ್ಲದೆ ಈ ವ್ಯಕ್ತಿಯು ದಂಡವಾಗಿ ೧೦೦೦ ರೂ.ಗಳಿಂದ ೫೦೦೦ ರೂ.ಗಳವರೆಗೂ ಕುಲಕ್ಕೆ ಕಟ್ಟಬೇಕಾಗುತ್ತದೆ. ಈ ಹಣವನ್ನು ದೇವತಾ ಕಾರ್ಯಗಳಿಗೆ, ದೇವಸ್ಥಾನದ ಅಭಿವೃದ್ಧಿಗೆ ಬಳಸಿಕೊಳ್ಳಲಾಗುತ್ತದೆ. ಈ ಸಮುದಾಯದಲ್ಲಿ ಸಾಮಾನ್ಯವಾಗಿ ಕೊಲೆಯಂತಹ ಅವಘಡಗಳು ಕಂಡುಬರುತ್ತವೆ. ಇದಕ್ಕೆ ಕಾರಣವೆಂದರೆ ತಿಳುವಳಿಕೆಯ ಕೊರತೆ ಇರುವುದೇ. ಅದೇ ಸಮುದಾಯದ ಬೇರೆ ವ್ಯಕ್ತಿಗಳನ್ನ ಕೊಲೆ ಮಾಡಿದರೆ ಆತನ ಕುಟುಂಬಕ್ಕೆ ೫೦,೦೦೦ ರೂ.ಗಳವರೆಗೆ ದಂಡವನ್ನು ಕಟ್ಟಬೇಕು. ಆದರೆ ಇತ್ತೀಚಿನ ದಿನಗಳಲ್ಲಿ ಕೊಲೆ ಪ್ರಕರಣಗಳು ಕಂಡುಬಂದರೆ ಪೋಲಿಸ್ ಠಾಣೆಗೆ ಒಪ್ಪಿಸಲಾಗುವುದು. ಈ ಸಮುದಾಯದಲ್ಲಿ ಹಲವು ಜನ ಶಿಕ್ಷೆಯನ್ನ ಅನುಭವಿಸಿದ ಭೂಪರು ಇದ್ದಾರೆ. ಮಂಡ್ಯ ಜಿಲ್ಲಾ ಬಂದೀಖಾನೆಯಲ್ಲಿರುವ ಶೇಕಡ ೫೦ರಷ್ಟು ಜನರು ಗಂಗಾಮತಸ್ಥರೇ ಆಗಿರುವುದು ಶೋಚನೀಯ ಸಂಗತಿಯಾಗಿದೆ.

**ವೈವಾಹಿಕ ಜೀವನದ ಜಗಳ** : ವೈವಾಹಿಕ ಜೀವನದಲ್ಲಿ ಗಂಡ-ಹೆಂಡತಿಗೆ ಹೊಂದಾಣಿಕೆಯಾಗದೆ, ಜಗಳವಾದಾಗ, ಇಬ್ಬರನ್ನು ಕರೆಯಿಸಿ, ಜೊತೆಗೆ ಕುಟುಂಬದವರೆಲ್ಲರನ್ನು ಕುಲದ ಚಾವಡಿಗೆ ಕರೆಸಲಾಗುತ್ತದೆ. ಕುಲಸ್ಥರು ಇಬ್ಬರನ್ನು ವಿಚಾರಿಸಲಾಗುತ್ತದೆ. ನಂತರ ಅತ್ತೆ-ಮಾವರನ್ನು ಸಹ

ವಿಚಾರಣೆಗೆ ಒಳಪಡಿಸಲಾಗುವುದು. ಕೆಲವು ಸಂದರ್ಭದಲ್ಲಿ ಅಕ್ಕ-ಪಕ್ಕ ಮನೆಯವರನ್ನ ಕರೆಯಿಸಿ ಅವರಿಂದಲೂ ಮಾಹಿತಿಯನ್ನ ಪಡೆದುಕೊಳ್ಳಲಾಗುವುದು. ಗಂಡ-ಹೆಂಡತಿ ಇಬ್ಬರಿಗೂ ತಿಳುವಳಿಕೆಯನ್ನ ಕುಲಸ್ಥರು ಹೇಳುತ್ತಾರೆ. ಅನ್ಯೋನ್ಯವಾಗಿ ಪರಸ್ಪರ ಅರಿತು ಜೀವನ ನಡೆಸಲು ಸಲಹೆ ಮಾಡುತ್ತಾರೆ. ಇಬ್ಬರು ಪರಸ್ಪರ ಜೀವನ ನಡೆಸಲು ಒಪ್ಪದಿದ್ದ ಸಂದರ್ಭದಲ್ಲಿ, ಮಕ್ಕಳಿಲ್ಲದಿದ್ದರೆ ಮದುವೆಯ ಸಂದರ್ಭದಲ್ಲಿ ಕೊಟ್ಟಿರುವ ವರದಕ್ಷಿಣೆಯ ಹಣವನ್ನು ಹಾಗೂ ವಸ್ತುಗಳನ್ನು ವಾಪಸ್ಸು ಕೊಡಬೇಕು. ಗಂಡನದೆ ತಪ್ಪಿದ್ದರೆ ಅವಳ ಜೀವನೋಪಾಯಕ್ಕೆಂದು ಒಂದೇ ಬಾರಿ ೨೫ ಸಾವಿರದಿಂದ ೫೦ ಸಾವಿರ ರೂ.ಗಳವರೆಗೆ ದಂಡ ಕೊಡಬೇಕು. ಈ ಹಣವನ್ನು ಆ ಹೆಂಗಸಿಗೆ ಕೊಡಲಾಗುತ್ತದೆ. ನಂತರ ಆತನು ಬೇರೆ ಹೆಣ್ಣನ್ನ ಮದುವೆಯಾಗಬಹುದು. ಅವಳು ಕೂಡ ಬೇರೆಯವರನ್ನ ಮದುವೆಯಾಗಬಹುದಾಗಿದೆ. ಗಂಡ-ಹೆಂಡತಿಗೆ ಮಕ್ಕಳಿದ್ದರೆ ಸಾಮಾನ್ಯವಾಗಿ ತಾಯಿಯ ಜೊತೆಯಲ್ಲೆ ಕಳುಹಿಸುತ್ತಾರೆ. ಇವರಿಬ್ಬರಲ್ಲಿ ಯಾರು ತಪ್ಪು ಮಾಡಿದ್ದಾರೆಂದು ಸಾಬೀತಾಗುತ್ತದೋ ಅವರು ದಂಡವನ್ನು ಕಟ್ಟಬೇಕಾಗುತ್ತದೆ. ದಂಡದ ಹಣ ೧೦೧ ರೂ.ಗಳಾಗಿರುತ್ತದೆ. ಆದರೆ ಈ ಸಮುದಾಯದವರ್‍ಯಾರು ವಿವಾಹ ವಿಚ್ಚೇದನಕ್ಕೆಂದು ಕೋರ್ಟು ಮೆಟ್ಟಿಲೇರಿದ ಉದಾಹರಣೆಗಳಿಲ್ಲ. ಆದರೆ ಕುಲದ ಚಾವಡಿಯಲ್ಲಿ ಗಂಡ-ಹೆಂಡತಿಯರು ವಿಚ್ಛೇದನ ಪಡೆದಿರುವ ಸಾಕಷ್ಟು ಉದಾಹರಣೆಗಳಿವೆ.

**ಅನೈತಿಕ ಸಂಬಂಧ :** ಗಂಗಾಮತಸ್ಥರ ಹೆಣ್ಣು ಮಗಳು ಅನ್ಯ ಸಮುದಾಯದವರೊಡನೆ ಅನೈತಿಕ ಸಂಬಂಧವನ್ನು ಇಟ್ಟುಕೊಂಡಿದ್ದರೆ ಆಕೆಯನ್ನು ಕುಲದಿಂದಲೇ ಹೊರ ಹಾಕಲಾಗುತ್ತದೆ. ಅದರಲ್ಲೂ ಮದುವೆಯಾಗಿರುವ ಹೆಂಗಸರು, ಅದೇ ಸಮುದಾಯದವನೊಡನೆ ಅನೈತಿಕ ಸಂಬಂಧವನ್ನ ಹೊಂದಿದ್ದರೆ, ಸಂಬಂಧವನ್ನು ಹೊಂದಿರುವವನ ಮನೆಗೆ ಆಕೆಯನ್ನು ಕಳುಹಿಸುವುದುಂಟು. ಕೆಲವು ಬಾರಿ ದಂಡ ವಿಧಿಸಿ ಮದುವೆಯಾದಲ್ಲಿ ಅನೈತಿಕ ಸಂಬಂಧವನ್ನು ಹೊಂದಿರುವವನಿಗೆ ೧೦೦೧ ರೂ.ಗಳ ದಂಡವಿಧಿಸಲಾಗುವುದು. ಅನೈತಿಕ ಸಂಬಂಧವನ್ನು ಹೊಂದಿರುವ ಹೆಂಗಸನ್ನ ನನ್ನ ಮನೆಗೆ ಸೇರಿಸಲಾರೆ ಎಂದು ಗಂಡನಾದವನು ಹೇಳಿದರೆ, ಕುಲಸ್ಥರು ತೀರ್ಮಾನಿಸಿ ಅನೈತಿಕ ಸಂಬಂಧವನ್ನು ಹೊಂದಿರುವವನ ಮನೆಗೆ ಆಕೆಯನ್ನು ಕಳುಹಿಸುತ್ತಾರೆ. ಇದನ್ನು ಕೂಡಾವಳಿಯೆಂದು ಕರೆಯುತ್ತಾರೆ. ಹಿಂದೆ ಗಂಗಾಮತಸ್ಥರಲ್ಲಿ ಈ ರೀತಿ ನಡೆದಿರುವ ಅನೇಕ ಉದಾಹರಣೆಗಳಿರುವುದನ್ನು ಕಾಣಬಹುದಾಗಿದೆ.

**ದೇವಸ್ಥಾನಕ್ಕೆ ಅವಮಾನ ಮಾಡಿದಾಗ** : ದೇವಸ್ಥಾನಕ್ಕೆ ದೇವರಿಗೆ, ದೇವತಾ ಕಾರ್ಯಕ್ಕೆ, ದೇವರ ಪೂಜೆಗೆ ಅವಮಾನ ಮಾಡಿದರೆ, ಅಂತಹವರಿಗೆ ಶಿಕ್ಷೆಯನ್ನು ವಿಧಿಸಲಾಗುವುದು. ಇಂತಹ ತಪ್ಪುಗಳಾದ ಸಂದರ್ಭದಲ್ಲಿ ಚಿಕ್ಕಯಜಮಾನ, ಕುಲಸ್ಥರಿಗೆ ದೂರು ನೀಡಿ ಎಲ್ಲರನ್ನು ಕುಲದ ಮನೆ ಅಥವಾ ಚಾವಡಿಗೆ ಸೇರಿಸಲಾಗುತ್ತದೆ. ದೇವಸ್ಥಾನಕ್ಕೆ, ಅವಮಾನವಾಗುವ ರೀತಿಯಲ್ಲಿ ನಡೆದುಕೊಂಡಿದ್ದರೆ, ತಪ್ಪು ಮಾಡಿದ ವ್ಯಕ್ತಿಯು ದೇವಸ್ಥಾನಕ್ಕೆ ಸಂಬಂಧಿಸಿದಂತೆ, ಹೋಮ–ನೇಮಗಳನ್ನು ಮಾಡಿಸಬೇಕು. ಸುಣ್ಣ–ಬಣ್ಣವನ್ನ ಹೊಡೆಸಬೇಕು. ಭಕ್ತಾದಿಗಳನ್ನ ಕರೆದು ಊಟಕ್ಕೆ ಹಾಕಬೇಕು. ಅಲ್ಲದೆ ಈತನಿಗೆ ೫೦೧ ರೂ.ಗಳನ್ನ ದಂಡ ಹಾಕಲಾಗುವುದು. ದೇವರಿಗೆ ಅಥವಾ ದೇವತಾ ಕಾರ್ಯಕ್ಕೆ ವ್ಯಕ್ತಿ ಅಡ್ಡಿಯನ್ನುಂಟುಮಾಡಿದರೆ, ಅಥವಾ ತಪ್ಪಾಗಿ ನಡೆದುಕೊಂಡರೆ, ಆತನಿಗೆ ದಂಡವನ್ನ ಹಾಕಿ, ಚಿನ್ನದ ಅಥವಾ ಬೆಳ್ಳಿಯ ಕಡ್ಡಿಯಿಂದ ಕೈಯ ಮೇಲೆ ಸುಡುತ್ತಿದ್ದರು. ಇಷ್ಟಲ್ಲದೆ ೫೦೧ ರೂ.ಗಳನ್ನ ದಂಡವಾಗಿ ಆತ ಕಟ್ಟಬೇಕು. ಗಂಗಾಮತಸ್ಥ ಸಮುದಾಯದಲ್ಲಿ ದೇವರ ಪೂಜಾರಿಗೆ ಅಪಾರ ಗೌರವವನ್ನು ಕೊಡುತ್ತಾರೆ. ಯಾರಾದರೂ ಪೂಜಾರಿಗೆ ತೊಂದರೆಯನ್ನು ಕೊಟ್ಟು ಅಗೌರವವಾಗಿ ನಡೆದುಕೊಂಡವರಿಗೆ ಶಿಕ್ಷೆ ವಿಧಿಸಲಾಗುತ್ತದೆ. ಯಾರಾದರೂ ಬೈದರೆ, ನಿಂದಿಸಿದರೆ, ವಾರ್ಷಿಕವಾಗಿ ಕೊಡಬೇಕಾದ ಹಣ ಅಥವಾ ಧಾನ್ಯವನ್ನು ಕೊಡದಿದ್ದರೆ ಅವರಿಗೆ ಶಿಕ್ಷೆಯನ್ನ ವಿಧಿಸಲಾಗುವುದು. ತಪ್ಪು ಮಾಡಿದ ಅಂತಹ ವ್ಯಕ್ತಿಗಳನ್ನು ಕುಲದ ಚಾವಡಿಗೆ ಕರೆಸಿ, ಪೂಜಾರಿಯ ಕಾಲಿಗೆ ನಮಸ್ಕರಿಸಬೇಕು. ಎಲ್ಲರೆದುರು ತಪ್ಪಾಯಿತು, ಇನ್ನು ಮುಂದೆ ಇಂತಹ ತಪ್ಪುಗಳನ್ನ ಮಾಡುವುದಿಲ್ಲ ಎಂದು ಪ್ರಮಾಣ ಮಾಡಬೇಕು. ಇಷ್ಟೇ ಅಲ್ಲದೆ ೧೦೧ ರೂ.ಗಳನ್ನು ದಂಡವಾಗಿ ಕಟ್ಟಬೇಕು. ಪೂಜಾರಿಗಳೇನಾದರೂ ತಪ್ಪಾಗಿ ನಡೆದುಕೊಂಡಿದ್ದು ಕಂಡುಬಂದರೆ, ಆ ವೃತ್ತಿಯಿಂದ ವಜಾಗೊಳಿಸಿ, ತಲೆಬೋಳಿಸಿ ದಂಡ ಹಾಕುತ್ತಾರೆ.

**ಅನ್ಯ ಜಾತಿಯವರನ್ನು ವಿವಾಹವಾದಾಗ** : ಪುರುಷನಾಗಲೀ ಅಥವಾ ಸ್ತ್ರೀಯಾಗಲೀ ಅನ್ಯ ಜಾತಿಯವರನ್ನ ವಿವಾಹವಾದಾಗ, ಅಂತಹವರಿಗೆ ದಂಡ ಮತ್ತು ಶಿಕ್ಷೆ ಎರಡನ್ನೂ ವಿಧಿಸಲಾಗುವುದು. ಗಂಗಾಮತಸ್ಥರಲ್ಲಿ ಅನ್ಯ ಜಾತಿಯವರನ್ನು ಮದುವೆಯಾಗುವುದು ನಿಷಿದ್ಧ. ಇದನ್ನು ಮೀರಿ ಆಗಿಬಿಟ್ಟರೆ, ಕುಲದ ಚಾವಡಿಗೆ ಕರೆಸಿ, ಕುಲಸ್ಥರು ಶಿಕ್ಷೆಯನ್ನು ಕೊಡುತ್ತಾರೆ. ಹೆಣ್ಣುಮಕ್ಕಳು ಆ ಜಾತಿಯವರಿಗಿಂತ ಕೆಳ ಜಾತಿಯವರನ್ನ ಮದುವೆಯಾದರೆ, ಅವರನ್ನು ಮತ್ತೆ ಅವರ ಜಾತಿಗೆ ಸೇರಿಸಿಕೊಳ್ಳುವುದಿಲ್ಲ. ಆಕೆ ತನ್ನ ತಾಯಿಯ ಮನೆಗೂ ಬರಬಾರದು. ಆ ಊರಿನಲ್ಲೂ ವಾಸಮಾಡಬಾರದು. ಒಟ್ಟಾರೆಯಾಗಿ ಕುಲದಿಂದಲೇ ಹೊರ ಹಾಕುತ್ತಾರೆ.

ಮೇಲ್ಜಾತಿಯವರನ್ನ ಹೆಂಗಸು ಮದುವೆಯಾದರೆ ದಂಡ ವಿಧಿಸಿ ನಂತರ ಕುಲಸಿದ್ಧಿಯನ್ನು ಮಾಡಿ. ಅವರಿಬ್ಬರನ್ನ ತಮ್ಮ ಜನಾಂಗಕ್ಕೆ ಸೇರಿಸಿಕೊಳ್ಳುತ್ತಾರೆ. ಗಂಡಸರು ಬೇರೆ ಜಾತಿಯವರನ್ನ ಮದುವೆಯಾದರೆ ಅವರಿಗೂ ದಂಡ ವಿಧಿಸಿ 'ಕುಲಸಿದ್ಧಿ'ಯನ್ನು ಮಾಡುತ್ತಾರೆ. ಗಂಗಾಮತಸ್ಥರಲ್ಲಿ "ಒಂದು ವೇಳೆ ಹೆಣ್ಣು ಬೇರೆ ಜಾತಿಯವನೊಂದಿಗೆ ಸಂಪರ್ಕ ಬೆಳೆಸಿದ್ದರೆ ಅವಳನ್ನು ಜಾತಿಯಿಂದ ಹೊರ ಹಾಕಲಾಗುತ್ತಿತ್ತು."[೫೦] ಕುಲಸಿದ್ಧಿ ಮಾಡುವುದೆಂದರೆ, ಸೀಗೆಕಾಯಿ, ಅರಿಸಿನದಿಂದ ಸ್ನಾನ ಮಾಡಿಸಿ ನಂತರದಲ್ಲಿ ಸೀಗೆಕಾಯಿ ಮತ್ತು ಹಸುವಿನ ಗಂಜಲವನ್ನು ನುಂಗಿಸುತ್ತಾರೆ. ೨೪ ವೀಳ್ಯವನ್ನು ತಿದ್ದಿ, ಪ್ರತಿಯೊಂದು ವೀಳ್ಯಕ್ಕೂ ಐದುಕಾಲು ರೂಪಾಯಿಗಳನ್ನ ಇಡಬೇಕು. ಮಾಂಸದ ಊಟವನ್ನು ಮಾಡಿಸಬೇಕು. ದೊಡ್ಡ ಯಜಮಾನ ಅಂತರ್ಜಾತಿ ಮದುವೆಯಾದವರಿಬ್ಬರಿಗೂ ವಿಭೂತಿಯನ್ನ ಹಣೆಗೆ ಬಳಿದು, ಬುಡ್ತು, ಬುಡ್ತು, ಬುಡ್ತು, ಹತ್ತೂವರೆ ಸಾವಿರ ಬುಡ್ತು ಎಂದು ಹೇಳಿ ಕುಲಸಿದ್ಧಿಗೆ ಒಳಪಡಿಸುತ್ತಾರೆ. ಇಷ್ಟೇ ಅಲ್ಲದೆ ೫೦೦೦ ದಿಂದ ೨೫೦೦೦ ಸಾವಿರದವರೆವಿಗೂ ದಂಡವನ್ನು ಕುಲಕ್ಕೆ ಕಟ್ಟಿಕೊಡಬೇಕು. ಇದು ಯಜಮಾನರುಗಳ ತೀರ್ಪನ್ನು ಆಧರಿಸಿರುತ್ತದೆ. ವ್ಯಕ್ತಿಗಳ ಸ್ಥಿತಿ-ಗತಿಯನ್ನು ಸಹ ತೀರ್ಪುಗಾರರು ಗಮನದಲ್ಲಿಟ್ಟುಕೊಂಡು, ಅವರು ತೀರ್ಪನ್ನು ನೀಡುತ್ತಾರೆ.

**ಕೆಲಸದ ಹಂಚಿಕೆ** : ಗಂಗಾಮತಸ್ಥರು ಆಚರಿಸುವ ವಿಶೇಷ ಹಬ್ಬಗಳು, ದೇವಸ್ಥಾನದ ಕೆಲಸ ಕಾರ್ಯಗಳು, ಜಾತ್ರೆಗಳು, ಪರ ಇವುಗಳಿಗೆ ಸಂಬಂಧಿಸಿದಂತೆ ಕುಲಸ್ಥರು ಗ್ರಾಮದ ತಮ್ಮ ಸಮುದಾಯದವರಿಗೆ ಕೆಲಸಕಾರ್ಯಗಳನ್ನು ಹಂಚುತ್ತಾರೆ. ಯಾವ ಕುಟುಂಬದವರು ಯಾವ ಕೆಲಸವನ್ನು ಮಾಡಬೇಕು, ಎಂಬುದನ್ನು ಒಂದು ವಾರ ಮುಂಚಿತವಾಗಿ ಕುಲದ ಚಾವಡಿಯಲ್ಲಿ ಸೇರಿ ಮಾತು-ಕತೆಯನ್ನು ಆಡುತ್ತಾರೆ. ಅದರಂತೆ ಅವರೆಲ್ಲರೂ ಆ ಕೆಲಸಗಳಲ್ಲಿ ನಿರತರಾಗಿರುತ್ತಾರೆ. ಮೇಲ್ವಿಚಾರಣೆಯನ್ನ ಕುಲದ ಯಜಮಾನರುಗಳು ನೋಡಿಕೊಳ್ಳುತ್ತಾರೆ. ದೇವರ ಪೂಜೆಯನ್ನ ಹೊರುವುದು, ಹೂವುಗಳನ್ನು ತರುವುದು, ಹಣ್ಣು ಕಾಯಿಯ ವ್ಯವಸ್ಥೆ ಹಣಕಾಸಿನ ಸಂಗ್ರಹ, ಸುಣ್ಣ-ಬಣ್ಣ, ದೇವಾಲಯಗಳಿಗೆ ತೋರಣ ಕಟ್ಟುವುದು, ಊಟದ ವ್ಯವಸ್ಥೆ, ಧಾನ್ಯಗಳ ಸಂಗ್ರಹ, ಆಹ್ವಾನ ಪತ್ರಿಕೆಗಳನ್ನ ಹಂಚುವಿಕೆ, ಕೊಂಡದ ಗುಂಡಿಯನ್ನು ತೆಗೆಯುವುದು, ಸೌದೆ ತರುವುದು, ಹೀಗೆ ಇನ್ನೂ ಮುಂತಾದ ಕೆಲಸಗಳನ್ನು ಕುಲಸ್ಥರು ಹಂಚಿರುತ್ತಾರೆ. ಅವರು ಹೇಳಿರುವಂತೆ ಪ್ರಾಮಾಣಿಕವಾಗಿಎಲ್ಲರು ಹಂಚಿರುವ ಕೆಲಸಗಳನ್ನು ಮಾಡುತ್ತಾರೆ.

**ಮನೆಭಾಗ ಮಾಡುವುದು ಅಥವಾ ಆಸ್ತಿ ಹಂಚಿಕೆ :**

ಒಂದು ಕುಟುಂಬದಲ್ಲಿ ಒಬ್ಬರಿಗಂತ ಮೇಲ್ಪಟ್ಟು ಮೂರು ನಾಲ್ಕು ಜನ ಮಕ್ಕಳಿದ್ದರೆ, ಅಂಥವರ ಕುಟುಂಬದ ಆಸ್ತಿ-ಪಾಸ್ತಿಯನ್ನ ಭಾಗ ಮಾಡಲಾಗುವುದು. ಆಸ್ತಿಯನ್ನು ಭಾಗ ಮಾಡುವ ಸಂದರ್ಭದಲ್ಲಿ ಆ ಕುಟುಂಬದವರು ಕುಲದ ಚಿಕ್ಕಯಜಮಾನನಿಗೆ ದೂರನ್ನು ಕೊಡಬೇಕು. ಅವನು ದೊಡ್ಡಯಜಮಾನ, ಯಜಮಾನರುಗಳಿಗೆ ತಿಳಿಸಿ, ನಿಗಧಿಗೊಳಿಸಿದ ದಿನದಂದು ಎಲ್ಲರು, ಭಾಗ ಮಾಡುವವರ ಮನೆಗೆ ಬರುತ್ತಾರೆ. ಇರುವ ಆಸ್ತಿಯನ್ನು ಸರಿಯಾಗಿ ಪರಿಶೀಲಿಸಿ ಕುಟುಂಬದಲ್ಲಿ ಎಷ್ಟು ಜನರಿದ್ದಾರೆ. ಗಂಡು ಮಕ್ಕಳು ಎಷ್ಟು ಜನ, ಹೆಣ್ಣು ಮಕ್ಕಳು ಎಷ್ಟು, ತಂದೆ ತಾಯಿ ಇದ್ದಾರೆಯೇ ಎಂಬುದನ್ನು ಪರಿಶೀಲಿಸಲಾಗುತ್ತದೆ. ನಂತರ ಕುಟುಂಬದವರನ್ನೆಲ್ಲಾ ಕೂರಿಸಿಕೊಂಡು ಮನೆಯಲ್ಲಿರುವ ಪಾತ್ರೆಗಳನ್ನೊಳಗೊಂಡ, ಆಸ್ತಿ, ಮನೆ, ದವಸ-ಧಾನ್ಯ, ಜಾನುವಾರುಗಳು, ಎಲ್ಲವನ್ನು ಭಾಗ ಮಾಡುತ್ತಾರೆ. ಇಷ್ಟೇ ಅಲ್ಲದೆ ತಂದೆಯ ಜವಾಬ್ದಾರಿಯನ್ನ ಹಿರಿಯ ಮಗನಿಗೆ, ತಾಯಿಯ ಜವಾಬ್ದಾರಿಯನ್ನ ಕಿರಿಯ ಮಗನಿಗೆ ವಹಿಸಲಾಗುವುದು. ನ್ಯಾಯಸ್ಥರು ಭಾಗ ಮಾಡಿ, ಹೇಳಿದ ಮಾತುಗಳನ್ನ ಯಾರು ಸಹ ಕಿತ್ತು ಹಾಕುವ ಆಗಿಲ್ಲ.

ಆಸ್ತಿ ಭಾಗ ಮಾಡಿದ ನಂತರ ತಂದೆ ತಾಯಿಯರನ್ನ ಸರಿಯಾಗಿ ನೋಡಿಕೊಳ್ಳದಿದ್ದಾಗ, ಆ ವ್ಯಕ್ತಿ ಅವರ ಜೀವನಕ್ಕೆ ಬೇಕಾಗುವ ದವಸ-ಧಾನ್ಯ ಹಾಗೂ ಇಂತಿಷ್ಟು ಹಣವನ್ನು ಕೊಡಬೇಕಾಗುತ್ತದೆ. ಆ ತಂದೆ-ತಾಯಿಯರು ಇಷ್ಟ ಪಟ್ಟರೆ ಉಳಿದ ಮಕ್ಕಳು ಜೊತೆಯಲ್ಲಿ ಜೀವಿಸುತ್ತಾರೆ. ಇಷ್ಟವಿಲ್ಲದಿದ್ದರೆ ಅವರೇ ಪ್ರತ್ಯೇಕವಾಗಿ ಜೀವನವನ್ನು ಮಾಡುತ್ತಾರೆ. ನ್ಯಾಯಸ್ಥರು ಮಾಡುವ ಆಸ್ತಿ ಭಾಗವು ನ್ಯಾಯ ಸಮ್ಮತವಾಗಿರುತ್ತದೆ. ಆ ಕುಟುಂಬದವರಿಗೆ ಒಂದೇ ಒಂದು ಮನೆಯಿದ್ದರೆ, ಒಂದು ಕಡೆ ಅಣ್ಣ, ಮತ್ತೊಂದು ಕಡೆ ತಮ್ಮ ವಾಸಮಾಡುವಂತೆ ಸೂಚಿಸುತ್ತಾರೆ. ಹೀಗೆ ಮನೆ ಭಾಗಮಾಡುವ ಕೆಲಸದಲ್ಲೂ ಕುಲದ ಯಜಮಾನರುಗಳ ಪಾತ್ರ ಬಹಳ ಮಹತ್ವದ್ದಾಗಿದೆ.

ಕುಲಸ್ಥರು ನ್ಯಾಯ ನಿಷ್ಠುರರೂ, ನಿಷ್ಪಕ್ಷಪಾತಿಗಳೂ ದಯಾಪರರೂ ಆಗಿರುತ್ತಾರೆ. ಇವರ ನ್ಯಾಯ ನಿಷ್ಠುರತನ ಎಷ್ಟರ ಮಟ್ಟಿಗೆ ಇರುತ್ತದೆಂದರೆ ಹಿರಿಯರು ಅಪರಾಧಿಗಳನ್ನು ಹೊಡೆದೂ ಬಿಡಬಹುದು. ಇದನ್ನು ಅವರು ಗಂಭೀರವಾಗಿ ಪರಿಗಣಿಸುವುದಿಲ್ಲ. ಎಲ್ಲ ತಮ್ಮ ಒಳ್ಳೆಯದಕ್ಕಾಗಿಯೇ ಎಂಬ ಮನೋಭಾವ ಸಮುದಾಯದವರದ್ದಾಗಿರುತ್ತದೆ. ನ್ಯಾಯ ನೀಡುವ ಹಿರಿಯರು ಬುದ್ಧಿವಂತರಾಗಿರುತ್ತಾರೆ. ನ್ಯಾಯ ಬಗೆಹರಿಸುವಲ್ಲಿ ಇವರು ತೋರುವ ಚತುರತೆ, ಹರಿಬಿಡುವ ಕಲ್ಪನಾಶಕ್ತಿ ದಂಗುಬಡಿಸುತ್ತವೆ. ಅವರು ನೀಡುವ ತೀರ್ಪು ತಕ್ಕಡಿಯಲ್ಲಿ ತೂಕ

ಹಾಕಿದಂತಿರುತ್ತದೆ. ಇವರು ನಮ್ಮ ಸಂಬಂಧಿಕರು, ನಮ್ಮವರು-ತಮ್ಮವರು ಎಂಬ ಭಾವನೆ ಇವುಗಳನ್ನು ಮುಲಾಜಿಗೆ ಇಟ್ಟುಕೊಳ್ಳದ ನ್ಯಾಯ ಸಮ್ಮತವಾದ ತೀರ್ಪನ್ನು ನೀಡುತ್ತಾರೆ. ಆಚರಣೆಗಳನ್ನು ಮಾಡುವಾಗಲೂ ಇವರಿಗೆ ವಿಶೇಷ ಗೌರವ-ಮನ್ನಣೆಯನ್ನ ಸಮುದಾಯದವರು ಕೊಡುತ್ತಾರೆ. ಮದುವೆ ಮಾಡುವಾಗ, ವೀಳ್ಯ ತಿದ್ದುವಾಗ, ಮದುವೆಯ ಮಾತುಕತೆ, ಸತ್ತ ಸಂದರ್ಭದಲ್ಲಿ, ಶ್ರಾದ್ಧದ ವಿಚಾರದಲ್ಲಿ ಕುಲಸ್ಥರ ಪಾತ್ರ ಪ್ರಮುಖವಾದುದ್ದಾಗಿದೆ.

ಮಂಡ್ಯ ಜಿಲ್ಲೆಯ ಗಂಗಾಮತಸ್ಥರು ಇಂದಿಗೂ ಕೂಡ ಜಾತಿ ಪಂಚಾಯಿತಿಯನ್ನ ಉಳಿಸಿಕೊಂಡು, ಅದನ್ನು ಪಾಲಿಸಿಕೊಂಡು ಬರುತ್ತಿದ್ದಾರೆ. ನ್ಯಾಯ ಪಂಚಾಯಿತಿ ಮಾಡುವುದಕ್ಕಾಗಿಯೇ ಈ ಸಮುದಾಯದವರು ಪ್ರತ್ಯೇಕವಾದ ಕುಲದ ಚಾವಡಿ ಅಥವಾ ಕುಲದ ಮನೆಯನ್ನು ಹೊಂದಿದ್ದಾರೆ. ಬೇರೆ ಸಮುದಾಯದವರಿಗಿಂತ ಇವರು ವಿಶೇಷವಾದ ಗೌರವವನ್ನ ನ್ಯಾಯ-ಪಂಚಾಯಿತಿಯ ಬಗ್ಗೆ ಹೊಂದಿರುವುದು ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಕಂಡುಬಂದಿದೆ. ಕುಲಸ್ಥರ ಸಂಪ್ರದಾಯವು ವಂಶಪಾರಂಪರ್ಯವಾಗಿ ನಡೆದುಕೊಂಡು ಬರುತ್ತದೆ. ಹಿಂದೆ ನೀಡುತ್ತಿದ್ದ ತೀರ್ಪುಗಳನ್ನ ಕೇಳಿ-ನೋಡಿದ್ದರ ಅನುಭವವನ್ನೆಲ್ಲಾ, ತಾವು ತೀರ್ಪು ನೀಡುವಾಗ, ಅನುಭವಕ್ಕೆ ತಂದುಕೊಂಡು ನಂತರದಲ್ಲಿ ನ್ಯಾಯವನ್ನು ಕೊಡುತ್ತಾರೆ. ಹೀಗೆ ಬೇರೆ ಸಮುದಾಯದವರಿಗಿಂತ, ಗಂಗಾಮತಸ್ಥ ಸಮುದಾಯದವರು ನ್ಯಾಯ-ಪಂಚಾಯಿತಿಯ ವಿಷಯದಲ್ಲಿ ನಂಬಿಕೆಯನ್ನ ಇಟ್ಟುಕೊಂಡಿದ್ದಾರೆ.

### ೩.೭ ಉಡುಗೆ-ತೊಡುಗೆ

ಆದಿ ಮಾನವ ಆಹಾರ, ವಸತಿಯ ನಂತರ ಯೋಚಿಸಿದ್ದು ಉಡುಗೆಯ ಬಗೆಗೇ ಇರಬೇಕು. ಚಳಿ, ಗಾಳಿ, ಬಿಸಿಲು, ಮಳೆ, ಹುಳುಹುಪ್ಪಟೆಗಳ ಕಡಿತದಿಂದ ದೇಹವನ್ನು ರಕ್ಷಿಸಿಕೊಳ್ಳಲು ಉಡುಗೆ ಅವಶ್ಯವೆನಿಸಿತು. ಕಾಡಿನಲ್ಲಿ ವಾಸವಾಗಿದ್ದ, ಆದಿ ಮಾನವ ಮಾನ ರಕ್ಷಣೆ ಮತ್ತು ದೇಹದ ರಕ್ಷಣೆಗಾಗಿ ಸೊಪ್ಪು ಅಥವಾ ಮರದ ತೊಗಟೆಯನ್ನು ಸೊಂಟಕ್ಕೆ ಮನುಷ್ಯ ಕಟ್ಟಿಕೊಳ್ಳುತ್ತಿದ್ದ. ನಂತರ ಕಾಲಾನುಕ್ರಮೇಣ, ಹಂತ-ಹಂತವಾಗಿ ಬಟ್ಟೆಯ ಶೋಧನೆಯನ್ನು ಕಂಡುಕೊಂಡಿದ್ದಾನೆ. ಮಾನವ ಬದುಕಲು ಗಾಳಿ, ನೀರು, ವಸತಿ ಎಷ್ಟು ಮುಖ್ಯವೋ ಅಷ್ಟೇ ಅವಶ್ಯಕವಾದುದು ಉಡುಪು.

"ಮನುಷ್ಯ ಬದುಕಿನ ಮೊದಮೊದಲಲ್ಲಿ ಕೇವಲ ಪ್ರಾಕೃತಿಕ ಅವಶ್ಯಕತೆಯಾಗಿದ್ದ ಉಡುಪು ಬರಬರುತ್ತ ಸಾಮಾಜಿಕ ಬಂಧನವಾಗಿ ಮಾರ್ಪಟ್ಟುದು ಕುತೂಹಲಕಾರಿಯಾದ ಸಂಗತಿಯಾಗಿದೆ. ಚಳಿ-ಮಳೆಗಳಿಂದ ರಕ್ಷಿಸಿಕೊಳ್ಳಲು ಗಿಡದ ತೊಗಟೆಯನ್ನು ಸುತ್ತಿಕೊಳ್ಳಲು ತೊಡಗಿದ್ದವ ನಾರು

ಬಟ್ಟೆಯ ಮೊರೆ ಹೊಕ್ಕ; ತರುವಾಯದ ದಿನಗಳಲ್ಲಿ ಹತ್ತಿಯ ಆವಿಷ್ಕಾರವಾಯಿತು. ಇದರೊಂದಿಗೇ ಉಡುಪಿನಲ್ಲಿ ವೈವಿಧ್ಯವುಂಟಾಯಿತು. ಗಮನಾರ್ಹವಾದ ಸಂಗತಿಯೆಂದರೆ ಈ ಬದಲಾವಣೆ ಏಕಕಾಲದಲ್ಲಿ ಎಲ್ಲೆಡೆ ತೋರ್ಪಡಲಿಲ್ಲ; ಜಗತ್ತಿನಾದ್ಯಂತ ಚದುರಿ ಹೋಗಿರುವ ಜನಾಂಗಗಳು ಈ ಸಾಂಸ್ಕೃತಿಕ ಬದಲಾವಣೆಯಲ್ಲಿ ಕೆಲವು ಮುಂದುವರಿದವು, ಕೆಲವು ಹಿಂದುಳಿದವು. ಉಡುಪಿನ ಅಂದಚಂದಕ್ಕೆ ಮನಸೋತ ಮನುಷ್ಯನಿಗೆ ಕ್ರಮೇಣ ಆಭರಣಗಳ ಪ್ರಜ್ಞೆ ಮೂಡಿ ಅದರಲ್ಲಿಯೂ ವೈವಿಧ್ಯ ಬೆಳೆಯಿಸಿಕೊಂಡ."[೫೧]

ಉಡುಗೆ-ತೊಡುಗೆಯು ಪ್ರದೇಶದಿಂದ ಪ್ರದೇಶಕ್ಕೆ, ಸಮಾಜದಿಂದ ಸಮಾಜಕ್ಕೆ, ವ್ಯಕ್ತಿಯಿಂದ, ವ್ಯಕ್ತಿಗೆ ಬೇರೆಯಾಗಿರುತ್ತದೆ. ಲಿಂಗ, ವಯಸ್ಸು, ಸಾಮಾಜಿಕ ಅಂತಸ್ತು, ವೃತ್ತಿಗನುಗುಣವಾಗಿ ವ್ಯಕ್ತಿಯಿಂದ ವ್ಯಕ್ತಿಗೆ ಬೇರೆಯಾಗಿರುತ್ತದೆ. ಕರ್ನಾಟಕದಲ್ಲಿಯೇ ಉತ್ತರ ಭಾಗದವರ ಉಡುಪು ದಕ್ಷಿಣ ಭಾಗದವರಿಗಿಂತ ತೀರಾ ಭಿನ್ನವಾಗಿದೆ. ಉತ್ತರ ಕರ್ನಾಟಕದ ಭಾಗದಲ್ಲಿ ಗಂಡಸರು ತಲೆಗೆ ದೊಡ್ಡ ಪೇಟ ಸುತ್ತುತ್ತಾರೆ ಅಥವಾ ಗಾಂಧಿ ಟೋಪಿಯನ್ನು ಇಟ್ಟುಕೊಳ್ಳುತ್ತಾರೆ. ಅಲ್ಲಿ ಬಣ್ಣದ ಬಟ್ಟೆಗಳನ್ನು ಸಾಮಾನ್ಯವಾಗಿ ಧರಿಸುವುದಿಲ್ಲ. ಇದಕ್ಕೆ ಅಲ್ಲಿಯ ಹವಾಮಾನವೇ ಮುಖ್ಯ ಕಾರಣ. ಅಲ್ಲಿಯವರೇ ಹೇಳುವಂತೆ ಇವರಿಗೆ ಗೊತ್ತಿರುವುದು ಒಂದು ಬೇಸಿಗೆ ಕಾಲ, ಮತ್ತೊಂದು ಅತಿ ಬೇಸಿಗೆ ಕಾಲ. ಅಂದರೆ ಬಿಸಿಲಿನ ಜಳದಿಂದ ದೇಹವನ್ನು ರಕ್ಷಿಸಿಕೊಳ್ಳಲು ತಲೆಗೆ ಪೇಟ ಮತ್ತು ಬಿಳಿಯ ಅಂಗಿ, ಪಂಚೆ ಅಲ್ಲಿ ಅನಿವಾರ್ಯವಾಗಿದೆ. ಹಾಗೆಯೇ ಮಂಡ್ಯ ಜಿಲ್ಲೆ ಚಡ್ಡಿಗೆ ಹೆಸರುವಾಸಿ.

ಒಂದೇ ಪ್ರದೇಶದಲ್ಲಿಯೂ ಸಹ ಉಡುಪುಗಳಲ್ಲಿ ಭಿನ್ನತೆಯನ್ನು ಗುರುತಿಸಬಹುದು. ಇದಕ್ಕೆ ಜಾತಿ, ಮತಗಳು ಬಹು ಮಟ್ಟಿಗೆ ಕಾರಣವಾಗಿವೆ. ಉಡುಪುಗಳನ್ನು ಆಧರಿಸಿ ಜಾತಿ-ಮತಗಳನ್ನು ಸುಲಭವಾಗಿ ಗುರುತಿಸಬಹುದಾಗಿತ್ತು. ಆದರೆ ಇಂದು ಎಲ್ಲ ವರ್ಗದವರೂ ಎಲ್ಲ ಬಗೆಯ ಬಟ್ಟೆಗಳನ್ನೂ ಧರಿಸುತ್ತಾರೆ. ಪ್ಯಾಂಟು-ಶರ್ಟು ಜಾತಿ-ಮತಗಳ ಅಂತರವನ್ನೇ ದೂರ ಮಾಡಿತು. ಒಂದೇ ಪ್ರದೇಶದಲ್ಲಿ ವಾಸಮಾಡುವ ಹಿಂದು ಮತ್ತು ಮುಸ್ಲೀಮರ ಉಡುಪುಗಳಲ್ಲಿ ವ್ಯತ್ಯಾಸವಿರುವುದನ್ನ ಕಾಣಬಹುದು. ಗ್ರಾಮೀಣ ಸ್ತ್ರೀಯರು ಸೀರೆ ಉಡುವುದು ಪಟ್ಟಣದವರಂತೆ ಅಲ್ಲ. ನೆರಿಗೆಗಳನ್ನೆಲ್ಲ ಒಟ್ಟು ಮಾಡಿ ಎರಡು ಮೂರು ಸುತ್ತು ಹಾಕಿ ಸೇರಿಸುತ್ತಾರೆ. ಈ ಸುತ್ತನ್ನ 'ಬಾಳೆಕಾಯಿ' ಅನ್ನುತ್ತಾರೆ. ಇದರಿಂದ ಸೀರೆ ಅಷ್ಟು ಸುಲಭವಾಗಿ ಬಿಚ್ಚಿಕೊಳ್ಳುವುದಿಲ್ಲ. ಎಲೆ ಅಡಿಕೆ, ಕಾಸು ಕರಿಮಣಿಗಳನ್ನು ಈ ಬಾಳೆಕಾಯಿಯೊಳಗಿಟ್ಟುಕೊಳ್ಳುತ್ತಾರೆ. ರವಿಕೆ ತೊಡದೆ ಸೀರೆಯ

ಸೆರಗಿನಿಂದಲೇ ಎದೆ ಮುಚ್ಚಿಕೊಳ್ಳುವುದು ಕೆಲವರಿಗೆ ಸಂಪ್ರದಾಯವೂ ಹೌದು. ನಮ್ಮಲ್ಲಿ ರವಿಕೆ ತೊಡದ ವೃದ್ಧ ಹೆಂಗಸರು ಹಲವರಿದ್ದಾರೆ.

ವೇಗವಾಗಿ ಬೆಳೆಯುತ್ತಿರುವ ಇಂದಿನ ದಿವಸಗಳಲ್ಲಿ ಬೇರೆ ಬೇರೆ ಪ್ರದೇಶದ ವಿಭಿನ್ನ ಸಂಸ್ಕೃತಿಯ ಜನರ ಸಹವಾಸ ಬೆಳೆದಂತೆ ಉಡುಗೆ ತೊಡುಗೆಗಳಲ್ಲೂ ಸಾಕಷ್ಟು ಮಾರ್ಪಾಡುಗಳಾಗುತ್ತಾ ಬಂದಿದೆ. ಮಿನಿಸ್ಕರ್ಟ್, ಚೂಡಿದಾರ್, ಪಂಜಾಬಿ ಡ್ರೆಸ್, ಸಲ್ವಾರ್ ಕಮೀಜ್, ನೈಟಿ, ಲುಂಗಿ, ಪೈಜಾಮ, ಕೋಟು, ಪ್ಯಾಂಟು ಮೊದಲಾದವುಗಳೆಲ್ಲಾ ಮಂಡ್ಯ ಜಿಲ್ಲೆಯ ಹಳ್ಳಿಗಳಿಗೂ ಬಂದು ಬಹಳ ದಿನಗಳಾಗಿವೆ. ಬದಲಾವಣೆಗೆ ಒಳಗಾಗಿದ್ದರೂ ಸಹ "ಪ್ರತಿಯೊಂದು ಸಮಾಜವೂ ತನ್ನ ಅಸ್ತಿತ್ವವನ್ನು ತಾನು ರೂಢಿಸಿಕೊಂಡ ಉಡುಗೆ-ತೊಡುಗೆಗಳಿಂದ ಗುರುತಿಸಿಕೊಳ್ಳುತ್ತದೆ. ಉಡುಗೆ ತೊಡುಗೆಗಳಿಗೆ ಧಾರ್ಮಿಕತೆಯ ನಂಟು ವಿಶೇಷವಾಗಿರುತ್ತದೆ. ಧಾರ್ಮಿಕ ಜೀವನದ ಬೇರೆ ಬೇರೆ ಸಂದರ್ಭಗಳಲ್ಲಿ ಬೇರೆ ಬೇರೆ ವೇಷಭೂಷಣಗಳನ್ನು ಧರಿಸಬೇಕೆಂಬ ಕಟ್ಟಳೆ ಅನೇಕ ಸಮಾಜಗಳಲ್ಲಿದೆ."[೫೨] ಇದರಿಂದ ಗಂಗಾಮತಸ್ಥ ಸಮುದಾಯದವರು ಹೊರತಲ್ಲ.

ಮಂಡ್ಯ ಜಿಲ್ಲೆಯಲ್ಲಿ ವಾಸಿಸುವ ಇತರ ಜನಾಂಗದವರ ಮತ್ತು ಗಂಗಾಮತಸ್ಥರ ಉಡುಗೆ-ತೊಡುಗೆಯಲ್ಲಿ ಅಂತಹ ವ್ಯತ್ಯಾಸವನ್ನು ಕಾಣಲು ಸಾಧ್ಯವಿಲ್ಲ. ಆದರೆ ಕೆಲವೊಂದು ಸೂಕ್ಷ್ಮವಾದ ವ್ಯತ್ಯಾಸಗಳನ್ನಷ್ಟೆ ಉಡುಗೆ-ತೊಡುಗೆಯಲ್ಲಿ ಕಾಣಬಹುದಾಗಿದೆ. ಗಂಗಾಮತಸ್ಥರ ಉಡುಗೆ-ತೊಡುಗೆಯ ವಿಚಾರಕ್ಕೆ ಸಂಬಂಧಿಸಿದಂತೆ ಪುರುಷರ ಉಡುಗೆ-ತೊಡುಗೆ, ಸ್ತ್ರೀಯರ ಉಡುಗೆ-ತೊಡುಗೆ, ಮಕ್ಕಳ ಉಡುಗೆ-ತೊಡುಗೆ ಇವುಗಳು ಸಾಮಾನ್ಯ ದಿನಗಳಲ್ಲಿ ಹೇಗಿರುತ್ತವೆ, ವಿಶೇಷ ದಿನಗಳಲ್ಲಿ ಹೇಗಿರುತ್ತವೆಂಬುದನ್ನು ಸೂಕ್ಷ್ಮವಾಗಿ ಅರ್ಥೈಸಿಕೊಳ್ಳಬೇಕಾಗುತ್ತದೆ. ಜಿಲ್ಲೆಯಲ್ಲಿ ಬೇರೆ ಜನಾಂಗದವರ ಉಡುಪಿಗೂ ಇವರ ಉಡುಪಿಗೂ ಮೇಲ್ನೋಟಕ್ಕೆ ಯಾವುದೇ ವ್ಯತ್ಯಾಸ ಕಾಣಲು ಸಾಧ್ಯವಿಲ್ಲದಿದ್ದರೂ, ಆಂತರ್ಯದಲ್ಲಿ ಒಳಹೊಕ್ಕು ನೋಡಿದಾಗ ಮಾತ್ರ ಸಾಧ್ಯವಾಗುತ್ತದೆ.

**ದಿನನಿತ್ಯದ ಉಡುಗೆ-ತೊಡುಗೆಗಳು :** ಗಂಗಾಮತಸ್ಥರ ಪ್ರತಿನಿತ್ಯದ ಉಡುಗೆ-ತೊಡುಗೆಗಳು ಅತ್ಯಂತ ಕಡಿಮೆ ಬೆಲೆಯವಾಗಿರುತ್ತವೆ. ಗಂಡಸರ ಸಾಮಾನ್ಯ ಉಡುಪೆಂದರೆ ಚಡ್ಡಿ, ಬಾಡಿ ಮತ್ತು ಅಂಗಿ ಬಿಳಿಯ ಟಸೂರು, ಬಿಳಿಯ ಅಂಗಿ ಬಟ್ಟೆ, ಬಿಳಿಯ ಟವಲ್ ಹಾಗೂ ಪಟಾಪಟಿ ಬಟ್ಟೆಯಿಂದ ಅಥವಾ ಖಾಕಿ ಬಟ್ಟೆಯಿಂದ ಮಂಡಿಯವರೆಗೆ ಚಡ್ಡಿ ಹೊಲಿಸಿಕೊಂಡಿರುತ್ತಾರೆ. ಬಾಡಿಯೂ ಮಂದವಾದ ಬಿಳಿ ಬಟ್ಟೆಯಿಂದ ಹೊಲಿಸಿದ್ದು, ಅಂಗಿಯ ತೋಳು ತುಂಬಾ ಸಡಿಲವಾಗಿದ್ದು,

ಭುಜದ ಕೆಳಕ್ಕೆ ಹೊರಕ್ಕೆ ಚಾಚಿದಂತೆ ಕಾಣುವ ಜುಲ್ಬು ಬಿಟ್ಟು ಮಡಿಚಿ ಹೊಲೆಯಲಾಗುತ್ತಿತ್ತು. ಕತ್ತಿನ ಹಿಂದೆ ಸ್ವಲ್ಪ ಕೆಳಕ್ಕೆ ಕೊಡೆ ಸಿಕ್ಕಿಸಿಕೊಳ್ಳಲು ಅನುಕೂಲವಾಗುವಂತೆ ಪಟ್ಟಿಯೊಂದಿರುತ್ತಿತ್ತು. ಎಡಗಡೆಯ ಒಳಭಾಗಕ್ಕೆ ಉದ್ದವಾದ ಮತ್ತು ಅಗಲವಾದ ಜೇಬು, ಕಳ್ಳಜೇಬು ಅಂದರೆ ಕಳ್ಳಕಾಕರಿಗೆ ಕಾಣದಂತಹ ಜೇಬುಗಳೂ ಇರುತ್ತಿದ್ದವು. ಮಕ್ಕಳಿಗೆ ಏಳೆಂಟು ವರ್ಷದವರೆಗೂ ಚಡ್ಡಿಗಿಡ್ಡಿ ಇಲ್ಲ. ಇಂದಿಗೂ ಇಂಥ ಮಕ್ಕಳು ಈ ಸಮುದಾಯದಲ್ಲಿ ಕಾಣಬಹುದಾಗಿದೆ. ಮೊದಲಿಗೆ ಗಂಡಸರಿಗೆ ಉಡಿದಾರ ಲಂಗೋಟಿಯೇ ಉಡುಪು. ಮಕ್ಕಳಿಗೂ ಲಂಗೋಟಿ ಕಟ್ಟುತ್ತಿದ್ದರು. "ಉಡಿದಾರ ಕಚ್ಚೆ ಅರಿವೆ ಇಲ್ಲದೆ ಬೆಳೆದವನು"[೫೩] ಎಂಬ ಮಾತನ್ನು ಗಮನಿಸಿದಾಗ, ಲಂಗೋಟಿ ಕೇವಲ ಮಾನ ರಕ್ಷಣೆಗಾಗಿ ತೊಡುತ್ತಿದ್ದುದು ಎಂದು ತಿಳಿಯುತ್ತದೆ. ಇಂದಿಗೂ ಈ ಸಮುದಾಯದ ಮುದುಕರು ಬರೀ ಲಂಗೋಟಿಯಲ್ಲೇ ಇರುವುದನ್ನು ವಿರಳವಾಗಿಯಾದರೂ ನೋಡಬಹುದು.

ಎಲ್ಲ ಗಂಡಸರು ಮತ್ತು ಗಂಡು ಮಕ್ಕಳ ಸೊಂಟದಲ್ಲಿ ಉಡಿದಾರ ಇರಬೇಕೆಂಬ ಸಂಪ್ರದಾಯವಿದೆ. ಉಡಿದಾರವಿಲ್ಲದವನು ಹುಚ್ಚೆ ಉಯ್ಯುತ್ತಿರುವಾಗ ಕತ್ತೆ ಅರುಚಿದರೆ 'ಗ್ವಾದರ್ದು' ಆಗುತ್ತದೆ ಎಂಬ ನಂಬಿಕೆ. ಚರ್ಮದ ತುಂಡನ್ನೋ, ಸೊಪ್ಪುಸೆದೆ ಎಲೆ ತೊಗಟೆಯನ್ನೋ ಸೊಂಟಕ್ಕೆ ಸಿಕ್ಕಿಸಿಕೊಳ್ಳಲು ಯಾವುದೋ ಬಳ್ಳಿ ಅಥವಾ ಬೇರನ್ನು ಕಟ್ಟಿಕೊಂಡ ಮಾನವ ನೇಯ್ಗೆಯನ್ನು ಕಂಡುಕೊಂಡ ಮೇಲೆ ಲಂಗೋಟಿ ಅರಿವೆ ಮತ್ತು ನೂಲಿನ ಬಳಕೆ ನಿಲ್ಲುತ್ತಾ ಬಂದರೂ ಸಹ ನಂಬಿಕೆ ಸಂಪ್ರದಾಯಗಳ ಹಿನ್ನೆಲೆಯಲ್ಲಿ ಉಡಿದಾರ ಉಳಿದು ಬಂದಿದೆ.

ಪುರುಷರು ದಟ್ಟಿ ಸುತ್ತಿಕೊಳ್ಳುವುದು ಆ ನಂತರದ್ದು. ಇದರ ನಂತರ ಬಳಕೆಗೆ ಬಂದವು ನಾಲ್ಕು ಮೊಳದ ಪಂಚೆ, ಮಲ್‌ಪಂಚೆ, ಚಡ್ಡಿ, ನಾಲ್ಕು ಮೊಳದ ಒಂಟಿ ನಂತರದ್ದು. ಇದನ್ನು ಕಣಕಾಲು ಮೇಲಕ್ಕೆ ಸುತ್ತುವ ಅಜ್ಜಂದಿರನ್ನು ಇಂದಿಗೂ ಕಾಣಬಹುದಾಗಿದೆ. ಎರಡು-ಮೂರು ದಶಕಗಳ ಹಿಂದೆ ಗಂಡಸರೂ ತಲೆಕೂದಲು ಬೆಳೆಸಿ ಹೂ ಮುಡಿಯುತ್ತಿದ್ದರಂತೆ. ನೆತ್ತಿಯ ಮೇಲೆ ಜುಟ್ಟು ಬಿಟ್ಟು ಗಂಟು ಹಾಕುವ ಗಂಡಸರು ಇಂದೂ ಇದ್ದಾರೆ. ಎಕ್ಕಡವನ್ನು ಎಲ್ಲರೂ ಹಾಕುತ್ತಿರಲಿಲ್ಲ. ಕಾರಣ ಬಡತನವೇ ಆಗಿದೆ. ಅನುಕೂಲಸ್ಥರು ಮಾತ್ರ ಎಕ್ಕಡ ಮೆಟ್ಟುತ್ತಿದ್ದರು. ಎಕ್ಕಡಗಳನ್ನು ಸಾಮಾನ್ಯವಾಗಿ ಮೆಟ್ಟುತ್ತಿದ್ದರು. ಈ ಸಮುದಾಯದ ಇಂದಿನ ಯುವಕರು ಹವಾಯ್ ಚಪ್ಪಲಿಗಳನ್ನು ಮೆಟ್ಟಿಕೊಳ್ಳುತ್ತಾರೆ.

ಇಂದಿನ ಯುವಕರೂ ಲುಂಗಿಯುಡುತ್ತಿದ್ದಾರೆ. ತನ್ನ ಹಳ್ಳಿಯಿಂದ ಹೊರಗೆ ಹೊರಟನೆಂದರೆ ಪ್ಯಾಂಟು ಧರಿಸುತ್ತಿದ್ದ ಯುವಕ ಇಂದು ಮಲುಗುವಾಗಲೂ ಪ್ಯಾಂಟು ಬಿಚ್ಚಲಾರ. ಆದರೆ ಈ ಪ್ಯಾಂಟುಗಳ ಬೆಲೆಯು ಅತ್ಯಂತ ಕನಿಷ್ಟವಾದುದ್ದು. ಸಾಮಾನ್ಯ

ಮಟ್‌ಬಾತ್‌ಗಳಲ್ಲಿ ಕೊಂಡುಕೊಂಡವೆ ಆಗಿರುತ್ತವೆ. ಪ್ಯಾಂಟು ಹಾಕಿಕೊಳ್ಳಲು ಅವನು ಶಾಲಾ ಕಾಲೇಜಿಗೇನೂ ಹೋಗಬೇಕೆಂದೇನೂ ಇಲ್ಲ. ಈ ಪ್ಯಾಂಟುಧಾರಿ ಹೋದಲ್ಲೆಲ್ಲಾ ಕುರ್ಚಿಗಳೂ ಸಿಗುವುದಿಲ್ಲ. ಅವನೂ ಕುರ್ಚಿಗಾಗಿ ಕಾಯುವುದಿಲ್ಲ. ಧೂಳು-ದುಂಬು, ಕಸ-ಕಡ್ಡಿ ಯಾವುದರ ಮೇಲಾದರೂ ಸರಿ ಕೂರುತ್ತಾನೆ.

ಗಂಗಾಮತಸ್ಥ ಸ್ತ್ರೀಯರು, ತೇಪೆ ಹಾಕಿದ ಸೀರೆ ಉಡುತ್ತಿದ್ದವರೇ ಹೆಚ್ಚು. ಮಗುಚಿಕೊಂಡ ರವಿಕೆ ಅದೂ ತೇಪೆಯದೆ. ಬಹಳ ಹಿಂದೆ ಹೆಂಗಸರು ಗಂಡಸರಂತೆ ಸೊಂಟಕ್ಕೆ ಮತ್ತು ಎದೆಗೆ ಎರಡು ತುಂಡು ಬಟ್ಟೆಗಳನ್ನು ಸುತ್ತಿಕೊಳ್ಳುತ್ತಿದ್ದರಂತೆ. ಅನಂತರ ಸೀರೆಯಂಥ ಬಿಳಿಯ ಉಡುಪು ಬಂದಂತೆ ಕಾಣುತ್ತದೆ. ಆಮೇಲೆ ಬಳಕೆಗೆ ಬಂದದ್ದು ಬಣ್ಣದ ಸೀರೆಗಳು. ಈ ಬಣ್ಣದ ಸೀರೆಗಳನ್ನು 'ಬಣ್ಣ' ಎಂದೇ ಕರೆಯಲಾಗಿದೆ. 'ತೊಟ್ಟಿಲು ಹೊತ್ಕೊಂಡು ತೌರು ಬಣ್ಣ ಉಟ್ಕೊಂಡು' ಮೊದಲಾದ ಜನಪದ ಗೀತೆಗಳಲ್ಲಿ ಇದು ಸ್ಪಷ್ಟವಾಗುತ್ತದೆ. ಗಂಗಾಮತಸ್ಥ ಮಹಿಳೆಯರಿಗೆ ಐದು ಗಜದ ಸೀರೆಯೇ ಆಗಬೇಕಿತ್ತು. ಹಸಿರು ಕಂಬಿ ಸೀರೆ, ಕೆಂಪಂಚಿನ ಸೀರೆ, ಕಪ್ಪಂಚಿನ ಸೀರೆ ಜನಪ್ರಿಯವಾದ ಇವರ ಸೀರೆಗಳಂತೆ. ಒಳ ಉಡುಪುಗಳಾದ ಲಂಗ, ಬಾಡಿಗಳನ್ನು ತಾವು ತೊಡುವುದು ಹೋಗಲಿ, ಇತರ ಹೆಂಗಸರು ತೊಡುವುದೂ ನಮ್ಮ ಗಂಗಾಮತಸ್ಥ ಸ್ತ್ರೀಯರಲ್ಲಿ ಮುಜುಗರದ ವಿಷಯವಾಗಿತ್ತು.

ರವಿಕೆಯನ್ನು ಎದೆಯ ಕೆಳಭಾಗದಲ್ಲಿ ಎಳೆದು ಗಂಟು ಹಾಕುತ್ತಿದ್ದರು. ಗುಂಡಿಗಳ ಬಳಕೆ ಇತ್ತೀಚಿನದು. ಅದರಲ್ಲೂ ಮೊದಲಿಗೆ ತಗಡಿನ ಗುಂಡಿಗಳು, ಅನಂತರ ಬಂದವು ಅದುಮು ಗುಂಡಿಗಳು, ಹುಕ್ಕುಗಳು ಮೊದಲಾದವು. ವಯಸ್ಸಾದವರಾದರೆ ರವಿಕೆಗಳನ್ನ ಸಡಿಲವಾಗಿ ಹೊಲಿಸಿಕೊಳ್ಳುತ್ತಾರೆ. ಅಜ್ಜಿಯರ ರವಿಕೆಗಳ ಬೆನ್ನ ಮೇಲೆ ಮೂರು ಪಟ್ಟಿಗಳಿರುತ್ತಿದ್ದವು. ತೋಳಿನ ಮೇಲೂ ಪಟ್ಟಿಗಳು ಇರುತ್ತಿದ್ದವು. ಚಿಕ್ಕ ಹೆಣ್ಣು ಮಕ್ಕಳಿಗೆ ಅರಿವೆಯನ್ನೋ, ಸೀರೆಯ ತುಂಡನ್ನೋ ಸುತ್ತುತ್ತಾರೆ. ಜಡೆ ಕಟ್ಟಲು ಸೀರೆಯ ಅಂಚಿನ ತುಂಡು, ಕಂಬಳಿಯ ದಾರ ಉಪಯೋಗದಲ್ಲಿದ್ದವು. ಜಡೆ ಬಿಚ್ಚಿಕೊಳ್ಳದಂತೆ ಹಿಟ್ಟಿನ ಮಡಕೆಯ ಅಂಟನ್ನು ಜಡೆಯ ತುದಿಗೆ ಅಂಟಿಸುತ್ತಿದ್ದುದೂ ಉಂಟು. ತಾವು ಉಡುವ ಸೀರೆಯೇನಾದರೂ ಅರಿದರೆ, ಆ ಸೀರೆಯನ್ನ ತಮ್ಮ ಮನೆಯಲ್ಲಿರುವ ಹೆಣ್ಣು ಮಕ್ಕಳಿಗೆ ಲಂಗ, ಜಾಕೆಟ್‌ನ್ನು ಹೊಲಿಸಿಕೊಡುತ್ತಾರೆ.

ಚಿಕ್ಕ ಮಕ್ಕಳ ಉಡುಪು ಅಂಗಿ, ಕಾಚ ಅಥವಾ ಚಿಕ್ಕದಾದ ಚೆಡ್ಡಿ, ಬನಿಯನ್ ಇಲ್ಲವೇ ಲಂಗೋಟಿ ಇವುಗಳಾಗಿದ್ದವು. ಮಕ್ಕಳು ಮೂರು-ನಾಲ್ಕು ವರ್ಷದವರಾಗುತ್ತಲೇ ಕಿವಿಚುಚ್ಚಿ, ಕಿವಿಗೆ ಮುರು(ಬಟ್ಟು) ಹಾಕಲಾಗುತ್ತದೆ. ಮೊದಲು ಬೇವಿನ ಕಡ್ಡಿಯನ್ನು ಕಿವಿಗೆ ಚುಚ್ಚಲಾಗುತ್ತಿತ್ತು. ಇತ್ತೀಚೆಗೆ ಬೆಳ್ಳಿಯ ಅಥವಾ ಚಿನ್ನದ ಮುರುವನ್ನು ಹಾಕುತ್ತಾರೆ. ಕೊರಳಿಗೆ ಅಸಲಿ ತಾಯತ,

ಪದಕಗಳನ್ನು ಹಾಕಲಾಗುತ್ತದೆ. ಕರಡಿಯ ಕೂದಲು ತುಂಬಿರುವ ತಾಯಿತವನ್ನು ಕಟ್ಟುತ್ತಾರೆ. ಹುಲಿಯುಗುರನ್ನೂ ದಾರದಲ್ಲಿ ಪೋಣಿಸಿ ಕೊರಳಿಗೆ ಹಾಕುವುದುಂಟು. ಚಿಕ್ಕ ಮಕ್ಕಳ ನಡುವಿಗೆ ಬೆಳ್ಳಿಯ ಅಥವಾ ನೂಲಿನಿಂದ ತಯಾರಿಸಿದ ಉಡುದಾರವನ್ನು ಕಟ್ಟುತ್ತಾರೆ. ಹೆಣ್ಣು ಮಕ್ಕಳಾದರೆ ಕಾಲಿಗೆ ಗೆಜ್ಜೆ, ಕಿವಿಗೆ ಬಟ್ಟನ್ನು ತೊಡುವುದು ಸಾಮಾನ್ಯ.

ಗಂಗಾಮತಸ್ಥರು ಹಿಂದೆ ಬಟ್ಟೆ ಒಗೆಯಲು 'ಚೌಳುಮಣ್ಣನ್ನು' ಉಪಯೋಗಿಸುತ್ತಿದ್ದರು. ಜೌಗು ಪ್ರದೇಶದಲ್ಲಿ ಸಿಗುವ ಈ ಉಪ್ಪು ಮಣ್ಣನ್ನು ಬಳಿದುಕೊಂಡು ಬಂದು ಮಡಿಕೆಯಲ್ಲಿ ತುಂಬಿಟ್ಟುಕೊಳ್ಳುತ್ತಿದ್ದರು. ಈ ಚೌಳು ಮಣ್ಣಿನಿಂದಾಗಿ ಬಟ್ಟೆಗಳು ಬೇಗ ಬಣ್ಣ ಕಳೆದುಕೊಂಡು, ಹಾಳಾಗುತ್ತಿದ್ದವು. ಇವರು ಸ್ನಾನ ಮಾಡುವಾಗ ತಲೆಗೆ ಚೌಳು ಮಣ್ಣನ್ನೇ ಉಪಯೋಗಿಸುತ್ತಿದ್ದುಂಟು. ಆದರೆ ಇಂದು ಇವರು ಅತ್ಯಂತ ಕಡಿಮೆ ಬೆಲೆಯ ಬಟ್ಟೆಯ ಸಾಬೂನನ್ನು ಉಪಯೋಗಿಸುತ್ತಾರೆ.

**ಮದುವೆಯಲ್ಲಿ ಧರಿಸುವ ವೇಷಭೂಷಣಗಳು :**

ಗಂಗಾಮತಸ್ಥರು ಮದುವೆಯ ಸಂದರ್ಭದಲ್ಲಿ ಹೊಸ ಬಟ್ಟೆಗಳನ್ನು ಧರಿಸುತ್ತಾರೆ. ಗಂಡಿನ ಮನೆಯವರು ಮತ್ತು ಹೆಣ್ಣಿನ ಮನೆಯವರು ಕಡ್ಡಾಯವಾಗಿ ಹೊಸ ಉಡುಗೆಯನ್ನು ತೊಟ್ಟಿರುತ್ತಾರೆ. ಕಾರಣವೆಂದರೆ ಹೊಸ ಸಂಬಂಧವನ್ನ ಬೆಳೆಸುತ್ತಿದ್ದೇವೆ. ಆದ್ದುದರಿಂದ ನಾವು ಹೊಸತನವನ್ನು ಕಾಣಲು ಹೊಸ ಬಟ್ಟೆಯನ್ನು ಧರಿಸಬೇಕಲ್ಲ ಎಂದು ಹೇಳುತ್ತಾರೆ. ಆದರೆ ಇವರು ರೇಷ್ಮೆಯಂತಹ ದುಬಾರಿಯ ಬಟ್ಟೆಗಳನ್ನು ತೊಡುವುದಿರಲಿ, ಅದರ ಕನಸನ್ನು ಕಾಣುವುದಿಲ್ಲ. ಮದುವೆಯ ಗಂಡಿಗೆ ಕಾಸೆ ಪಂಚೆ, ತುಂಬುದೋಳಿನ ಬಿಳಿ ಅಂಗಿ, ಶಲ್ಯ, ಜರಿ ಪೇಟೆ ಬಾಡಿಗೆಯದು, ಧರಿಸುತ್ತಿದ್ದರು. ಈಚೆಗೆ ಪೇಟ, ಶಲ್ಯಗಳು ಕಡಿಮೆಯಾಗುತ್ತಿವೆ.

ಮದುವೆಯ ಹೆಣ್ಣು, ಗುಜ್ಜಾರಿ ಬಣ್ಣ ಸೀರೆ, ಪಟ್ಟೆ ಸೀರೆ, ಜರತಾರಿ ಸೀರೆ, ಕಲಾಪತ್ತಿನ ಸೀರೆ, ಕಾಟನ್ ಸೀರೆ, ಉಡುವ ಸೀರೆಗಳಾಗಿವೆ. ಅಲ್ಪ-ಸ್ವಲ್ಪ ಆರ್ಥಿಕವಾಗಿ ಉತ್ತಮರಾಗಿರುವವರು ರೇಷ್ಮೆಯ ಸೀರೆಯನ್ನ ಉಡುತ್ತಾರೆ. ಗಂಡು-ಹೆಣ್ಣಿನ ಬಟ್ಟೆಯ ಖರ್ಚು ಒಂದು ಸಾವಿರವನ್ನು ದಾಟದ ಹಾಗೆ ಬಟ್ಟೆಗಳನ್ನು ಖರೀದಿಸುತ್ತಾರೆ. ಮದುವೆಯಾದ ಆರೇಳು ತಿಂಗಳಷ್ಟೆ ಒಳ್ಳೆಯ ಬಟ್ಟೆ, ಇವು ಹರಿದವೆಂದರೆ ಮಾಮೂಲು. ಅದೇ ಮಾಸಿದ ಅಂಗಿ, ಚಡ್ಡಿ, ಅದೇ ತ್ಯಾಪೆ ಹಾಕಿದ ಸೀರೆ, ರವಿಕೆ, ಗಂಗಾಮತಸ್ಥರು ಇಂದಿಗೂ ಕೂಡ ಉತ್ತಮವಾದ ಬಟ್ಟೆಯನ್ನು ಹಾಕಿಕೊಳ್ಳುವ ಪರಿಸ್ಥಿತಿಯಲ್ಲಿ ಇಲ್ಲ ಎಂಬುದು ಅವರ ಬಡತನ ಮಟ್ಟವನ್ನು ಎತ್ತಿ ತೋರುತ್ತದೆ.

**ಹಬ್ಬಗಳಲ್ಲಿ ಧರಿಸುವ ವೇಷಭೂಷಣಗಳು** : ಹಬ್ಬ-ಹರಿದಿನಗಳಲ್ಲಿ ಗಂಗಾಮತಸ್ಥರ ಉಡುಪುಗಳು ಸಾಮಾನ್ಯ ದಿನಗಳಿಗಿಂತ ವಿಶೇಷವಾಗಿರುತ್ತಿದ್ದವು. ಗಂಡಸರು ಹಬ್ಬಗಳಲ್ಲಿ ಹೊಸ ಪಂಚೆ, ಹೊಸ ಬನಿಯನ್, ಹೊಸದಾದ ಬಿಳಿಯ ಅಂಗಿ, ಹುಡುಗರಾದರೆ ಬಣ್ಣದ ಅಂಗಿ, ಲುಂಗಿ, ಪ್ಯಾಂಟು, ಹೆಣ್ಣು ಮಕ್ಕಳಾದರೆ ಹೊಸದಾದ ಚೂಡಿದಾರ, ಅಪರೂಪಕ್ಕೆ ಲಂಗದಾವಣಿ, ಹೆಂಗಸರಾದರೆ ಹೊಸ ಸೀರೆ, ಇಲ್ಲವೇ ಹಬ್ಬಗಳಿಗಿಂಥ ಮೊದಲೆ ಖರೀದಿಸಿ ವಿಶೇಷ ದಿನಗಳಲ್ಲಿ ಮಾತ್ರ ಉಟ್ಟಿಕೊಳ್ಳಲು ಮೀಸಲಾಗಿಟ್ಟುಕೊಂಡಿರುವ ಸೀರೆಗಳನ್ನ ಉಟ್ಟಿಕೊಳ್ಳುತ್ತಾರೆ. ಮಂಡ್ಯ ಜಿಲ್ಲೆಯಲ್ಲಿ ಸಾಮಾನ್ಯವಾಗಿ ಗಂಗಾಮತಸ್ಥ ಸಮುದಾಯದ ಎಲ್ಲಾ ಮನೆಯವರೂ ಹೊಸದಾದ ಬಟ್ಟೆಯನ್ನು ಧರಿಸುತ್ತಾರೆ. ಉಳಿದಂತೆ ಉಗಾದಿ ಹಬ್ಬಗಳಲ್ಲಿ ಹೊಸ ಬಟ್ಟೆಯನ್ನು ಉಡುತ್ತಾರೆ. ಸಣ್ಣ ಮಕ್ಕಳಿಗಂತು, ತಾವು ಹೊಸ ವಸ್ತ್ರವನ್ನ ಉಡದಿದ್ದರೂ ಅವರಿಗೆ ತೆಗೆದುಕೊಡುತ್ತಾರೆ. ಉಳಿದಂತೆ ಪಿತೃಪಕ್ಷದ ದಿನದಂದು ಸತ್ತಿರುವ ಹಿರಿಯರಿಗೆ ಅವರು ಧರಿಸುತ್ತಿದ್ದ ಎಲ್ಲಾ ರೀತಿಯ ಹೊಸ ಬಟ್ಟೆಗಳನ್ನು ಎಡೆ ಇಟ್ಟು ಪೂಜೆ ಮಾಡುತ್ತಾರೆ. ಬೇರೆ ಜನಾಂಗಕ್ಕೆ ಹೋಲಿಸಿದಾಗ, ಇವರು ಹಬ್ಬ-ಹರಿದಿನಗಳಲ್ಲಿ ಹೊಸಬಟ್ಟೆಯನ್ನು ಉಡುವವರ ಸಂಖ್ಯೆ ಕಡಿಮೆ.

**ಸಾವಿನ ಸಂದರ್ಭದಲ್ಲಿ ಉಡುಗೆ** : ಸಾವು ಸಂಭವಿಸಿದಾಗ, ಶ್ರಾದ್ಧದ ದಿನ ತಲೆ ಬೋಳಿಸಿಕೊಳ್ಳುವಾತ ಹೊಸ ಬಟ್ಟೆಯನ್ನು ತೊಡಬೇಕು. ಎಂಥ ಬಡತನವಿದ್ದರೂ ಆ ದಿನ ಸಾಲವನ್ನಾದರೂ ಮಾಡಿ ಆತ ಹೊಸದಾದ ಬಟ್ಟೆಯನ್ನು ಹೊಲಿಸಿಕೊಳ್ಳಬೇಕು. ತಂದೆ ಸತ್ತಾಗ ಹಿರಿಯ ಮಗ, ತಾಯಿ ಸತ್ತರೆ ಕಿರಿಯ ಮಗ, ಹೊಸಬಟ್ಟೆಯನ್ನು ಉಡಬೇಕು. ಬಿಳಿ ಅಂಗಿ ಬಟ್ಟೆ, ಹೊಸದಾದ ಚಡ್ಡಿ, ಬಿಳಿಯ ಟವಲ್, ಕಡಿಮೆ ಬೆಲೆಯ ಬಿಳಿಯ ಪಂಚೆ, ಇವುಗಳು ಆ ದಿನದ ಆತನ ಉಡುಪುಗಳು.

**ಕೂಲಿ ಮಾಡುವಾಗ ಧರಿಸುವ ವೇಷಭೂಷಣಗಳು** : ಕುರಿ, ಆಡು, ಎಮ್ಮೆ, ದನಗಳನ್ನು ಮೇಯಿಸಲು ಹೋಗುವಾಗ, ತಮ್ಮ ಗದ್ದೆಯ ಕೆಲಸದಲ್ಲಿ ನಿರತರಾದ ಸಂದರ್ಭದಲ್ಲಿ, ಕೂಲಿಗೆ ಹೋಗುವಾಗ ಅವರ ಉಡುಪುಗಳು ಬೇರೆಯಾಗಿರುತ್ತವೆ. ಆಡು, ಕುರಿ ಮೇಯಿಸಲು ಹೋಗುವ ವ್ಯಕ್ತಿಯ ಉಡುಪು, ಖಾಕಿ ಚಡ್ಡಿ ಅಥವಾ ಪಟ್ಟಾಪಟ್ಟಿಯ ಚಡ್ಡಿ, ಬನಿಯನ್ ಒಂದು ಟವಲ್ ಆಗಿರುತ್ತದೆ. ಕಬ್ಬನ್ನು ಕಡಿಯಲು ಹೋಗುವವರ ಉಡುಪು ಹರಿದಿರುವ ಪ್ಯಾಂಟ್, ಹರಿದಿರುವ ತುಂಬುತೋಳಿನ ಶರ್ಟು, ಇದು ಗಂಡಸರ ಉಡುಪು. ಕಬ್ಬು ಕಡಿಯುವ ಅಥವಾ ಕಟ್ಟಲು ಹೋಗುವ ಹೆಂಗಸರು ಹಳೆಯ ಹರಿದಿರುವ ಸೀರೆ, ಅದರ ಮೇಲೆ ಗಂಡಸರ ತುಂಬು ತೋಳಿನ

ಶರ್ಟು ಹಳೆಯದು, ಇವುಗಳನ್ನು ಹಾಕಿಕೊಂಡು ಕೆಲಸ ನಿರ್ವಹಿಸುತ್ತಾರೆ. ನಾಟಿ ಕೆಲಸ ಮಾಡುವ ಹೆಂಗಸರು ಹಳೆಯ ಸೀರೆಯನ್ನು ಕಚ್ಚೆಯಾಗಿ ಕಟ್ಟಿಕೊಂಡು ನಾಟಿ ಮಾಡುತ್ತಾರೆ. ಉಳಿದಂತೆ ಕೂಲಿ ಮಾಡುವ ಗಂಡಸರು ಚಡ್ಡಿ, ಬಾಡಿಬಟ್ಟೆ, ತಲೆಗೆ ಟವಲ್ ಸುತ್ತಿಕೊಂಡು ಕೆಲಸ ಮಾಡುತ್ತಾರೆ. ಹೀಗೆ ಉಡುವ ಎಲ್ಲ ಬಟ್ಟೆಗಳನ್ನ ಕೆಲಸ ಮುಗಿಸಿ ಬಂದ ಮೇಲೆ ಕಳದಿಟ್ಟು ಬೇರೆ ಬಟ್ಟೆಗಳನ್ನ ಧರಿಸುತ್ತಾರೆ.

**ಆಭರಣಗಳು :** ಆಭರಣಗಳು ನಮ್ಮ ಸಂಸ್ಕೃತಿಯ ಪ್ರತೀಕವೂ ಆಗಿವೆ. ಅವು ಚಿನ್ನ, ಬೆಳ್ಳಿ, ತಾಮ್ರ, ರೋಲ್‌ಗೋಲ್ಡ್, ಕಾಗೇಬಂಗಾರ ಯಾವುದರದು ಆಗಿದ್ದರೂ ಕೆಲವು ಆಭರಣಗಳನ್ನ ಹೆಂಗಸರಂತು ಧರಿಸಲೇಬೇಕು. ಆಭರಣಗಳು ಅಲಂಕಾರಕ್ಕಲ್ಲದೆ ನಂಬಿಕೆ ಸಂಪ್ರದಾಯಗಳ ಸಂಬಂಧವಾಗಿಯೂ ಧರಿಸುವಂತಹವು. ತಾಮ್ರ ಅಥವಾ ಪಂಚಲೋಹದ ಮುಡಿ ಬಳೆ ಮಾಂತ್ರಿಕ ಶಕ್ತಿಯಿಂದ ಕೂಡಿದ್ದು, ತಾಯಿತ ಅಂತ್ರಗಳು ಭಯ, ಭೀತಿ, ದೆವ್ವ ಪಿಶಾಚಿಗಳ ಕಾಟ ಮೊದಲಾದ ಕಾರಣಕ್ಕೆ ಕಟ್ಟಿಕೊಳ್ಳುತ್ತಾರೆ. ಏಕೆಂದರೆ ಬೇಟೆಯಾಡಲು ಹೋದಾಗ ಯಾವುದೇ ತೊಂದರೆ ಆಗದಿರಲಿ ಎಂಬುದಾಗಿದೆ.

ಮಕ್ಕಳಿಗೆ ೩, ೫, ೭ ತಿಂಗಳಲ್ಲಿ ಕಿವಿ ಚುಚ್ಚಿಸುವ ಸಂಪ್ರದಾಯವಿದೆ. ಮೊದಲನೆಯ ಮಗುವಿಗಂತು ತೌರಿನವರೇ ಕಿವಿ ಚುಚ್ಚಿಸುತ್ತಾರೆ. ಚಿನ್ನದ ಕೊಂಡ್ಲು, ಒಂದು ಹರಳಿನ ಬೊಟ್ಟು, ಸ್ಟಾರ್, ಲೋಲಾಕು ಇವು ಮಕ್ಕಳ ಕಿವಿಯ ಆಭರಣಗಳು. ಸೊಂಟಕ್ಕೆ ಬೆಳ್ಳಿಯ ಉಡಿದಾರ, ಮಾಗಾಯಿಸರ, ಅಳ್ಳೀ ಎಲೆ ಸರಗಳು. ಅಳುವ ಮಕ್ಕಳಿಗೆ ಬೆಳ್ಳಿಯ ತಾಲಿ ಜೊತೆಗೆ ಕೆಂಪು, ಬಿಳಿ, ಹಸಿರು ಮಣಿಗಳನ್ನು ಸೇರಿಸಿ ಕೊರಳಿಗೆ ಕಟ್ಟುತ್ತಾರೆ. ಕೈಗೆ ಕರಿಯದಾರ ಅಥವಾ ಕರಿಮಣಿಗಳನ್ನು ಪೋಣಿಸಿ ಬಳೆಯಂತೆ ತೊಡಿಸುತ್ತಾರೆ. ಇದು ದೃಷ್ಟಿ ನಿವಾರಕ. ಕಾಲಿಗೆ ಕಾಲಂದಿಗೆ. ಹೆಣ್ಣು ಮಕ್ಕಳಿಗೆ ತೊಡುವಂತಹದು ಚೈನು, ಗೆಜ್ಜೆ. ಸಾಮಾನ್ಯ ಈ ಒಡವೆಗಳಲ್ಲಿ ಒಂದನ್ನೂ ತೊಡದ ಅದೆಷ್ಟೋ ಮಕ್ಕಳು ಈ ಸಮುದಾಯದಲ್ಲಿರುವುದು ಬೇರೆ ಮಾತು.

ಒಡವೆ ವಸ್ತುಗಳೆಂದರೆ ಅವು ಸ್ತ್ರೀಯರಿಗೆ ಸಂಬಂಧಿಸಿದವು ಎಂಬ ಭಾವನೆ ಬಂದು ಬಿಡುತ್ತದೆ. ಅವುಗಳ ವ್ಯಾಮೋಹ ಇವರಲ್ಲೇ ಹೆಚ್ಚು. ಉಡುಗೆ-ತೊಡುಗೆಗಳ ವೈವಿಧ್ಯವಿರುವುದೂ ಹೆಂಗಸರಲ್ಲಿ. ಮದುವೆಯ ಸಂದರ್ಭಕ್ಕೆ ಸಂಬಂಧಿಸಿದಂತೆ, ಮದುಮಗಳ ಆಭರಣಗಳಿಗೆ ಹೋಲಿಸಿದರೆ ಮದುಮಗನ ಆಭರಣಗಳ ಸಂಖ್ಯೆ ಕಡಿಮೆ. ಕಿವಿಗೆ ಹರಳಿರುವ ಓಲೆ, ಕಾಲಿಗೆ ಬೆಳ್ಳಿ ಚೈನು, ಮೂಗುತಿ, ಬೆಳ್ಳಿ ಕಾಲುಂಗುರ, ಬಳೆಗಳು ಇವುಗಳು ಮದುವೆಯ ಹೆಣ್ಣಿನ ಆಭರಣಗಳಾಗಿರುತ್ತಿದ್ದವು. ಇಷ್ಟೇ ಅಲ್ಲದೆ ಕಾಗೇ ಬಂಗಾರದಿಂದ ಮಾಡಿರುವ ಆಭರಣಗಳಾದ

ಲೋಲಾಕು, ಕತ್ತಿನ ಸರ, ಡಾಬು, ಕೈಗೆ ಬಳೆ ಇವುಗಳನ್ನ ಬಾಡಿಗೆಗೆ ತಂದು ಹಾಕುತ್ತಾರೆ. ಮದುವೆಯ ಗಂಡಿಗೆ ಹೆಚ್ಚೆಂದರೆ ಕೈಗೆ ಚಿನ್ನದ ಉಂಗುರ ಬಿಟ್ಟರೆ, ಒಂದು ವಾಚು ಮಾತ್ರ ಮದುವೆಯ ಹೆಣ್ಣು ತಲೆಬಾಚಿ ಜಡೆಬಿಲ್ಲೆ ಹಾಕಿಕೊಳ್ಳುತ್ತಾಳೆ. ತಲೆ ತುಂಬಾ ಮಲ್ಲಿಗೆ, ಜಾಜಿ, ಮುಂತಾದ ಹೂವುಗಳನ್ನು ಮುಡಿಯುತ್ತಾರೆ. ಹಣೆಗೆ ಕುಂಕುಮದ ಬೊಟ್ಟನ್ನು ಇಟ್ಟುಕೊಳ್ಳುತ್ತಾರೆ. ಹುಡುಗಿಯರು ಪೌಡರ್, ಕಾಡಿಗೆ, ಕೈ ಉಗುರುಗಳಿಗೆ ಬಣ್ಣ ಮುಂತಾದ ಅಲಂಕಾರ ಮಾಡಿಕೊಳ್ಳುತ್ತಾರೆ.

ಕೈಗೆ ಗಾಜಿನ ಬಳೆ ಶ್ರೇಷ್ಠ. ಕಪ್ಪು ಬಿಳಿಯಂತು ಮತ್ತೂ ಶ್ರೇಷ್ಠ. ಮದುವೆಯ ಹೆಣ್ಣಿಗೆ ತೊಡಿಸುವುದು ಕಪ್ಪು ಬಳೆಗಳನ್ನೇ. ಹೆಣ್ಣಿಗೆ ಬಳೆ ತೊಡಿಸುವಾಗ ಅಲ್ಲಿದ್ದ ಮುತ್ತೈದೆಯರಿಗೆಲ್ಲಾ ಎರಡೆರಡು ಕಪ್ಪು ಬಳೆಗಳನ್ನು ತೊಡಿಸುತ್ತಾರೆ. ಕರಿಯ ಪಟ್ಟೆ ಬಳೆ, ಹಸಿರು ಪಟ್ಟೆಯ ಬಳೆ, ಕೆಂಪ ಪಟ್ಟೆಯ ಬಳೆ, ನೀಲಿ ಪಟ್ಟೆಯ ಬಳೆಗಳನ್ನು ಹಿಂದಿನ ಕಾಲದ ಹೆಂಗಸರು ತೊಡುತ್ತಿದ್ದರು. ಮದುಮಗಳಿಗೆ ತೊಡಿಸಿದ ಕಪ್ಪು ಬಳೆ ವರ್ಷ ತುಂಬುವವರೆಗೂ ಇರಬೇಕೆಂಬ ನಂಬಿಕೆ ಇವರದು.

ವಯಸ್ಸಾದ ಹೆಂಗಸರು ಅದರಲ್ಲೂ ಮುದುಕಿಯರು ಕಿವಿಗೆ ಓಲೆಗರಿಯ ಬಿಚ್ಚೋಲೆಗಳನ್ನು ಇಟ್ಟುಕೊಳ್ಳುತ್ತಿದ್ದರು. ಕೊರಳ ಮಣಿಸರದೊಂದಿಗೆ ಗುಗ್ಗೆ ಕಡ್ಡಿ, ಹಲ್ಲುಕಡ್ಡಿ, ಸುಣ್ಣದ ಕಡ್ಡಿ, ಕುಡುಗೋಲು ಆಕಾರದ ಸಣ್ಣ ಆಯುಧ ಇವೆಲ್ಲ ಇರುತ್ತಿದ್ದವು. ಇವೆಲ್ಲ ಕಬ್ಬಿಣ ಮತ್ತು ಬೆಳ್ಳಿಯವು. ವಿಧವೆಯರಾದರೆ ಬೆಳ್ಳಿಯ ಬಳೆಗಳನ್ನು ಹಾಕಿಕೊಳ್ಳುತ್ತಾರೆ. ಮುದುಕಿಯರು ಕೈಗೆ ಬೆಳ್ಳಿಯ ಕಡಗವನ್ನು ಹಾಕಿಕೊಳ್ಳುತ್ತಾರೆ. ಇವರಲ್ಲಿ ಗಂಡಸರು ಮತ್ತು ಹೆಂಗಸರಿಬ್ಬರಲ್ಲೂ ಹಚ್ಚೆ ಹಾಕಿಸಿಕೊಳ್ಳುವ ಸಂಪ್ರದಾಯವಿದೆ. ಹೆಂಗಸರು ಎರಡೂ ಕಣ್ಣುಗಳ ಕೊನೆಯಲ್ಲಿ, ಗಲ್ಲ, ತೋಳು, ಮುಂಗೈ, ಹೆಬ್ಬೆರಳಿನ ಗಿಣ್ಣುಗಳ ಮೇಲೆಲ್ಲಾ ಹಚ್ಚೆ ಉಯ್ಸಿಕೊಂಡರೆ, ಗಂಡಸರು ತೋಳಿನ ಕೆಳಕ್ಕೆ ಹಾಕಿಸಿಕೊಳ್ಳುತ್ತಿದ್ದರು. ಸಾವಿನೊಂದಿಗೆ ಬರುವುದು ಹಚ್ಚೆಯೊಂದೇ ಎಂಬುದು ಹಚ್ಚೆ ಹಾಕಿಸಿಕೊಳ್ಳಲು ಮುಖ್ಯ ಕಾರಣ. ಇವರು ಬಡವರಾದ್ದರಿಂದ ಚಿನ್ನದ ಲೇಪನ ಮಾಡಿದ ಒಡವೆಗಳ ಜೊತೆಗೆ ನಾನಾ ಬಗೆಯ ಗಿಲೀಟಿನವುಗಳನ್ನ ಇಂದು ಹಳ್ಳಿಯ ಹೆಣ್ಣು ಮಕ್ಕಳು ಕೊಂಡು ತೊಟ್ಟು ಸಂತೋಷ ಪಡುತ್ತಾರೆ.

ದೇವಸ್ಥಾನಗಳಲ್ಲಿ ಪೂಜೆ ಮಾಡುವ ಗಂಗಾಮತಸ್ಥ ಪೂಜಾರಿಗಳು ಕೆಂಪು ಪಂಚೆ, ಕೆಂಪು ಟವಲ್ಲನ್ನು ಧರಿಸುತ್ತಾರೆ. ಆದರೆ ಅಂಗಿ ಬಟ್ಟೆ ಮಾತ್ರ ಬಿಳಿಯದು ಅಥವಾ ಬೇರೆ ಇನ್ಯಾವುದೋ ಬಣ್ಣದ್ದಾಗಿರುತ್ತದೆ. ಜುಟ್ಟನ್ನು ಪೂಜಾರಿಗಳು ಸಾಮಾನ್ಯವಾಗಿ ಬಿಟ್ಟಿರುತ್ತಾರೆ. ಇವರು ತಲೆಯ ಕೂದಲನ್ನು ಕತ್ತರಿಸುವುದಿಲ್ಲ. ಜಡೆಯಂತೆ ಕೂದಲು ಅಂಟಿಕೊಂಡು ಉಂಡೆ ಆಕಾರದಲ್ಲಿ

ಇರುತ್ತದೆ. ವಯಸ್ಸಾದ ಮುದುಕರು ಚಡ್ಡಿ, ಪೈಜಾಮು, ಒಂದು ಟವಲನ್ನು ಧರಿಸುತ್ತಾರೆ. ಹೆಂಗಸರು ಆರು ಮೊಳದ ಸೀರೆಯನ್ನು ಉಡುತ್ತಾರೆ. ಇವರು ತಮ್ಮ ಸೊಂಟಕ್ಕೆ ಯಾವಾಗಲು ಎಲೆ-ಅಡಿಕೆಯ ಚೀಲವನ್ನು ಸಿಕ್ಕಿಸಿಕೊಂಡಿರುತ್ತಾರೆ. ಮೀನು ಹಿಡಿಯುವಾಗ ಕೆಲವರು ಪ್ಯಾಂಟ್ ಧರಿಸಿದ್ದರೆ ಕೆಲವರು ಬನಿಯನ್ ಮತ್ತು ಚಡ್ಡಿಯನ್ನು ಧರಿಸಿರುತ್ತಾರೆ. ಇವರು-ನೆಂಟರ ಮನೆಗೆ ಹೋಗುವಾಗ ಊರ ಬಿಟ್ಟ ಮೇಲೆ ಅಥವಾ ನೆಂಟರ ಊರು ಇನ್ನು ಸ್ವಲ್ಪ ದೂರ ಇದ್ದಂತೆ ಸುತ್ತಿಕೊಂಡು ತನ್ನ ಊರಿನ ಹತ್ತಿರ ಬರುತ್ತಿದ್ದಂತೆಯೇ ಬಿಚ್ಚಿ ಹೆಗಲ ಮೇಲೆ ಹಾಕಿಕೊಂಡು ಬರುತ್ತಿದ್ದವರೇ ಹೆಚ್ಚು. ಪಂಚೆ ಹೆಗಲ ಮೇಲಿತ್ತೆಂದರೆ ಅವನು ಎಲ್ಲೋ ಹೊರಟಿದ್ದಾನೆಂದೇ ಅರ್ಥ.

ಮಂಡ್ಯ ಜಿಲ್ಲೆಯ ಗಂಗಾಮತಸ್ಥರ ಉಡುಪು ಪ್ರಮುಖವಾಗಿ ಚಡ್ಡಿ, ಅಂಗಿ, ಟವಲ್ ಆದರೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ವಾಸಿಸುವ ಮೀನುಗಾರರಾದ ಮೊಗವೀರರ ಉಡುಗೆ-ತೊಡುಗೆಯೇ ಬೇರೆ. ಇಲ್ಲಿಯ ಗಂಗಾಮತಸ್ಥರೇ ದಕ್ಷಿಣ ಕನ್ನಡ ಜಿಲ್ಲೆಯ ಮೊಗವೀರರು. "ಕಚ್ಚೆ, ಜುಬ್ಬ, ಸೊಂಟಕ್ಕೊಂದು ಬೈರಾಸು, ತಲೆಗೊಂದು ಅಡಿಕೆ ಹಾಳೆಯ ಟೊಪ್ಪಿ ಅಥವಾ ಚೌಕವಸ್ತ್ರ. ಇದು ದೋಣಿ ಪಯಣಕ್ಕೆ ಸಿದ್ಧರಾದ ಮೀನುಗಾರರ ಹಳೆಯ ಮಾದರಿಯ ಪೋಷಾಕು. ಹಿಂದಿನ ಕಾಲದಲ್ಲಿ ಹೆಚ್ಚಾಗಿ ಎಲ್ಲ ಮೀನುಗಾರರೂ ಹಣ್ಚಿಪ್ಪಿನ ಮತ್ತು ಮತ್ತಿ ಮರದ ಕೆತ್ತೆಯ ರಸದಲ್ಲಿ ಬೇಯಿಸಿ ಒಣಗಿಸಿದ ಒಂದು ವಿಶಿಷ್ಟವಾದ ಅಂಗಿಯನ್ನು ಧರಿಸುತ್ತಿದ್ದರು. ತುಳುವಿನಲ್ಲಿ ಅದನ್ನು 'ಪಣ್ಪುದ ಅಂಗಿ' ಎನ್ನುತ್ತಾರೆ. ಹೀಗೆ ಸಿದ್ಧಪಡಿಸಿದ ಉಡುಪು ತುಂಬ ದಪ್ಪವಾಗಿದ್ದು ಬಹುಕಾಲ ಬಾಳಿಕೆ ಬರುತ್ತದೆ. ಮೊಗವೀರ ಸಮಾಜದ ಗುರಿಕಾರರು 'ಅಂಬುಲೆ' (ಒಂಟಿ) ಎಂಬ ಒಂದು ವಿಶೇಷ ಆಭರಣ ಧರಿಸುತ್ತಾರೆ. ಕೈಗೆ ಚಿನ್ನದ ಬಳೆ ಹಾಕಿಕೊಳ್ಳುತ್ತಾರೆ."[೨೪] ಇಲ್ಲಿ ನಾವು ಏನನ್ನ ಗಮನಿಸಬಹುದೆಂದರೆ ಒಂದೇ ಸಮುದಾಯಕ್ಕೆ ಸೇರಿದ ಇವರ ಉಡುಪುಗಳಲ್ಲಿ ಭಿನ್ನತೆಯನ್ನ ಗುರುತಿಸಬಹುದು. ಇದಕ್ಕೆ ಪ್ರಮುಖ ಕಾರಣವೆಂದರೆ ಪ್ರಾದೇಶಿಕತೆಯಾಗಿದೆ.

ಜಿಲ್ಲೆಯ ಗಂಗಾಮತಸ್ಥರು ಸೌಂದರ್ಯಪ್ರಜ್ಞೆಯ ಬಗ್ಗೆ ಹೆಚ್ಚು ಮಹತ್ವವನ್ನು ನೀಡುವಂತೆ ಕಾಣುವುದಿಲ್ಲ. ಇದಕ್ಕೆ ಪ್ರಮುಖವಾದ ಕಾರಣ ಅವರಲ್ಲಿರುವ ಬಡತನವಾಗಿದೆ. ಹೊಟ್ಟೆ ತುಂಬಿಸಿದರೇ ಸಾಕಾಗಿರುವ ಇವರಿಗೆ ಬಟ್ಟೆಗೆ ಅತಿಯಾದ ಗಮನವನ್ನ ನೀಡಿಲ್ಲ. ಮಾನವನ್ನ ಕಾಪಾಡಲು ಹಳೆಯವೋ ಇಲ್ಲ ಪುಟ್‌ಬಾತ್‌ಗಳಲ್ಲಿ ಮಾರುವ ಕಡಿಮೆ ಬೆಲೆಯ ಬಟ್ಟೆಗಳನ್ನೋ ಉಟ್ಟಿಕೊಂಡು ಜೀವನ ಸಾಗಿಸುತ್ತಾರೆ. ಚಳಿಗಾಲದಲ್ಲಿ ಮುದುಕರ ಹೆಗಲ ಮೇಲೆ ಯಾವಾಗಲೂ ಒಂದು ಕಂಬಳಿಯಂತೂ ಇದ್ದೇ ಇರುತ್ತದೆ. ಏಕೆಂದರೆ ಇವರು ಹಾಕಿರುವ ಬಟ್ಟೆ ಚಳಿಯನ್ನು ತಡೆಯಲಾರದ್ದರಿಂದ, ಇವರಿಗೆ ಕಂಬಳಿಯೇ ಗತಿಯಾಗಿದೆ. ಉಳಿದವರು ಅಪರೂಪಕ್ಕೆ ಸ್ವೆಟ್ರನ್ನ

ಧರಿಸುವವರನ್ನ ನೋಡಬಹುದು. ಮಳೆಗಾಲದಲ್ಲಿ ಹೊರಗೆ ಹೋಗಿದ್ದವರು ನೆನೆಯದಂತೆ ಸುರಕ್ಷಿತವಾಗಿರಲು ಪ್ಲಾಸ್ಟಿಕ್ ಚೀಲವನ್ನು ಗೊಪ್ಪೆ ಮಾಡಿಕೊಂಡಿರುತ್ತಾರೆ. ಬೇಸಿಗೆಯಲ್ಲಂತೂ ಇವರಿಗೆ ಬನಿಯನ್ ಬಿಟ್ಟರೆ ಅಂಗಿಯ ಪರಿವೇ ಇರುವುದಿಲ್ಲ. ವಯಸ್ಸಾದ ಮುದುಕಿಯರು ರವಿಕೆಯನ್ನ ಹಾಕುವುದಿಲ್ಲ. ಇವರ ಬಡತನಕ್ಕೆ ಬೇಸಿಗೆ ಕಾಲವೇ ಸೂಕ್ತವೇನೋ ಅನ್ನಿಸುತ್ತದೆ.

### ೩.೮ ಬೇಟೆ

ಮನುಷ್ಯ ಮೂಲತಃ ಕಾಡಿನಲ್ಲಿದ್ದನೆಂಬ ಬಗ್ಗೆ ಯಾವ ವಿವಾದವೂ ಇಲ್ಲ. ಗೆಡ್ಡೆ ಗೆಣಸುಗಳನ್ನು ತಿಂದು ಜೀವಿಸುತ್ತಿದ್ದ ಮನುಷ್ಯ 'ಬೇಟೆ'ಯ ಮೂಲಕವೂ ಆಹಾರ ಸಂಗ್ರಹಿಸುತ್ತಿದ್ದ. ಬೇಟೆಯು ಅಂದಿನ ಪ್ರಮುಖ ಆಹಾರೋತ್ಪಾದನ ಸಾಧನವಾಗಿತ್ತು. ಆದರೆ ಇದೇ 'ಬೇಟೆ' ಈಗ ಏನಾಗಿದೆಯೆಂಬುದನ್ನು ಗಮನಿಸಿದರೆ ಸಂಸ್ಕೃತಿಯ ಸ್ಥಿತ್ಯಂತರ ಹಾಗೂ ಚಲನಶೀಲತೆಯ ಸ್ವರೂಪದ ಅರಿವಾಗುತ್ತದೆ. ಆಹಾರ ಉತ್ಪಾದನಾ ವಿಧಾನವಾಗಿದ್ದ 'ಬೇಟೆ' ಬರಬರುತ್ತ ಒಂದು ಪ್ರಾಸಂಗಿಕ ಕ್ರಿಯೆಯಾಯಿತು. ಬೇಟೆ ರಾಜರಿಗೆ 'ಹವ್ಯಾಸ'ವಾಯಿತು. ಆಹಾರ ಉತ್ಪಾದನಾ ವಿಧಾನವೊಂದು ಹವ್ಯಾಸವಾಗಿ ಪರಿವರ್ತನೆಗೊಂಡ ಪ್ರಕ್ರಿಯೆಯಲ್ಲೇ ಗ್ರಾಮಗಳು ಸೃಷ್ಟಿಯಾದವು. ಈ ಸಂದರ್ಭದಲ್ಲಿ ಕಾಡಿನ ಪ್ರಮುಖ ಆರ್ಥಿಕ ಚಟುವಟಿಕೆಯಾಗಿದ್ದ 'ಬೇಟೆ' ಹವ್ಯಾಸವಾಗಿತ್ತು. ಕಾಡಿನಲ್ಲಿ ನಿತ್ಯಾಹಾರವಾಗಿದ್ದ ಮಾಂಸಾಹಾರವು ಊರಿನಲ್ಲಿ 'ಹಬ್ಬದ ಆಹಾರ'ವಾಗಿತ್ತು ಗ್ರಾಮದ ಸಂಸ್ಕೃತಿ ಮತ್ತಷ್ಟು ವಿಸ್ತರಿಸುತ್ತ, ವಿಕಾಸವಾಗುತ್ತಾ ಹೋದಂತೆ ಬೇಟೆಯು ಜನರ ಆಚರಣೆಯಾಗಿ ಪರಿವರ್ತನೆಯಾಗಿತ್ತು. ಕೆಲವು ಹಬ್ಬಗಳಂದು ಊರಿನ ಜನರು ಬೇಟೆಗೆಂದು ಹೋಗಿ ಯಾವುದಾದರೂ ಒಂದು ಪ್ರಾಣಿಯನ್ನಾದರೂ ಹಿಡಿದು ತರುವುದು ಇಂದಿಗೂ ಗಂಗಾಮತಸ್ಥರಲ್ಲಿ ಕಾಣಬಹುದು. ಅದರ ಮಾಂಸವನ್ನು ಬೇಟೆಗೆ ಹೋಗಿದ್ದ ಜನರೆಲ್ಲಾ ಸೇರಿ ಹಂಚಿಕೊಳ್ಳುತ್ತಾರೆ.

ಕಾಡಿನ ಸಂಸ್ಕೃತಿಯಲ್ಲಿದ್ದ ಸಾಮೂಹಿಕ ಉತ್ಪಾದನೆ ಮತ್ತು ಸಮಾನ ಹಂಚಿಕೆಯು ಹಬ್ಬದಲ್ಲಿ 'ಆಚರಣೆ'ಯಾಗಿ ಪರಿವರ್ತನೆ ಹೊಂದಿರುವುದು ಗಮನಾರ್ಹವಾಗಿದೆ. ಕಾಡಿನಲ್ಲಿದ್ದ ಮನುಷ್ಯ ಪ್ರಾಣಿಗಳ ಜೊತೆ ಬದುಕುತ್ತ ಕೆಲವನ್ನು ಸಾಕುತ್ತ, ಕೆಲವನ್ನು ಕೊಲ್ಲುತ್ತ ಇದ್ದ ವೈರುಧ್ಯ ವಿಶೇಷವಾದುದು, ಕೊಲ್ಲುವ ಕ್ರಿಯೆಯನ್ನು ಒಂದು ಅನಿವಾರ್ಯ ಆಹಾರೋತ್ಪಾದನಾ ಎಂದು ಭಾವಿಸಿದ್ದರಿಂದ ಅಂದು ಹಿಂಸೆಯ ಕಲ್ಪನೆ ಇರಲು ಸಾಧ್ಯವಿಲ್ಲ. "ಕಾಡಿನ ಸಂಸ್ಕೃತಿಯ ಸಂಬಂಧವುಳ್ಳ 'ಬೇಟೆ'ಯು ರಾಜರಿಗೆ ಹವ್ಯಾಸವಾಗಿ, ಜನರಿಗೆ ಆಚರಣೆಯಾಗಿ ಉಳಿದು ಈಗ ಬೇರೆ-ಬೇರೆ ಅರ್ಥಗಳನ್ನು ಪಡೆದಿದೆ. ಈ ಪ್ರಕ್ರಿಯೆಯಲ್ಲಿ ಕಾಡಿನಿಂದ ಊರಿಗೆ ವಿಕಾಸಹೊಂದಿದ ಸಂಸ್ಕೃತಿಯು ಹಿಂಸೆಯಿಂದ ಅಹಿಂಸೆಯ ಕಡೆಗೆ ಸಾಗುತ್ತಾ ಬಂದಿದ್ದನ್ನು ಕಾಣಬಹುದು"[೨೨]

ಆದರೆ ಗಂಗಾಮತಸ್ಥರು ಬೇಟೆಯನ್ನು ತಮ್ಮ ಜೀವನದ ಪ್ರಮುಖ ವೃತ್ತಿಯನ್ನಾಗಿ ಮಾಡಿಕೊಂಡಿದ್ದಾರೆ. ಆದುದ್ದರಿಂದಲೇ ರಾಜರು ತಮ್ಮ ಆಸ್ಥಾನಗಳಲ್ಲಿ ಗಂಗಾಮತಸ್ಥರನ್ನು ಬೇಟೆಯಾಡುವುದಕ್ಕಾಗಿ ಇರಿಸಿಕೊಳ್ಳುತ್ತಿದ್ದರು. ರಾಜರೊಂದಿಗೆ ಇವರು ಹೋಗಿ ಬೇಟೆಯನ್ನ ಆಡಬೇಕಾಗಿತ್ತು. ರಾಜರಿಗೆ ಬೇಟೆ ಮನರಂಜನೆಯಾಗಿದ್ದರಿಂದ ತಮ್ಮೊಟ್ಟಿಗೆ ಬೇಟೆಯಾಡುವುದರಲ್ಲಿ ನಿಪುಣರಾದ ಗಂಗಾಮತಸ್ಥರನ್ನ ಕರೆದುಕೊಂಡು ಹೋಗುತ್ತಿದ್ದರು. ಇವರು ರಾಜನ ಪರಿವಾರದಲ್ಲಿ ಇದ್ದುದರಿಂದ ಗಂಗಾಮತಸ್ಥರನ್ನ 'ಪರಿವಾರ'ದವರು ಎಂದೂ ಸಹ ಕರೆಯುತ್ತಾರೆ.

ಗಂಗಾಮತಸ್ಥರು 'ಬೇಟೆ'ಯಾಡುವುದನ್ನ ಕೇವಲ ಹವ್ಯಾಸವಾಗಿ ಮಾತ್ರ ಪರಿಗಣಿಸಿಲ್ಲ. ಅದನ್ನ ವೃತ್ತಿಯನ್ನಾಗಿಯೂ ಕೆಲವರು ರೂಢಿಸಿಕೊಂಡಿದ್ದಾರೆ. ಬೇಟೆಯಾಡುವುದರಲ್ಲಿ ಮಧ್ಯಮ ವಯಸ್ಕರು ಮತ್ತು ಯುವಕರು ಹೆಚ್ಚಾಗಿ ಪಾಲ್ಗೊಳ್ಳುತ್ತಾರೆ. ಕೆಲವು ವೃದ್ಧರು ಸಹ ಬೇಟೆಯಾಡುವುದಕ್ಕೆ ಹೋಗುತ್ತಾರೆ. ವರ್ಷದ ಎಲ್ಲ ಕಾಲದಲ್ಲೂ ಬಿಡುವು ಸಿಕ್ಕಾಗಲೆಲ್ಲ ಅದರಲ್ಲೂ ಹಬ್ಬದ ದಿನಗಳಲ್ಲಿ ಹೆಚ್ಚಾಗಿ ಬೇಟೆಗೆ ಹೋಗುವುದಾದರೂ, ಮಳೆಗಾಲದಲ್ಲಿ ಬೇಟೆಗೆ ಹೆಚ್ಚು ಅನುಕೂಲಕರವಾದ ಕಾಲವಾಗಿದೆ. ಮಳೆಗಾಲದಲ್ಲಿ ಮಳೆಬಾರದ ವಾತಾವರಣವನ್ನು ನೋಡಿಕೊಂಡು ಬೇಟೆಗೆ ಹೋಗುತ್ತಾರೆ. ಕಾರಣವೆಂದರೆ ಪ್ರಾಣಿಗಳ ಹೆಜ್ಜೆ ಗುರುತುಗಳನ್ನು ನೋಡಿ, ಬೇಟೆಯಾಡಲು ಅನುಕೂಲವಾಗುತ್ತೆ.

ಮಂಡ್ಯ ಜಿಲ್ಲೆಯ ಗಂಗಾಮತಸ್ಥರು ಹೆಚ್ಚಾಗಿ ಮೀನಿನ ಬೇಟೆಯನ್ನು ಮಾಡುತ್ತಾರೆ. ಇವರು "ನದಿಗಳ ತೀರ ಪ್ರದೇಶಗಳ ಅಥವಾ ಕೆರೆ ಕಟ್ಟೆಗಳ ಸಮೀಪಗಳಲ್ಲಿ ಹೆಚ್ಚಾಗಿ ನೆಲೆಸುತ್ತಾರೆ. ಈ ಜನಾಂಗದ ಜನರು ಹಿಂದೆ ಬೇರೆ ಯಾವುದೇ ಉದ್ಯೋಗವನ್ನು ಮಾಡುತ್ತಿರಲಿಲ್ಲ. ಇವರ ಮೂಲ ಕಸುಬು ಕೆರೆ ಕಟ್ಟೆಗಳಲ್ಲಿ ನದಿಗಳಲ್ಲಿ ಮೀನುಗಳ ಬೇಟೆ ಅಥವಾ ಶಿಕಾರಿಯನ್ನು ಮಾಡುವುದು ಮಾತ್ರ"[೫೬] ಆಗಿತ್ತು. ಇದರ ಜೊತೆಗೆ ಕಾಡಿನಲ್ಲಿ ವಾಸಿಸುವ ಪ್ರಾಣಿ-ಪಕ್ಷಿಗಳ ಬೇಟೆಯನ್ನು ಆಡುತ್ತಾರೆ. ಆದರೆ ಮೀನಿನ ಬೇಟೆಯು ಇಂದಿಗೂ ಜಿಲ್ಲೆಯಾದ್ಯಂತ ಈ ಸಮುದಾಯದವರೇ ಆಡುತ್ತಾರೆ. ಮೀನಿನ ಬೇಟೆಯು ಅವರಿಗೆ ಪ್ರಮುಖ ವೃತ್ತಿಯಾಗಿದೆ. ಪ್ರತಿದಿನ ಸಂಜೆಯ ಸಮಯದಲ್ಲಿ ಬಲೆಯನ್ನು ಕೆರೆ ಅಥವಾ ನದಿಯಲ್ಲಿ ಬಿಟ್ಟು ಬೆಳಗಿನ ಸಮಯದಲ್ಲಿ ಬಲೆಯನ್ನು ಎತ್ತುವ ಕಾರ್ಯ ನಡೆಯುತ್ತದೆ. ಬೆಳಗ್ಗೆ ೬ ರಿಂದ ೮ ಗಂಟೆಯವರೆಗೆ ಮಾತ್ರ ಮೀನಿನ ಬೇಟೆಯನ್ನು ಮಾಡುತ್ತಾರೆ. ಬಲೆಯಿಂದಷ್ಟಲ್ಲದೇ ಮೀನುಗಳನ್ನ 'ಗಾಳ'ದ ಮೂಲಕವೂ ಹಿಡಿಯುತ್ತಾರೆ. ಸಾಮಾನ್ಯವಾಗಿ ಜೂನ್, ಜುಲೈ, ಆಗಸ್ಟ್, ಸೆಪ್ಟಂಬರ್ ತಿಂಗಳನ್ನ ಬಿಟ್ಟರೆ ಉಳಿದ ಎಲ್ಲಾ ಕಾಲಗಳಲ್ಲೂ ಮೀನಿನ ಬೇಟೆಯನ್ನು ಮಾಡುತ್ತಾರೆ. ಮೀನುಗಾರಿಕೆಯು

ಎಲ್ಲಾ ಬೇಟೆಗಳಿಗಿಂತಲೂ ಹೆಚ್ಚು ಆದಾಯವನ್ನು ವರ್ಷ ಪೂರ್ಣ ತಂದುಕೊಡುವುದರಿಂದಾಗಿ, ಇದು ಅವರ ಸಾಂಪ್ರದಾಯಿಕ ವೃತ್ತಿಗಳಲ್ಲಿ ಮೀನಿನ ಬೇಟೆಯು ಒಂದಾಗಿದೆ.

ತಮ್ಮ ವಿರಾಮದ ಸಮಯದಲ್ಲಿ ಕಾಲ ಕಳೆಯದೆ ತಮಗೆ ಅವಶ್ಯಕವಾದ ಬಲೆಯನ್ನು ತಾವೇ ಹೆಣೆಯುತ್ತಾರೆ. ಇವರು ಮೀನುಗಳ ಶಿಕಾರಿ ಮಾಡುವುದನ್ನು ಮನಗಂಡ ಸರ್ಕಾರವು ಇವರಿಗೆ ಬಲೆಗೆ ಬೇಕಾದ ಕಚ್ಚಾವಸ್ತುಗಳನ್ನು ಖರೀದಿಸಲು ಹಲವು ಸೌಲಭ್ಯಗಳನ್ನು, ಸುಲಭ ಕಂತುಗಳ ಸಾಲ ಸೌಲಭ್ಯ ಹಾಗೂ ಆಧುನಿಕ ರೀತಿಯ ಬಲೆಗಳನ್ನು ಸಿದ್ಧಪಡಿಸಿಕೊಳ್ಳಲು ಅಗತ್ಯವಾದ ನೂಲು ಅಥವಾ ದಾರವನ್ನು ಒದಗಿಸುತ್ತದೆ. ದೊಡ್ಡ ಬಲೆ, ಸಾಮಾನ್ಯ ಬಲೆ, ಸೀಗಡಿ ಬಲೆ, ಬೀಸುಬಲೆ ಇನ್ನೂ ಮುಂತಾದ ಬಲೆಗಳನ್ನು ತಾವೆ ತಯಾರಿಸಿಕೊಳ್ಳುತ್ತಾರೆ. ಸಾಮಾನ್ಯವಾಗಿ ಮುದುಕರು, ಹೆಂಗಸರು ಬಲೆಯನ್ನು ಹೆಣೆಯುತ್ತಾರೆ. ಹೀಗಾಗಿ ಇವರ ಬೇಟೆಗೆ ಹೆಚ್ಚಿನ ಖರ್ಚು ತಗುಲುವುದಿಲ್ಲ. ಖರ್ಚಿಗಿಂತ ಉತ್ಪನ್ನವೇ ಜಾಸ್ತಿಯಾಗಿರುತ್ತದೆ. ಆದ್ದರಿಂದ "ಸಿಕ್ಕಿದಾಗ ಶಿಕಾರಿ ಸಿಕ್ಕದಿದ್ದಾಗ ಭಿಕಾರಿ" ಎಂದು ಹೇಳುವ ಹಾಗೆ ಇವರ ಜೀವನದ ರೀತಿ. ಹಾಗಾಗಿ ಇವರ ಆರ್ಥಿಕ ಜೀವನಕ್ಕೆ ಒಂದು ನಿರ್ದಿಷ್ಟತೆ ಇಲ್ಲದೆ ದುರ್ಬಲವಾದ ಜೀವನ ನಡೆಸುತ್ತಿದ್ದಾರೆ. ಆದುದ್ದರಿಂದ ಮೀನಿನ ಬೇಟೆಯು ಗಂಗಾಮತಸ್ಥರ ಪ್ರಮುಖ ಉದ್ಯೋಗವೂ ಆಗಿದೆ. ಜಿಲ್ಲೆಯಲ್ಲಿ ಅನೇಕರು ಈ ವೃತ್ತಿಯನ್ನು ನಂಬಿ ಬದುಕುವ ಕುಟುಂಬಗಳಿವೆ.

**ಪ್ರಾಣಿಗಳ ಮತ್ತು ಪಕ್ಷಿಗಳ ಬೇಟೆಯಾಡುವ ವಿಧಾನ :**

ಗಂಗಾಮತಸ್ಥ ಬೇಟೆಗಾರರೆಲ್ಲ ಒಂದೆಡೆ ಸೇರಿ ಬೇಟೆಗೆ ಹೋಗುವ ದಿನ ಮತ್ತು ಸ್ಥಳವನ್ನು ನಿಗದಿಮಾಡಿ, ಆ ಸುತ್ತಲಿನ ಬೇಟೆಗಾರರೆಲ್ಲರಿಗೂ ತಿಳಿಸುವರು. ಸಾಮಾನ್ಯವಾಗಿ ಬೇಟೆಗೆ ಹತ್ತರಿಂದ ಇಪ್ಪತ್ತು ಮೈಲುಗಳ ದೂರದವರೆಗೂ ಬೇಟೆಗೆ ಹೋಗುತ್ತಾರೆ. ಹೆಂಗಸರು ಬೇಟೆಗೆ ಹೊರಡುವ ದಿನ ಅಡುಗೆಯನ್ನು ಸಿದ್ಧಗೊಳಿಸಿ ಬುತ್ತಿಯನ್ನು ಕಟ್ಟಿಕೊಡುತ್ತಾರೆ. ಬೇಟೆಗೆ ಹೋಗುವುದಕ್ಕಿಂತ ಮೊದಲು ತುಪಾಕಿಗಳನ್ನು ಮತ್ತು ಬಲೆಗಳನ್ನು ಸಿದ್ದಮಾಡಿಕೊಳ್ಳುತ್ತಾರೆ. ಬೇಟೆಯಾಡುವುದು ಸಾಮಾನ್ಯವಾಗಿ ರಾತ್ರಿಯ ವೇಳೆಯಲ್ಲೇ. ಏಕೆಂದರೆ ಪ್ರಾಣಿಗಳು ಇರುವ ಸ್ಥಳ ಮತ್ತು ಅವುಗಳ ಸದ್ದು, ಹೆಜ್ಜೆ ಇವುಗಳನ್ನು ನೋಡಿಕೊಂಡು, ಪ್ರಾಣಿಗಳು ಯಾವ ಸ್ಥಳದಲ್ಲಿ ಇವೆ ಎಂಬುದನ್ನ ಗುರುತಿಸಿಕೊಂಡು ಬೇಟೆಯಾಡುತ್ತಾರೆ. ಕೆಲವರು 'ನಾಯಿ'ಗಳನ್ನೂ ಛೂ ಬಿಡುತ್ತ, ಕಾಕ ಹಾಕುತ್ತ, ಕೋಲು-ಕಲ್ಲುಗಳಿಂದ ಪೊದೆ ಬಡಿದು ಸದ್ದು ಮಾಡುತ್ತ, ಪ್ರಾಣಿಗಳನ್ನ ಬಲೆಗೆ ಬೀಳಿಸುತ್ತಾರೆ. ಇಲ್ಲವೇ ಆಯಕಟ್ಟಿನ ಸ್ಥಳದಲ್ಲಿ ಪ್ರಾಣಿಯ ಬರವಿಗಾಗಿ ಕಾದುಕುಳಿತು ಬಂದೂಕ ಹಿಡಿದು ಬಂದ ಪ್ರಾಣಿಯನ್ನು ಈಡಿಟ್ಟು ಕೊಲ್ಲುತ್ತಾರೆ.

ರಾತ್ರಿಯ ವೇಳೆ ಬೇಟೆಯಾಡಲು ಹೋಗುವುದರಿಂದ, ಇವರು ತಲೆಗೆ ಹಣೆಬ್ಯಾಟರಿಯನ್ನ ಕಟ್ಟಿಕೊಂಡಿರುತ್ತಾರೆ. ಕಾರಣವೆಂದರೆ ಇವರಿಗೆ ಹೋಗುವುದಕ್ಕೆ ಬೆಳಕಾಗುತ್ತದೆ ಮತ್ತು ಮೊಲ, ಕಾಡುಬೆಕ್ಕು ಇತ್ಯಾದಿ ಪ್ರಾಣಿಗಳು ಬ್ಯಾಟರಿಯ ಬೆಳಕಿಗೆ ಮುಂದೆ ಹೋಗಲು ಸಾಧ್ಯವಾಗದೆ, ಇವರಿಗೆ ಸಿಕ್ಕಿ ಬೀಳುತ್ತವೆ. ಹೀಗೆ ಕಾಡಿನಲ್ಲಿ ಬೇಟೆಯಾಡಲು ಹೋದಾಗ, ಕಾಡು ಹಂದಿ, ನರಿ, ಜಿಂಕೆ, ಕಡವೆ, ಮೊಲ, ಕಾಡು ಬೆಕ್ಕು, ಕೀರ, ಮುಳ್ಳುಹಂದಿ ಇತ್ಯಾದಿ ಪ್ರಾಣಿಗಳು ಸಿಗುತ್ತವೆ. ಬೇಟೆಯಾಡಿ ಪ್ರಾಣಿಯನ್ನ ಕೊಂದವನಿಗೆ ತಲೆ, ಬಾಲ, ಕಾಲು ಪ್ರಾಣಿಯ ದೇಹದ ಪ್ರಮುಖ ಭಾಗವನ್ನು ಕೊಡುತ್ತಾರೆ. ಉಳಿದವರು ಅದನ್ನು ಸಮಪಾಲು ಮಾಡಿಕೊಳ್ಳುತ್ತಾರೆ. ಬೇಟೆಯಿಂದ ಹೆಚ್ಚಿನ ಮಾಂಸ ದೊರೆತಿದ್ದರೆ ಅದನ್ನು ಬೇರೆ ವ್ಯಕ್ತಿಗಳಿಗೆ ಮಾರುತ್ತಾರೆ. ಗೌರಿಹಬ್ಬದ ಮತ್ತು ಕೊಂಡದಮ್ಮನ ಹಬ್ಬದ ಹಿಂದಿನ ರಾತ್ರಿಯಂದು ಕಡ್ಡಾಯವಾಗಿ ಬೇಟೆಗೆ ಹೋಗುತ್ತಾರೆ. ಆ ಸಂದರ್ಭದಲ್ಲಿ ದೊರೆತ, ಯಾವುದಾದರೂ ಪ್ರಾಣಿಯ ಮಾಂಸವಾದರೂ ಸರಿಯೇ ಅಡುಗೆ ಮಾಡಿ ದೇವರಿಗೆ ನೈವೇದ್ಯ ತೋರುತ್ತಾರೆ.

ದೊಡ್ಡದಾದ ಪ್ರಾಣಿಗಳಿಂದ ಹಿಡಿದು ಸಣ್ಣ ಪ್ರಾಣಿಗಳವರೆವಿಗೂ ಇವರು ಬೇಟೆಯಾಡುತ್ತಾರೆ. ಕಾಡುಕೋಳಿ, ಗೌಜಲಹಕ್ಕಿ, ಮೊಲ, ಬೆಕ್ಕು ಮುಂತಾದವುಗಳನ್ನು ಬೇಟೆಯಾಡಲು ಅನುಸರಿಸುವ ವಿಧಾನವೇ ಬೇರೆಯಾಗಿರುತ್ತದೆ. "ಈಚೀಚೆಗೆ ಕೋವಿ, ಬಲೆ ಬಳಕೆಯಾಗುತ್ತಿವೆ. ಈ ಬೇಟೆಯಲ್ಲಿ ಬುದ್ಧಿ, ಚತುರತೆಯ ತಂತ್ರದ್ದೇ ಮೇಲುಗೈ. ಕಾಡುಕೋಳಿಯಾಗಿದ್ದರೆ ಒಂದು ತೆಳುವಾದ ಚಿಗುರೆಲೆಯನ್ನು ಎರಡು ಹೆಬ್ಬೆರಳುಗಳ ನಡುವೆ ಇಟ್ಟುಕೊಂಡು ಕಾಡುಕೋಳಿಯಂತೆ 'ತೆಕ್ಕು'ವುದು (ಕೇಕೆ ಹಾಕಿ ಕರೆಯುವುದು). ಕಾಡುಕೋಳಿ ಆ ಕೂಗನ್ನು ಕೋಳಿಯದೆಂದೇ ಭ್ರಮಿಸಿ ಈಡುಗಾರನ್ನು ಸಮೀಪಿಸುತ್ತದೆ. ಈಡುಗಾರ ಒಂದೇ ಸಮನೆ ತೆಕ್ಕುತ್ತ, ತೆವೆಯುತ್ತ ಸಾಧ್ಯವಾದಷ್ಟು ಹತ್ತಿರ ಹೋಗಿ ಈಡು ಹಾರಿಸುತ್ತಾನೆ. ಹುಂಜದಂತೆ ಕೇಕೆ ಹಾಕಿ ಹೇಂಟೆಯನ್ನು ಕರೆಯುವುದು, ಹೆಂಟೆ ಹುಂಜವನ್ನು ಕರೆಯುವಂತೆ ಕೂಗಿ ಕರೆಯುವುದು ಈ ಬೇಟೆಯ ತಂತ್ರ".[೫೭] ಇದೇ ತಂತ್ರವನ್ನ ಗೌಜಲಹಕ್ಕಿ ಹಿಡಿಯಲು ಬಳಸುತ್ತಾರೆ. ಗೌಜಲಹಕ್ಕಿಗಳು ಇರುವ ಕಡೆಗಳಲ್ಲಿ ಬಿದಿರು ಕಡ್ಡಿಯಿಂದ ಮಾಡಿದ ಉರುಳನ್ನು ಹಾಕಿ, ಬೇಲಿಯ ಮರೆಯಲ್ಲಿ ಕುಳಿತು ಗೌಜಲಹಕ್ಕಿಯಂತೆ ಕೂಗುತ್ತಾರೆ. ಗೌಜಲಹಕ್ಕಿ ಓಡಿ ಬಂದು ಉರುಳಿಗೆ ತಗಲುಕೊಳ್ಳುತ್ತದೆ.

ಮೀನುಗಳ ಬೇಟೆಗೆ ಬಳಸುವ ಬಲೆಗಳೇ ಬೇರೆ; ಪ್ರಾಣಿ ಬೇಟೆಯಾಡಲು ಬಳಸುವ ಬಲೆಗಳೇ ಬೇರೆ. ಪ್ರಾಣಿ ಬೇಟೆಯಾಡಲು ಬಳಸುವ ಬಲೆಗಳಲ್ಲಿ ಹಂದಿಬಲೆ, ಮಿಗದ ಬಲೆ, ಮೊಲದ ಬಲೆ, ಇಲಿ ಬಲೆ ಮೊದಲಾದ ನಾನಾ ವಿಧಗಳಿವೆ. ಪ್ರಾಣಿಗಳ ಸುಳಿವು ಇದ್ದೆಡೆಯಲ್ಲಿ

ಬಲೆಗಳನ್ನು ಕಟ್ಟಿ, ಒಂದೊಂದು ಬಲೆಯ ಹಿಂಭಾಗದಲ್ಲೂ ಒಬ್ಬೊಬ್ಬ ಬೇಟೆಗಾರ ದೊಣ್ಣೆಯೊಂದಿಗೆ ಅವಿತುಕೊಂಡಿರುತ್ತಾರೆ. 'ಉಳಿದ ಕೆಲವರು ಕೈಯಲ್ಲಿ ಕತ್ತಿ ದೊಣ್ಣೆಗಳನ್ನು ಹಿಡಿದು ಗಿಡ-ಗಂಟೆಗಳನ್ನು ಬಡಿದು ಬೊಬ್ಬಿರಿಯುತ್ತ ಪ್ರಾಣಿಯನ್ನು ಬಲೆಯ ಕಡೆಗೆ ಓಡಿಸಿಕೊಂಡು ಬರುತ್ತಾರೆ. ಪೊದೆಗಳಿಂದ ಹೊರ ಬಂದ ಪ್ರಾಣಿಯು ಪ್ರಾಣ ಭಯದಿಂದ ಕಂಗೆಟ್ಟು ಓಡುತ್ತಾ ಬಲೆಯಲ್ಲಿ ಸಿಕ್ಕಿಹಾಕಿಕೊಳ್ಳುತ್ತದೆ. ಆಗ ಬಲೆಯ ಹಿಂದೆ ಅಡಗಿಕೊಂಡಿರುವ ವ್ಯಕ್ತಿ ಅದನ್ನು ದೊಣ್ಣೆಯಿಂದ ಲಡಾಯಿಸಿ ಕೊಲ್ಲುತ್ತಾನೆ. ಕೆಲವು ಸಂದರ್ಭದಲ್ಲಿ ಹಣೆ ಬ್ಯಾಟರಿಯನ್ನ ಕಟ್ಟಿಕೊಂಡು ಪ್ರಾಣಿಯಂತೆಯೇ ಕಿರುಚುತ್ತಾ, ಪ್ರಾಣಿಗಳು ಕಂಡ ತಕ್ಷಣ ತುಪಾಕಿಯಿಂದ ಮದ್ದನ್ನು ಹಾರಿಸಿ ಕೊಲ್ಲುತ್ತಾರೆ.

ನವಿಲು, ನೀರುಕೋಳಿ, ಗೌಜಲಹಕ್ಕಿ, ಚಿಟ್ಟು ಕೋಳಿ, ಕಬ್ಬೆಕ್ಕು ಹಕ್ಕಿ, ನರಿ, ಕಾಡುಬೆಕ್ಕು ಮುಂತಾದ ಚಿಕ್ಕ ಪ್ರಾಣಿ-ಪಕ್ಷಿಗಳನ್ನು ಸಬೆ ಒಡ್ಡಿ (ಉರುಳು ಹಾಕುವುದು) ಹಿಡಿಯಲಾಗುವುದು. ಕಾಡುಕೋಳಿ ಮೊದಲಾದವು ದಾಟಿಯಾಡುವ ಕಂಡಿಯಲ್ಲಿ ಉರುಳು ರಚಿಸಿಡುವುದು ಸಾಮಾನ್ಯ. ಎರಡು ಗೂಟಗಳನ್ನು ನಿಲ್ಲಿಸಿ ಪ್ರಾಣಿ ಪಕ್ಷಿ ನುಗ್ಗಲು ಸಾಧ್ಯವಾಗುವಷ್ಟು ರಂಧ್ರ ಬಿಟ್ಟು ಚೌಕಾಕಾರದಲ್ಲಿ ಆ ಗೂಟಗಳಿಗೆ ಕೆಳಗೊಂದು ಮೇಲೊಂದು ಸಳ್ಳೆಕಡ್ಡಿಗಳನ್ನು ಅಡ್ಡ ಕಟ್ಟಲಾಗುತ್ತದೆ. ಹಿಂಭಾಗದಲ್ಲಿ ಒಂದು ಬಳಕುವ 'ಬಳ್ಳಿಕಡ್ಡಿ'ಯನ್ನು ನೆಟ್ಟು ಅದಕ್ಕೆ ಒಂದು ಸೂಕ್ಷ್ಮವಾದ ಸೂತ್ರ ಬಳ್ಳಿಯನ್ನು ಕಟ್ಟುವರು. ಆ ಸೂತ್ರ ಬಳ್ಳಿಯನ್ನು ಚೌಕಾಕಾರದ ರಂಧ್ರದಲ್ಲಿ ರಚಿಸಿರುವ ಉರುಳಿಗೆ ಎಳೆದು ಕಟ್ಟಬೇಕು. ಬಳ್ಳಿ ಕಡ್ಡಿ ಅಥವಾ ಸಬೆ ಕೆಲಸ ಮಾಡಲು ಸಹಾಯಕವಾಗುವಂತೆ ಉರುಳಿನ ಕೆಳಗೆ ಒಂದು 'ಮೆಟ್ಟುಕಡ್ಡಿ'ಯನ್ನು ಇರಿಸುವರು. ನೀರುಕೋಳಿ ಅಥವಾ ಗೌಜಲಹಕ್ಕಿ ಅಲ್ಲಿರಿಸಿದ್ದ ಆಹಾರವನ್ನು ತಿನ್ನುವಾಸೆಯಿಂದ 'ಮೆಟ್ಟಕಡ್ಡಿ'ಯನ್ನು ತುಳಿದು ಚಾಕಾಕಾರದ ಕಂಡಿಯ ಒಳಗೆ ತಲೆ ಹಾಕಿದಾಗ ಮೆಟ್ಟುಕಡ್ಡಿ ಸರಕ್ಕನೆ ಹಿಂದಕ್ಕೆ ಹಾರಿ ಸಬೆ ಸಿಡಿದು, ಹಾರುವಂತೆ ಮಾಡುತ್ತದೆ. ಆಗ ಉರುಳು, ನೀರುಕೋಳಿ ಅಥವಾ ಗೌಜಲಹಕ್ಕಿಯ ಕೊರಳನ್ನು ಬಿಗಿದು, ಅವು ಸಾಯುತ್ತವೆ. ಹೀಗೆ ಸಣ್ಣ ಪ್ರಾಣಿ ಮತ್ತು ಪಕ್ಷಿಗಳನ್ನು ಬೇಟೆಯಾಡುತ್ತಾರೆ.

**ನಳ್ಳಿ ಅಥವಾ ಏಡಿಗಳನ್ನ ಹಿಡಿಯುವುದು** : ಗಂಗಾಮತಸ್ಥರಿಗೆ ಏಡಿಗಳ ಮಾಂಸದ ಸಾರೆಂದರೆ ಪಂಚಪ್ರಾಣವಂತೆ. ಕಾರಣವೆಂದರೆ ಏಡಿಗಳು ಔಷಧಿಯ ಗುಣವನ್ನು ಹೊಂದಿವೆಯಂತೆ. "ಗದ್ದೆ ನಾಟಿಯ ಕಾಲದಲ್ಲಿ ನಳ್ಳಿಗಳು ಸಮೃದ್ಧವಾಗಿ ಸಿಗುತ್ತವೆ. ಸಣ್ಣ ನಳ್ಳಿಗಳನ್ನು ಹಿಡಿದು ಚೀಲದೊಳಗೆ ಹಾಕಿಕೊಳ್ಳಲಾಗುವುದು. ಹೀಗೆ ೨೦ ರಿಂದ ೩೦ ರಷ್ಟು ನಳ್ಳಿಗಳನ್ನು ಹಿಡಿದರೆ ಆ ದಿನ ರುಚಿಕಟ್ಟಾದ ಸಾರು ಸಿದ್ಧವಾಗುತ್ತದೆ. ದೊಡ್ಡದಾದ ನಳ್ಳಿ ಸಿಕ್ಕಿದರೆ ಅದನ್ನು ಅಲ್ಲಿಯೇ ಸಾಯಿಸಿ.

ಅಲ್ಲೇ ಸುಟ್ಟು, ಅದರ ತುಪ್ಪದ ಸವಿಯನ್ನು ಸವಿಯುತ್ತೇವೆ"[೫೮] ಎಂದು ಹೇಳುತ್ತಾರೆ. ಗದ್ದೆ ನಾಟಿ ಕಾಲದಲ್ಲಿ ಹಾಗೂ ಮಳೆಗಾಲದಲ್ಲಿ ಏಡಿಗಳು ಸಮೃದ್ಧವಾಗಿ ಸಿಗುತ್ತವೆ. ಗದ್ದೆ ಕಾಲುವೆಗಳಲ್ಲಿ ಹೆಚ್ಚಾಗಿ ಕಂಡುಬರುವ ಇವನ್ನು ಹಿಡಿಯುವುದು ಸುಲಭ. ಏಡಿ ಬಿಲಗಳಿಗೆ ಕೈಹಾಕಿ ಹಿಡಿಯುವಾಗ ಅವು ಕೊಂಡಿಯಿಂದ ಕಚ್ಚದಂತೆ ಬಹಳ ಜಾಗರೂಕರಾಗಿರಬೇಕಾಗುತ್ತದೆ. ಏಡಿ ಹಿಡಿಯಲು ಪ್ಲಾಸ್ಟಿಕ್ ದಾರದಿಂದ ಉರುಳನ್ನು ಮಾಡಿ ಅದನ್ನು ಸಣ್ಣದಾದ ಕಡ್ಡಿಯ ತುದಿಗೆ ಕಟ್ಟಿ, ಏಡಿಗಳಿರುವ ಸ್ಥಳಕ್ಕೆ ಹಾಕುತ್ತಾರೆ. ಏಡಿಗಳು ಕೊಂಡಿಗಳಿಂದ ಬಲವಾಗಿ ಕಚ್ಚಲು ಬಂದಾಗ ಉರುಳಿಗೆ ಸಿಕ್ಕಿಕೊಳ್ಳುತ್ತವೆ. ಆ ನಂತರದಲ್ಲಿ ಏಡಿಗಳನ್ನ ಮೇಲಕ್ಕೆ ಎತ್ತಿ ಅವುಗಳ ಕೊಂಡಿಗಳನ್ನು ಮುರಿದು ಹಾಕುತ್ತಾರೆ. ಹೀಗೆ ಗಂಗಾಮತಸ್ಥರು ಏಡಿಗಳ ಬೇಟೆಯನ್ನು ಆಡುತ್ತಾರೆ.

**ಆಮೆಗಳ ಬೇಟೆ** : ಆಮೆಗಳ ಬೇಟೆಯಾಡುವುದರಲ್ಲೂ ಗಂಗಾಮತಸ್ಥರು ಪ್ರವೀಣರು. ಸಾಮಾನ್ಯವಾಗಿ ಆಮೆಗಳು ಕೆರೆಗಳಲ್ಲಿ, ನದಿಗಳಲ್ಲಿ, ಗದ್ದೆಗಳಲ್ಲಿ, ಬಾವಿಗಳಲ್ಲಿ ಕಂಡು ಬರುತ್ತವೆ. ಆಮೆಗಳ ಬೇಟೆಯನ್ನು ಹೆಚ್ಚಾಗಿ ಬೇಸಿಗೆಯ ಕಾಲದಲ್ಲಿ ಆಡುತ್ತಾರೆ. ಕಾರಣವೆಂದರೆ ನೀರು ಕಡಿಮೆ ಇರುತ್ತದೆ. ಆಮೆಗಳನ್ನು ಹಿಡಿಯುವುದು ಆ ಸಂದರ್ಭದಲ್ಲಿ ಸುಲಭವಾಗಿರುತ್ತದೆ. ಕೆರೆಗಳಿಗೆ, ನದಿಗಳಿಗೆ, ಬಲೆಯನ್ನು ಹಾಕಿದಾಗ ಆಮೆಗಳು ಅವುಗಳಿಗೆ ಸಿಕ್ಕಿಕೊಳ್ಳುತ್ತವೆ. ಆಗ ಅವುಗಳನ್ನು ಸುಲಭವಾಗಿ ಚೀಲದೊಳಗೆ ಹಾಕಿಕೊಳ್ಳುತ್ತಾರೆ. ಕೂಳೆ ಕೆರೆಯೊಳಗೆ ದಡದಲ್ಲಿ ಆಮೆಗಳು ಗುಂಡಿಯನ್ನು ಮಾಡಿಕೊಂಡಿರುತ್ತವೆ. ಆ ಸಂದರ್ಭದಲ್ಲಿ ಇವರು ಎಳೆ ಬಲೆಯನ್ನು ಹಾಕುತ್ತಾರೆ. ಆ ಎಳೆ ಬಲೆಯನ್ನು ಒಂದು ಸುತ್ತು ಎಳೆಯುತ್ತಾರೆ. ಆಗ ಆಮೆ ಬಲೆಗೆ ಸಿಕ್ಕಿ ಬೀಳುತ್ತದೆ. ಬಾವಿಗಳಲ್ಲಿ ಆಮೆಗಳನ್ನು ಹಿಡಿಯುವ ರೀತಿಯೇ ಬೇರೆ. ಮಕ್ಕರಿಯನ್ನ ಹಗ್ಗ ಕಟ್ಟಿ ಬಾವಿಯೊಳಗೆ ಬಿಡುತ್ತಾರೆ. ಆಗ ಮಕ್ಕರಿಯೊಳಗೆ ಆಮೆ ಬರುತ್ತದೆ. ಅದನ್ನು ಮೇಲಕ್ಕೆ ಎತ್ತುತ್ತಾರೆ. ಹೆಚ್ಚಾಗಿ ಆಮೆಗಳು ಸಿಕ್ಕಿದ ಸಂದರ್ಭದಲ್ಲಿ ಅವುಗಳನ್ನು ಮಾರಾಟ ಮಾಡುತ್ತಾರೆ. ಇಲ್ಲದಿದ್ದರೆ ಅವರೇ ಮನೆಗೆ ಒಯ್ಯುತ್ತಾರೆ.

ಗಂಗಾಮತಸ್ಥರು ಬೇಟೆಯಾಡುವುದರಲ್ಲಿ ಬಹಳ ಪ್ರವೀಣರು. ಏಕೆಂದರೆ ಇವರು ವಂಶಪಾರಂಪರ್ಯವಾಗಿ ಬೇಟೆಯ ಸಂಸ್ಕೃತಿಯನ್ನ ಕರಗತಮಾಡಿಕೊಂಡು ಬಂದಿದ್ದಾರೆ. ಯಾವ ಕಡೆ, ಯಾವ ಪ್ರಾಣಿಗಳಿವೆ ಮತ್ತು ಎಂಥ ಪಕ್ಷಿಗಳಿವೆ, ಎಂಬುದನ್ನು ಅರಿತ ಇವರು, ಶಬ್ದ ಮಾಡಿ ವಾಸನೆಯ ಮೂಲಕ ಕಂಡುಹಿಡಿಯುತ್ತಾರೆ. ಆದುದ್ದರಿಂದಲೇ ಬಹುಶಃ ರಾಜರು ತಮ್ಮ ಆಸ್ಥಾನದಲ್ಲಿ ಬೇಟೆಯಾಡುವುದಕ್ಕಾಗಿಯೇ ಇವರನ್ನ ಆಸ್ಥಾನದಲ್ಲಿ ಇರಿಸಿಕೊಳ್ಳುತ್ತಿದ್ದುದು. ಆಸ್ಥಾನದಲ್ಲಿದ್ದ ಇವರು ರಾಜಪರಿವಾರದವರು ಎನಿಸಿಕೊಂಡರು. ಮೀನಿನ

ಬೇಟೆಯಾಡುವುದರಲ್ಲಂತೂ ಎಲ್ಲಾ ವಿದ್ಯೆಗಳನ್ನ ಕರಗತ ಮಾಡಿಕೊಂಡಿದ್ದಾರೆ. ನವಿಲುಗಳ ಬೇಟೆ, ತೋಡ, ಇಲಿ, ಹೆಗ್ಗಣ, ಜಿಂಕೆ, ಕಡವೆ, ನರಿ, ಕಾಡುಕೋಳಿ, ನೀರುಕೋಳಿ, ಗೌಜಲಹಕ್ಕಿ ಹೀಗೆ ಸಣ್ಣ ಪ್ರಾಣಿ-ಪಕ್ಷಿಗಳಿಂದ ಹಿಡಿದು, ದೊಡ್ಡ ಪ್ರಾಣಿ-ಪಕ್ಷಿಗಳವರೆಗೆ ಬೇಟೆಯಾಡುವ ಕಲೆಯನ್ನು ರೂಢಿಸಿಕೊಂಡಿದ್ದಾರೆ.

ಆದರೆ ಸರ್ಕಾರದ ಆಜ್ಞೆಯನುಸಾರ ಬೇಟೆಯಾಡುವುದು ಅಪರಾಧವಾಗುವುದರಿಂದ ಇತ್ತೀಚಿನ ದಿನಗಳಲ್ಲಿ ಬೇಟೆಯಾಡುವುದು ಕಡಿಮೆಯಾಗಿದೆ. ಆದರೆ ಮೀನುಗಾರಿಕೆ ಮಾತ್ರ ಪುರಾತನ ಕಾಲದಲ್ಲಿ ಹೇಗಿತ್ತೋ ಹಾಗೆಯೇ ಮುಂದುವರಿದುಕೊಂಡು ಬರುತ್ತಿದೆ. ಏನೇ ಆಗಲಿ ಇವರ ಬೇಟೆಯ ನೈಪುಣ್ಯತೆಯನ್ನ ಮೆಚ್ಚಲೇಬೇಕು. ಇವರು ಹೊಟ್ಟೆ ತುಂಬಿಸುವುದಕ್ಕಾಗಿ ಬೇಟೆಯನ್ನು ಆಡುತ್ತಿದ್ದರೇ ವಿನಃ ವಿನೋದಕ್ಕಾಗಿ ಅಲ್ಲ ಎಂಬುದನ್ನು ಅರಿಯಬೇಕು.

### ೩.೯ ಸಾಮಾಜಿಕ ಸಂಘ ಸಂಸ್ಥೆಗಳು :

ಯಾವುದೇ ಒಂದು ಸಮುದಾಯ ತನ್ನ ಅಸ್ತಿತ್ವವನ್ನ ತೋರಿಸುವುದು ಸಂಘ ಸಂಸ್ಥೆಗಳ ಇರುವಿಕೆಯಿಂದಲೇ ಎಂದು ಹೇಳಬಹುದು. ಸಮುದಾಯಗಳು ತಮ್ಮ ಸ್ಥಿತಿಯನ್ನು ಉತ್ತಮ ಪಡಿಸಿಕೊಳ್ಳಬೇಕಾದರೆ ಸಂಘಟನೆಗಳಿಂದ ಮಾತ್ರ ಸಾಧ್ಯ. ತಮ್ಮ ಕಷ್ಟಗಳನ್ನ ತೋಡಿಕೊಳ್ಳುವುದಕ್ಕೆ ಸಂಘ ಸಂಸ್ಥೆಗಳು ಸಹಾಯ ಮಾಡುತ್ತವೆ. ಇಂದು ಅನೇಕ ಸಮುದಾಯಗಳು ಇಂಥ ಸಂಘಟನೆಗಳ ಮುಖಾಂತರ ತಮ್ಮ ಕಷ್ಟಗಳನ್ನು ಸರ್ಕಾರಕ್ಕೆ ತಿಳಿಸುತ್ತಿದ್ದಾರೆ. ಈ ಮೂಲಕ ಸಮಸ್ಯೆಗೆ ಪರಿಹಾರವನ್ನು ಸಹ ಕಂಡುಕೊಳ್ಳುತ್ತಿದ್ದಾರೆ. ತಮ್ಮ ಸಮುದಾಯದವರು ಸಹ ಸಂಕಷ್ಟದಲ್ಲಿ ಇದ್ದಾರೆ, ನಮ್ಮನ್ನು ಬೇರೆಯವರಂತೆ ಬದುಕಲು ಸಹಕರಿಸಿ ಎಂಬ ವಿಚಾರವನ್ನು ಸಂಬಂಧಿಸಿದ ಸರ್ಕಾರಕ್ಕೆ ತೋರಿಸುವುದರೊಂದಿಗೆ, ಒಗ್ಗಟ್ಟಿನ ಪ್ರದರ್ಶನ ಮಾಡಲು ಸಂಘ ಸಂಸ್ಥೆಗಳು ಹೆಚ್ಚು ಸಹಕಾರಿಯಾಗಿವೆ. "ಒಬ್ಬರ ಉದ್ಧಾರ ಇನ್ನೊಬ್ಬರು ಮಾಡುವುದಿಲ್ಲ. ಅವರವರ ಉದ್ಧಾರ ಅವರೇ ಮಾಡಿಕೊಳ್ಳಬೇಕಾಗಿರುವುದರಿಂದ ಸಂಘಟನೆಗಳು ಅನಿವಾರ್ಯ"[೫೯] ಎಂದು ಅಂಬೇಡ್ಕರ್ ಅವರು ಹೇಳಿದ್ದಾರೆ. ಸಂಘಟನೆಗಳು ಮತ್ತು ಸಂಸ್ಥೆಗಳು ಆ ಸಮುದಾಯದವರಿಗೆ ವರದಾನವಾಗಿ ಪರಿಣಮಿಸುತ್ತವೆ. ಆದುದ್ದರಿಂದಲೇ ಹಿಂದೆಂದಿಗಿಂತಲೂ ಇಂದು ಸಂಘ-ಸಂಸ್ಥೆಗಳ ಅಗತ್ಯತೆ ಇದೆ.

ಗಂಗಾಮತಸ್ಥರು ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ, ಶೈಕ್ಷಣಿಕವಾಗಿ ತುಂಬಾ ಹಿಂದುಳಿದವರಾಗಿದ್ದಾರೆ. ಅಲ್ಲದೆ ಇವರು ಅನೇಕ ಸೌಲಭ್ಯಗಳಿಂದಲೂ ವಂಚಿತರಾಗಿದ್ದಾರೆ. ಅನ್ಯ ಸಮುದಾಯಗಳಲ್ಲಿ ಇರುವಂತೆ ಇವರು ಸಹ ಸಂಘ-ಸಂಸ್ಥೆಗಳನ್ನ

ಸ್ಥಾಪಿಸಿಕೊಂಡಿದ್ದಾರೆ. ಇದರ ಮೂಲಕ ತಾವು ಒಗ್ಗಟ್ಟಾಗುವುದರ ಜೊತೆಗೆ ತಮ್ಮ ಸ್ಥಿತಿಗಳನ್ನು ಉತ್ತಮ ಪಡಿಸಿಕೊಳ್ಳುತ್ತಿವೆ. ಅದರಲ್ಲೂ ಇಂದು ಇವರು ವಾಸಿಸುವ ಎಲ್ಲಾ ಗ್ರಾಮಗಳಲ್ಲೂ ಸಾಮಾನ್ಯವಾಗಿ ಮಹಿಳೆಯರು ಸಂಘವನ್ನು ನಿರ್ಮಿಸಿಕೊಂಡಿದ್ದಾರೆ. ಈ ರೀತಿಯ ಹಲವು ಸಂಘ–ಸಂಸ್ಥೆಗಳು ಇಂದು ಗಂಗಾಮತಸ್ಥರನ್ನ ಇತರ ಸಮುದಾಯದವರಂತೆ ಬದುಕುವ ತಿಳುವಳಿಕೆಯನ್ನು ಮೂಡಿಸುತ್ತಿವೆ. ಜಿಲ್ಲೆಯ ಏಳು ತಾಲ್ಲೂಕುಗಳಲ್ಲಿ ಗಂಗಾಮತಸ್ಥರ ಸಂಘಗಳಿರುವುದನ್ನ ಕಾಣಬಹುದಾಗಿದೆ. ಜಿಲ್ಲೆಯಲ್ಲಿ ಜಿಲ್ಲಾ ಮಟ್ಟದ ಸಂಘವಿದೆ. ಅಂತೆಯೇ ತಾಲ್ಲೂಕುಗಳಲ್ಲಿ ತಾಲ್ಲೂಕು ಮಟ್ಟದ ಸಂಘಗಳಿವೆ. ಅದರಲ್ಲೂ ಮಳವಳ್ಳಿ ತಾಲ್ಲೂಕು, ಶ್ರೀರಂಗಪಟ್ಟಣ ತಾಲ್ಲೂಕು, ಮಂಡ್ಯ ತಾಲ್ಲೂಕುಗಳಲ್ಲಿ ಇವರಿಗೆ ಸಂಬಂಧಪಟ್ಟ ಸಂಘಗಳು ಹೆಚ್ಚಾಗಿ ಕಂಡುಬಂದು, ಉಳಿದಂತೆ ಬೇರೆ ತಾಲ್ಲೂಕುಗಳಲ್ಲಿಯೂ ಇವೆಯಾದರೂ ಅಷ್ಟು ಮಟ್ಟಿಗೆ ಕೆಲಸವನ್ನು ಅವುಗಳು ನಿರ್ವಹಿಸುತ್ತಿಲ್ಲ. ಆದರೆ ಇತ್ತೀಚಿಗೆ ಸಂಘ–ಸಂಸ್ಥೆಗಳಿಗೆ ಸರ್ಕಾರ ನೀಡುತ್ತಿರುವ ಸಹಾಯಧನ, ಸಾಲ–ಸೌಲಭ್ಯಗಳಿಂದ ಕಾರ್ಯ ಪ್ರವೃತ್ತವಾಗುತ್ತಿವೆ.

ಗಂಗಾಮತಸ್ಥರು ತಮ್ಮಲ್ಲಿರುವ ಬಡತನ, ಅನಕ್ಷರತೆ, ಅಂಧಕಾರವನ್ನ ಹೋಗಲಾಡಿಸಿಕೊಳ್ಳಲು ಹಲವಾರು ಸಂಘ–ಸಂಸ್ಥೆಗಳನ್ನ ಜಿಲ್ಲಾ ಮಟ್ಟದಿಂದ ಪ್ರಾರಂಭಗೊಂಡು, ತಾಲ್ಲೂಕು ಮಟ್ಟ, ಗ್ರಾಮಗಳ ಮಟ್ಟದಲ್ಲೂ ಇಂದು ಸ್ಥಾಪಿಸಿಕೊಂಡಿದ್ದಾರೆ. ಈ ಸಂಘ–ಸಂಸ್ಥೆಗಳು ವಿವಿಧ ರೀತಿಯಲ್ಲಿ ತಮ್ಮ ಸಮುದಾಯದವರಿಗೆ ಸಹಾಯ ಹಸ್ತವನ್ನ ನೀಡಲು ಹೆಚ್ಚಿನದಾಗಿ ಶ್ರಮಿಸುತ್ತವೆ.

## ೧. ಜಿಲ್ಲೆ ಮತ್ತು ತಾಲ್ಲೂಕು ಮಟ್ಟದಲ್ಲಿರುವ ಗಂಗಾಮತಸ್ಥರ (ಬೆಸ್ತರ) ಸಂಘ (ರಿ)

ಮಂಡ್ಯ ಜಿಲ್ಲೆಯಲ್ಲಿ ಗಂಗಾಮತಸ್ಥರು, ಜಿಲ್ಲಾ ಮಟ್ಟದಲ್ಲಿ ಮತ್ತು ತಾಲ್ಲೂಕು ಮಟ್ಟದಲ್ಲಿ ಸಂಘಗಳನ್ನ ಸ್ಥಾಪಿಸಿಕೊಂಡು, ಸಮುದಾಯದ ಅಭಿವೃದ್ಧಿಗೆ ಪೂರಕವಾದ ಕೆಲಸ–ಕಾರ್ಯಗಳನ್ನ ಮಾಡುತ್ತಿದ್ದಾರೆ. ಇವರು ತಮ್ಮದೇ ಆದ ರೀತಿಯಲ್ಲಿ ಕಾರ್ಯಕಾರಿ ಸಮಿತಿಯನ್ನ, ಸಮುದಾಯದವರ ಒಪ್ಪಿಗೆಯನ್ನು ಪಡೆದುಕೊಂಡು ರಚಿಸಿಕೊಂಡಿದ್ದಾರೆ. ಇವುಗಳು ವಾರ್ಷಿಕವಾಗಿ ಅಥವಾ ಸಮಯ ಬಂದಾಗ ತುರ್ತು ಸಭೆಯನ್ನು ಕರೆದು ಆಗಬೇಕಾದ ಕೆಲಸಕಾರ್ಯಗಳ ಕುರಿತು ಚರ್ಚಿಸುತ್ತಾರೆ. ಜಿಲ್ಲೆ ಮತ್ತು ತಾಲ್ಲೂಕುಗಳಲ್ಲಿರುವ ಸಂಘದ ವಿವರ ಕೆಳಕಂಡಂತೆ ಇದೆ.

**ಮಂಡ್ಯ ಜಿಲ್ಲಾ ಗಂಗಾಮತಸ್ಥರ (ಬೆಸ್ತರ) ಸಂಘ (ರಿ)**

ಅಧ್ಯಕ್ಷರು : ಶ್ರೀ ಎನ್. ನಂಜುಂಡಯ್ಯ, ನಗರಸಭಾ ಸದಸ್ಯರು, ಮಂಡ್ಯ

ಪ್ರಧಾನ ಕಾರ್ಯದರ್ಶಿ : ಶ್ರೀ.ಹೊ.ರ.ಕುಮಾರಸ್ವಾಮಿ.

**ತಾಲ್ಲೂಕು ಗಂಗಾಮತಸ್ಥರ (ಬೆಸ್ತರ) ಸಂಘ (ರಿ)**

ಮಳವಳ್ಳಿ ತಾಲ್ಲೂಕು : ಅಧ್ಯಕ್ಷರು – ಶ್ರೀ ರಮೇಶ್

ಮದ್ದೂರು ತಾಲ್ಲೂಕು : ಅಧ್ಯಕ್ಷರು – ಶ್ರೀ ವಾಸು

ಮಂಡ್ಯ ತಾಲ್ಲೂಕು : ಅಧ್ಯಕ್ಷರು – ಶ್ರೀ ಜೆ. ಸಿದ್ದಯ್ಯ

ಶ್ರೀರಂಗಪಟ್ಟಣ ತಾಲ್ಲೂಕು : ಅಧ್ಯಕ್ಷರು – ಶ್ರೀ ಗಂಜಾಂ ಶಿವು

ಪಾಂಡವಪುರ ತಾಲ್ಲೂಕು : ಅಧ್ಯಕ್ಷರು – ಶ್ರೀ ದೇವಾನಂದ

ನಾಗಮಂಗಲ ತಾಲ್ಲೂಕು : ಅಧ್ಯಕ್ಷರು – ಶ್ರೀ ಟಿ.ಡಿ. ಗಂಗಾಧರಯ್ಯ

ಕೆ.ಆರ್. ಪೇಟೆ : ಅಧ್ಯಕ್ಷರು – ಶ್ರೀ ಜಯರಂಗ

ಮೇಲ್ಕಂಡಂತೆ ಜಿಲ್ಲಾಮಟ್ಟದಲ್ಲಿ ಮತ್ತು ತಾಲ್ಲೂಕು ಮಟ್ಟದಲ್ಲಿ ಸಮಿತಿಗಳನ್ನ ರಚಿಸಿಕೊಂಡು ಜನಾಂಗದ ಅಭಿವೃದ್ಧಿಗೆ ದುಡಿಯುತ್ತಿದ್ದಾರೆ. ಈ ಸಂಘಗಳಿಂದ ಸಮುದಾಯಕ್ಕೆ ಆಗುತ್ತಿರುವ ಅನುಕೂಲವೆಂದರೆ, ಪ್ರತಿಭಾನ್ವಿತ ವಿದ್ಯಾರ್ಥಿಗಳಿಗೆ ಪುರಸ್ಕಾರ, ವಿದ್ಯಾರ್ಥಿ ವೇತನ, ಉನ್ನತ ವ್ಯಾಸಂಗ ಮಾಡಲು ಸಹಾಯ ಧನ, ಬಡವರ ವಿವಾಹಕ್ಕೆ ಸಹಾಯ, ಸರ್ಕಾರದಿಂದ ಸಿಗುವ ಸೌಲಭ್ಯಗಳ ಬಗ್ಗೆ ಸೂಕ್ತ ತಿಳುವಳಿಕೆ, ರಾಜಕೀಯ ಲಾಭವನ್ನು ಪಡೆದು, ಸಮುದಾಯದ ವ್ಯಕ್ತಿಗಳಿಗೆ ಅನುಕೂಲ ಮಾಡಿಕೊಡುವುದು, ಬೇರೆಯವರಿಂದ ಯಾವುದೇ ತೊಂದರೆಗಳಾಗದಂತೆ ನೋಡಿಕೊಳ್ಳುವುದು, ಅನ್ಯಾಯಕ್ಕೊಳಗಾದವರಿಗೆ ನ್ಯಾಯ ಕೊಡಿಸುವುದು, ಶಿಕ್ಷಣದತ್ತ ಆಸಕ್ತಿ ಮೂಡಿಸುವುದು, ಬ್ಯಾಂಕುಗಳಿಂದ ಸಾಲ–ಸೌಲಭ್ಯವನ್ನ ಒದಗಿಸಿಕೊಡುವುದು ಇನ್ನೂ ಮುಂತಾದ ಅಭಿವೃದ್ಧಿ ಕಾರ್ಯಗಳನ್ನ ಮಾಡುತ್ತಿದ್ದಾರೆ. ಇದಿಷ್ಟೇ ಅಲ್ಲದೆ ಸಮುದಾಯದವರನ್ನೆಲ್ಲಾ ವರ್ಷಕ್ಕೊಂದು ಸಾರಿಯಾದರೂ ಒಂದು ಕಡೆ ಸೇರಿಸಿ ಸಭೆ–ಸಮಾರಂಭಗಳನ್ನು ಮಾಡುತ್ತಾರೆ. ಪಕ್ಕದ ಜಿಲ್ಲೆಯಾದ ಚಾಮರಾಜನಗರ ಮತ್ತು ಮೈಸೂರು ಜಿಲ್ಲೆಯಲ್ಲಿ ವಾಸಮಾಡುವ ಇದೇ ಜನಾಂಗದವರನ್ನ ಪರಿಶಿಷ್ಟ ಪಂಗಡಕ್ಕೆ ಸೇರಿಸಿದ್ದಾರೆ. ಮಂಡ್ಯ ಜಿಲ್ಲೆಯಲ್ಲಿ ಗಂಗಾಮತಸ್ಥರೆಂದು ಕರೆದರೆ, ಆ ಜಿಲ್ಲೆಗಳಲ್ಲಿ ನಾಯಕರೆಂದು ಕರೆಯುತ್ತಾರೆ. ಆದರೆ ಇವೆರಡು ಹೆಸರಿನಿಂದ ಕರೆಯಿಸಿಕೊಳ್ಳುವವರು ಒಂದೇ ಸಮುದಾಯಕ್ಕೆ ಸೇರಿದವರು. ಅಷ್ಟೇ ಅಲ್ಲದೆ ಇವರಿಬ್ಬರ ವೃತ್ತಿಗಳು, ಸಮಸ್ಯೆಗಳು ಕೂಡ ಒಂದೇ ರೀತಿಯವು. ಮಂಡ್ಯ ಜಿಲ್ಲೆಯ ಗಂಗಾಮತಸ್ಥರು ಚಾಮರಾಜನಗರ ಮತ್ತು ಮೈಸೂರು ಜಿಲ್ಲೆಯವರೊಡನೆ ಸಂಬಂಧವೂ ಕೂಡ ಇದೆ. ಆದರೆ ಸರ್ಕಾರ ಮಾಡಿರುವ ತಪ್ಪಿನಿಂದಾಗಿ ಮಂಡ್ಯ ಜಿಲ್ಲೆಯ ಗಂಗಾಮತಸ್ಥರನ್ನ ಪರಿಶಿಷ್ಟ ಪಂಗಡದವರ

ಪಟ್ಟಿಗೆ ಇಲ್ಲಿಯವರೆವಿಗೂ ಸೇರಿಸಿಲ್ಲ. ಇದರ ಬಗ್ಗೆ ಜಿಲ್ಲೆಯ ಸಂಘಟನೆಗಳು ಸರ್ಕಾರಕ್ಕೆ ಅರಿವನ್ನ ಮೂಡಿಸುವ ನಿಟ್ಟಿನಲ್ಲಿ, ಮನವಿಯನ್ನು ಸಲ್ಲಿಸುವುದರೊಂದಿಗೆ ಹೋರಾಟವನ್ನು ಮಾಡುತ್ತಿವೆ.

**೨. ಸಹಕಾರ ಸಂಘಗಳು**

ಎಲ್ಲರಿಗೂ ಒಬ್ಬರು; ಒಬ್ಬರಿಗಾಗಿ ಎಲ್ಲರೂ ಎಂಬ ಸಹಕಾರ ತತ್ವಗಳ ಆಧಾರದ ಮೇಲೆ ಗಂಗಾಮತಸ್ಥರು ಹಲವು ಸಹಕಾರ ಸಂಘಗಳನ್ನ ರಚಿಸಿಕೊಂಡಿದ್ದಾರೆ. ಈ ಸಹಕಾರ ಸಂಘಗಳು ಆ ಸಮುದಾಯದವರಿಗೆ ಸಾಕಷ್ಟು ಅನುಕೂಲವನ್ನು ಮಾಡುತ್ತಿವೆ. ಇಂಥ ಸಹಕಾರ ಸಂಘಗಳು ಜಿಲ್ಲಾಮಟ್ಟದಲ್ಲಿ, ತಾಲ್ಲೂಕು ಮಟ್ಟದಲ್ಲಿ, ಗ್ರಾಮೀಣ ಭಾಗದಲ್ಲಿದ್ದು ಇವುಗಳು ಹಲವು ಯೋಜನೆಗಳನ್ನು ಹಾಕಿಕೊಂಡು ಕಾರ್ಯಗತಗೊಳಿಸುತ್ತಿವೆ.

**ಗಂಗಾಪರಮೇಶ್ವರಿ ಸಹಕಾರ ಸಂಘ** : ಗಂಗಾಪರಮೇಶ್ವರಿ ಸಹಕಾರ ಸಂಘ, ಮಳವಳ್ಳಿ ಪಟ್ಟಣ ಮತ್ತು ಶ್ರೀರಂಗಪಟ್ಟಣದಲ್ಲಿ ಇವೆ. ತಮ್ಮ ಸಮುದಾಯದವರ ಏಳಿಗೆಗೆ ಸಹಕಾರ ಸಂಘಗಳು ದುಡಿಯುತ್ತಿವೆ. ಈ ಸಹಕಾರ ಸಂಘಗಳಲ್ಲಿ ಒಬ್ಬರು ಅಧ್ಯಕ್ಷರು, ಕಾರ್ಯದರ್ಶಿ ಹಾಗೂ ಸದಸ್ಯರಿರುತ್ತಾರೆ. ಕಾರ್ಯದರ್ಶಿಯನ್ನ ಹೊರತುಪಡಿಸಿದರೆ ಐದು ವರ್ಷಗಳಿಗೆ ಒಮ್ಮೆ ಅಧ್ಯಕ್ಷರನ್ನ ಮತ್ತು ಸದಸ್ಯರನ್ನ ಬದಲಾವಣೆ ಮಾಡಲಾಗುತ್ತದೆ. ಗಂಗಾಪರಮೇಶ್ವರಿ ಸಹಕಾರ ಸಂಘದಿಂದ, ಸಮುದಾಯದವರಿಗೆ ಆಗುವ ಅನುಕೂಲವೆಂದರೆ, "ಸರ್ಕಾರಿ ನ್ಯಾಯಬೆಲೆ ಅಂಗಡಿಯಲ್ಲಿ ದೊರೆಯುವ ದವಸ ಧಾನ್ಯಗಳನ್ನು ಇಲ್ಲಿ ವಿತರಿಸಲಾಗುವುದು. ಅಕ್ಕಿ, ಗೋಧಿ, ಬೇಳೆ, ಉಪ್ಪು, ಸೋಪು, ಸೀಮೆಎಣ್ಣೆ, ಸಕ್ಕರೆ, ಬೆಂಕಿಪೊಟ್ಟಣ ಇತ್ಯಾದಿ ಅಗತ್ಯ ವಸ್ತುಗಳನ್ನ ಸರ್ಕಾರ ನಿಗಧಿಗೊಳಿಸಿರುವ ರಿಯಾಯಿತಿ ಬೆಲೆಯಲ್ಲಿ ವಿತರಿಸಲಾಗುತ್ತದೆ. ಬಡ ವಿದ್ಯಾರ್ಥಿಗಳಿಗೆ ಉಚಿತ ನೋಟ್ ಪುಸ್ತಕ, ಪೆನ್ನುಗಳನ್ನು ವರ್ಷಕ್ಕೊಮ್ಮೆ ನೀಡಲಾಗುವುದು. ಪ್ರತಿಭಾನ್ವಿತ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನವನ್ನು ಕೊಡಲಾಗುತ್ತದೆ. ಕಷ್ಟದಲ್ಲಿರುವ ವ್ಯಕ್ತಿಗಳಿಗೆ ಧನ ಸಹಾಯವನ್ನು ಮಾಡಲಾಗುತ್ತದೆ"[೬೦] ಎಂದು ಹೇಳುತ್ತಾರೆ. ಇಂತಹ ಸಹಕಾರ ಸಂಘಗಳಿಂದ ಗಂಗಾಮತಸ್ಥ ಸಮುದಾಯದವರಿಗೆ ಅನುಕೂಲತೆಗಳು ಆಗುತ್ತಿರುವುದು ಸ್ತುತ್ಯಾರ್ಹ ವಿಚಾರವಾಗಿದೆ.

**ಶ್ರೀ ಗಂಗಾಪರಮೇಶ್ವರಿ ಮೀನುಗಾರರ ಸಹಕಾರ ಸಂಘ** : ಈ ರೀತಿಯ ಸಂಘವು ಜಿಲ್ಲಾ ಮಟ್ಟದಲ್ಲಿ, ತಾಲ್ಲೂಕು ಮಟ್ಟದಲ್ಲಿ ಹಾಗೂ ಪ್ರಮುಖವಾದ ಗ್ರಾಮಗಳಲ್ಲಿ ಇವೆ. ಕೆಲವು ಗ್ರಾಮಗಳಲ್ಲಿ ಅಲ್ಪ-ಸ್ವಲ್ಪ ಹೆಸರನ್ನು ಬದಲಾಯಿಸಿಕೊಂಡು ರಚನೆಗೊಂಡಿರುವುದನ್ನು

ಕಾಣಬಹುದು. ಗಂಜಾಂನಲ್ಲಿ ಶ್ರೀ ಗಂಗಾಧರೇಶ್ವರ ಮೀನುಗಾರರ ಸಹಕಾರ ಸಂಘ (ರಿ) ಎಂಬ ಹೆಸರಿನಲ್ಲಿ ಸ್ಥಾಪನೆಗೊಂಡಿದೆ. ಹೀಗೆ ಬೇರೆ ಹೆಸರುಗಳಿಂದ ಮೀನುಗಾರರ ಸಹಕಾರ ಸಂಘವನ್ನ ಕರೆದರೂ, ಇದರ ಗುರಿಗಳು ಮಾತ್ರ ಒಂದೇಯಾಗಿವೆ. ಈ ಸಂಘಗಳಲ್ಲಿ ಒಬ್ಬರು ಅಧ್ಯಕ್ಷರು, ಕಾರ್ಯದರ್ಶಿ, ಸದಸ್ಯರುಗಳಿರುತ್ತಾರೆ. ಸಹಕಾರ ಸಂಘಕ್ಕೆ ಸದಸ್ಯತ್ವ ಪಡೆಯುವವರು ೨೫ ರೂ.ಗಳನ್ನು ಕಟ್ಟಬೇಕಾಗುತ್ತದೆ. ನಂತರದಲ್ಲಿ ಅವರಿಗೆ ಸದಸ್ಯತ್ವವನ್ನು ನೀಡಲಾಗುತ್ತದೆ.

ಶ್ರೀಗಂಗಾಪರಮೇಶ್ವರಿ ಮೀನುಗಾರರ ಸಹಕಾರ ಸಂಘದಿಂದ ಆಗುವ ಅನುಕೂಲಗಳೆಂದರೆ, "ಮೀನುಗಾರರಿಗೆ ಉಚಿತವಾಗಿ ಅಥವಾ ರಿಯಾಯಿತಿ ದರದಲ್ಲಿ ಬಲೆ, ಬೋಟು, ಮೀನಿನ ಬಾಕ್ಸ್, ಬೈಸಿಕಲ್ ಇವುಗಳಷ್ಟೇ ಅಲ್ಲದೆ ಉಚಿತವಾಗಿ ಸರ್ಕಾರದವರಿಂದ ಮನೆಯನ್ನೂ ಕಟ್ಟಿಸಿಕೊಡುವುದು ಇತ್ಯಾದಿ. ಮೀನುಗಾರರು ಸತ್ತಾಗ ಅವರ ಶವಸಂಸ್ಕಾರಕ್ಕೆ ಹಣಕಾಸಿನ ನೆರವು, ವಿದ್ಯಾರ್ಥಿಗಳಿಗೆ ಉಚಿತ ನೋಟ್ಸ್‌ಬುಕ್, ಪೆನ್ನು, ಬ್ಯಾಗ್, ವಿದ್ಯಾರ್ಥಿವೇತನ, ಪ್ರತಿಭಾನ್ವಿತ ವಿದ್ಯಾರ್ಥಿಗಳಿಗೆ ಶುಲ್ಕ ಪಾವತಿಸುವುದು, ಆರೋಗ್ಯ ಶಿಬಿರಗಳನ್ನ ಏರ್ಪಡಿಸುವುದು ಮುಂತಾದ ಅನುಕೂಲತೆಗಳನ್ನ ಮೀನುಗಾರರ ಸಹಕಾರ ಸಂಘವು ಕಲ್ಪಿಸಿಕೊಟ್ಟಿದೆ. ಮೀನುಗಾರರಿಗೆ ಉಚಿತವಾದ ತರಬೇತಿಯನ್ನ ಕೊಡಿಸುವುದು, ಕೆರೆ–ಕಟ್ಟೆಗಳನ್ನ ಗುತ್ತಿಗೆಯ ಆಧಾರದ ಮೇಲೆ ಕೊಡಿಸುವುದು, ರಿಯಾಯಿತಿ ದರದಲ್ಲಿ ಮೀನಿನ ಮರಿಗಳನ್ನು ಸರ್ಕಾರದಿಂದ ಕೊಡಿಸುವುದು,"[೬೧] ಹೀಗೆ ಹಲವಾರು ರೀತಿಯ ಅನುಕೂಲಗಳನ್ನ ಮೀನುಗಾರರ ಸಹಕಾರ ಸಂಘಗಳು ಮಾಡುತ್ತಿವೆ. ಇದರ ಅನುಕೂಲತೆಯನ್ನ ಪಡೆದುಕೊಂಡಿರುವ ಹಲವಾರು ಕುಟುಂಬಗಳು ನೆಮ್ಮದಿಯಿಂದ ಬದುಕುವಂತೆ ದಾರಿ ದೀಪವಾಗಿವೆ. ಇಂಥ ಸಹಕಾರ ಸಂಘಗಳಿಗೆ ಸರ್ಕಾರ ಹಲವು ಯೋಜನೆಗಳನ್ನ ಜಾರಿಗೆ ತಂದು, ಸಹಾಯವನ್ನು ಮಾಡಿದಾಗ, ಆ ಸಂಘವು ತಮ್ಮ ಸಮುದಾಯದವರಿಗೆ ಅನುಕೂಲ ಮಾಡಲು ಹೆಚ್ಚು ಸಾಧ್ಯವಾಗುತ್ತದೆ.

**ಶ್ರೀ ಗಂಗಾಪರಮೇಶ್ವರಿ ಮಹಿಳಾ ಸ್ವ–ಸಹಾಯ ಸಂಘಗಳು** : ಇಂದು ಇವರು ವಾಸಿಸುವ ಪ್ರತಿಯೊಂದು ಗ್ರಾಮದಲ್ಲಿಯೂ ಮಹಿಳಾ ಸ್ವ–ಸಹಾಯ ಸಂಘಗಳಿರುವುದನ್ನ ಕಾಣಬಹುದು. ಸಾಮಾನ್ಯವಾಗಿ ಎಲ್ಲಾ ಕಡೆಗಳಲ್ಲಿ ಶ್ರೀ ಗಂಗಾಪರಮೇಶ್ವರಿ ಮಹಿಳಾ ಸ್ವ–ಸಹಾಯ ಸಂಘ ಎಂಬ ಹೆಸರನ್ನಿಟ್ಟಿರುವುದನ್ನ ನೋಡಬಹುದು. ಆದರೆ ಎರಡು ಮೂರು ಸಂಘಗಳು ಇದ್ದರೆ ಸ್ಥಳೀಯವಾಗಿರುವ ಅವರ ದೇವರ ಹೆಸರನ್ನು ಇಟ್ಟಿರುತ್ತಾರೆ. ಮಳವಳ್ಳಿ ಪಟ್ಟಣದಲ್ಲಿ ೧೨ ಸಂಘಗಳಿವೆ. "ಶ್ರೀ ದಂಡಿನ ಮಾರಮ್ಮ ಮಹಿಳೆಯರ ಸಂಘ" ಹೀಗೆ ಬೇರೆ ಬೇರೆ ಹೆಸರುಗಳನ್ನ

ಹೊಂದಿದ್ದರೂ, ಅವುಗಳ ಕಾರ್ಯಸಾಧನೆಗಳು ಮಾತ್ರ ಒಂದೇ ಆಗಿವೆ. ಅವರ ಸಮುದಾಯದವರು ಅಭಿವೃದ್ಧಿಹೊಂದಿ ಇತರರಂತೆ ಬದುಕಬೇಕೆಂಬುದಾಗಿದೆ.

ಮಹಿಳಾ ಸ್ವ-ಸಹಾಯ ಸಂಘಗಳಲ್ಲಿ ೨೦ ಜನ ಮಹಿಳಾ ಸದಸ್ಯರು ಇರುತ್ತಾರೆ. ಇವರಲ್ಲಿ ಒಬ್ಬರನ್ನ ಸಂಘದ ಪ್ರತಿನಿಧಿಯನ್ನಾಗಿ ಮಾಡಿಕೊಂಡಿರುತ್ತಾರೆ. ಹತ್ತಿರದಲ್ಲಿರುವ ಬ್ಯಾಂಕಿನಲ್ಲಿ ಸಂಘದ ಹೆಸರಿನಲ್ಲಿ ಖಾತೆಯನ್ನು ತೆರೆದಿರುತ್ತಾರೆ. ಪ್ರತಿ ವಾರ, ಹದಿನೈದು ದಿನಕ್ಕೆ ಒಮ್ಮೆ ಇಲ್ಲವೇ ತಿಂಗಳಿಗೆ ಒಮ್ಮೆ ಸಂಘದ ಸಭೆಯನ್ನು ಕರೆಯಲಾಗುತ್ತದೆ. ಆ ದಿನ ನಿಗಧಿಗೊಳಿಸಿರುವ ಉಳಿತಾಯದ ಹಣವನ್ನು ಕಟ್ಟಬೇಕಾಗುತ್ತದೆ. ಸಂಘವು ಎರಡು ವರ್ಷಗಳು ತುಂಬಿದ ನಂತರ ಸರ್ಕಾರವು ಬ್ಯಾಂಕುಗಳ ಮೂಲಕ ಸಾಲ-ಸೌಲಭ್ಯಗಳನ್ನ ಕಲ್ಪಿಸಿಕೊಡುತ್ತದೆ. ಈ ಸಮುದಾಯದ ಮಹಿಳೆಗೆ ಸ್ವ-ಸಹಾಯ ಸಂಘದಿಂದ ನೆಮ್ಮದಿಯಿಂದ ಉಸಿರಾಡುವಂತಾಗಿದೆ. ಕುಟುಂಬ ಜವಾಬ್ದಾರಿಯನ್ನ ಹೊತ್ತಿರುವ ಆಕೆಗೆ, ಸಂಕಷ್ಟದ ಕಾಲದಲ್ಲಿ ಕೈ ಹಿಡಿಯುವಂತಹವು, ಈ ಸ್ವ-ಸಹಾಯ ಸಂಘಗಳು.

ಮಹಿಳಾ ಸ್ವ-ಸಹಾಯ ಸಂಘಗಳು ಯಾವ ರೀತಿಯಲ್ಲಿ ಅವರಿಗೆ ಸಹಾಯವನ್ನ ಮಾಡುತ್ತಿವೆ ಎಂಬ ವಿಷಯ ಗಮನಾರ್ಹವಾದುದ್ದಾಗಿದೆ. ಹಲವಾರು ಗುರಿಗಳನ್ನ ಸಂಘವು ಇಟ್ಟುಕೊಂಡು, ಅವುಗಳ ಈಡೇರಿಕೆಗಾಗಿ ಶ್ರಮಿಸುತ್ತಿವೆ. ಸದಸ್ಯರಿಂದ ಸಂಗ್ರಹಿಸಿದ ಹಣವನ್ನು, ಬ್ಯಾಂಕಿನಲ್ಲಿರುವ ಸಂಘದ ಖಾತೆಗೆ ಕಟ್ಟುತ್ತಾರೆ. "ಸಂಘವು ಎರಡು ವರ್ಷ ತುಂಬಿದ ನಂತರದಲಿ ಸದಸ್ಯರುಗಳಿಗೆ ಹಲವು ಸೌಲಭ್ಯಗಳನ್ನ ಕಲ್ಪಿಸಿಕೊಡುತ್ತಾರೆ. ಕುರಿ, ಮೇಕೆ, ಹಸುಗಳನ್ನು ಸಾಕುವುದಕ್ಕೆ ಅತ್ಯಲ್ಪ ಬಡ್ಡಿದರದಲ್ಲಿ ಸಾಲ, ತೋಟಗಾರಿಕೆಯ ಬೆಳೆಗಳನ್ನು ಬೆಳೆಯುವುದಕ್ಕೆ ಸಾಲ, ಮನೆಯಲ್ಲಿ ಬಲೆಯನ್ನು ನೇಯ್ಯುವುದಕ್ಕೆ ಮಹಿಳೆಯರಿಗೆ ಸಾಲ, ವ್ಯಾಪಾರ ಮಾಡಲು ಸಾಲ ಸೌಲಭ್ಯ, ಅನಾರೋಗ್ಯದ ಕಾಲದಲ್ಲಿ ಸಹಕಾರ, ಸಾವು ಸಂಭವಿಸಿದಾಗ ಸಹಾಯ, ಸಮುದಾಯದವರು ಅಭಿವೃದ್ಧಿ ಹೊಂದಲು ತಿಳುವಳಿಕೆ, ವರ್ಷಕ್ಕೆ ಒಂದು ಬಾರಿ ಹತ್ತಿರದ ಸ್ಥಳಗಳಿಗೆ ಪ್ರವಾಸ, ಮಹಿಳೆಯರ ಆರೋಗ್ಯದ ಬಗ್ಗೆ ಅರಿವು ಮೂಡಿಸುವುದು,"[೬] ಹೀಗೆ ಹಲವಾರು ಯೋಜನೆಗಳನ್ನ ಕಾರ್ಯರೂಪಕ್ಕೆ ತರುವುದರೊಂದಿಗೆ ತಮ್ಮ ಸಮುದಾಯದವರ ಏಳಿಗೆಗೆ ಸ್ವ-ಸಹಾಯ ಸಂಘಗಳು ಶ್ರಮಿಸುತ್ತಿವೆ.

**೩. ಶ್ರೀ ಗಂಗಾಪರಮೇಶ್ವರಿ ಯುವಕರ ಸಂಘ :**

ಜಿಲ್ಲೆಯ ವಿವಿಧ ಗ್ರಾಮಗಳಲ್ಲಿ ವಾಸಿಸುವ ಸಮುದಾಯದ ಯುವಕರು ಸೇರಿ ಸಂಘಗಳನ್ನು ಕಟ್ಟಿಕೊಂಡಿದ್ದಾರೆ. ಪ್ರತಿಯೊಂದು ಗ್ರಾಮದಲ್ಲಿಯೂ ಸಂಘಗಳಿರುವುದನ್ನ

ಕಾಣಬಹುದು. ಆದರೆ ಸಾಮಾನ್ಯವಾಗಿ ಶ್ರೀ ಗಂಗಾಪರಮೇಶ್ವರಿ ಯುವಕರ ಸಂಘ ಎಂಬ ಹೆಸರನ್ನೇ ಇಟ್ಟಿರುವುದನ್ನು ನೋಡಬಹುದು. ಕೆಲವು ಗ್ರಾಮಗಳಲ್ಲಿ ವೀರ ಮದಕರಿ ನಾಯಕ ಯುವಕರ ಸಂಘ, ಇತ್ಯಾದಿ ಹೆಸರುಗಳಿಂದಲೂ ಯುವಕರು ಸಂಘವನ್ನು ಕಟ್ಟಿಕೊಂಡಿದ್ದಾರೆ. ಇಂಥ ಸಂಘಗಳು ಗಂಗಾಮತಸ್ಥ ಸಮುದಾಯದವರು ವಾಸಿಸುವ ಊರುಗಳಲ್ಲೆ ಇರುವುದರಿಂದ, ಸಮುದಾಯದವರಿಗೆ ಹೆಚ್ಚಿನ ರೀತಿಯಲ್ಲಿ ಅನುಕೂಲವಾಗಿದೆ.

ಯುವಕರ ಸಂಘದಿಂದ ಸಮುದಾಯಕ್ಕೆ ಆಗುತ್ತಿರುವ ಅನುಕೂಲಗಳೆಂದರೆ, "ಬಡಮಕ್ಕಳ ವಿದ್ಯಾಭ್ಯಾಸಕ್ಕಾಗಿ ಹಣಕಾಸಿನ ನೆರವು, ತಮ್ಮ ಸಾಂಪ್ರದಾಯಿಕ ಕಲೆಗಳನ್ನು ಉಳಿಸಿ ಬೆಳೆಸುವುದು, ವಿದ್ಯಾರ್ಥಿಗಳಿಗೆ ಉಚಿತ ನೋಟ್‌ಬುಕ್, ಪೆನ್ನು, ಎಸ್.ಎಸ್.ಎಲ್.ಸಿ., ಪಿ.ಯು.ಸಿ.ಯಲ್ಲಿ ಹೆಚ್ಚು ಅಂಕಗಳಿಸಿದ ವಿದ್ಯಾರ್ಥಿಗಳಿಗೆ ಪ್ರತಿಭಾ ಪುರಸ್ಕಾರ, ಸಮುದಾಯದವರು ವಾಸಿಸುವ ಬೀದಿಗಳನ್ನು ಸ್ವಚ್ಛಗೊಳಿಸುವುದು, ಅನ್ಯಾಯವಾದರೆ ಅದನ್ನು ಖಂಡಿಸುವುದು, ಸರ್ಕಾರದಿಂದ ಸಿಗುವ ಸೌಲಭ್ಯಗಳನ್ನು ತಿಳಿಸುವುದು, ಜನಾಂಗದ ಕೆಲಸ-ಕಾರ್ಯಗಳನ್ನ ಒಗ್ಗಟ್ಟಿನಿಂದ ಮಾಡುವುದು, ಶಿಕ್ಷಣದ ಬಗ್ಗೆ ಅರಿವು ಮೂಡಿಸುವುದು, ಹಿರಿಯರು ಮತ್ತು ಕಿರಿಯರು ಸೇರಿ ಪೌರಾಣಿಕ ನಾಟಕ ಮಾಡುವುದು, ಭಜನೆಯಲ್ಲಿ ಪಾಲ್ಗೊಳ್ಳುವುದು, ದೇವತಾ ಕಾರ್ಯ, ಮದುವೆ ಕಾರ್ಯಗಳಲ್ಲಿ ಸಹಕಾರ ನೀಡುವುದು"[೬೩] ಮುಂತಾದ ಹಲವು ಯೋಜನೆಗಳನ್ನ ಹಾಕಿಕೊಂಡು, ಯುವಕರ ಸಂಘವು ಜಿಲ್ಲೆವ್ಯಾಪಿ ಕೆಲಸವನ್ನು ಮಾಡುತ್ತಿವೆ. ತಮ್ಮಜನಾಂಗದ ಸಾಂಪ್ರದಾಯಿಕ ಕಲೆಗಳನ್ನು ಗೌರವಪೂರ್ವಕವಾಗಿ ಉಳಿಸುತ್ತಿವೆ. ಬಡತನವನ್ನು ದೂರಮಾಡಲು, ಜನರಿಗೆ ಅರಿವನ್ನು ಮೂಡಿಸುವತ್ತ, ಸಂಘವು ಕಾರ್ಯಪ್ರವೃತ್ತವಾಗಿದೆ.

### ೪. ಬೆಸ್ತರ ಸರ್ಕಾರಿ ನೌಕರರ ಕ್ಷೇಮಾಭಿವೃದ್ಧಿ ಸಂಘ :

ಗಂಗಾಮತಸ್ಥ ಸಮುದಾಯದವರಲ್ಲಿ ಸರ್ಕಾರಿ ಉದ್ಯೋಗದಲ್ಲಿರುವವರು ತಾಲ್ಲೂಕು ಮಟ್ಟದಲ್ಲಿ ಸರ್ಕಾರಿ ನೌಕರರ ಕ್ಷೇಮಾಭಿವೃದ್ಧಿ ಸಂಘವನ್ನು ರಚಿಸಿಕೊಂಡಿದ್ದಾರೆ. ಇವರುಗಳು ಕೂಡ ತಮ್ಮ ಸಮುದಾಯದವರ ಅಭಿವೃದ್ಧಿಗೆ ಪೂರಕವಾಗಿರುವ ಗುರಿಗಳನ್ನ ಹೊಂದಿ ಸಂಘವನ್ನು ಸ್ಥಾಪಿಸಿಕೊಳ್ಳಲಾಗಿದೆ. "ತಮ್ಮ ಸಮುದಾಯದ ವಿದ್ಯಾರ್ಥಿಗಳು ಉನ್ನತ ವ್ಯಾಸಂಗಕ್ಕೆ ಹೋದರೆ ಧನ ಸಹಾಯವನ್ನು ಮಾಡುವುದು, ವಿದ್ಯಾರ್ಥಿಗಳಗೆ ಬಟ್ಟೆ-ಪುಸ್ತಕಗಳನ್ನು ಕೊಡುವುದು, ವಿದ್ಯಾರ್ಥಿವೇತನ ನೀಡುವುದು, ಉಚಿತ ಆರೋಗ್ಯ ಶಿಬಿರಗಳನ್ನು ಏರ್ಪಡಿಸುವುದು, ಬಡವರ ಮದುವೆಗೆ ಆರ್ಥಿಕ ಸಹಕಾರ ನೀಡುವುದ, ಬಸ್‌ಪಾಸ್‌ಗಳನ್ನು ಮಾಡಿಸಿ ಕೊಡುವುದು, ಸರ್ಕಾರಿ ಉದ್ಯೋಗಗಳ ಬಗೆಗೆ ಅರಿವು ಮೂಡಿಸುವುದು, ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಉಚಿತ ತರಬೇತಿಯನ್ನ ನೀಡುವುದು, ರೋಗಿಗಳಿಗೆ ಧನ ಸಹಾಯ ಮಾಡುವುದು,

ಚಿಕಿತ್ಸೆ ಕೊಡಿಸುವುದು, ಶಿಕ್ಷಣದ ಬಗ್ಗೆ ಅರಿವನ್ನು ಮೂಡಿಸುವುದು ಮುಂತಾದ ಅನುಕೂಲತೆಗಳನ್ನ ಮಾಡುತ್ತಿದೆ. ಸಂಘದಲ್ಲಿ ಒಬ್ಬರು ಅಧ್ಯಕ್ಷರು, ಕಾರ್ಯದರ್ಶಿ, ಖಜಾಂಚಿ ಇದ್ದಾರೆ.[೬೪] ಇವರೆಲ್ಲರೂ ತಿಂಗಳಿಗೊಮ್ಮೆ ಸಭೆಯನ್ನು ಸೇರುತ್ತಾರೆ. ಅವರು ಪ್ರತಿತಿಂಗಳು ನಿಗಧಿಗೊಳಿಸಿರುವ ಹಣವನ್ನು ತಮ್ಮ ವೇತನದಿಂದ ಕೊಡುತ್ತಾರೆ. ಈ ಹಣದಿಂದ ಸಮುದಾಯದವರನ್ನ ಅಭಿವೃದ್ಧಿಪಡಿಸಲು ಬಳಸಿಕೊಳ್ಳಲಾಗುತ್ತಿದೆ.

**೫. ಮಠ :**

ಗಂಗಾಮತಸ್ಥ ಸಮುದಾಯದವರಿಗೆ ಜಿಲ್ಲೆಯಲ್ಲೇ ಏಕೈಕ ಮಠವೊಂದಿದೆ. ಈ ಮಠ ಮಳವಳ್ಳಿ ಪಟ್ಟಣದ ಬೆಂಗಳೂರು–ಕೊಳ್ಳೇಗಾಲ ರಸ್ತೆಯ ಪಕ್ಕದಲ್ಲಿ ಸ್ಥಾಪನೆಗೊಂಡಿದೆ. ೧೯೪೩ರಲ್ಲಿ ಈ ಮಠ ಸ್ಥಾಪನೆಗೊಂಡಿದೆ. ಇದನ್ನು ಸ್ಥಾಪಿಸಿದರು ಶ್ರೀ ಶ್ರೀ ರಾಮರೂಢಸ್ವಾಮಿಯವರು. ಇವರು ಬಾಗಲಕೋಟೆಯಿಂದ ಮಳವಳ್ಳಿಗೆ ಬಂದು ಆ ಸ್ಥಳದಲ್ಲಿ ಮಠವನ್ನ ಸ್ಥಾಪಿಸಿದ್ದಾರೆ. ಅಂದಿನಿಂದ ಮಠ ಹಲವಾರು ಕಾರ್ಯಗಳನ್ನು ಸಮುದಾಯದವರಿಗೆ ಅನುಕೂಲವಾಗುವಂತೆ ಮಾಡಿಕೊಂಡು ಬಂದಿರುತ್ತದೆ. ಸ್ಥಾಪನೆ ಮಾಡಿದ ಶ್ರೀ ರಾಮರೂಢರ ಹೆಸರನಲ್ಲಿಯೇ ಮಠವನ್ನ ಸ್ಥಾಪಿಸಲಾಗಿದೆ. ಅದರ ಹೆಸರು "ಶ್ರೀ ರಾಮರೂಢ ಸ್ವಾಮೀಜಿ ಮಠ" ಎಂಬುದಾಗಿದೆ. ಇವರ ನಂತರದಲ್ಲಿ ಶ್ರೀ ಚಿಕ್ಕರಾಮರೂಢಸ್ವಾಮಿಗಳು ಮಠವನ್ನು ನಡೆಸಿಕೊಂಡು ಬಂದಿದ್ದಾರೆ. ಇಂದು ಶ್ರೀ ವಿದ್ಯಾನಂದ ಸ್ವಾಮೀಜಿಯವರು ಮಠದ ಅಧ್ಯಕ್ಷರಾಗಿ, ಹಲವು ಕಾರ್ಯಕ್ರಮಗಳನ್ನ ಸಮುದಾಯದ ಪರವಾಗಿ ಮಾಡುತ್ತಿದ್ದಾರೆ.

ಸಮುದಾಯದವರಿಗೆ ಮಠದಿಂದ ಆಗುವ ಅನುಕೂಲಗಳೆಂದರೆ, ಹಸಿದು ಬಂದವರಿಗೆ ದಾಸೋಹ, ಬಡವರಿಗೆ ದಾನ, ವಿದ್ಯಾರ್ಥಿಗಳಿಗೆ ಸಹಾಯ, ಕೈಲಾಗದ ವ್ಯಕ್ತಿಗಳಿಗೆ ಆಶ್ರಯ, ಧಾರ್ಮಿಕ ವಿಧಿ ವಿಧಾನಗಳನ್ನ ನಡೆಸುವುದು, ದೇವತಾರಾಧನೆ, ಶಿಕ್ಷಣದ ಬಗ್ಗೆ ಅರಿವು ಮೂಡಿಸುವುದು. ಕೆಲವರಲ್ಲಿ ಮನೆಮಾಡಿರುವ ಕ್ರೂರತ್ವವನ್ನು ಬಿಡಿಸುವುದು, ಮಧ್ಯಪಾನ ಮಾಡದಂತೆ ಅರಿವು ಮೂಡಿಸುವುದು, ಸತ್ತವರಿಗೆ ಮುಕ್ತಿಗಾಗಿ ಪೂಜೆ–ಪುನಸ್ಕಾರ ಮಾಡುವುದು, ಧಾರ್ಮಿಕ ಆಚರಣೆಗಳನ್ನ ನಡೆಸುವುದು ಇತ್ಯಾದಿ ಹಲವು ಕಾರ್ಯಕ್ರಮಗಳನ್ನ ಮಠ ನಡೆಸಿಕೊಂಡು ಬರುತ್ತಿದೆ. ಈ ಮಠಕ್ಕೆ, ಒಕ್ಕಲಿಗ ಸಮುದಾಯದವರ ಮಠವಾದ ಶ್ರೀ ಆದಿಚುಂಚನಗಿರಿ ಮಠದ ಪೀಠಾಧ್ಯಕ್ಷರಾದ ಶ್ರೀ ಶ್ರೀ ಶ್ರೀ ಬಾಲಗಂಗಾಧರ ಸ್ವಾಮೀಜಿಯವರು ಜಮೀನನ್ನ ಕೊಡುಗೆಯಾಗಿ ನೀಡಿದ್ದಾರೆ. ಅಷ್ಟೇ ಅಲ್ಲದೆ ಕಟ್ಟಡವನ್ನು ಕಟ್ಟಿಸಿಕೊಡುವುದರೊಂದಿಗೆ ಧನಸಹಾಯವನ್ನು ಮಾಡಿದ್ದಾರೆ ಎಂದು ಶ್ರೀ ಶ್ರೀ ವಿದ್ಯಾನಂದ ಸ್ವಾಮೀಜಿಯವರು ಹೇಳುತ್ತಾರೆ.

ಮಠಕ್ಕೆ ಹೊಂದಿಕೊಂಡಂತೆ, ಮಠದ್ದೇ ಆದ ಒಂದು ಕಲ್ಯಾಣ ಮಂಟಪವಿದೆ. ಅದರ ಹೆಸರು "ಶ್ರೀ ಗಂಗಾಪರಮೇಶ್ವರಿ ಸಮುದಾಯ ಭವನ" ಎಂಬುದಾಗಿದೆ. ಸಮುದಾಯ ಭವನದ ಕಟ್ಟಡದ ಕೆಲಸ ಮುಗಿದಿದ್ದು, ನಂತರದಲ್ಲಿ ಗಂಗಾಮತಸ್ಥ ಸಮುದಾಯದವರ, ಶುಭಕಾರ್ಯಗಳಿಗೆ, ಮದುವೆಗಳಿಗೆ ಬಹಳಷ್ಟು ಅನುಕೂಲವಾಗುತ್ತದೆ. ಬಡವರು ಮದುವೆಯನ್ನು ಉಚಿತವಾಗಿ, ಸ್ವಚ್ಛತೆಯ ಹಣವನ್ನು ಮಾತ್ರ ಪಾವತಿಸಿ ಬಳಸಿಕೊಳ್ಳಬಹುದಾಗಿದೆ ಎಂದು ಶ್ರೀ ವಿದ್ಯಾನಂದ ಸ್ವಾಮೀಜಿ ಹೇಳುತ್ತಾರೆ.

**೬. ಶಾಲೆ :**

ಗಂಗಾಮತಸ್ಥ ಸಮುದಾಯದವರು ಶಾಲೆಗಳನ್ನು ತೆರೆದಿದ್ದಾರೆ. ಮಳವಳ್ಳಿ ಪಟ್ಟಣದಲ್ಲಿ ಸಮುದಾಯಕ್ಕೆ ಸಂಬಂಧಿಸಿದಂತೆ ಎರಡು ಶಾಲೆಗಳು ಕಂಡು ಬಂದಿವೆ. ಒಂದು ಮಠದ ಶಾಲೆಯಾದ ಶ್ರೀ ವಿದ್ಯಾನಂದ ಸ್ವಾಮೀಜಿ ಶಿಕ್ಷಣ ಸಂಸ್ಥೆ, ಮತ್ತೊಂದು ಗಂಗಾದೇವಿ ವಿದ್ಯಾ ಸಂಸ್ಥೆ (ರಿ), ಈ ಶಾಲೆಗಳು ೧ ರಿಂದ ೭ನೇ ತರಗತಿವರೆಗೆ ಶಿಕ್ಷಣವನ್ನ ನೀಡುತ್ತಿವೆ. ಈ ಶಾಲೆಗಳಲ್ಲಿ ಹೆಚ್ಚಾಗಿ ಆ ಸಮುದಾಯದ ಮಕ್ಕಳೇ ವಿದ್ಯಾಭ್ಯಾಸವನ್ನ ಮಾಡುತ್ತಿವೆ. ಯಾವುದೇ ಶುಲ್ಕವನ್ನ ವಿಧಿಸದೆ ಉಚಿತವಾದ ಶಿಕ್ಷಣವನ್ನು ಈ ಶಾಲೆಗಳು ನೀಡುತ್ತಿವೆ. ಅಷ್ಟೇ ಅಲ್ಲದೆ ತಮ್ಮ ಸಮುದಾಯದವರ ಪ್ರತಿಯೊಂದು ಕುಟುಂಬದವರ ಮನೆ ಬಾಗಿಲಿಗೆ ಹೋಗಿ ಮಕ್ಕಳನ್ನು ಶಾಲೆಗೆ ಸೇರಿಸುವಂತೆ, ಅವರಿಗೆ ಪ್ರೇರಣೆಯನ್ನು ನೀಡುತ್ತಾರೆ.

ಜಿಲ್ಲೆಯ ಗಂಗಾಮತಸ್ಥ ಸಮುದಾಯದವರನ್ನ ಅಭಿವೃದ್ಧಿಪಡಿಸಲು, ಅದೇ ಸಮುದಾಯದವರು ಹಲವು ರೀತಿಯ ಸಂಘಸಂಸ್ಥೆಗಳನ್ನ ಸ್ಥಾಪಿಸಿಕೊಂಡು ಅದರಡಿಯಲ್ಲಿ ಕೆಲಸಗಳನ್ನ ನಿರ್ವಹಿಸುತ್ತಿವೆ. ತಮ್ಮ ಸಮುದಾಯದವರಿಗೆ ಸಂಘದಡಿಯಲ್ಲಿ ಆಗುವ ಎಲ್ಲಾ ರೀತಿ ಸೌಲಭ್ಯಗಳನ್ನು ಕಲ್ಪಿಸಿಕೊಟ್ಟಿವೆ. ಆದರೂ 'ಸಹ ಜಿಲ್ಲೆಯ ಇತರೇ ಜನಾಂಗಕ್ಕೆ ಹೋಲಿಸಿದರೆ ಪರಿಶಿಷ್ಟ ಜಾತಿಯವರಿಗಿಂತಲೂ ಕಷ್ಟದ ಜೀವನವನ್ನ ಗಂಗಾಮತಸ್ಥ ಸಮುದಾಯದವರು ನಡೆಸುತ್ತಿದ್ದಾರೆ. ಸರ್ಕಾರದವರು ಇತ್ತ ಗಮನಕೊಟ್ಟು, ಸಂಘಸಂಸ್ಥೆಗಳಿಗೆ ಹೆಚ್ಚಿನ ಸಹಾಯಹಸ್ತವನ್ನ ನೀಡಿ, ಆ ಮೂಲಕ ಅಭಿವೃದ್ಧಿಪಡಿಸಬೇಕಾಗಿರುವುದು ಪ್ರಸ್ತುತದಲ್ಲಿ ಅಗತ್ಯವಾಗಿದೆ.

### ೩.೧೦ ನಂಬಿಕೆಗಳು ಮತ್ತು ವಿಧಿ ನಿಷೇಧಗಳು :

ಜನಪದರಿಗೆ ನಂಬಿಕೆ ಮತ್ತು ನಿಷೇಧಗಳು ಒಂದು ನಾಣ್ಯದ ಎರಡು ಮುಖಗಳಿದ್ದಂತೆ. ನಂಬಿಕೆ ಜನಪದರ ಜ್ಞಾನ. ಅದನ್ನು ಬಿಟ್ಟು ಅವರು ಬದುಕಿಲ್ಲ. ಸಮಾಜ ವಿಧಿಸಿರುವ ನಿಷೇಧಗಳನ್ನು ಅವರು ಎಂದೂ ಮಾಡುವುದಿಲ್ಲ. ಸಮಾಜದ ಸಂಪ್ರದಾಯಗಳನ್ನ, ಆಚರಣೆಗಳನ್ನ ನಂಬಿ ಬದುಕಿದವರು ನಮ್ಮ ಜನಪದರು.

**ನಂಬಿಕೆಗಳು :**

ಜನಪದರಲ್ಲಿ ಸಾವಿರಾರು ವರ್ಷಗಳಿಂದ ನಂಬಿಕೆಗಳು ಹಾಸುಹೊಕ್ಕಾಗಿ ಸೇರಿಕೊಂಡಿವೆ. ಜನಪದ ನಂಬಿಕೆಯು ಪರಂಪರಾನುಗತವಾಗಿ ಅಂಗೀಕೃತವಾದ ಒಂದು ಪರಿಕಲ್ಪನೆ. ನಂಬಿಕೆಯು ಜನಪದ ಜೀವನಾನುಭವದ ಉತ್ಪನ್ನ. ಹೀಗಾಗಿ ಮಾನವ ಬದುಕಿಗೂ ನಂಬಿಕೆಗೂ ಬೇರ್ಪಡಿಸಲಾಗದ ಸಂಬಂಧ. ಅದು ಸೂಚನೆ, ನಿಯಮ, ವಿಧಿ–ನಿಷೇಧ, ನಿರ್ದೇಶನ, ಆಗ್ರಹ, ಆದೇಶ ಮತ್ತು ಆಜ್ಞೆಗಳ ರೂಪದಲ್ಲಿ ನಿತ್ಯ ಬದುಕಿನೊಂದಿಗೆ ಸಂಬಂಧವನ್ನು ಕಂಡುಕೊಂಡಿದೆ. ಜನಪದರ ಕೆಲಸ, ಆಲೋಚನೆ, ರೂಢಿ, ಜೀವನ ಕ್ರಮ, ಸಂಪ್ರದಾಯ, ಆಚರಣೆಗಳೆಲ್ಲವೂ ಮೂಲಭೂತವಾಗಿ ನಂಬಿಕೆಗಳಿಂದ ಪ್ರೇರಿತವಾದವುಗಳು. "ನಂಬಿಕೆಗಳು ಮಾತಿನ ಮೂಲಕ ವ್ಯಕ್ತಿಗೆ ಸ್ಫೂರ್ತಿ ನೀಡುವಂತವು. ಜೊತೆಗೆ ಇವು ಆಯಾ ಜನಾಂಗದವರ ಸ್ವತ್ತುಗಳು ಆಗಿವೆ. ಇವು ಜಾತಿ ಬೇಧವಿಲ್ಲದೆ ಎಲ್ಲ ವರ್ಗದ ಜಾತಿಯವರಲ್ಲೂ ಇವೆ."[೬೫] ನಂಬಿಕೆಗಳು ಸರ್ವವ್ಯಾಪಿಯಾಗಿ ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡಿವೆ.

ಮೂಲತಃ ಕಾಲ್ಪನಿಕ ಆಲೋಚನೆಯೊಂದು ವೈಯಕ್ತಿಕ ನೆಲೆಯಲ್ಲಿ ಹುಟ್ಟಿಕೊಂಡು ಸಮೂಹದಲ್ಲಿ ಸಾಮೂಹಿಕ ಮಾನ್ಯತೆಯನ್ನು ಪಡೆದುಕೊಂಡಾಗ ಅದು ನಂಬಿಕೆಯಾಗುತ್ತದೆ. ಪ್ರಕೃತಿಯ ರಹಸ್ಯವನ್ನು ಭೇದಿಸುವಲ್ಲಿ ಆದಿಮಾನವನ ವಿಫಲತೆ, ಹುಟ್ಟು, ಬದುಕು, ಸಾವುಗಳ ನಿಗೂಢತೆಯನ್ನು ಅರ್ಥೈಸಲಾಗದ ಆತಂಕ, ಜಾತಿ, ಮತ, ಧರ್ಮಗಳು ತಮ್ಮ ಅಸ್ತಿತ್ವಕ್ಕಾಗಿ ನಡೆಸಿದ ಹೋರಾಟ – ಈ ಹಿನ್ನೆಲೆಯಲ್ಲಿ ನಂಬಿಕೆಗಳು ಹುಟ್ಟಿಕೊಳ್ಳುತ್ತವೆ. ಜಾನಪದ ವಿದ್ವಾಂಸರು ಹೇಳುವಂತೆ "ಒಬ್ಬರ ಬಾಯಿಂದ ಇನ್ನೊಬ್ಬರ ಬಾಯಿಗೆ, ಕಿವಿಯಿಂದ ಕೇಳಿ ನಡೆಯಲ್ಲಿ ತಂದರು, ಮುಂದಿನವರೂ ಮತ್ತೊಬ್ಬರೂ ಇವುಗಳನ್ನು ಕಣ್ಣಾರೆ ಕಂಡು ತನ್ನ ಮನಸ್ಸಿನ ಸಮಾಧಾನಕ್ಕೆ ಅನುಸರಿಸಿಕೊಂಡು ಬಂದಿರಬಹುದು"[೬೬] ಎಂದು ಊಹಿಸುತ್ತಾರೆ. 'ನಂಬಿಕೆ ಇದ್ದರೆ ಏನು ಬೇಕಾದರೂ ಮಾಡಬಹುದು', 'ನಾಯಿ ನಂಬಿಕಸ್ಥ ಪ್ರಾಣಿ' ಮುಂತಾದ ನುಡಿಗಳನ್ನು ನಿತ್ಯ ಜೀವನದಲ್ಲಿ ಜನಸಾಮಾನ್ಯರ ಮಾತುಗಳಲ್ಲಿ ಕೇಳುತ್ತಲೇ ಇರುತ್ತೇವೆ. ಇದರಿಂದ ಜನಪದರು 'ನಂಬಿಕೆ'ಯ ಬಗ್ಗೆ ಎಷ್ಟು ಮಹತ್ವವನ್ನ ಇಟ್ಟಿರುವರು ಎಂಬುದು ಅರ್ಥವಾಗುತ್ತದೆ.

ಜನಪದ ನಂಬಿಕೆಗಳ ಬಗ್ಗೆ ಆರ್.ಎಸ್.ಬಾಗ್ಸ್ ಜಾನಪದದ ವರ್ಗೀಕರಣದಲ್ಲಿ ನಂಬಿಕೆಗಳನ್ನು ವೈಜ್ಞಾನಿಕವಾಗಿ ವಿವೇಚಿಸಿರುವವರು. ಅವರ ಪ್ರಕಾರ "ನಂಬಿಕೆಗಳು ಪುನರಾವೃತವಾಗುವ, ಸಾಮೂಹಿಕ ವೀಕ್ಷಣೆಯ ಫಲವಾಗಿ ಮೂಡಿ ಬರುವ, ಕಾರ್ಯಕಾರಣ ಸಂಬಂಧವಿರುವ ಸಾಂಪ್ರದಾಯಿಕ ಭಾವನೆ". ಮರಿಯೂ ಲೀಚ್ ಅವರು "ಪುನರಾವೃತವಾಗುವ ಸಾಮೂಹಿಕ ವೀಕ್ಷಣೆಯ ಪ್ರತೀಕವಾಗಿ ಬರುವ ಭೂತ, ವರ್ತಮಾನ, ಭವಿಷತ್ತುಗಳ ಕಾರ್ಯಕಾರಣ ಸಂಬಂಧಗಳ ಸಾಂಪ್ರದಾಯಿಕ ಸ್ವೀಕೃತ ಪರಿಕಲ್ಪನೆಯೇ ಜಾನಪದ ನಂಬಿಕೆ" ಎಂದು ನಿಘಂಟಿನಲ್ಲಿ ತಿಳಿಸಿರುವರು. ಪ್ರೊ॥ ದೇ. ಜವರೇಗೌಡರು "ದೇಶ ಕಾಲಗಳ ಹಿನ್ನೆಲೆಯಲ್ಲಿ ಪರಂಪರಾಗತವಾದ ಜ್ಞಾನ, ದೀರ್ಘ ಅನುಭವ, ಕಾಲ್ಪನಿಕ ಯೋಚನೆ ಮತ್ತು ಅತೀಂದ್ರೀಯ ವ್ಯಾಪಾರದ ಫಲವಾಗಿ ಮೂಡಿದ ಶ್ರದ್ಧೆಯೇ ನಂಬಿಕೆ" ಎಂದಿರುವರು. ನನ್ನ ಪ್ರಕಾರ ಒಂದು ಸಮೂಹ ಬಹುಕಾಲ ಮೆಚ್ಚಿ ಆಚರಿಸುವುದೇ ನಂಬಿಕೆ.[೬೭] ಒಟ್ಟಿನಲ್ಲಿ ಅನುಭವದ ಏಳು-ಬೀಳುಗಳ ಪ್ರಮಾಣೀತ ರೂಪವೇ ನಂಬಿಕೆಯಾಗಿದೆ ಎಂದು ಹೇಳಬಹುದು.

ಗಂಗಾಮತಸ್ಥರ ನಂಬಿಕೆಗಳನ್ನ ಈ ರೀತಿಯಾಗಿ ವರ್ಗೀಕರಿಸಿಕೊಳ್ಳಬಹುದು. ಜನನ-ಮಕ್ಕಳ ಸಂಬಂಧಿ ನಂಬಿಕೆಗಳು, ಅಂಗಾಂಗ ಸಂಬಂಧಿ ನಂಬಿಕೆಗಳು, ಬೇಟೆಗೆ ಸಂಬಂಧಿಸಿದ ನಂಬಿಕೆಗಳು, ಪಶು, ಪಕ್ಷಿ, ಪ್ರಾಣಿಗಳಿಗೆ ಸಂಬಂಧಿಸಿದ ನಂಬಿಕೆಗಳು, ಮಳೆ ಸಂಬಂಧಿ ನಂಬಿಕೆಗಳು, ವ್ಯವಸಾಯ ಸಂಬಂಧಿ ನಂಬಿಕೆಗಳು, ಸಾವಿನ ಸಂಬಂಧಿ ನಂಬಿಕೆಗಳು, ಪ್ರಯಾಣಕ್ಕೆ ಸಂಬಂಧಿಸಿದ ನಂಬಿಕೆ, ಮದುವೆಗೆ ಸಂಬಂಧಿಸಿದ ನಂಬಿಕೆಗಳು, ಸಂಕೀರ್ಣ ನಂಬಿಕೆಗಳು ಎಂದು ವಿಂಗಡಿಸಿಕೊಳ್ಳಬಹುದು.

**ಜನನ-ಮಕ್ಕಳ ಸಂಬಂಧಿ ನಂಬಿಕೆಗಳು**

ಜನಪದರ ಒಂದು ಮುಖ ಜನನವಾದರೆ, ಮತ್ತೊಂದು ಮುಖ ಮರಣ. ಜನನ ಹಾಗೂ ಮಕ್ಕಳಿಗೆ ಸಂಬಂಧಿಸಿದಂತೆ ಗಂಗಾಮತಸ್ಥರಲ್ಲಿರುವ ನಂಬಿಕೆಗಳನ್ನು ಇಲ್ಲಿ ಹೇಳಲಾಗಿದೆ.

೧. ಚೊಚ್ಚಲ ಹೆರಿಗೆ ತವರು ಮನೆಯಲ್ಲಿಯೇ ಆಗಬೇಕು.

೨. ಹೆರಿಗೆಯು ಮುಂದಿನ ಹಜಾರದಲ್ಲಿ ನಡೆಯಬೇಕು.

೩. ಮಗು ಹುಟ್ಟಿದ ಅಲ್ಪ ಸಮಯದಲ್ಲಿಯೇ ತಾಯಿಯ ಎದೆಹಾಲು ಕೊಡಬೇಕು.

೪. ಮಗು ಜನನ ನಂತರ, ಸೂತಕ ತೀರುವವರೆಗೂ ಮನೆ ಒಳಗಡೆ ಬೇರೆಯವರು ಬರುವಂತಿಲ್ಲ.

೫. ಮಕ್ಕಳಿಗೆ ಬಾಲಗ್ರಹವಾದರೆ ಬಾಲಗ್ರಹ ಚಿಕಿತ್ಸೆ ಮಾಡಿಸಬೇಕು.

೬. ಮಕ್ಕಳು ರಾತ್ರಿವೇಳೆ ಹಾಸಿಗೆ ಒದ್ದೆ ಮಾಡಿಕೊಂಡರೆ, ಶವದ ಮೇಲೆ ಎಸೆದ ಕಾಸು ತಂದು ಉಡುದಾರಕ್ಕೆ ಕಟ್ಟಿದರೆ ನಿಲ್ಲುತ್ತದೆ.

೭. ಮಕ್ಕಳ ಹತ್ತಿರಕ್ಕೆ ಭೂತ, ಪ್ರೇತ, ಪಿಶಾಚಿ ಹತ್ತಿರ ಸುಳಿಯದಿರಲೆಂದು ಬಲೆಯ ದಾರವನ್ನು, ಮಕ್ಕಳ ಕಾಲು, ಸೊಂಟಕ್ಕೆ ಕಟ್ಟುತ್ತಾರೆ.

ತವರು ಹೆಣ್ಣಿನ ಸಮಸ್ತ ಸಂಪತ್ತಿನ ಬದುಕಿನ ಸಂಕೇತ ತಾನು ಹುಟ್ಟಿನಿಂದ ಆಡಿ-ಬೆಳೆದ ಪರಿಸರ ಎಂಥವರಿಗೂ, ಎಂಥ ನೋವನ್ನು ಮರೆಸುತ್ತದೆ. ತಂದೆ-ತಾಯಿ ರಕ್ತ ಸಂಬಂಧಿಗಳನ್ನ ನೋಡಿದರೆ ಯಾವ ತೊಂದರೆಯಿದ್ದರೂ ಕಾಣಿಸುವುದಿಲ್ಲ. ಈ ಹಿನ್ನೆಲೆಯಲ್ಲಿ ಪ್ರಸವ ಬೇನೆಯನ್ನ ಮರೆಯಲಿ ಎಂಬ ದೃಷ್ಟಿಯಿಂದ ಮೊದಲನೇ ನಂಬಿಕೆ ಹುಟ್ಟಿಕೊಂಡಿದೆ. ಅಂತೆಯೇ ಗುಡಿಸಲಿನಲ್ಲಿ ವಾಸಿಸುವ ಇವರು ಗಾಳಿ, ಬೆಳಕಿನ ಸೌಕರ್ಯ ಮತ್ತು ಸ್ಥಳಾವಕಾಶ ಕಡಿಮೆಯಿರುವುದರಿಂದ ಮನೆಯ ಹಜಾರದಲ್ಲಿ ಹೆರಿಗೆ ಮಾಡಿಸುವುದು ಕಂಡು ಬರುತ್ತದೆ. ಮೂರನೇ ನಂಬಿಕೆ ತಾಯಿಯ ಹಾಲಿನ ಮಹತ್ವವನ್ನು ಕುರಿತದ್ದಾಗಿದೆ. ಹೊರಗಿನಿಂದ ಮಗು ನೋಡಲು ಬರುವವರು ಪರಿಶುದ್ಧವಾಗಿ ಬರುವುದಿಲ್ಲ. ಇದರಿಂದ ಮಗುವಿನ ಆರೋಗ್ಯದ ಮೇಲೆ ಪರಿಣಾಮ ಬೀರುತ್ತದೆ ಎಂಬುದರ ಹಿನ್ನೆಲೆಯಲ್ಲಿ ನಾಲ್ಕನೇ ನಂಬಿಕೆ ಹುಟ್ಟಿಕೊಂಡಿದೆ. ಸತ್ತ ವ್ಯಕ್ತಿ ದೇವರಿಗೆ ಸಮಾನ ಎಂಬ ಹಿನ್ನೆಲೆಯಲ್ಲಿ ಆರನೇ ನಂಬಿಕೆ ಹುಟ್ಟಿಕೊಂಡಿದೆ. ಗಂಗಾಮತಸ್ಥರಿಗೆ ದೇವರು ಕೊಟ್ಟಿರುವ ವರವೆಂದರೆ ಬಲೆ. ಅವರಿಗೆ ಅದು ಬಲು ಪವಿತ್ರವಾದುದ್ದು. ಈ ಹಿನ್ನೆಲೆಯಲ್ಲಿ ಏಳನೆಯ ನಂಬಿಕೆ ಬಂದಿದೆ.

## ಅಂಗಾಂಗ ಸಂಬಂಧಿ ನಂಬಿಕೆಗಳು

ತಮ್ಮ ಬದುಕಿನ ಒಳಗಡೆ ಏನೆಲ್ಲ ಆಗುತ್ತವೆ ಎಂಬುದನ್ನು ಗಂಗಾಮತಸ್ಥರು ಅಂಗಾಂಗಗಳ ಮೇಲೆ ಕಟ್ಟಿದ ನಂಬಿಕೆಗಳಿಂದ ತಿಳಿದು ಬರುತ್ತವೆ.

೧. ಗಂಡಸಿಗೆ ತಲೆಯಲ್ಲಿ ಎರಡು ಸುಳಿಗಳಿದ್ದರೆ ಇಬ್ಬರು ಹೆಂಡತಿಯರು.

೨. ಮಚ್ಚಿನಿಂದ ಹೊಡೆಯಲು ಕೈ ಎತ್ತಿದ ಮೇಲೆ ನೆಲಕ್ಕೆ ಕುಟುಕಬೇಕು.

೩. ಎಡಗಣ್ಣು ಅದುರಿದರೆ ಕೆಡಕಾಗುತ್ತದೆ.

೪. ಬಾಲನಿಗೆ ಬಲಗೈ, ಬಾಲೆಗೆ ಎಡಗೈ ಕಡಿದರೆ ಕಾಸು ಸಿಕ್ಕುತ್ತದೆ.

ಮೊದಲನೆ ನಂಬಿಕೆ ಎರಡು ಮದುವೆಯಾಗಿದ್ದವರ, ತಲೆಯಲ್ಲಿ ಎರಡು ಸುಳಿಗಳಿರುವುದರ ಹಿನ್ನೆಲೆಯಲ್ಲಿ ಬಂದಿದೆ. ಅಲ್ಲದೆ ಎರಡು ಎಂಬ ಸಂಖ್ಯೆಯ ಕರಾಮತ್ತು ಕೂಡ ಕಾರಣ. ಮಚ್ಚಿನಿಂದ ಆತನಿಗೆ ಹೊಡೆಯಲು ಕೈ ಎತ್ತಿದ ನಂತರದಲ್ಲಿ, ನೆಲಕ್ಕೆ ಕುಟ್ಟಬೇಕು. ಇಲ್ಲದಿದ್ದರೆ ಬೇರೆ ಯಾರಿಗಾದರೂ ಹೊಡೆಯುತ್ತಾನೆ ಎಂಬುದರ ಹಿನ್ನೆಲೆಯಿಂದ ಎರಡನೇ ನಂಬಿಕೆ ಬಂದಿದೆ. ಕಣ್ಣಿಗೆ ತೊಂದರೆಯುಂಟಾಗಿರುವುದರ ಹಿನ್ನೆಲೆಯಿಂದ ಮೂರನೇ ನಂಬಿಕೆ ಬಂದಿದೆ. ನಾಲ್ಕನೆಯದು ಕೈ ಕಡಿದರೆ ಹಣ ಸಿಗುತ್ತದೆಂಬ ನಂಬಿಕೆ ಮೂಢನಂಬಿಕೆಯನ್ನು ಸೂಚಿಸುವಂತಹದ್ದು.

**ಬೇಟೆಗೆ ಸಂಬಂಧಿಸಿದ ನಂಬಿಕೆಗಳು**

ಗಂಗಾಮತಸ್ಥರ ಸಾಂಪ್ರದಾಯಿಕ ವೃತ್ತಿಗಳಲ್ಲಿ ಬೇಟೆ ಅತ್ಯಂತ ಹೆಚ್ಚು ಮಹತ್ವವನ್ನ ಪಡೆದುಕೊಂಡಿದೆ. ಪ್ರಾಚೀನತಮ ವೃತ್ತಿಯಾದ ಹಾಗೂ ಕುಲ ಕಸುಬಾದ ಬೇಟೆಯ ಸುತ್ತ ಹಲವು ನಂಬಿಕೆಗಳು ಇವೆ.

೧. ಬೇಟೆಗೆ ಹೋಗುವ ಸಮಯದಲ್ಲಿ ಎದುರಿಗೆ ರೈತನು, ಜೋಡಿ ಎತ್ತುಗಳ ಮೇಲೆ ನೇಗಿಲು ಹೇರಿಕೊಂಡು ಬಂದರೆ ಶುಭ.
೨. ಮಡಿವಾಳನು ಮೈಲಿಗೆ ಬಟ್ಟೆಯನ್ನು ತೊಳೆಯುವಾಗ ಸಿಕ್ಕರೆ ಆ ದಿನ ಬೇಟೆ ಇಲ್ಲ.
೩. ಕೆಲಸಿಗನು ದಾರಿಯಲ್ಲಿ ಅಡ್ಡ ಸಿಕ್ಕರೆ, ಖಾಲಿ ಕೊಡ ಹಿಡಿದವರು ಅಡ್ಡ ಬಂದರೆ, ಒಂಟಿ ಬ್ರಾಹ್ಮಣ ದಾರಿಯಡ್ಡ ಬಂದರೆ ಬೇಟೆ ಇಲ್ಲ.
೪. ಬೇಟೆಗೆ ಹೊರಡುವ ಹಿಂದಿನ ರಾತ್ರಿ ಕನಸಿನಲ್ಲಿ ಹುಣಸೆಹಣ್ಣು, ಹೊಗೆ ಸೊಪ್ಪು, ಹಿರಿಯರ ಮುಖಗಳು ಕಾಣಿಸಿಕೊಂಡರೆ ಶಿಕಾರಿ ಆಗುತ್ತದೆ.
೫. ಬೇಟೆಗೆ ಹೋಗುವಾಗ ಉಪ್ಪು ಸುಣ್ಣವನ್ನು ಬಟ್ಟೆಯಲ್ಲಿ ಕಟ್ಟಿಕೊಂಡು ಹೋಗಬೇಕು.
೬. ಬೇಟೆಗೆ ಹೋಗುವಾಗ ಯಾರಾದರೂ ಎಲ್ಲಿಗೆ ಎಂದು ಕೇಳಿದರೆ ಅಂದು ಬೇಟೆ ಇಲ್ಲ.
೭. ಗಂಡನು ಬೇಟೆಗೆ ಹೋಗಿದ್ದಾಗ ಹೆಂಡತಿಯು ತಲೆಗೂದಲಿಗೆ ಎಣ್ಣೆ ಸವರಿಕೊಂಡರೆ ಗಂಡನಿಗೆ ಅರಣ್ಯದಲ್ಲಿ ಬೇಟೆ ಜಾರಿ ಹೋಗುತ್ತದೆ.
೮. ತುಂಬಿದ ಕೊಡ ಹಿಡಿದ ಮುತ್ತೈದೆ ದಾರಿಯಡ್ಡ ಬಂದರೆ ಬೇಟೆಯು ಹೆಚ್ಚಾಗಿ ಆಗುತ್ತದೆ.
೯. ಬೇಟೆಯ ಸಂದರ್ಭದಲ್ಲಿ ಭಯವಿಲ್ಲ.

ಮೊದಲನೇ ನಂಬಿಕೆಯಲ್ಲಿ "ರೈತನು ಎತ್ತುಗಳ ಮೇಲೆ ನೇಗಿಲು ಹೇರಿಕೊಂಡು ಹೋದ ರೀತಿಯಲ್ಲಿ ಮೀನುಗಳು ಬುಟ್ಟಿಯ ತುಂಬಾ ತುಂಬಿಕೊಂಡು ಬರುತ್ತೇವೆಂದು ನಂಬಿಕೆ ಇವರಿಗೆ ಉಂಟು."[೬೮] ಮಡಿವಾಳ ಬಟ್ಟೆ ತೊಳೆದ ಹಾಗೆ, ಮೀನುಗಳು ಕೈಜಾರಿ ಹೋಗುತ್ತವೆ ಎಂಬುದು ಎರಡನೇ ನಂಬಿಕೆಯಾಗಿದೆ. ಮೂರನೇ ನಂಬಿಕೆಯಲ್ಲಿ ಕೆಲಸಿಗ ತಲೆಯನ್ನು ನುಣ್ಣಗೆ ಬೋಳಿಸಿದಂತೆ, ಮೀನುಗಳು ಬೇಟೆಯಿಂದ ನುಣಚಿಕೊಳ್ಳುತ್ತವೆ. ಒಂಟಿ ಬ್ರಾಹ್ಮಣ ದಾರಿಯಡ್ಡ ಸಿಕ್ಕಿದರೆ ಅಪಶಕುನವೆಂಬ ನಂಬಿಕೆಯಿದೆ. ನಾಲ್ಕನೆಯ ನಂಬಿಕೆ ಸತ್ತ ಹಿರಿಯರು ದೇವರಿಗೆ ಸಮಾನರು ಎಂಬುದರಿಂದ ಹುಟ್ಟಿಕೊಂಡಿದೆ. ಬೇಟೆಯಾಡಿದ ಪ್ರಾಣಿಯ ಮಾಂಸಕ್ಕೆ ಉಪ್ಪು ಸವರಿದರೆ ಮಾಂಸ ಹಾಳಾಗುವುದಿಲ್ಲ ಎಂಬುದು ಐದನೆಯದು. ಆರನೇಯದು ಬೇಟೆಗೆ ಹೋದಾಗ ಎಲ್ಲಿಗೆ ಎಂದು ಕೇಳಿದರೆ ಹೋದ ಕೆಲಸ ಆಗುವುದಿಲ್ಲ. ಏಳನೇ ನಂಬಿಕೆ ಹೆಂಡತಿ ತಲೆಗೂದಲಿಗೆ ಎಣ್ಣೆ ಸವರಿಕೊಳ್ಳುವ ಕ್ರಿಯೆ ಗಂಡನಿಗೆ ಅರಣ್ಯದಲ್ಲಿ ಬೇಟೆ ಜಾರಿ ಹೋಗುವ ಕ್ರಿಯೆಯೊಂದಿಗೆ ಸಾಮ್ಯತೆಯನ್ನು ಸ್ಥಾಪಿಸಿಕೊಳ್ಳುತ್ತದೆ. ಎಂಟನೆಯದು ತುಂಬಿದ ಕೊಡ ಹಿಡಿದ ಮುತ್ತೈದೆ ಅಡ್ಡ ಬಂದರೆ, ಕೊಡ ತುಂಬಿದ ಹಾಗೆ ಬೇಟೆಯಿಂದ ನಮ್ಮ ಚೀಲವು ತುಂಬುತ್ತದೆಂಬ ನಂಬಿಕೆಯಿದೆ. ಒಂಭತ್ತನೆಯದು ಬಲೆಯನ್ನು ದೇವರು ಕೊಟ್ಟಿರುವ ಕಾಣಿಕೆ ಎಂಬ ಭಾವನೆ. ದೇವರೇ ಕೊಟ್ಟಿರುವ ವಸ್ತು ನಮ್ಮ ಹತ್ತಿರವಿರುವಾಗ ಯಾರಿಂದಲೂ ತೊಂದರೆ ಆಗುವುದಿಲ್ಲ ಎಂಬ ನಂಬಿಕೆಯಾಗಿದೆ.

### ಪಶು, ಪಕ್ಷಿ, ಪ್ರಾಣಿ ಸಂಬಂಧಿ ನಂಬಿಕೆಗಳು

ಕಾಡಿನಲ್ಲಿ ಹಿಂದೆ ವಾಸವಿದ್ದ ಮನುಷ್ಯನಿಗೆ, ಇಂದಿಗೂ ಕಾಡಿನ ಪ್ರಾಣಿ ಪಕ್ಷಿಗಳ ಬಗ್ಗೆ ನಂಬಿಕೆಯನ್ನ ಇಟ್ಟುಕೊಂಡಿದ್ದಾನೆ. ಅಂತೆಯೇ ಗಂಗಾಮತಸ್ಥರು ಅವುಗಳ ಬಗ್ಗೆ ತಮ್ಮದೇ ಆದ ನಂಬಿಕೆ ಇಟ್ಟಿರುವರು.

೧. ರಾತ್ರಿವೇಳೆ ಗೂಬೆ ಕೂಗಿದರೆ ಅಶುಭ.
೨. ಸತ್ತ ನಾಯಿಗಳನ್ನು ನಿಂಬೆಗಿಡದ ತಳದಲ್ಲಿ ಹೂತರೆ ಹೆಚ್ಚು ಫಲ ಬಿಡುತ್ತದೆ.
೩. ಹಲ್ಲಿ ಮೈಮೇಲೆ ಬಿದ್ದರೆ ಸ್ನಾನ ಮಾಡಬೇಕು.
೪. ಕಾಗೆ ಸ್ನಾನ ಮಾಡುವುದನ್ನು ಕಂಡ್ರೆ ಸತ್ತ ಸುದ್ದಿ.
೫. ಬೆಕ್ಕು ಅಡ್ಡ ಬಂದರೆ ಹೋದ ಕೆಲಸ ಆಗುವುದಿಲ್ಲ.
೬. ಮಾತನಾಡುವಾಗ ಹಲ್ಲಿ ಲೊಚಗುಟ್ಟಿದರೆ (ಗವುಳಿಯಾದರೆ) ಅದು ನಿಜವಾಗುತ್ತದೆ.
೭. ಮನೆಯೊಳಗೆ ಕಾಗೆ ನುಗ್ಗಿದರೆ ಆ ಮನೆಗೆ ಕೇಡಾಗುತ್ತದೆ.

೮. ಗೂಬೆ ಮನೆಯ ಮೇಲೆ ಕೂತರೆ ಕೇಡಾಗುತ್ತದೆ.

೯. ಕಾಗೆ ಯಾರಿಗಾದರೂ ತಗುಲಿದರೆ ಸ್ನಾನ ಮಾಡಿ ಐದು ಶನಿವಾರ ಶನಿಮಹಾತ್ಮ ದೇವಸ್ಥಾನಕ್ಕೆ ಹೋಗಿ ಎಳ್ಳು ಬತ್ತಿಯನ್ನು ಹಚ್ಚಬೇಕು.

೧೦. ನರಿ ಮುಖ ನೋಡಿದರೆ ಶುಭವಾಗುತ್ತದೆ.

ಈ ಮೇಲಿನ ನಂಬಿಕೆಗಳಲ್ಲಿ ಎರಡನೇ ನಂಬಿಕೆ ವೈಜ್ಞಾನಿಕವಾಗಿದೆ. ನಿಂಬೆ ಗಿಡಕ್ಕೆ ಸತ್ತ ನಾಯಿಯನ್ನು ಹೂಳುವುದರಿಂದ, ಅದು ಕೊಳೆತು ಉತ್ತಮ ಗೊಬ್ಬರವಾಗಿ, ಹೆಚ್ಚು ಫಲ ಬಿಡುತ್ತದೆ. ಮೂರನೆಯದು ಹಲ್ಲಿ ಮೈಮೇಲೆ ಬಿದ್ದರೆ ಕೆಲವರಿಗೆ ಮೈಯಲ್ಲಿ ಗಂದೆಗಳು ಬರುವ ಸಾಧ್ಯತೆಯಿದೆ ಆದ್ದರಿಂದ ಸ್ನಾನ ಮಾಡಬೇಕು. ಉಳಿದವುಗಳು ಸಮಸ್ಯೆಗಳಿಗೆ ಪರಿಹಾರೋಪಾಯವಾಗಿ ಕಂಡುಕೊಂಡವು. ವೈಜ್ಞಾನಿಕವಾಗಿ ಪ್ರಗತಿ ಇಲ್ಲದ ಕಾಲದಲ್ಲಿ ಇಂಥ ನಂಬಿಕೆಗಳೇ ಜೀವನಾಧಾರವಾಗಿ ಇದ್ದಂತವು. ತಮ್ಮ ಜೀವನದ ಎಲ್ಲ ಮಜಲುಗಳಲ್ಲಿ ಹಾಸುಹೊಕ್ಕಾಗಿ ನಂಬಿಕೆಗಳು ಸೇರಿವೆ. ಈಗಲೂ ಇಂಥವೇ ನಂಬಿಕೆಗಳಿಂದ ನಿಶ್ಚಿತ ತೀರ್ಮಾನ ಕೈಗೊಳ್ಳುತ್ತಾರೆ.

**ಮಳೆ ಸಂಬಂಧಿ ನಂಬಿಕೆಗಳು**

ಮಳೆಯ ಬಗೆಗೆ ಹಲವಾರು ನಂಬಿಕೆಗಳನ್ನು ಗಂಗಾಮತಸ್ಥರು ಹೊಂದಿದ್ದಾರೆ.

೧. ಕಪ್ಪೆ ವಟಗುಟ್ಟಿದರೆ ಮಳೆ ಬರುತ್ತದೆ.

೨. ಚಿಟ್ಟೆ ಇರುವೆ ಬಿಲದಿಂದ ಹೊರಗಡೆ ಬಂದರೆ ಮಳೆ ಬರುತ್ತದೆ.

೩. ಕಾಮನ ಬಿಲ್ಲು ಎದ್ದರೆ ಮಳೆ ಬರುವುದಿಲ್ಲ.

೪. ತೊನ್ನು ರೋಗದವರು ಸತ್ತಾಗ ಹೂತರೆ ಮಳೆ ಬರುವುದಿಲ್ಲ.

೫. ಮಳೆ ಬಾರದಿದ್ದಾಗ ಮಳೆರಾಯನನ್ನು ಮಾಡಿ ಪೂಜಿಸಿದರೆ ಮಳೆ ಬರುತ್ತದೆ.

೬. ಕತ್ತೆಗೆ ಪೂಜಿಸಿ, ಗ್ರಾಮದಲ್ಲಿಟ್ಟುಕೊಂಡರೆ ಮಳೆ ಬರುತ್ತದೆ ಎಂಬ ನಂಬಿಕೆ.

**ವ್ಯವಸಾಯ ಸಂಬಂಧಿ ನಂಬಿಕೆಗಳು**

೧. ಕೃಷಿಯಲ್ಲಿ ಬೀಜ ಬಿತ್ತನೆ ಮಾಡುವ ಮೊದಲು ಭೂಮಿಗೆ ಪೂಜೆ ಸಲ್ಲಿಸುವುದು.

೨. ಗೊಬ್ಬಳಿ ಮರದಿಂದ ನೇಗಿಲು ಮಾಡಿಸಬೇಕು.

೩. ಕೃಷಿಯಲ್ಲಿ ಬಳಸುವ ಸಲಕರಣೆಗಳನ್ನು ಕಾಲಿನಿಂದ ಒದೆಯಬಾರದು.

೪. ಬೆಳೆದ ಬೆಳೆಗಳನ್ನು ಕತ್ತರಿಸುವುದಕ್ಕಿಂತ ಮೊದಲು 'ಹೆಚ್ಚು' ಮಾಡಿಸಬೇಕು.

೫. ಸೋಮವಾರದಂದು ಕೃಷಿ ಭೂಮಿಯಲ್ಲಿ ಯಾವ ಕೆಲಸವನ್ನು ಮಾಡಬಾರದು.

೬. ದವಸ ಧಾನ್ಯಗಳನ್ನು ಅಳೆಯುವಾಗ ಏಳರ ಸಂಖ್ಯೆಯನ್ನು 'ಹೆಚ್ಚಲಿ' ಎನ್ನಬೇಕು.

ಅನ್ನ ನೀಡುವ ತಾಯಿ ಭೂಮಿ. ಭೂಮಿ ದೇವರಿಗೆ ಸಮಾನ ರೈತರಿಗೆ. ಆದುದ್ದರಿಂದ ಬಿತ್ತನೆ ಮಾಡುವುದಕ್ಕೆ ಮೊದಲು ಪೂಜೆ ಸಲ್ಲಿಸುವುದು ರೂಢಿಯಲ್ಲಿದೆ. ಕೃಷಿಗೆ ಬಳಸುವ ಸಲಕರಣೆಗಳೂ ಸಹ ಇವರಿಗೆ ದೈವಕ್ಕೆ ಸಮಾನ. ಅವುಗಳನ್ನು ಕಾಲಿನಿಂದ ಒದೆಯುವುದಾಗಲೀ ಅಥವಾ ನಿರ್ಲಕ್ಷಿಸುವುದಾಗಲೀ ಅವರಿಗೆ ಒಗ್ಗದ ವಿಚಾರ. ಅದಕ್ಕಾಗಿ ಗೌರವಿಸುವುದು ಮೂರನೆ ನಂಬಿಕೆ. ನೇಗಿಲು ಗಟ್ಟಿಯಾಗಿರಬೇಕೆಂಬ ಕಾರಣದಿಂದ ಗೊಬ್ಬಳಿ ಮರದಿಂದ ನೇಗಿಲನ್ನು ಮಾಡಿಸುತ್ತಾರೆ. ಬೆಳೆದ ಬೆಳೆಗಳು ದೇವರು ಕೊಟ್ಟಿರುವ ವರ ಪ್ರಸಾದ. ಆದುದ್ದರಿಂದ ಮೊದಲು 'ಹೆಚ್ಚು' ಮಾಡಿಸಿ ಅಂದರೆ ಹಾಲು-ಅನ್ನ- ಬೆಲ್ಲ ಇವುಗಳನ್ನು ವಿಘ್ನೇಶ್ವರನ ಮುಂದೆ ಇಟ್ಟು ಪೂಜಿಸಿ, ನಂತರ ಬೆಳೆಗಳನ್ನು ಕತ್ತರಿಸುವುದು ನಾಲ್ಕನೇ ನಂಬಿಕೆ. ಹಸುಗಳು ಸೋಮವಾರ ಜನಿಸಿದವು ಎಂಬ ನಂಬಿಕೆಯಿಂದ ಐದನೇ ನಂಬಿಕೆ ಬಂದಿದೆ. ಉಳಿದ ಆರು ದಿನಗಳು ದುಡಿಯುವುದರಿಂದ ಏಳನೆ ದಿನ ವಿಶ್ರಾಂತಿ ಸಿಗಲಿ ಎಂಬ ಕಾರಣ.

**ಸಾವಿನ ಸಂಬಂಧಿ ನಂಬಿಕೆಗಳು**

೧. ಕೆಟ್ಟ ಗಳಿಗೆಯಲ್ಲಿ ಸತ್ತರೆ ಮನೆ ಬಿಡಬೇಕು ಅಥವಾ ಗೂಡಾಕಬೇಕು.

೨. ಆತ್ಮಹತ್ಯೆ ಮಾಡಿಕೊಂಡವರನ್ನು ಸುಡಬೇಕು.

೩. ಬಿಳಿ ಮಚ್ಚೆ ಅಥವಾ ತೊನ್ನು ಹೊಂದಿದ ವ್ಯಕ್ತಿ ಸತ್ತಾಗ ಸುಡಬೇಕು.

೪. ಶವಸಂಸ್ಕಾರಕ್ಕೆ ಹೋದವರು ಸ್ನಾನ ಮಾಡದೆ ಮನೆ ಒಳಗೆ ಬರುವಂತಿಲ್ಲ.

೫. ಸತ್ತ ಮನೆಯಲ್ಲಿ ತಿಥಿಯವರೆಗೆ ಹಗಲು-ರಾತ್ರಿ ಲಾಂಟೀನು ಉರಿಸಬೇಕು.

೬. ಶುಭಕಾರ್ಯಕ್ಕೆ ಹೋಗುವಾಗ ಹೆಣ ಸಿಕ್ಕರೆ ಒಳ್ಳೆಯದು.

೭. ತಿಥಿಯ ದಿನ ಹದ್ದು ಕಾಗೆಗಳು ಬಂದರೆ ಸತ್ತವ ಸ್ವರ್ಗಸೇರುತ್ತಾನೆ.

೮. ಸಾವು ಸಂಭವಿಸಿದ ಮನೆಯಲ್ಲಿ ವರ್ಷದೊಳಗೆ ಶುಭಕಾರ್ಯ ಮಾಡಬಾರದು.

೯. ಸತ್ತ ರಾತ್ರಿ ಹೆಡಗೆಯಲ್ಲಿ ರಾಗಿಯನ್ನು ತುಂಬಿಡುತ್ತಾರೆ.

೧೦. ತಿಥಿಯ ದಿವಸ ತಲೆ ಬೋಳಿಸಿಕೊಳ್ಳಬೇಕು. ಇಲ್ಲದಿದ್ದರೆ ಸತ್ತವನಿಗೆ ಸ್ವರ್ಗಸಿಗುವುದಿಲ್ಲ.

ಗಂಗಾಮತಸ್ಥರಲ್ಲಿ ಕೆಟ್ಟ ಗಳಿಗೆಯಲ್ಲಿ ಸತ್ತರೆ ಶಾಸ್ತ್ರದವರು ಹೇಳಿದಂತೆ ಮನೆಯ ಪಡಸಾಲೆಯಲ್ಲಿ ಮಣ್ಣಿನಿಂದ ಗೂಡು ಹಾಕುತ್ತಾರೆ. ಅದರೊಳಗೆ ಆತ ಮಾಡುತ್ತಿದ್ದ ಊಟದ ಪದಾರ್ಥಗಳನ್ನು ಇಡುತ್ತಾರೆ. ಅಂದರೆ ಆತನ ಉಸಿರು ನಮ್ಮ ಮನೆಯಲ್ಲೇ ಇದೆ ಎಂಬ ನಂಬಿಕೆಯಿಂದ ಮೊದಲನೆ ನಂಬಿಕೆ ಬಂದಿದೆ. ಅಸಹಜ ಸಾವು ಅಥವಾ ಆತ್ಮಹತ್ಯೆ ಮಾಡಿಕೊಂಡವರನ್ನು ಸುಡಬೇಕು. ಕಾರಣವೆಂದರೆ ಪೋಲಿಸರಿಂದ ಗುಂಡಿಯಲ್ಲಿ ಊತ ನಂತರ ತನಿಖೆ ಆಗಬಹುದೆಂಬ ನಂಬಿಕೆಯಿಂದ ಎರಡನೇ ನಂಬಿಕೆ ಹುಟ್ಟಿಕೊಂಡಿದೆ. ಬಿಳಿ ಮಚ್ಚೆ ಇರುವ ವ್ಯಕ್ತಿ ಸತ್ತಾಗ ಊತರೆ ಮಳೆ ಆಗುವುದಿಲ್ಲ ಮತ್ತು ರೋಗ ಹರುಡುವುದೆಂಬ ನಂಬಿಕೆಯಿಂದ ಸುಡುತ್ತಾರೆ. ಇದಕ್ಕೆ ಯಾವುದೇ ವೈಜ್ಞಾನಿಕ ಕಾರಣಗಳಿರುವುದಿಲ್ಲ. ಈ ಹಿನ್ನೆಲೆಯಲ್ಲಿ ಮೂರನೇ ನಂಬಿಕೆ ಹುಟ್ಟಿಕೊಂಡಿದೆ. ಹಿಂದಿನ ಕಾಲದಲ್ಲಿ ಸಾವು ಸಂಭವಿಸುತ್ತಿದ್ದುದು ರೋಗರುಜಿನಗಳಿಂದ. ಆದ ಕಾರಣ ಶವ ಸಂಸ್ಕಾರಕ್ಕೆ ಹೋದ ಯಾರೇ ಆಗಲಿ ಸ್ನಾನ ಮಾಡದೆ ಮನೆಗೆ ಪ್ರವೇಶಿಸುವಂತಿರಲಿಲ್ಲ. ಸತ್ತ ವ್ಯಕ್ತಿಯ ದೇಹದಿಂದ ಬ್ಯಾಕ್ಟೀರಿಯಾಗಳು ದೇಹಕ್ಕೆ ಅಂಟಿಕೊಂಡಿದ್ದರೆ ಹೋಗಲಿ ಎಂಬ ಕಾರಣದಿಂದ ನಾಲ್ಕನೇ ನಂಬಿಕೆ ಬಂದಿದೆ. ಸತ್ತ ವ್ಯಕ್ತಿಯ ಮನೆಯಲ್ಲಿ ಭಯದ ವಾತಾವರಣವಿರುತ್ತದೆ. ರಾತ್ರಿ ವೇಳೆ ಕತ್ತಲಿದ್ದಾಗ ಮಕ್ಕಳು-ಮರಿ ಎದುರಿಕೊಂಡಾರು ಎಂಬ ಹಿನ್ನೆಲೆಯಲ್ಲಿ ಐದನೇ ನಂಬಿಕೆ ಹುಟ್ಟಿಕೊಂಡಿದೆ. ಸತ್ತ ವ್ಯಕ್ತಿ ದೇವರಿಗೆ ಸಮಾನ ಎಂಬ ಹಿನ್ನೆಲೆಯಲ್ಲಿ ಆರನೇ ನಂಬಿಕೆ ಬಂದಿದೆ. ಆತನ ಜನಪ್ರಿಯತೆ, ಉದಾರತನ, ಒಳ್ಳೆಯ ಮನಸ್ಸಿನ ಸ್ಥಿತಿಯನ್ನು ತಿಥಿಯ ಸಂದರ್ಭದಲ್ಲಿ ಹದ್ದು, ಕಾಗೆಗಳ ಸಂಖ್ಯೆಯ ಆಧಾರದ ಮೇಲೆ ಪರಿಗಣಿಸಲಾಗುತ್ತದೆ. ಸಂಖ್ಯೆ ಹೆಚ್ಚಾಗಿದ್ದರೆ ಜನಪ್ರಿಯತೆ ಹೆಚ್ಚಾಗಿರುತ್ತದೆ. ಈ ಹಿನ್ನೆಲೆಯೊಳಗೆ ಏಳನೇ ನಂಬಿಕೆ ಬಂದಿದೆ.

ಹಿಂದೆ ಸತ್ತ ವ್ಯಕ್ತಿಯ ನೆನಪು ವರ್ಷಾನುಗಟ್ಟಲೆ ಇರುತ್ತಿತ್ತು. ಇದೇ ಸಂದರ್ಭದಲ್ಲಿ ಶುಭ ಕಾರ್ಯ ನಡೆದಾಗ, ಸತ್ತ ವ್ಯಕ್ತಿಯ ನೆನಪಿಸಿಕೊಂಡು ಶೋಕಿಸುತ್ತಾರೆ ಎಂಬುದರ ಹಿನ್ನೆಲೆಯೊಳಗೆ ಎಂಟನೇ ನಂಬಿಕೆ ಬಂದಿದೆ. ವ್ಯಕ್ತಿ ಸತ್ತ ದಿನ ರಾತ್ರಿ ಪೂಜೆ ಮಾಡಿ, ಶವ ಇಟ್ಟ ಸ್ಥಳದಲ್ಲಿ ಒಂದು ಕುಕ್ಕೆಯಲ್ಲಿ ಅಳತೆ ಮಾಡಿ ರಾಗಿಯನ್ನ ತುಂಬಿಡುತ್ತಾರೆ. ನಂತರ ಬೆಳಗ್ಗೆ ಮತ್ತೊಮ್ಮೆ ಆ ರಾಗಿಯನ್ನು ಅಳೆಯಲಾಗುತ್ತದೆ. ರಾಗಿಯು ಹೆಚ್ಚಾಗಿದ್ದರೆ, ಆತನಿಗೆ ಇನ್ನೂ ಆಯಸ್ಸು ಇತ್ತೆಂದು ಅಳತೆ ಮಾಡಿದಷ್ಟೆ ಇದ್ದರೆ ಆತನ ಆಯಸ್ಸು ಅಷ್ಟೆಯೇ ಎಂದು ಪರಿಗಣಿಸಲಾಗುತ್ತದೆ. ಇದರ ಹಿನ್ನೆಲೆಯಲ್ಲಿ ಒಂಭತ್ತನೇ ನಂಬಿಕೆ ಬಂದಿದೆ. ತಿಥಿ ದಿವಸ ಸತ್ತ ವ್ಯಕ್ತಿಯ ತಲೆಕೊಳ್ಳಿ ಹಿಡಿಯುವವ ತಲೆ ಬೋಳಿಸಿಕೊಳ್ಳಬೇಕು. ಸತ್ತ ವ್ಯಕ್ತಿ ದೇವರಿಗೆ ಸಮಾನ ಎಂಬ ಹಿನ್ನೆಲೆಯಲ್ಲಿ ಹತ್ತನೇ ನಂಬಿಕೆ ಬಂದಿದೆ.

**ಪ್ರಯಾಣಕ್ಕೆ ಸಂಬಂಧಿಸಿದ ನಂಬಿಕೆಗಳು :**

ಗಂಗಾಮತಸ್ಥರು ಪ್ರಯಾಣ ಮಾಡುವ ಸಂದರ್ಭದಲ್ಲಿ ಕೆಲವು ಅಶುಭ ಸೂಚಕವಾದ ಘಟನೆಗಳು ಕಂಡುಬಂದರೆ ಪ್ರಯಾಣವನ್ನು ಅವರು ಮಾಡುವುದಿಲ್ಲ.

೧. ಬೆಕ್ಕು ಅಡ್ಡ ಬಂದರೆ ಪ್ರಯಾಣ ಮಾಡಬಾರದು.

೨. ವೈಷ್ಣವರು ಮಧ್ಯಬಂದರೆ ಹೋಗಬಾರದು.

೩. ಕೆಲಸಿಗ ಸಿಕ್ಕಿದರೆ ಪ್ರಯಾಣ ಬೆಳೆಸಬಾರದು.

೪. ಖಾಲಿ ಕೊಡ ಹೋಗುವ ಮಧ್ಯ ಬಂದರೆ ಪ್ರಯಾಣ ಮಾಡಬಾರದು.

ಮೊದಲನೆಯದು ಬೆಕ್ಕು ಅಶುಭವೆಂದು, ಎರಡನೆಯದು ಅವರು ನಾಮ ಹಾಕಿಕೊಂಡಿರುತ್ತಾರೆ. ಹೋದ ಕೆಲಸಕ್ಕೂ ನಾಮವಾಗುತ್ತೆ, ಮೂರನೆಯದು ಅವನು ನುಣ್ಣಗೆ ಬೋಳಿಸುವಂತೆ, ಹೋದ ಕೆಲಸ ನುಣ್ಣಗಾಗುತ್ತದೆಂದು, ನಾಲ್ಕನೆಯದು ಹೋದ ಕೆಲಸವಾಗದೆ ಖಾಲಿ ಕೈಯಲ್ಲಿ ವಾಪಸ್ಸು ಬರಬೇಕೆಂಬ ನಂಬಿಕೆಯಿಂದ ಮೇಲಿನವುಗಳು ಬಂದಿವೆ.

**ಮದುವೆಗೆ ಸಂಬಂಧಿಸಿದ ನಂಬಿಕೆಗಳು**

ಗಂಗಾಮತಸ್ಥರಲ್ಲಿಯೂ ಮದುವೆಗೆ ಸಂಬಂಧಿಸಿದಂತೆ ಹಲವು ನಂಬಿಕೆಗಳು ಇವೆ. ಅವುಗಳ ಆಧಾರದ ಮೇಲೆಯೇ ಹೆಣ್ಣು ನೋಡುವುದರಿಂದಿಡಿದು, ಮದುವೆಯವರೆವಿಗೂ ಇರುವುದುಂಟು.

೧. ಹೆಣ್ಣು ನೋಡಲು ಹೋಗುವಾಗ ಅಪಶಕುನಗಳು ಎದುರಾದರೆ ಹೆಣ್ಣು ನೋಡಲು ಹೋಗುವುದಿಲ್ಲ.

೨. ಹೆಣ್ಣು ನೋಡಲು ಹೋದಾಗ ಹುಳಿ ಪದಾರ್ಥ ಕೊಡಬಾರದು ಕಾರಣ 'ಹುಳಿ' ಕೆಟ್ಟದ್ದು ಎಂಬ ನಂಬಿಕೆ ಇವರಲ್ಲಿದೆ.

೩. ಹುಡುಗಿ ನಡೆವಾಗ ಕಾಲು ನೆಲಕ್ಕೆ ಸವರಿ ನಡೆಯಬಾರದು. ಅಂತಹ ಹುಡುಗಿಯರನ್ನ ಅವರು ಒಪ್ಪುವುದಿಲ್ಲ. ಕಾರಣ ಆ ಹೆಣ್ಣನ್ನ ಮದುವೆಯಾದರೆ ಮನೆ ಗುಡುಸಿ ಗುಂಡಾಂತರವಾಗ್ತದೆ ಎಂಬ ನಂಬಿಕೆ.

೪. ಒಂದೇ ಕುಲದವರನ್ನ ಅಥವಾ ಒಂದೇ ದೇವರನ್ನು ಪೂಜಿಸುವವರನ್ನ ಮದುವೆಯಾಗುವುದಿಲ್ಲ. ಕಾರಣ ಅಣ್ಣ-ತಮ್ಮಂದಿರಾಗುತ್ತೇವೆ ಎಂಬುದು. ಇದು ವೈಜ್ಞಾನಿಕವಾಗಿ ಒಳ್ಳೆಯ ನಂಬಿಕೆಯಾಗಿದೆ.

೫. ಗಂಡು ಮತ್ತು ಹೆಣ್ಣಿಗೆ ಅರಿಶಿನದ ನೀರು ಹಾಕಿದ ನಂತರ ಹೊರಗಡೆ ಹೋಗುವಂತಿಲ್ಲ. ಕಾರಣ ಅವರು ಗೃಹಸ್ಥರಾಗುವ ಪೂರ್ವದಲ್ಲಿ ಜೋಪಾನ ಮಾಡುವ ಜವಾಬ್ದಾರಿ ಕುಟುಂಬದ್ದು.

ಹೀಗೆ ಗಂಗಾಮತಸ್ಥರು ಮದುವೆಗೆ ಸಂಬಂಧಿಸಿದಂತೆ, ಹೆಣ್ಣು ನೋಡುವುದಕ್ಕೆ ಸಂಬಂಧಿಸಿದಂತೆ ಹಲವಾರು ನಂಬಿಕೆಗಳನ್ನು ಹೊಂದಿದ್ದಾರೆ. ಅವುಗಳನ್ನ ಇಂದಿಗೂ ಸಹ ಪಾಲಿಸಿಕೊಂಡು ಬರುತ್ತಿದ್ದಾರೆ.

**ಸಂಕೀರ್ಣ ನಂಬಿಕೆಗಳು**

ಮೇಲಿನ ವರ್ಗೀಕರಣಕ್ಕೆ ಸೇರಿಸಲಾಗದ, ಇತರ ನಂಬಿಕೆಗಳನ್ನ ಈ ವರ್ಗದಲ್ಲಿ ಹೇಳಲಾಗಿದೆ.

೧. ದೆವ್ವ, ಪೀಡೆ, ಪಿಶಾಚಿ, ಗಾಳಿಸೋಂಕಿರುವವರು ಯತ್ತಂಬಾಡಿಯ ಕಾಳದೇವರ ದೇವಸ್ಥಾನದ ಹತ್ತಿರ, ಗಾಳಿಕಲ್ಲನ್ನು ಸಿದ್ದಪಡಿಸಿ, ಗುಂಡಿಗೆ ಹಾಕಿದರೆ ಗಾಳಿಸೋಂಕು ಹೋಗುತ್ತದೆಂಬ ನಂಬಿಕೆ.

೨. ಬಾಣಂತಿಯ ತಲೆಯ ಹತ್ತಿರ ಬಲೆಯನ್ನು ಇಟ್ಟರೆ ಗಾಳಿಸೋಂಕು ಆಗುವುದಿಲ್ಲ ಎಂಬ ನಂಬಿಕೆ.

೩. ಉಕ್ಕಡದ ಮಾರಮ್ಮನ ದೇವಸ್ಥಾನದ ಹತ್ತಿರವಿರುವ ಕೊಳಕ್ಕೆ, ಎಡಗಾಲಿನಿಂದ ಕುಡಿಕೆಯ ಚೂರುಗಳನ್ನು ತಳ್ಳಿದರೆ ಸುಳ್ಳು ದೋಷಗಳು ನಿವಾರಣೆಯಾಗುತ್ತದೆಂಬ ನಂಬಿಕೆ.

೪. ಉಕ್ಕಡದ ಮಾರಮ್ಮನ ಸನ್ನಿಧಿಯ ಹತ್ತಿರ ಮೊಟ್ಟೆಯನ್ನು ಹೊಡೆಸಿಕೊಂಡರೆ, ದೃಷ್ಟಿ ನಿವಾರಣೆಯಾಗುತ್ತದೆಂಬ ನಂಬಿಕೆ.

೫. ಉಟ್ಟ ಬಟ್ಟೆಗೆ ಬೆಂಕಿ ಬಿದ್ದರೆ ಕೇಡು. ಈ ನಂಬಿಕೆ ಮೈ ಮೇಲಿನ ಬಟ್ಟೆಗೆ ಬೆಂಕಿ ಬೀಳದಂತೆ ಎಚ್ಚರಿಕೆ ವಹಿಸಬೇಕೆಂಬ ಪ್ರಜ್ಞೆ ಇರಲಿ ಎನ್ನುವ ಕಾರಣದಿಂದ ಈ ನಂಬಿಕೆ ಬಂದಿದೆ.

೬. ಹಳೆಯ ಬಟ್ಟೆ, ಎಕ್ಕಡ ಕಳುವಾದರೆ ಒಳ್ಳೆಯದು ಎಂಬ ನಂಬಿಕೆ. ಕಳೆದು ಹೋದ ಬಟ್ಟೆಗಳ ಬಗ್ಗೆ ಚಿಂತಿಸದೆ ಸಮಾಧಾನ ತಂದುಕೊಳ್ಳಲಿ ಎಂಬ ಕಾರಣದಿಂದ ಈ ನಂಬಿಕೆ ಹುಟ್ಟಿಕೊಂಡಿದೆ.

೭. ಯಾವುದಾದರೂ ವಿಷಯ ಚರ್ಚಿಸುವ ಸಂದರ್ಭದಲ್ಲಿ ಒಂಟಿ ಸೀನು ಬಂದರೆ ಅಶುಭ.

೮. ಸಂಜೆ ಹೊತ್ತಿನಲ್ಲಿ ಕಸಗುಡಿಸಿ ಹೊರಹಾಕಬಾರದು, ಲಕ್ಷ್ಮಿ ಹೊರಟು ಹೋಗುತ್ತಾಳೆ. ಕತ್ತಲಲ್ಲಿ ಚಿನ್ನದ ಅಥವಾ ಬೆಲೆಬಾಳುವ ವಸ್ತುಗಳು ಕೆಳಗೆ ಬಿದ್ದಿದ್ದರೆ ಅವುಗಳನ್ನು ಹೊರಗೆ ಹಾಕುತ್ತೇವೆ ಎಂಬುದರ ಹಿನ್ನೆಲೆಯಿಂದ ಬಂದಿದೆ.

೯. ಕಾಲನ್ನು ತೊಳೆಯುವಾಗ ಹಿಮ್ಮಡಿ ಪೂರ್ತಿ ನೆನೆಯಬೇಕು. ಇಲ್ಲದಿದ್ದರೆ ಶನಿ ಹಿಡಿಯುತ್ತದೆ. ಹೊರಗಡೆ ಸುತ್ತಿ ಬಂದಾಗ, ಕಾಲಿನಲ್ಲಿ ಬ್ಯಾಕ್ಟೀರಿಯಾಗಳಿರುವ ಸಾಧ್ಯತೆ ಹೆಚ್ಚು. ವೈಜ್ಞಾನಿಕ ಹಿನ್ನೆಲೆಯಿಂದ ಈ ನಂಬಿಕೆ ಹುಟ್ಟಿರಬಹುದು.

೧೦. ಹೊಸ್ತಿಲ ಮೇಲೆ ಕೂತರೆ ಸಾಲ ಹೆಚ್ಚಾಗುತ್ತದೆ.

೧೧. ಒಲೆಯನ್ನು ಒದೆಯಬಾರದು. ಅಗ್ನಿ ಪವಿತ್ರವಾದ ದೇವರು ಎಂಬ ಹಿನ್ನೆಲೆಯೊಳಗೆ ನಂಬಿಕೆ ಬಂದಿದೆ.

೧೨. ಮೊರವನ್ನು ಕಾಲಿನಿಂದ ಒದೆಯಬಾರದು. ಮೊರವನ್ನು ಬಿದಿರಿನಿಂದ ಮಾಡಿದ್ದು ಬಿದಿರು ಇವರಿಗೆ ದೇವರ ಸಮಾನ.

೧೩. ಮುಟ್ಟಾದ ಹೆಂಗಸು ಮಲಗಬಾರದು ದರಿದ್ರ ಬರುತ್ತದೆ.

೧೪. ಮುಸ್ಸಂಜೆ ಹೊತ್ತು ಮಲಗಬಾರದು ದರಿದ್ರ ಬರುತ್ತದೆ.

೧೫. ಮುಟ್ಟಾದವರು ಬಲೆ, ವೀಳ್ಯದೆಲೆ ಮುಟ್ಟಬಾರದು. ಮುಟ್ಟಿದರೆ ಮೀನಿನ ಬೇಟೆ ಇಲ್ಲ, ವೀಳ್ಯದೆಲೆ ಕಪ್ಪಾಗುತ್ತದೆ.

೧೬. ಒಲೆ ಮೊರೆದರೆ ನೆಂಟರು ಬರುವರು.

೧೭. ಮಾಟ ಮಂತ್ರಗಳಲ್ಲಿ ನಂಬಿಕೆ ಇದೆ.

೧೮. ಮಕ್ಕಳು, ದೊಡ್ಡವರು, ಯಾರಾದರೂ ಹೆದರಿಕೊಂಡು ಜ್ವರ ಬಂದರೆ ರಕ್ತ ನೀರು ಮಾಡಿಸುತ್ತಾರೆ. ಇದನ್ನು ಮಡಿಕೆ ಹಾಕುವುದು ಎಂದು ಕರೆಯುತ್ತಾರೆ.

ನಂಬಿಕೆಯೊಂದು ದೇಶ, ಕಾಲ, ವ್ಯಕ್ತಿಯೊಂದಿಗೆ ಸಾಪೇಕ್ಷ ಸಂಬಂಧ ಹೊಂದಿರುವಂತಹದು. ಒಂದು ನಂಬಿಕೆ ಒಬ್ಬನಿಗೆ ನಂಬಿಕೆಯಾಗಿದ್ದರೆ ಇನ್ನೊಬ್ಬನಿಗೆ ಇದು ಮೂಢನಂಬಿಕೆಯಾಗಬಹುದು. ಉದಾಹರಣೆಗೆ ವಿಧವೆ ಅಪಶಕುನ ಎನ್ನುವ ಭಾರತದ ನಂಬಿಕೆ

ಪಾಶ್ಚಾತ್ಯರಿಗೆ ಮೂಢನಂಬಿಕೆಯಾಗುತ್ತದೆ. ಮಾನವ ಬದುಕಿನ ಎಲ್ಲ ಮಗ್ಗುಲುಗಳನ್ನು ಆವರಿಸಿಕೊಂಡಿರುವ ನಂಬಿಕೆಗಳು ಜನಪದ ಪ್ರಕಾರಗಳೊಂದಿಗೆ ನಿಕಟ ಸಂಬಂಧವನ್ನು ಪಡೆದುಕೊಂಡಿವೆ. ಈ ಹಿನ್ನೆಲೆಯಲ್ಲಿ ಗಂಗಾಮತಸ್ಥರು ಸಹ ತಮ್ಮ ಪರಿಸರ ಮತ್ತು ಭೌಗೋಳಿಕ ಹಿನ್ನೆಲೆಯನ್ನು ಆಧರಿಸಿ ಮೇಲೆ ವಿವರಿಸಿದಂತೆ ಅನೇಕ ನಂಬಿಕೆಗಳನ್ನು ಬದುಕಿನಲ್ಲಿ ಅಳವಡಿಸಿಕೊಂಡಿದ್ದಾರೆ. ಇಲ್ಲಿ ಈ ನಂಬಿಕೆಗಳ ಸಫಲತೆ, ವಿಫಲತೆಗಳು ನಮಗೆ ಮುಖ್ಯವಾಗುವುದಿಲ್ಲ. ನಂಬಿಕೆಗಳಿಂದ ಸಾಧ್ಯವಾಗುವ ಭಾವೈಕ್ಯತೆ ಮತ್ತು ಮಾನವ ಸಂಬಂಧಗಳ ಕಟ್ಟುವಿಕೆ ಬಹಳ ಮಹತ್ವದ್ದಾಗುತ್ತದೆ.

## ವಿಧಿ ನಿಷೇಧಗಳು

ಯಾವ ಕೆಲಸವನ್ನು ಮಾಡಬೇಕು, ಯಾವ ಕೆಲಸವನ್ನು ಮಾಡಬಾರದು ಎಂಬುದನ್ನ ತಿಳಿಸುವುದೇ 'ವಿಧಿ' ನಿಯಮವಾಗಿದೆ. "ಭಯ ಮತ್ತು ಭಾವನಾ ಮೂಲವಾದ ಒಂದು ನಂಬಿಕೆಯನ್ನು ಕಟ್ಟುನಿಟ್ಟಾಗಿ ಜಾರಿಗೊಳಿಸುವ ಅಥವಾ ಬಲಗೊಳಿಸುವಂತಹದು ನಿಷೇಧ. ಇದನ್ನು ಮಾಡಬಾರದು, ಇದು ಕೆಡಕು ಎನ್ನುವ ಸಾಮಾಜಿಕ, ಧಾರ್ಮಿಕ ಪ್ರತಿಬಂಧಕವೇ ನಿಷಿದ್ಧ ಎನ್ನಲಾಗುತ್ತದೆ".[೬೯] ಇಷ್ಟೇ ಅಲ್ಲದೆ ಲಿಖಿತ ಕಾನೂನನ್ನೂ ಮೀರಿಸುವಂತಹ ಸಶಕ್ತಿ ನಿಬಂಧನೆಯಾಗಿ ನಿಷೇಧ ಕಾರ್ಯನಿರ್ವಹಿಸುತ್ತದೆ. ಮುಟ್ಟಲಾಗದ, ಅರ್ಥೈಸಲಾಗದ ಸಂಗತಿಗಳಿಗೂ ನಿಷೇಧಕ್ಕೂ ಹತ್ತಿರದ ಸಂಬಂಧವಿರುತ್ತದೆ. ಯಾಕೆಂದರೆ ಹಲವು ಸಂದರ್ಭಗಳಲ್ಲಿ ಭಯವೇ ನಿಷೇಧಕ್ಕೆ ಮೂಲವಾಗಿರುತ್ತದೆ. ಸಕಾರಾತ್ಮಕವಾದುವನ್ನು ಮಂತ್ರವಿಧಿಗಳೆಂದೂ, ನಕಾರಾತ್ಮಕವಾದುದನ್ನು ನಿಷೇಧಗಳೆಂದೂ ಕರೆಯಬಹುದು. ಮಂತ್ರ ವಿಧಿಗಳು ಮಾಡಬಹುದಾದ್ದನ್ನು ತಿಳಿಸಿದರೆ, ನಿಷೇಧಗಳು ಮಾಡಬಾರದ್ದನ್ನು ಉಲ್ಲೇಖಿಸುತ್ತವೆ.

ನಿಷೇಧಗಳು ತನ್ನ ಸಹಜ ಅರ್ಥದಲ್ಲಿ ಆತ್ಮಸಾಕ್ಷಿಯಾಗಿ ಬಳಸಲ್ಪಟ್ಟಾಗ ಅದನ್ನು ನಿಷೇಧಿತಾ ಪ್ರಜ್ಞೆ ಎಂದೂ, ಸಹಜ ಅರ್ಥಕ್ಕೆ ಧಕ್ಕೆ ಒದಗಿದಾಗ ಅಪರಾಧ ಪ್ರಜ್ಞೆ ಎಂದೂ ಕರೆಸಿಕೊಳ್ಳುತ್ತದೆ. ಅಂದರೆ ನಿಷೇಧ ಆತ್ಮಸಾಕ್ಷಿಯಿಂದ ಹುಟ್ಟುವ ಆಜ್ಞೆ, ಹೀಗಾಗಿ ನಿಷೇಧವನ್ನು ಮುರಿದಾಗ ಅಪರಾಧಿ ಪ್ರಜ್ಞೆ ತೀವ್ರವಾಗುತ್ತದೆ. ನಿಷೇಧದ ಹಿಂದೆ ಸಾಮಾಜಿಕ ನಿಯಮಗಳು ಇರುವುದರಿಂದ ನಿಷೇಧವನ್ನು ಮೀರುವುದೆಂದರೆ ಸಾಮಾಜಿಕ ನಿಯಮಗಳ ಉಲ್ಲಂಘನೆಯಾಗುತ್ತದೆ. ಆದುದ್ದರಿಂದ ನಿಷೇಧವನ್ನು ಉಲ್ಲಂಘಿಸಿದರೆ ತೀವ್ರ ಅಪಾಯ ಉಂಟಾಗುತ್ತದೆ ಎಂಬ ಭಾವನೆ ಇದೆ. ನಂಬಿಕೆಯ ಹಿನ್ನೆಲೆಯಲ್ಲಿ ಮೂಡಿ ಬಂದ ನಿಷೇಧಗಳು ಸಾಮಾಜಿಕ ರೀತಿ ರಿವಾಜನ್ನು ರೂಪಿಸುವ ಮತ್ತು ಕಾಪಾಡುವ ಶಕ್ತಿಗಳಾಗಿವೆ. ಈ ಹಿನ್ನೆಲೆಯಲ್ಲಿ

ಜಿಲ್ಲೆಯ ಗಂಗಾಮತಸ್ಥ ಸಮುದಾಯದವರು ಹಲವು ವಿಧಿನಿಷೇಧಗಳನ್ನು ನಂಬಿ, ಇಂದಿಗೂ ಅವುಗಳನ್ನು ಪಾಲಿಸಿಕೊಂಡು ಬರುತ್ತಿದ್ದಾರೆ. ಅವುಗಳನ್ನು ಹೀಗೆ ವಿಭಜಿಸಬಹುದು.

ಮಕ್ಕಳ ಸಂಬಂಧಿ ನಿಷೇಧಗಳು; ಹೆಂಗಸರ ಸಂಬಂಧಿ ನಿಷೇಧಗಳು; ಶುಭಾಶುಭ ನಿಷೇಧಗಳು; ಧಾರ್ಮಿಕ ನಿಷೇಧಗಳು; ಸಂಕೀರ್ಣ ನಿಷೇಧಗಳು;

## ಮಕ್ಕಳ ಸಂಬಂಧಿ ನಿಷೇಧಗಳು

೧. ಬರಿ ತೊಟ್ಟಿಲು ತೂಗಬಾರದು. ತೂಗಿದರೆ ಮಗುವಿಗೆ ಹೊಟ್ಟೆನೋವು ಬರುವುದು.

೨. ಮಗುವಿನ ಜನನ ಸಂದರ್ಭದಲ್ಲಿ ಮಗು ಒಕ್ಕಳ ಬಳ್ಳಿ ಕೊರಳಿಗೆ ಸುತ್ತಿಕೊಂಡು ಹುಟ್ಟಬಾರದು. ಹುಟ್ಟಿದರೆ ಆ ಮನೆಯಲ್ಲಿ ಸಾವು ಸಂಭವಿಸುತ್ತದೆ.

೩. ಮಗುವಿಗೆ ಬೇರೆಯವರ ಕಾಲು ತಾಕಬಾರದು. ಮಕ್ಕಳು ದೇವರಿಗೆ ಸಮಾನವಾದುದ್ದರಿಂದ ಈ ನಿಷೇಧ ಬಂದಿದೆ.

೪. ಮಗುವಿಗೆ ಮಾಂಸ ತಿನ್ನಿಸಬಾರದು. ಜೀರ್ಣಿಸಿಕೊಳ್ಳುವ ಶಕ್ತಿ ಇಲ್ಲವಾದುದ್ದರಿಂದ ಈ ನಿಷೇಧ ಹುಟ್ಟಿಕೊಂಡಿದೆ.

## ಹೆಂಗಸರ ಸಂಬಂಧಿ ನಿಷೇಧಗಳು

೧. ವಿಧವೆಯರು ಶುಭ ಕಾರ್ಯಗಳಿಗೆ ಮೊದಲು ಹೋಗಬಾರದು. ಹೋದರೆ ಅಶುಭ ಸಂಭವಿಸುತ್ತದೆ.

೨. ಹೆಣ್ಣು ನೋಡಲು ಹೋದಾಗ ಹೆಣ್ಣಿನ ಮನೆ ಬಾಗಿಲು ಹಾಕಿರಬಾರದು. ಸಂಬಂಧ ಕುದುರುವುದಿಲ್ಲ ಎಂಬ ಭಾವನೆ.

೩. ಬಂಜೆ ಹೆಣ್ಣು ಮಗುವನ್ನು ಎತ್ತಿಕೊಳ್ಳಬಾರದು ಎತ್ತಿಕೊಂಡರೆ ಮುಂದೆ ಮಗುವಿಗೆ ತೊಂದರೆಯಾಗುತ್ತದೆ.

೪. ಮುಟ್ಟಾದ ಹೆಂಗಸು ಮನೆಯೊಳಗೆ, ವೀಳ್ಯದೆಲೆ ತೋಟದೊಳಗೆ ಹೋಗಬಾರದು. ಹೋದರೆ ಮನೆಯು ಅಪವಿತ್ರವಾಗುತ್ತದೆ, ವೀಳ್ಯದೆಲೆ ತೋಟ ನಾಶವಾಗುತ್ತದೆ.

೫. ಕೂಡಾವಳಿಯಾದ ಹೆಂಗಸು ಶುಭ ಸಮಾರಂಭಗಳಲ್ಲಿ ಶಾಸ್ತ್ರ ಮಾಡಬಾರದು. ಮಾಡಿದರೆ ಅಶುಭ ಸಂಭವಿಸುತ್ತದೆ.

### ಶುಭಾಶುಭ ನಿಷೇಧಗಳು

೧. ಶುಭ ಸಮಾರಂಭಗಳಲ್ಲಿ ಅರಿಶಿನ, ಕುಂಕುಮದ ಭರಣಿ ಬೀಳಿಸಬಾರದು. ಬಿದ್ದರೆ ಆ ಸಮಾರಂಭದಲ್ಲಿ ನಡೆಯುವ ಕಾರ್ಯಕ್ಕೆ ಮುಂದೆ ತೊಂದರೆಯಾಗುತ್ತದೆ. ಅಲ್ಲದೆ ಅರಿಶಿನ, ಕುಂಕುಮ ದೇವರಿಗೆ ಪ್ರಿಯವಾದುದ್ದರಿಂದ ತೊಂದರೆ ಆಗುತ್ತದೆ.

೨. ಒಂದೇ ಗೋತ್ರದವರ ಜೊತೆ ಮದುವೆ ಮಾಡಬಾರದು. ಮಾಡಿದರೆ ಮುಂದೆ ಅವರ ಕುಟುಂಬಕ್ಕೆ, ಮಕ್ಕಳಿಗೆ ತೊಂದರೆ ಆಗುತ್ತದೆ.

೩. ಮನೆಯಲ್ಲಿ ಕನ್ನಡಿ ಒಡೆಯಬಾರದು. ಒಡೆದರೆ ಮನೆಯಲ್ಲಿ ವಿಚಿತ್ರದ ಘಟನೆಗಳು ನಡೆಯುತ್ತವೆ.

೪. ದೀಪ ಹೊತ್ತಿಸುವ ಸಮಯದಲ್ಲಿ ಮನೆಯ ಕಸವನ್ನು ಗುಡಿಸಬಾರದು. ಗುಡಿಸಿದರೆ ಮನೆಯಲ್ಲಿ ಗಂಡಾಂತರ ಸಂಭವಿಸುತ್ತದೆ.

### ಧಾರ್ಮಿಕ ವಿಧಿ ನಿಷೇಧಗಳು

೧. ಪೂಜಾರಿ ತನ್ನ ತಲೆಯ ಕೂದಲನ್ನು ಕತ್ತರಿಸಿಕೊಳ್ಳಬಾರದು. ಜುಟ್ಟು ಬಿಡಬೇಕು.

೨. ಪೂಜಾರಿ ಯಾವಾಗಲೂ ಕೆಂಪು ಪಂಚೆ ಮತ್ತು ಕೆಂಪು ಟವಲನ್ನು ಹಾಕಬೇಕು.

೩. ಮಠದ ಸ್ವಾಮೀಜಿ ಹೆಂಗಸರ ಸಹವಾಸ ಮಾಡಬಾರದು.

೪. ಗೌರಿ ಹಬ್ಬದಲ್ಲಿ ವೀಳ್ಯದೆಲೆ ತೋಟಕ್ಕೆ ಎಡೆ ಇಕ್ಕಿ, ಪೂಜೆ ಸಲ್ಲಿಸಬೇಕು.

೫. ದೇವಸ್ಥಾನಗಳಿಗೆ, ಮಠಗಳಿಗೆ, ದೇವತಾಕಾರ್ಯ ನಡೆಯುವ ಸ್ಥಳಗಳಿಗೆ ಚಪ್ಪಲಿ ಹಾಕಿಕೊಂಡು ಹೋಗಬಾರದು.

೬. ಮಾರಮ್ಮನ ಹಬ್ಬದ ದಿನವನ್ನು ಸಾರಿದ ಮೇಲೆ ಕರಕಲನ್ನು ಹಾಕಬಾರದು. ಹಾಕಿದರೆ ಆ ಕುಟುಂಬಕ್ಕೆ ತೊಂದರೆಯಾಗುತ್ತದೆ.

೭. ವೀಳ್ಯದೆಲೆ ತೋಟಕ್ಕೆ ಚಪ್ಪಲಿ ಹಾಕಿಕೊಂಡು ಹೋಗಬಾರದು. ವೀಳ್ಯದೆಲೆ ಲಕ್ಷ್ಮಿಗೆ ಸಮಾನವಾದ್ದರಿಂದ, ಚಪ್ಪಲಿ ಹಾಕಿಕೊಂಡು ಹೋಗಬಾರದು.

೮. ಸೂತಕದ ಮನೆಯಲ್ಲಿ, ಸೂತಕಕಳೆಯುವರೆಗೆ ದೇವರಿಗೆ ದೀಪ ಹಚ್ಚಬಾರದು. ಅಪವಿತ್ರವಾಗಿದ್ದ ಸಂದರ್ಭದಲ್ಲಿ, ಪವಿತ್ರಗೊಳಿಸಿದ ನಂತರ ದೇವರಿಗೆ ದೀಪ ಹಚ್ಚಬೇಕು.

**ಸಂಕೀರ್ಣ ನಿಷೇಧಗಳು**

೧. ರಾತ್ರಿಯ ವೇಳೆ 'ಹೆಪ್ಪುಕಾಳು', 'ಸೀಗೆಕಾಯಿ' 'ಅರಿಶಿನ ಕುಂಕುಮ' ಉಪ್ಪು ಹೆರವರಿಗೆ ಕೊಡಬಾರದು. ಕೊಟ್ಟರೆ ನಮ್ಮ ಮನೆಯ ಸಂಪತ್ತು ಅವರಿಗೆ ಹೋಗುತ್ತದೆ ಎಂಬ ಭಾವನೆ.

೨. ಊಟದ ತುತ್ತನ್ನು ತೂಕ ಮಾಡಬಾರದು. ಹಾಗೆ ಮಾಡುವ ಸಂದರ್ಭದಲ್ಲಿ ತುತ್ತು ಕೆಳಗೆ ಬೀಳಬಹುದು.

೩. ನೆಲಕ್ಕೆ ಕೈಯೂರಿ ಊಟ ಮಾಡಬಾರದು. ಮಾಡಿದರೆ ಆ ವ್ಯಕ್ತಿಯ ಸೊಮಾರಿತನವನ್ನು ತೋರಿಸುತ್ತದೆ.

೪. ಹೊಸದಾಗಿ ಮದುವೆಯಾದ ಗಂಡು-ಹೆಣ್ಣು, ತಿಥಿಗಳಲ್ಲಿ ಊಟ ಮಾಡಬಾರದು. ಮಾಡಿದರೆ ಅವರಿಗೆ ತೊಂದರೆ ಬರುತ್ತವೆ.

ಜನಪದವನ್ನ ನಂಬಿ ಇಂದಿಗೂ ಜೀವನ ಸಾಗಿಸುತ್ತಿರುವವರು ಗಂಗಾಮತಸ್ಥ ಸಮುದಾಯದವರು. ಜೀವನದುದ್ದಕ್ಕೂ ಹಲವಾರು ಘಟನೆಗಳು, ಸನ್ನಿವೇಶಗಳು ಒದಗಿ ಬರುತ್ತವೆ. ಅವುಗಳನ್ನ ಸಾಮಾನ್ಯವಾಗಿ ನಂಬಿಕೆ-ವಿಧಿ ನಿಷೇಧಗಳ ಹಿನ್ನೆಲೆಯಲ್ಲಿ ಇಂದಿಗೂ, ನೋಡಿ ಅವುಗಳಿಗೆ ತಕ್ಕಂತೆ ಪ್ರತಿಕ್ರಿಯಿಸುವುದನ್ನ ಜಿಲ್ಲೆಯಾದ್ಯಂತ ಕಾಣಬಹುದು. ಇದರಿಂದ ಅವರ ನಿರೀಕ್ಷೆಯಂತೆ ಸಮುದಾಯವು ಪರಸ್ಪರ ಸೌಹಾರ್ದ ಸಂಬಂಧಗಳನ್ನು ಹೊಂದಿ ಸುಖ-ಶಾಂತಿ, ನೆಮ್ಮದಿಯಿಂದ ಬದುಕಲು ಮಾಡಿಕೊಂಡಿರುವ ಪ್ರಯತ್ನಗಳೇ ನಂಬಿಕೆ-ವಿಧಿ ನಿಷೇಧಗಳ ಹುಟ್ಟಿಗೆ ಕಾರಣವಾಗಿವೆ. ಇವುಗಳಲ್ಲಿ ಬಹಳಷ್ಟು ನಂಬಿಕೆ-ವಿಧಿ ನಿಷೇಧಗಳು ವೈಜ್ಞಾನಿಕ ಮತ್ತು ಸತ್ಯಕ್ಕೆ ಹತ್ತಿರವಾಗಿರುವುದನ್ನು ಗುರುತಿಸಬಹುದು.

### ೩.೧೧ ಜಾನಪದ ವೈದ್ಯ, ಕಲೆ, ಕ್ರೀಡೆ

ಭಾರತ ಹಳ್ಳಿಗಳಿಂದ ಕೂಡಿದ ದೇಶ. ಇಲ್ಲಿರುವ ವಿವಿಧ ಸಮುದಾಯಗಳು, ತಮ್ಮದೇ ಆದ ವೈದ್ಯ ಪದ್ಧತಿ, ಕಲೆ, ಕ್ರೀಡೆಗಳನ್ನ ಸಾಂಪ್ರದಾಯಿಕವಾಗಿ ಉಳಿಸಿಕೊಂಡಿವೆ. ಇವುಗಳಿಂದ ಮಂಡ್ಯ ಜಿಲ್ಲೆಯಲ್ಲಿ ವಾಸಿಸುವ ಗಂಗಾಮತಸ್ಥ ಸಮುದಾಯದವರು ಹೊರತಲ್ಲ.

## ಜನಪದ ವೈದ್ಯ ಪದ್ಧತಿ

ಮಾನವ ತನ್ನ ಬದುಕಿಗೆ ಅವಶ್ಯಕವಾದುದ್ದನ್ನೆಲ್ಲ ತನ್ನ ಪ್ರಾಕೃತಿಕ ಪರಿಸರದಿಂದ ಕಂಡು, ಅದನ್ನು ಪಡೆದುಕೊಳ್ಳುವ ಕಲೆಯನ್ನು ರೂಢಿಸಿಕೊಂಡ. ಜೀವನದಲ್ಲಿ ವ್ಯಕ್ತಿಗೆ ಒದಗಿ ಬರುವ ರೋಗಗಳಿಗೆ ಪ್ರಾಕೃತಿಕ ಪರಿಸರದಿಂದಲೇ ಪರಿಹಾರವನ್ನು ಕಂಡುಕೊಂಡ. ಸಸ್ಯ, ಪ್ರಾಣಿ, ಖನಿಜಾಂಶಗಳನ್ನು ಔಷಧ ದ್ರವ್ಯಗಳಾಗಿ ಬಳಸಿಕೊಂಡುದಲ್ಲದೆ ತಾನು ಉಪಯೋಗಿಸುತ್ತಿದ್ದ ಆಹಾರ ಪದಾರ್ಥಗಳನ್ನು ಔಷಧ ಪದಾರ್ಥಗಳಾಗಿ ಮಾರ್ಪಡಿಸಿಕೊಂಡ. ಹೀಗೆ ತನ್ನನ್ನು ಕಾಡುವ ರೋಗಗಳಿಗೆ ಪರಿಹಾರ ಕಂಡುಕೊಳ್ಳುವ ಯತ್ನದಲ್ಲಿ ಅವನು ಮೊದಲು ಪ್ರಾಕೃತಿಕ ಪರಿಸರಕ್ಕೆ ಪ್ರತಿಕ್ರಿಯಿಸಿದ. "ಸ್ವಂತ ಅನುಭವದ ಆಧಾರದ ಮೇಲೆ ಸಾಂಪ್ರದಾಯಿಕ ವಿಧಾನದಲ್ಲಿ ರೋಗ ಚಿಕಿತ್ಸೆ ನಡೆಸುವುದೇ ಜನಪದ ವೈದ್ಯ. ಇದು ವೈದ್ಯಕೀಯ ಶಾಲೆಗಳಿಂದ ಕಲಿತ ವೈಜ್ಞಾನಿಕ ವೈದ್ಯ ಪದ್ಧತಿಯಲ್ಲ."[೨೦] ಈ ಮಾತು ನೂರಕ್ಕೆ ನೂರರಷ್ಟು ಸತ್ಯದ ವಿಚಾರವಾಗಿದೆ. ಅನುಭವದ ಆಧಾರದ ಮೇಲೆ ಜನಪದ ವೈದ್ಯ ಬಂದಿರುವುದು.

ಜನಪದ ವೈದ್ಯವನ್ನು ಸಾಮಾನ್ಯವಾಗಿ 'ಹಳ್ಳಿವೈದ್ಯ', 'ನಾಟಿವೈದ್ಯ' ಎಂಬ ಹೆಸರುಗಳಿಂದ ಕರೆಯುತ್ತಾರೆ. ಆದರೆ ಶಾಸ್ತ್ರೀಯವಾಗಿ 'ಜನಪದ ವೈದ್ಯ' ಎಂಬ ಹೆಸರಿನಿಂದ ಈ ವೈವಿಧ್ಯಮಯವನ್ನು ಕರೆಯುವುದು ಸೂಕ್ತವಾದುದು. ತಮ್ಮ ಕೆಲಸದ ಆಯಾಸವನ್ನು ನೀಗಿಸಿಕೊಳ್ಳಲು, ಸಂತೋಷ ಪಡಲು, ಜನಪದ ಸಾಹಿತ್ಯ ಹಾಗೂ ಜನಪದ ಕಲೆಯನ್ನು ಸೃಷ್ಟಿಸಿದರು. ದೇವರಿಗೆ ಹೆದರಿ ಸಂಪ್ರದಾಯ ಮತ್ತು ಹಬ್ಬಗಳನ್ನು ಆಚರಿಸಿದರು. ಹಾಗೆಯೇ ತಮಗೆ ಉಂಟಾಗುವ ರೋಗಗಳನ್ನು ಪರಿಹರಿಸಿಕೊಳ್ಳಲು ಜನಪದ ವೈದ್ಯವನ್ನು ಬಳಸಿಕೊಂಡಿರುವರು. ಹೀಗೆ "ಇಂಥಾ ವೈದ್ಯ ಪದ್ಧತಿಯನ್ನು ನಾಟಿ ವೈದ್ಯ. ನಾಡ ವೈದ್ಯ, ಮನೆ ಮದ್ದು, ಕೈಔಷಧಿ, ಹಸಿರು ಔಷಧಿ, ಜನಪದ ವೈದ್ಯ"[೨೧] ಮುಂತಾದ ಹೆಸರುಗಳಿಂದ ಕರೆಯುತ್ತಾರೆ.

ಗಂಗಾಮತಸ್ಥರು ಹಿಂದಿನಿಂದಲೂ ಕಾಡಿನಲ್ಲಿ ಬೇಟೆಯಾಡುತ್ತಾ, ಕೆಲವು ದಿನಗಳ ಕಾಲ ಅಲ್ಲೇ ಉಳಿದು, ಬರುತ್ತಿದ್ದರು. ರಾಜನ ಆಸ್ಥಾನದಲ್ಲಿ ಬೇಟೆಯಾಡುವುದಕ್ಕಾಗಿಯೇ ಇವರನ್ನು ತಮ್ಮ ಪರಿವಾರದಲ್ಲಿ ಇರಿಸಿಕೊಳ್ಳುತ್ತಿದ್ದರು. ಆ ಸಂದರ್ಭದಲ್ಲಿ ಅಲ್ಲಿ ಸಿಗುವ ಸಸ್ಯಗಳಿಂದ ಅನೇಕ ರೋಗರುಜಿನಗಳಿಗೆ ಮದ್ದು ಮಾಡುವುದನ್ನು ಕಲಿತರು. ಈ ಮದ್ದೇ ಜನಪದ ವೈದ್ಯವಾಯಿತು. ಇವರಲ್ಲಿ ಅದೆಷ್ಟೋ ಜನರು ಇಂದಿಗೂ ಸಹ ತಮಗೆ ರೋಗ-ರುಜಿನಗಳು ಬಂದರೆ ಜನಪದ ವೈದ್ಯರಲ್ಲಿಗೆ ಹೋಗಿ ಔಷಧಿಯನ್ನು ಪಡೆದುಕೊಳ್ಳುತ್ತಾರೆ.

ಗಂಗಾಮತಸ್ಥರ ವೈದ್ಯ ಪದ್ಧತಿಯನ್ನು ಮಾನವ ವೈದ್ಯ ಹಾಗೂ ಪಶುವೈದ್ಯ ಎಂದು ಎರಡು ಭಾಗ ಮಾಡಿಕೊಳ್ಳಬಹುದು. ಇವರ ವೈದ್ಯ ವಿಧಾನದ ಬಗ್ಗೆ ಹೇಳುವಾಗ ಯಾವ ರೋಗಕ್ಕೆ ಯಾವ ಔಷಧ, ಅದನ್ನು ಬಳಸುವುದು ಹೇಗೆ, ಔಷಧವನ್ನು ಹೇಗೆ ತಯಾರಿಸಲಾಗುವುದು, ಎಂಬಿತ್ಯಾದಿ ವಿಚಾರಗಳನ್ನ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಸಂಗ್ರಹಿಸಲಾಯಿತು. ಅವರು ಹೇಳಿರುವ ಔಷಧೋಪಚಾರದ ವಿಧಾನಗಳನ್ನು ಕುರಿತು ಇಲ್ಲಿ ಚರ್ಚಿಸಲಾಗಿದೆ.

**ಜ್ವರಕ್ಕೆ** : ಮಕ್ಕಳು ಮತ್ತು ದೊಡ್ಡವರೂ ಉಪಯೋಗಿಸಬಹುದಾದುದ್ದು. ಹುಲ್ಲು, ಶುಂಠಿ, ಚಂದನಚಕ್ಕೆ, ಒಣ ಶುಂಠಿ, ಲಾವಂಚ, ಇವುಗಳನ್ನು ಶುದ್ಧಿಮಾಡಿ, ಕೆಚ್ಚಿ ಪುಡಿಮಾಡಿ, ನೀರಿಗೆ ಹಾಕಿ ಚೆನ್ನಾಗಿ ಕುದಿಸಿ, ಕಷಾಯ ಮಾಡಿ, ಶೋಧಿಸಿ ಕುಡಿಸಿದರೆ ಜ್ವರ ಬಿಡುತ್ತದೆ. ಮೂರು ದಿನಗಳ ಕಾಲ ಹೀಗೆ ಕುಡಿಸಬೇಕು. ಅನ್ನ ಊಟ ಮಾಡಬಾರದು. ಹಿಟ್ಟನ್ನು ಮಾತ್ರ ಊಟ ಮಾಡಬೇಕು.

**ಅಮ್ಮ** : ಮಕ್ಕಳಿಗೆ ಸಾಮಾನ್ಯವಾಗಿ ಕಾಣಿಸಿಕೊಳ್ಳುವ ರೋಗಗಳಲ್ಲಿ ಪ್ರಮುಖವಾದುದು 'ಅಮ್ಮ' ಇದರಲ್ಲಿ ಹಲವಾರು ವಿಧಗಳಿವೆ. ಐತಿಕದಮ್ಮ, ಪೈತಿಕದಮ್ಮ, ಸಿಡುಬಿನಮ್ಮ, ಗ್ವಾರದಮ್ಮ. ಅಮ್ಮ ಆಗಿದೆ ಎಂದರೆ ಮಗುವಿಗೆ ಜ್ವರ ಬರುತ್ತದೆ. ಮೈಯಲ್ಲಿ ಗಂಧೆಗಳು ಆಗುತ್ತದೆ. ಇವು ಕಾಣಿಸಿಕೊಂಡಾಗ ಅಮ್ಮ ಆಗಿದೆಯೆಂದು ನಂಬುತ್ತಾರೆ.

ಈ ರೀತಿಯ 'ಅಮ್ಮ' ಆದಾಗ ಮನೆಯಲ್ಲಿ ಅಂಟು-ಕಂಟು ಮಾಡದೆ ಶುಚಿಯಾಗಿದ್ದು ಸಗಣಿ-ಗಂಜಳ ಬೇವಿನ ಸೊಪ್ಪನ್ನು ಮನೆಯಲ್ಲಿ ಇಟ್ಟುಕೊಂಡಿರುತ್ತಾರೆ. ನೀರಿಗೆ ಅರಿಶಿನ ಬೇವಿನ ಸೊಪ್ಪನ್ನು ಹಾಕಿ ಬಿಸಿಲಿಗೆ ಇಟ್ಟು ಅದರಿಂದ ಮಗುವಿಗೆ ಸ್ನಾನ ಮಾಡಿಸಿ ಮಡಿ ಬಟ್ಟೆ ಹಾಕುತ್ತಾರೆ. ಇತರೆ ಮನೆಯವರು, ಮೈಲಿಗೆಯವರು ಮನೆಯ ಒಳಗಡೆ ಬರದಿರಲೆಂದು ಮಕ್ಕಳಿಗೆ ಅಮ್ಮ ಆಗಿದೆ ಎಂಬುದನ್ನು ಸೂಚಿಸುವ ಸಲುವಾಗಿ ಬೇವಿನ ಸೊಪ್ಪನ್ನು ಮನೆಯ ಮುಂದೆ ಇಡುತ್ತಾರೆ. ಇದನ್ನು ನೋಡಿದರೆ ಮನೆಯ ಒಳಗಡೆ ಯಾರು ಬರುವುದಿಲ್ಲ.

'ಅಮ್ಮ' ಕಾಣಿಸಿಕೊಂಡಾಗ ಜ್ವರ ಅಥವಾ ಗಂಧೆಗಳು ಕಾಣಿಸಿಕೊಂಡ ಏಳು ಅಥವಾ ಒಂಬತ್ತನೆ ದಿನಕ್ಕೆ ಅಮ್ಮನನ್ನು ಸಾಗಹಾಕುತ್ತಾರೆ. ಅಂದು ಮೊಸರನ್ನ, ನೀರುಮಜ್ಜಿಗೆ, ಪಾನಕ, ಎಲ್ಲವನ್ನು ಸಿದ್ದಪಡಿಸಿ ಬೇವಿನ ಸೊಪ್ಪು, ಕಡ್ಡಿ ಕರ್ಪೂರ, ಹಣ್ಣು ಕಾಯಿಗಳನ್ನು ತೆಗೆದುಕೊಂಡು

ಮಾರಮ್ಮನ ದೇವಸ್ಥಾನಕ್ಕೆ ಹೋಗಿ ಪೂಜೆ ಮಾಡಿಸಿಕೊಂಡು ಬಂದರೆ ಅಮ್ಮ ಹೋಗುತ್ತಾಳೆ. ರೋಗ ನಿವಾರಣೆ ಆಗುತ್ತದೆ ಎಂಬ ನಂಬಿಕೆ ಗಂಗಾಮತಸ್ಥರದ್ದಾಗಿದೆ.

**ಶೀತ-ನೆಗಡಿ** : ಮಕ್ಕಳಿಗೆ ಶೀತ ನೆಗಡಿ ಆದಾಗ ಬಾಣಂತಿಕಾರ (ಪನ್ಸಾರಿ ಅಂಗಂಡಿಯಿಂದ ತಂದ ಗಿಡಮೂಲಿಕೆ ವಸ್ತುಗಳು) ದಲ್ಲಿರುವ ಬಜೆಯನ್ನು ತೆಗೆದುಕೊಂಡು ಕಲ್ಲಿನ ಮೇಲೆ ತೇಯ್ದು ಎದೆ ಹಾಲಿನಲ್ಲಿ ಬೆರಸಿ ಕೈಎಣ್ಣೆ ದೀಪದಲ್ಲಿ ಕುದಿಸಿ, ಮಗುವಿನ ನಾಲಿಗೆಗೆ ಸ್ವಲ್ಪ ಸವರಿ, ನೆತ್ತಿ, ಹಣೆ, ಮೂಗು ಹಾಗೂ ಗಂಟಲಿಗೆ ಸವರುತ್ತಾರೆ. ಇದರಿಂದ ಮಗುವಿನ ಶೀತ, ನೆಗಡಿ ಕಡಿಮೆಯಾಗುತ್ತದೆ.

ಶೀತ-ನೆಗಡಿ ದೊಡ್ಡವರಿಗಾದರೆ ಕುಂಬಳದ ಬೇರು, ಒಣಶುಂಠಿ, ಬಜೆ, ಕೊತ್ತುಂಬರಿ ಬೀಜ ಇವುಗಳನ್ನು ಕುಟ್ಟಿ ಪುಡಿಮಾಡಿ ಕಷಾಯ ಮಾಡಿ ಶೋಧಿಸಿ ಕುಡಿದರೆ ಗುಣವಾಗುತ್ತದೆ.

**ವಾಂತಿ, ತಲೆತಿರುಗು** : ವಾಂತಿ ಅಥವಾ ತಲೆತಿರುಗು ಕಂಡುಬಂದಾಗ ದ್ರಾಕ್ಷಿ, ಜೇನು, ಇಪ್ಪೆ, ನೆಲ್ಲಿಕಾಯಿ, ಲಾವಂಚ, ನೆಲಸಂಪಿಗೆ ಗೆಡ್ಡೆಯನ್ನು ತಂದು ಗುದ್ದಿ ನೀರಿಲ್ಲಿ ಕುದಿಸಿ, ಅದರ ನೀರಿಗೆ ಸಕ್ಕರೆ, ಜೇನು ಸೇರಿಸಿ ಕುಡಿದರೆ ವಾಸಿಯಾಗುತ್ತದೆ.

**ಹೊಟ್ಟೆ ನೋವು** : ಬಿಸಿ ನೀರಿಗೆ ಚಿಟಕಿ ಉಪ್ಪಿನ ಪುಡಿ, ನಿಂಬೆ ಹಣ್ಣಿನ ರಸ ಹಿಂಡಿಕೊಂಡು ಕುಡಿಯುತ್ತಾರೆ. ಅಥವಾ ತೆಂಗಿನ ಎಳನೀರು, ಕಲ್ಲುಸಕ್ಕರೆ, ಜೀರಿಗೆ ಹಾಗೂ ತೊಂಬೆ ಮರದ ತೊಗಟೆಯನ್ನು ಮಿಶ್ರಣ ಮಾಡಿ ಅರೆದು, ಎಳನೀರಿನಲ್ಲಿ ಮಿಶ್ರಣ ಮಾಡಿ, ನಿಂಬೆಹಣ್ಣಿನ ರಸವನ್ನು ಬಿಟ್ಟು, ಬೆಳಗ್ಗೆಯೇ ಹಾಳು ಹೊಟ್ಟೆಗೆ ಕೊಡಲಾಗುತ್ತದೆ. ಇದನ್ನು ಕುಡಿದ ಸ್ವಲ್ಪ ಸಮಯದಲ್ಲಿಯೇ ಹೊಟ್ಟೆ ನೋವು ಕಡಿಮೆಯಾಗುತ್ತದೆ. ಇನ್ನೊಂದು ರೀತಿಯಲ್ಲಿ ಹೊಟ್ಟೆಯ ಭಾಗಕ್ಕೆ ಅದರಲ್ಲೂ ಒಕ್ಕಳಿಗೆ ಹರಳೆಣ್ಣೆಯನ್ನು ಹಚ್ಚುತ್ತಾರೆ.

**ಮಾತುಕಟ್ಟು** : ಸಣ್ಣ ಮಕ್ಕಳಿಗೆ ಜೊಲ್ಲು ನಿರಂತರವಾಗಿ ಹೆಚ್ಚೆಚ್ಚು ಸುರಿಯುತ್ತಿದ್ದರೆ, ಮಗುವಿಗೆ ಮಾತುಕಟ್ಟ ರೋಗ ಬಂದಿದೆ ಎಂದರ್ಥ. ಇದರ ನಿವಾರಣೆಗಾಗಿ ಮಾತು ಕಟ್ಟಿನ ಮಣಿಯನ್ನು ನಾಡಿ ವೈದ್ಯರಿಂದ ಪಡೆದು ಮಗುವಿನ ಕೊರಳಿಗೆ ಒಂದು ವಾರಕಾಲ ಹಾಕಿದರೆ ಮಾತುಕಟ್ಟು ರೋಗ ವಾಸಿಯಾಗುತ್ತದೆ. ಮಾತುಕಟ್ಟಿನ ಮಣಿ ಎಂದರೆ ಕೆಂಪು ಹವಳ. ಇದನ್ನು ಚರ್ಮದ ದಾರಕ್ಕೆ ಸೇರಿಸ ಮಾತು ಕಟ್ಟಿನ ಮಾಲೆ ಮಾಡಿರುತ್ತಾರೆ.

**ಗಂಟಲು ನೋವು :** ಗಂಟಲು ನೋವು ಶೀತದಿಂದ ಬರುತ್ತದೆ. ಉಗುಳು ನುಂಗಲು ಕಷ್ಟವಾಗುತ್ತದಲ್ಲದೆ ತೀವ್ರ ನೋವಿರುತ್ತದೆ. ಜ್ವರ, ಮೈ ಕೈ ನೋವು ಕಾಣಿಸಿಕೊಳ್ಳುತ್ತದೆ. ಈ ನೋವು ಕಾಣಿಸಿಕೊಂಡಾಗ ಗಂಟಲ ಹೊರಭಾಗದಲ್ಲಿ ಸುಣ್ಣ ಹಚ್ಚಬೇಕು. ತುಂಬೆಸೊಪ್ಪು ಅಥವಾ ಅತ್ತಿ ಮರದ ರಸವನ್ನು ಊತ ಬಂದೆಡೆ ಹಚ್ಚಿಕೊಂಡು ಅದರ ಮೇಲೆ ಸುಣ್ಣವನ್ನು ಲೇಪಿಸುವುದುಂಟು. ಇಲ್ಲವೇ ಎರಡು ಬೆಳ್ಳುಳ್ಳಿ ಬೇಳೆ, ಎರಡು ಜೀರಿಗೆ ಮೆಣಸಿನಕಾಯಿ, ಎರಡು ಲವಂಗ, ಎರಡು ಕಾಡು ಮೆಣಸು, ಇಷ್ಟನ್ನು ನೀರಿನಲ್ಲಿ ಅರೆದು ರಸವನ್ನು ಒಂದು ಹತ್ತಿ ಸುತ್ತಿದ ಕಡ್ಡಿಯಿಂದ ಲೇಪಿಸಿಕೊಳ್ಳಬೇಕು. ಬಾಯಲ್ಲಿ ನೀರು ಬಂದಾಗ ಉಗಿಯಬೇಕು. ಇಲ್ಲವೇ ಬಿಸಿ ನೀರಿಗೆ ಉಪ್ಪು ಹಾಕಿ, ಕರಗಿದ ಮೇಲೆ, ಆ ನೀರನ್ನ ಬಾಯಿಗೆ ತುಂಬಿಕೊಂಡು ಗಂಟಲಿಗೆ ತಾಗುವಂತೆ "ಗುಳು ಗುಳು" ಮಾಡಿ ಮುಕ್ಕಳಿಸಬೇಕು. ಹೀಗೆ ಮಾಡುವುದರಿಂದ ಗಂಟಲ ನೋವು ಕಡಿಮೆಯಾಗುವುದು.

**ಹಲ್ಲು ನೋವು :** ಹಸಿ ಬೆಳ್ಳುಳ್ಳಿಯನ್ನು ಕೆಚ್ಚಿ, ಅದಕ್ಕೆ ಉಪ್ಪು ಸೇರಿಸಿ ಹಲ್ಲು ನೋವಿರುವ ಕಡೆಗೆ ಇಡಬೇಕು. ಅಥವಾ ಕಾರೆ ಸೊಪ್ಪಿನ ರಸವನ್ನು ಬೆಳಗ್ಗೆ ಮತ್ತು ರಾತ್ರಿ ಊಟದ ನಂತರ ಬಾಯಲ್ಲಿ ಮುಕ್ಕಳಿಸಬೇಕು. ಹೀಗೆ ಎರಡು ದಿನ ಮಾಡಿದರೆ ಹಲ್ಲು ನೋವು ಕಡಿಮೆಯಾಗುತ್ತದೆಂದು ವಕ್ತೃ ಗಣಯಯ್ಯ ಹೇಳುತ್ತಾನೆ.

**ಬಾಣಂತಿ ಸನ್ನಿ :** ಬಾಣಂತಿಯರಿಗೆ ಶೀತದಿಂದಾಗಿ ಬರುವ ಕಾಯಿಲೆ ಇದು. ಇದು ಬಂದರೆ ರಕ್ತಹೀನರಾಗಿ ಬಿಳಿಚಿಕೊಳ್ಳುತ್ತಾರೆ. "ಬಾಣಂತಿಯರಿಗೆ ಉಷ್ಣದ ಪದಾರ್ಥಗಳನ್ನು ಕೊಡಬೇಕು. ಈ ಕಾಯಿಲೆಯ ನಿವಾರಣೆಗೆ ಹೂಲಿ, ಲಕ್ಕಿ, ಬೇವು, ಕಿರಳಿ, ನಿಂಬೆ ಸೊಪ್ಪನ್ನು ತಂದು ಕಡಾಯಿಯಲ್ಲಿ ಹುನಿಯಾಕಿದ್ದು, ಬೆಳಿಗ್ಗೆ ಆ ನೀರನ್ನು ಕಾಯಿಸಿ ಸ್ನಾನ ಮಾಡಬೇಕು. ಸ್ನಾನಕ್ಕೆ ಮೊದಲು ಎಲ್ಲಾ ಸೊಪ್ಪನ್ನು ಮೈಗೆ ತಿಕ್ಕಬೇಕು. ನಂತರ ಸ್ನಾನ ಮಾಡಬೇಕೆಂದು"[೭] ಹೇಳುತ್ತಾರೆ.

**ನಂಜು ರೋಗ :** ಸ್ತ್ರೀಯರಿಗೆ ಮಾತ್ರ ಬರುವ ಮತ್ತೊಂದು ರೋಗವಿದು. ಈ ನಂಜುರೋಗ ನಂಜಿನ ಕೋಡನ್ನು ತಂದು ಗಂಧದ ಕಲ್ಲಿನ ಮೇಲೆ ತೇಯ್ದು ಹಣೆಗೆ, ಹೊಟ್ಟೆಗೆ, ಮೈಗೆ ತೀಡುತ್ತಾರೆ. ಇದರಿಂದಾಗಿ ರೋಗ ವಾಸಿಯಾಗುತ್ತದೆಂದು ಭಾವಿಸಿದ್ದಾರೆ.

**ಸೀರೆ ರೋಗ :** ಹೆಂಗಸರು ಮುಟ್ಟಾದಾಗ ಮೂರು ದಿನಗಳು ಕಳೆದ ಮೇಲೆ ಕೆಂಪು ರಕ್ತಕಣಗಳು, ಬಿಳಿರಕ್ತಕಣಗಳು ಹೋಗುವುದನ್ನು 'ಬಟ್ಟೆ ಆಯ್ತದೆ' ಎನ್ನುತ್ತಾರೆ. ಈ ರೋಗಕ್ಕೆ ಸೀರೆ ರೋಗ, ಸಾಲೇ ರೋಗ, ಬಟ್ಟೆ ರೋಗ ಎಂಬ ಹೆಸರಿನಿಂದೆಲ್ಲ ಕರೆಯುತ್ತಾರೆ. ಈ ರೋಗಕ್ಕೆ ದಾಸವಾಳದ ಸೊಪ್ಪು ತಂದು ತಿಂದರೆ ವಾಸಿಯಾಗುತ್ತದೆ. ಕಲ್ನಾರು, ಬಾದಾಮಿ ಜೊತೆಗೆ ಗೋಧಿಯನ್ನು ನೆನೆಹಾಕಿ ತಿಂದರು ವಾಸಿಯಾಗುತ್ತದೆ ಎನ್ನುತ್ತಾರೆ ವಕ್ತೃ ದುಂಡಮ್ಮ.

**ತಲೆ ನೋವು :** ಒಲೆಯ ಬೂದಿಯನ್ನು ತಲೆಗೆ ಹಚ್ಚುತ್ತಾರೆ. ಅಲ್ಲದೆ ತಾಯಿಯ ಎದೆಯ ಹಾಲನ್ನು ವ್ಯಕ್ತಿಯ ಮೂಗಿಗೆ ಎರಡು ಹನಿ ಬಿಡುತ್ತಾರೆ. ಅಥವಾ ಶುಂಠಿಯನ್ನು ಅರೆದು ಹಣೆಗೆ ಹಚ್ಚುತ್ತಾರೆ.

**ಆಮಶಂಕೆ :** ಅರಿಸಿನದ ಕೊನೆಯನ್ನು ಬೆಂಕಿಯಲ್ಲಿ ಸುಟ್ಟು, ಇದರೊಂದಿಗೆ ಸೇರಿಸಿ ತಿನ್ನುತ್ತಾರೆ. ಅಥವಾ ಮೊಸರಿನಲ್ಲಿ ದಾಳಿಂಬೆ ಕಾಯನ್ನು ಕಲಸಿ ಕುಡಿಯುತ್ತಾರೆ. ಕೆಲವು ಸಾರಿ ಬಾಳೆಕಾಯನ್ನು ಬೇಯಿಸಿ ಮೊಸರಿನಲ್ಲಿ ಬೆರಸಿ ತಿನ್ನುತ್ತಾರೆ. ಹೀಗೆ ಐದು ದಿನಗಳು ಮಾಡಿದರೆ ಆಮಶಂಕೆ ವಾಸಿಯಾಗುತ್ತದೆ.

**ಭೇದಿ :** ಮಕ್ಕಳಿಗೆ ಭೇದಿ ಆಗುತ್ತಿದ್ದರೆ ಗೋಟಡಕೆಯನ್ನು ಕಲ್ಲಿನ ಮೇಲೆ ತೇಯ್ದು ಎದೆ ಹಾಲಿನಲ್ಲಿ ಸೇರಿಸಿ ಉಣಿಸುತ್ತಾರೆ. ಅಥವಾ ಅರಳನ್ನು (ಅಳ್ಳ ಕಾಯಿ ಬೀಜ) ತೇಯ್ದು ಎದೆ ಹಾಲಿನಲ್ಲಿ ನೆಕ್ಕಿಸುತ್ತಾರೆ.

**ನಾಟಿ ವೈದ್ಯ**

ಮಹದೇವು, ತಂದೆ ನಂಜಯ್ಯ, ವಯಸ್ಸು ೭೦ ವರ್ಷ, ಗಂಜಾಂ ಶ್ರೀರಂಗಪಟ್ಟಣ ತಾಲ್ಲೂಕು.

ಹಿಂದಿನ ತಲೆಮಾರಿನಿಂದಲೂ ಈ ಕುಟುಂಬದವರು ನಾಟಿವೈದ್ಯದಲ್ಲಿ ಪ್ರವೀಣರಾಗಿದ್ದಾರೆ. ಈತ ತಂದೆಯಿಂದ ನಾಟಿ ವೈದ್ಯ ಮಾಡುವ ಕಲೆಯನ್ನು ಕಲಿತಿದ್ದಾರೆ. ಗ್ರಾಮದ ಜನತೆಗೆ ಮಾತ್ರವೇ ಅಲ್ಲದೆ ಪರಗ್ರಾಮದ ಜನತೆಗೆ ಮದ್ದು ನೀಡುತ್ತಾರೆ. ಹಣವನ್ನು ಕೇಳುವುದಿಲ್ಲ. ನಿಮ್ಮ ದುಡದಲ್ಲಿ ಏನಿದೆ ಅಷ್ಟು ಕೊಟ್ಟರೆ ಸಾಕು ಎನ್ನುತ್ತಾರೆ. ಇವರು ಮದ್ದು ನೀಡುವ ರೊಗಗಳೆಂದರೆ,

**ಹರಿಸ್ತಿ** : ಮುಖ ಕೆಂಪಗೆ ಊದಿಕೊಂಡು ಯಾಪಳಿಸಿಕೊಳ್ಳುತ್ತದೆ. ಇದನ್ನು ಕೆಂಜೆರಳು ಹರಿಸ್ತಿ ಎನ್ನುತ್ತಾರೆ. ಈ ಸಂದರ್ಭದಲ್ಲಿ ಹಸಿರು ಔಷಧಿಯನ್ನು ಕೊಡುತ್ತಾರೆ. ಆ ಔಷಧಿಯನ್ನು ನಿಂಬೆಹಣ್ಣಿನ ರಸದಲ್ಲಿ ಕಲಸಿ ಮುಖಕ್ಕೆ ಲೇಪಿಸಿದರೆ ಹರಸ್ತಿ ವಾಸಿಯಾಗುತ್ತದೆ. ಈ ಹರಿಸ್ತಿಯಾದಾಗ ಉಪ್ಪು, ಬೆಳ್ಳುಳ್ಳಿ, ಮೆಣಸು ತಿನ್ನುವ ಹಾಗಿಲ್ಲ. ಬೇಳೆ ಉಪ್ಪು ಸಾರಿನಲ್ಲಿ ಊಟ ಮಾಡಬೇಕೆಂಬ ಪಥ್ಯ ಹೇಳುತ್ತಾರೆ.

**ಮದ್ದೀಡು ತೆಗೆಯುವುದು** : ಮದ್ದೀಡು ಎಂದರೆ ಗೋಸುಂಬಿಯನ್ನು ಹೊಡೆದುತಂದು ಕೊಯ್ದು ನೇತಾಕಿ ಬಟ್ಟಲಿಗೆ ಅಕ್ಕಿಕಾಳನ್ನು ಹಾಕಿ ಅದರ ರಕ್ತವನ್ನು ಯಾವುದೇ ರೀತಿಯ ತಿಂಡಿಯ ಆಹಾರದ ಒಳಗೆ ಅಂದರೆ ಇಡ್ಲಿ, ದೋಸೆ, ಉಪ್ಪಿಟ್ಟು, ಕಜ್ಜಾಯ ಮುಂತಾದವುಕ್ಕೆ ಸೇರಿಸಿ ಹಾಕುತ್ತಾರೆ. ಇದನ್ನು ಸೇವಿಸಿದ ವ್ಯಕ್ತಿಗೆ ಕೈ ಕಾಲು ಸುಸ್ತಾಗುವುದು. ನಡೆಯಿಲ್ಲದಿರುವುದು, ಸುಸ್ತು, ಸಂಕಟ, ಉಬ್ಬಸ, ಕಣ್ಣು ಹಸಿರಾಗುವುದು ಆಗುತ್ತದೆ. ಈ ಎಲ್ಲಾ ಚಿಹ್ನೆಗಳು ಕಾಣಿಸಿಕೊಂಡರೆ ಮದ್ದೀಡು ಹಾಕಿರಬಹುದೆಂದು ಅನುಮಾನ ಪಡುತ್ತಾರೆ. ಮದ್ದೀಡು ಹಾಕಿದ್ದಾರೆ ಇಲ್ಲಾ ಎಂಬುದನ್ನು ಹೀಗೆ ಪತ್ತೆ ಹಚ್ಚುತ್ತಾರೆ.

೧. ನುಗ್ಗೆ ಸೊಪ್ಪನ್ನು ಆ ವ್ಯಕ್ತಿಯ ಅಂಗೈ ಹಿಂಡಿದಾಗ, ಅದು ಗಟ್ಟಿಯಾದರೆ ಮದ್ದೀಡು ಹಾಕಿದ್ದಾರೆ ಎಂದರ್ಥ.
೨. ಹುರುಳಿ ಕಾಳನ್ನು ನೀರಿಗೆ ಹಾಕಿ ಆ ವ್ಯಕ್ತಿಯ ಅಂಗೈ ಮೇಲೆ ತೇಯ್ದಾಗ ಹುಳ್ಳಿಕಾಳು ಕಪ್ಪಾದರೆ ಮದ್ದೀಡು ಹಾಕಿದ್ದಾರೆ ಎಂದು ಭಾವಿಸುತ್ತಾರೆ.
೩. ತೆಂಗಿನ ಕಾಯಿಯ ಕರಟಕ್ಕೆ ಹುರುಳಿ ಕಾಳನ್ನು ಹಾಕಿ, ಆ ವ್ಯಕ್ತಿಯಿಂದ ಉಚ್ಚೆ ಉಯ್ಯಿಸಿ ಇಡುತ್ತಾರೆ. ಆ ಹುರುಳಿ ಕಾಳುಗಳು ಕಪ್ಪಾದರೆ ಮದ್ದೀಡು ಹಾಕಿದ್ದಾರೆ ಎನ್ನುತ್ತಾರೆ.
೪. ನರಲೆ ಕುಡಿಯ ಹಂಬನ್ನು ತಂದು ಅದನ್ನು ಕೆಚ್ಚಿ ಅಂಗೈ ಮೇಲೆ ಅದರ ರಸವನ್ನು ಹಾಕುತ್ತಾರೆ. ಅದು ಮೊಸರಿನ ಹಾಗೆ ಹೆಪ್ಪುಗಟ್ಟಿದರೆ ಮದ್ದೀಡು ಹಾಕಿದ್ದಾರೆ ಎಂದರ್ಥ.

ಇದನ್ನು ತೆಗೆಯಲು ಹಸಿರು ಔಷಧಿಯನ್ನು ಕೊಡುತ್ತಾರೆ. ಅದನ್ನು ಅಕ್ಕಿಯೊಂದಿಗೆ ರುಬ್ಬಿ ಮಡಕೆಯೊಂದಕ್ಕೆ ನೀರು ಹಾಕಿ ಬಟ್ಟೆ ಕಟ್ಟಿ ಹಬೆ ಮೇಗಳ ಕಡುಬಿನ ರೀತಿಯಲ್ಲಿ ಬೇಯಿಸಿ ತುಪ್ಪದಲ್ಲಿ ಅದ್ದಿ ತಿನ್ನಿಸುತ್ತೇವೆ. ಮಲದಲ್ಲಿ ಪಾಸೆಯ ರೀತಿ ಕತ್ತರಿಸಿ ಹೋಗುತ್ತದೆ. ಈ ಔಷಧವನ್ನು ಮೂರುವಾರ ತೆಗೆದುಕೊಳ್ಳಬೇಕು ಎನ್ನುತ್ತಾರೆ. ಇನ್ನೊಂದು ರೀತಿಯಲ್ಲಿಯು ಔಷಧ ಕೊಡುತ್ತಾರೆ. ವೀಳ್ಯದೆಲೆಯಲ್ಲಿ ಹಸಿರು ಔಷಧಿಯನ್ನು ಖಾಲಿ ಹೊಟ್ಟೆಯಲ್ಲಿ ಕೊಟ್ಟು, ಚೆನ್ನಾಗಿ ಹೊಟ್ಟೆ ತುಂಬ

ನೀರನ್ನು ಕುಡಿಸುತ್ತಾರೆ. ನಂತರ ಆತ ವಾಂತಿ ಮಾಡುತ್ತಾನೆ. ಆಗ ಹೊಟ್ಟೆಯೊಳಗಿರುವ ಮದ್ದೀಡು ಕೆಳಗೆ ಬೀಳುತ್ತದೆ ಎನ್ನುತ್ತಾರೆ. ಇವರಿಗೆ ಭಾನುವಾರ ಮತ್ತು ಗುರುವಾರ ಮಾತ್ರ ಔಷಧ ನೀಡಲಾಗುವುದು. ಮದ್ದೀಡು ಕೆಡಗಿಸಿದವರು ತೆಂಗಿನಕಾಯಿ, ಕುಂಬಳಕಾಯಿ, ಕುರಿಮಾಂಸ ಸೇವಿಸಬಾರದು ಎನ್ನುವ ಪಥ್ಯ ಹೇಳುತ್ತಾರೆ.

**ಕಾಮಾಲೆ**

ಕಾಮಾಲೆ ಬಂದ ವ್ಯಕ್ತಿಯ ಕಣ್ಣು ಹಳದಿ ಬಣ್ಣವಾಗುವುದು, ಮೈ ನೀರು ಹಳದಿ ಬಣ್ಣಕ್ಕೆ ಹೋಗುವುದು, ನೋಡಿದ್ದೆಲ್ಲಾ ಹಳದಿ ಬಣ್ಣ ಕಾಣುವುದು. ಇದನ್ನು ಕಾಮಾಲೆ, ಜಾಂಡಿಸ್ ಎಂದೆಲ್ಲ ಕರೆಯುತ್ತಾರೆ. ಮಗ್ಗೆ ತೋಗಟೆಯ ನಾರು ಮತ್ತು ತುಳಸಿಯ ಎಲೆಗಳನ್ನ ಮಿಶ್ರಣಮಾಡಿ ಪುಡಿ ಮಾಡುತ್ತಾರೆ. ಈ ಪುಡಿಯನ್ನು ನಿಂಬೆ ಹಣ್ಣಿನ ರಸದೊಂದಿಗೆ ಮಿಶ್ರಣ ಮಾಡಿ ಕುಡಿಸುತ್ತಾರೆ. ಪ್ರತಿ ನಿತ್ಯ ೨೦ ದಿವಸಗಳ ಕಾಲ ಹಾಳು ಹೊಟ್ಟೆಯಲ್ಲಿಯೇ ಆಡಿನ ಹಾಲಿಗೆ ಬೆಲ್ಲವನ್ನು ಹಾಕಿಕೊಂಡು ಕುಡಿಯಬೇಕು. ಎಣ್ಣೆಪದಾರ್ಥ, ತೆಂಗಿನಕಾಯಿ, ಬದನೆಕಾಯಿಯನ್ನ ತಿನ್ನಬಾರದು.

**ನಂಜುಂಡಯ್ಯ, ತಂದೆ ನಂಜಯ್ಯ, ವಯಸ್ಸು ೫೯**

ಅಪ್ಪಾಜಯ್ಯನ ದೊಡ್ಡಿ, ಮಳವಳ್ಳಿ ತಾ॥

ಇವರು ಹಾವು, ಚೇಳು ಕಚ್ಚಿದವರಿಗೆ ಔಷಧಿಯನ್ನು, ಮಂತ್ರವನ್ನು ಹಾಕುತ್ತಾರೆ. ಈತ ತನ್ನ ತಂದೆಯಿಂದ ನೀರಿನ ತಡಿಯಲ್ಲಿ ಹುಟ್ಟಿದ ನಿರ್ವಾಣದಲ್ಲಿ ಮುಂಜಾನೆ ನಾಲ್ಕು ಗಂಟೆಯ ವೇಳೆಯಲ್ಲಿ ವಿಷವಿಳಿಸುವ ಮಂತ್ರವನ್ನ ಕಲಿತೆ ಎಂದು ಹೇಳುತ್ತಾನೆ. ಅಲ್ಲದೆ ಔಷಧ ಮಾಡುವುದನ್ನು ತಂದೆ ಕಲಿಸಿಕೊಟ್ಟಿದ್ದಾರೆ ಎನ್ನುತ್ತಾನೆ.

**ಹಾವು ಕಚ್ಚಿದಾಗ :** ಹಾವು ಕಚ್ಚಿದ ವ್ಯಕ್ತಿಯನ್ನು, ಔಷಧಿಯನ್ನು ಕೊಡುವವನ ಮನೆಗೆ, ಮೂರು ತಾಸಿನೊಳಗೆ ಕರೆದು ತರಬೇಕು. ಕಚ್ಚಿದ ಅವಧಿ ಮೂರು ಗಂಟೆ ಮೀರಿದ್ದರೆ ಬದುಕುಳಿಯುವುದು ಕಷ್ಟ ಸಾಧ್ಯ. ಹಾವು ಕಚ್ಚಿದಾಗ ಗಿಡಸಿಗೆ ಎಲೆ, ಎಕ್ಕದ ಎಲೆ, ಒಂದು ಮೆಣಸಿನಕಾಯಿ, ಉರುವನ ಮರದ ಪಟ್ಟೆ, ಬೇವಿನ ಮರದ ತ್ರಿದಳದ ಎಲೆ ಇವುಗಳನ್ನು ಮಿಶ್ರಣ ಮಾಡಿ ಕುಟ್ಟಿ, ಪುಡಿಮಾಡಲಾಗುತ್ತದೆ. ಈ ಪುಡಿಯನ್ನು ಬಿಸಿ ನೀರಿನಲ್ಲಿ ಬೆರಸಿ ವಿಷ ಕಚ್ಚಿದವರಿಗೆ ಕೊಡಲಾಗುತ್ತದೆ. ನಂತರ ಕಚ್ಚಿರುವ ಜಾಗಕ್ಕೆ 'ವಿಷದ ಕಲ್ಲ'ನ್ನು ಇಡಲಾಗುವುದು. ಈ ವಿಷದಕಲ್ಲು

ವಿಷವನ್ನು ಹೀರುವವರೆಗೂ ಕಳಚಿ ಬೀಳುವುದಿಲ್ಲ. ಇದಿಷ್ಟಲ್ಲದೆ ಬೇವಿನ ಸೊಪ್ಪಿನಿಂದ ಗರಡ ಮಂತ್ರವನ್ನು ಎರಡು ತಾಸುಗಳ ಕಾಲ ಹಾಕಲಾಗುತ್ತದೆ. ಯಾವಾಗ ವಿಷದಕಲ್ಲು ಸಂಪೂರ್ಣ ವಿಷವನ್ನು ಹೀರಿ ಕಳಚಿ ಬೀಳುತ್ತದೋ ಅಂದೇ ಹಾವು ಕಚ್ಚಿದವನು ಸುರಕ್ಷಿತನಾಗಿದ್ದಾನೆ ಎಂದು ತಿಳಿಯುತ್ತಾರೆ. ವಿಷದ ಕಲ್ಲು ಬೀಳುವವರೆವಿಗೂ ಹಾವು ಕಚ್ಚಿಸಿಕೊಂಡವನು ಮದ್ದುಗಾರನ ಮನೆಯಲ್ಲಿಯೇ ಇರಬೇಕಾಗುತ್ತದೆ. ಹಾವು ಕಚ್ಚಿದ ಆರು ಗಂಟೆಯವರೆಗೆ ವ್ಯಕ್ತಿಗೆ ಯಾವುದೇ ಆಹಾರವನ್ನು ಕೊಡುವಂತಿಲ್ಲ. ಕಚ್ಚಿದ ರಾತ್ರಿ ನಿದ್ರೆಯನ್ನು ಮಾಡುವಂತಿಲ್ಲ.

ವೆಂಕಟಪ್ಪ, ತಂದೆ ದೊಡ್ಡ ಹೊನ್ನಪ್ಪ, ವಯಸ್ಸು ೬೯, ಕೆನ್ನಾಳು ಇವರು ಹೇಳುವಂತೆ ಹಾವು ಕಡಿದಾಗ ಅದು ಕಡಿದ ಮೇಲ್ಭಾಗದಲ್ಲಿ ದಾರವನ್ನು ಕಟ್ಟಿ ಕಡಿದ ಜಾಗವನ್ನು ಹರಿತವಾದ ಬ್ಲೇಡಿನಿಂದ ಕೊಯ್ದು ರಕ್ತ ಹೊರಹಾಕಬೇಕು. ಹೀಗೆ ಮಾಡಿದರೆ ಹಾವಿನ ವಿಷ ಹೊರ ಬರುತ್ತದೆ. ನಂತರ ಕೋಳಿಯ ಗುದವನ್ನು ರಕ್ತ ಸೋರುತ್ತಿರುವ ಸ್ಥಳಕ್ಕೆ ಹಿಡಿಯುತ್ತಾರೆ. ಆ ಗುದವು ರಕ್ತವನ್ನು ಹೀರುತ್ತಿದ್ದಂತೆ ಕೋಳಿ ಸಾಯುತ್ತದೆ. ಸುಮಾರು ಐದು-ಆರು ಕೋಳಿಗಳನ್ನು ಹೀಗೆ ಮಾಡುತ್ತಾರೆ. ಹೀಗೆ ಮಾಡುವುದರಿಂದ ಆತನಲ್ಲಿರುವ ವಿಷ ಕೋಳಿಯ ಗುದದ ಮೂಲಕ, ಕೋಳಿಗೆ ಬರುವುದರಿಂದ ಕೋಳಿ ಸತ್ತು, ಆ ವ್ಯಕ್ತಿ ಉಳಿಯುತ್ತಾನೆ ಎನ್ನುತ್ತಾರೆ. ಇದಾದ ನಂತರ ನಾಟಿ ಔಷಧಿ ಮಾಡಿ ಕಟ್ಟುತ್ತಾರೆ.

**ಚೇಳು ಕಚ್ಚಿದಾಗ :** ಚೇಳು ಕಚ್ಚಿದಾಗ ಒಣ ಕರ್ಜೂರದ ಹಾಗೆ ಎರಡು ಕಡೆ ಕೊಂಡ್ಲು ಇರುವ ಗಿಡಮೂಲಿಕ ಕಾಯಿತಂದು ಅದನ್ನು ತೇಯ್ದು, ಚೇಳು ಕಡಿದ ಸ್ಥಳದಲ್ಲಿ ಹಚ್ಚಿದರೆ ವಾಸಿಯಾಗುತ್ತದೆ. ಇಷ್ಟೇ ಅಲ್ಲದೆ ವೀಳ್ಯದೆಲೆಯಲ್ಲಿ ಔಷಧಿಯನ್ನು ಹಾಕಿ ತಿನ್ನಲು ಕೊಡುತ್ತಾರೆ. ಹೀಗೆ ಮಾಡಿದ ನಂತರ ಉರಿ ಕಡಿಮೆಯಾಗಿ ವಿಷ ಇಳಿದು ಹೋಗುತ್ತದೆ.

## ಪಶು ವೈದ್ಯ

ಗಂಗಾಮತಸ್ಥ ಸಮುದಾಯದ ಕೆಲವರು ಪಶುವೈದ್ಯದಲ್ಲೂ ಪರಿಣತಿಯನ್ನ ಹೊಂದಿದ್ದಾರೆ. ಕಾಡಿಗೆ ತಮ್ಮ ಅಥವಾ ಬೇರೆಯವರ ಪಶುಗಳನ್ನು ಮೇಯಿಸಲು ಹೋಗುವುದರಿಂದ ಆ ಪರಿಸರಕ್ಕೆ ತಕ್ಕ ಔಷಧಗಳನ್ನು ಬಳಸುವುದನ್ನು ರೂಢಿಸಿಕೊಂಡಿದ್ದಾರೆ. ಇಷ್ಟೇ ಅಲ್ಲದೆ ಕುರಿ, ಆಡು, ಕೋಳಿ ಇವುಗಳಿಗೂ ರೋಗ ಬಂದರೆ ಗುಣಪಡಿಸುವ ಮಾರ್ಗವನ್ನ ಕಂಡುಕೊಂಡಿದ್ದಾರೆ.

**ಚಪ್ಪೆ ರೋಗ :** ಹಸುವಿನ ಕಾಲುಗಳಲ್ಲಿ ಶಕ್ತಿ ಕಡಿಮೆಯಾಗಿ ಎರಡು ಹೆಜ್ಜೆ ಇಟ್ಟರೆ ಜಾನುವಾರುಗಳು ಮುಗ್ಗರಿಸಿ ಬೀಳುತ್ತವೆ. ಅವುಗಳ ಕಣ್ಣು ಪಿಸಿರು ಕಟ್ಟುತ್ತದೆ. ಹುಲ್ಲು, ನೀರು ಮುಟ್ಟುವುದಿಲ್ಲ. ಹತ್ತಿರ ಹೋದರೆ ಉಸಿರಿನಿಂದ ಕೆಟ್ಟ ವಾಸನೆ ಬರುತ್ತದೆ. ಈ ರೋಗಕ್ಕೆ ಪ್ರಥಮ ಚಿಕಿತ್ಸೆಯಾಗಿ ಬಿಸಿ ನೀರಿನಿಂದ ಕಣ್ಣು, ನಾಲಿಗೆ, ಮುಸುಡಿಗಳನ್ನು ಚೆನ್ನಾಗಿ ತೊಳೆಯಬೇಕು. ಈ ರೋಗ ಕಾಣಿಸಿಕೊಂಡಾಗ "ಎರಡು-ಮೂರು ತೆಂಗಿನಕಾಯಿ ತುರಿಗೆ ಬೆಲ್ಲ ಸೇರಿಸಿ ಕುಡಿಸಬೇಕು. ಹದವಾಗಿ ಬಿಸಿ ಇರುವ ರಾಗಿ ಅಂಬಲಿ, ಸಿಹಿ ಮಜ್ಜಿಗೆ ಕುಡಿಸಬೇಕು. ಇದಾದ ಮೇಲೆ ಕಬ್ಬಿಣದ ಕಡ್ಡಿಯನ್ನು ಕಾಯಿಸಿ ಕಾಲಿನಿಂದ ಮೇಲೆ 'ಬರೆ' ಹಾಕಬೇಕು. ಸುಟ್ಟ ಗಾಯಕ್ಕೆ ಬೇವಿನ ಎಣ್ಣೆಯನ್ನು ಸವರಬೇಕು. ಹೀಗೆ ಒಂದು ವಾರಕಾಲ ಮಾಡಿದರೆ ರೋಗ ವಾಸಿಯಾಗುತ್ತದೆ".[೭೩]

**ಹೊಟ್ಟೆ ಉಬ್ಬು ರೋಗ :** ಹಸು ಅಥವಾ ಇತರ ಪ್ರಾಣಿಗಳ ಆಹಾರ ಸೇವನೆಯಲ್ಲಿ ಹೆಚ್ಚು ಕಡಿಮೆ ಆದರೆ ಈ ರೋಗ ಬರುತ್ತದೆ. ಹೊಟ್ಟೆಉಬ್ಬು ರೋಗ ಬಂದಾಗ ಮೂಡಿ ಗಿಡದ ಎಲೆಯನ್ನು ಅರೆದು ರಸ ಮಾಡಿ ಪಶುಗಳಿಗೆ ಕುಡಿಸುತ್ತಾರೆ. ಈ ರೀತಿ ದಿನದಲ್ಲಿ ಎರಡು, ಮೂರು ಬಾರಿ ಮಾಡಬೇಕು.

**ಶೆಲೆರೋಗ :** ಹುಲ್ಲನ್ನು ತಿನ್ನದೇ ಇರುವುದಕ್ಕೆ ಶೆಲೆರೋಗ ಎಂದು ಕರೆಯುತ್ತಾರೆ. ಹುಲ್ಲು ತಿನ್ನದ ಕಾರಣಕ್ಕೆ ದೇಹ ಸೊರಗುತ್ತದೆ. ಮಲಗಿದ ಜಾಗದಲ್ಲಿ ಉಚ್ಚೆಕೊಂಡು ಕೆಲವು ದಿನಗಳಲ್ಲಿ ಪ್ರಾಣ ಬಿಡಬಹುದು. ಈ ರೋಗ ಕಾಣಿಸಿಕೊಂಡಾಗ ಕಹಿ ಬೇವಿನ ಚೆಕ್ಕೆ, ಆಲದ ಚಕ್ಕೆ, ಮಾವಿನ ಚಕ್ಕೆ, ಬೀಟೆ ಸಿಪ್ಪೆ ಇವುಗಳನ್ನು ಚೆನ್ನಾಗಿ ಚೆಚ್ಚಿ, ಅರೆದು ಮಜ್ಜಿಗೆಗೆ ಹಾಕಿ ಕುಡಿಸಬೇಕು. ಈ ಕಾಯಿಲೆ ಮೂರು-ನಾಲ್ಕು ದಿನಗಳಲ್ಲಿ ವಾಸಿಯಾಗುತ್ತದೆ.

**ರಾಸುಗಳಿಗೆ ನೆಲಗಿರಬ ಕಚ್ಚಿದ್ದಕ್ಕೆ :** ಯಾವುದೇ ರಾಸುಗಳಿಗೆ ನೆಲಗಿರಬ ಕಚ್ಚಿದರೆ ಶರೀರ ಪೂರ್ತಿ ಗಂಟಾಗುತ್ತದೆ. ಆಗ ನೆಲಗಿರಬ ಕಚ್ಚಿದೆ ಎಂದು ಔಷಧಿ ನೀಡುತ್ತಾರೆ. ತಲೆಕೂದಲು, ವೀಳ್ಯದೆಲೆ ತೊಟ್ಟು, ಮೆಣಸಿನಕಾಯಿ, ಅರಿಶಿನ ಪುಡಿ, ಎಲ್ಲವನ್ನು ಕೆಂಡಕ್ಕೆ ಹಾಕಿಕೊಂಡು ಹಸುವನ್ನು ಕೆಡಗಿಕೊಂಡು ರಾಸುಗಳ ಮುಸುಡಿ ಹಿಡಿದ ಹೊಗೆ ಕುಡಿಸುತ್ತಾರೆ. ಹೀಗೆ ಮಾಡಿದರೆ ರೋಗ ವಾಸಿಯಾಗುತ್ತದೆ.

**ಧನುರ್ವಾಯು :** ರಾಸು ಕಾಲಿನಿಂದ ನೆಲ ಒದೆಯುತ್ತದೆ. ಶಕ್ತಿಯನ್ನ ಕಳೆದುಕೊಂಡಂತಾಗಿ ಮೈ ಚಾಚಿ ಮಲಗುತ್ತದೆ. ಯಾವಾಗಲೂ ಕಾಲುಗಳನ್ನ ಬಡಿಯುತ್ತಿರುತ್ತದೆ. ಕಣ್ಣಿನಿಂದ ನೀರು ಸುರಿಯುತ್ತದೆ. ಒಂದು ವಾರಕಾಲ ಬದುಕುವುದೇ ಕಷ್ಟ. ಈ ರೋಗ ಬಂದಾಗ ಮೆಂತ್ಯೆ, ಅವರೆ ಬೇಳೆ ಎರಡು ಲೋಟ, ತೊಗರಿ ಬೇಳೆ ಎರಡು ಲೋಟ ಇವುಗಳನ್ನು ನೀರಿನಲ್ಲಿ ನೆನೆಸಿ ಇವುಗಳ ಜೊತೆ ಸೇರಿಸಿ ರುಬ್ಬುತ್ತಾರೆ. ಈ ಮಿಶ್ರಣಕ್ಕೆ ಒಂದು ಮುಷ್ಟಿ ಉಪ್ಪು, ಎರಡು ತಂಬಿಗೆ ಹುಳಿಮಜ್ಜಿಗೆ ಸೇರಿಸಿ ಸಂಜೆಯವರೆಗೆ ಇಡುತ್ತಾರೆ. ಬೆಳಗಿನ ಹೊತ್ತಿನಲ್ಲಿ ಎರಡು-ಮೂರು ಗೊಟ್ಟದಷ್ಟು ಕುಡಿಸುತ್ತಾರೆ. ಒಂದು ವಾರ ಕಾಲ ಹೀಗೆ ಮಾಡಿದರೆ ರೋಗ ವಾಸಿಯಾಗುತ್ತದೆ.

**ಪಶುಗಳಿಗೆ ಕಾಲು ಮುರಿದಾಗ :** ಬೇವಿನ ಮರದ ತೊಗಟೆ, ಹುಣಸೆ ಮರದ ತೊಗಟೆ, ಗೊಡಗ ಮರದ ತೊಗಟೆ, ಅರಳಿ ಮರದ ಚಕ್ಕೆ ಇವುಗಳನ್ನು ಪುಡಿ ಮಾಡಿ, ಕೊಣಮಾವಿನ ಸೊಪ್ಪನ್ನು ಬೆಚ್ಚಗೆ ಮಾಡಿ ಹುಳುಕಿನ ಎಣ್ಣೆಯನ್ನು ತಿಕ್ಕಿ, ಅದರ ಮೇಲೆ ಅದನ್ನೆಲ್ಲ ಕಟ್ಟುತ್ತಾರೆ.

**ಕೋಳಿಗೆ ತಲೆ ಊತ ಕಾಣಿಸಿಕೊಂಡಾಗ :** ತಲೆಯ ಮೇಲೆ ಇಲ್ಲವೇ ತಲೆಯ ಭಾಗದಲ್ಲಿ ಊತ ಕಾಣಿಸಿಕೊಳ್ಳುತ್ತದೆ. ಆಗ ಸೀಗೆ ಪುಡಿಯನ್ನು ಕೊಬ್ಬರ ಎಣ್ಣೆಯೊಂದಿಗೆ ಕಲಸಿ ಸವರುತ್ತಾರೆ.

**ಆಡು ಕುರಿಗಳಿಗೆ ಬಾಯಿ ಬುಗುರಿ ರೋಗ ಕಾಣಿಸಿಕೊಂಡಾಗ :** ಆಡು ಕುರಿಗಳಿಗೆ ಬಾಯಿ ಬುಗುರಿ ರೋಗ ಕಾಣಿಸಿಕೊಂಡಾಗ ಮೇವು ತಿನ್ನುವುದಿಲ್ಲ. ಜ್ವರ ಬಂದಿರುತ್ತದೆ. ಬಾಯಿಯಲ್ಲಿ ಹುಣ್ಣಾದಂತೆ ಕಾಣಿಸುತ್ತದೆ. ಈ ರೋಗ ಕಾಣಿಸಿಕೊಂಡಾಗ ದಿನದಲ್ಲಿ ಆರೇಳು ಬಾರಿ ಅವುಗಳ ಮುಸುಡಿ ಮತ್ತು ನಾಲಿಗೆಗೆ ಬೇವಿನ ಎಣ್ಣೆ ಸವರಬೇಕು. ಹರಳೆಣ್ಣೆಯನ್ನು ಕಾಯಿಸಿ ಅರಿಶಿನ ಪುಡಿಯನ್ನು ಸೇರಿಸಿ ಅವುಗಳ ಬಾಯಿಗೆ ಲೇಪಿಸಬೇಕು. ಸಾಬೂನಿನ ನೊರೆ, ಬಿಸಿ ನೀರು, ಹರಳೆಣ್ಣೆ ಈ ಮೂರನ್ನೂ ಬೆರಸಿ ಕೊಟಗದಲ್ಲಿ ಹುಯ್ಯಬೇಕು. ಹೀಗೆ ಮಾಡಿದರೆ ರೋಗ ವಾಸಿಯಾಗುತ್ತದೆ.

ಪ್ರತಿಯೊಂದು ಸಮಸ್ಯೆಗಳಿಗೂ, ಪ್ರಕೃತಿಯಲ್ಲಿಯೇ ಉತ್ತರ ಸಿಗುತ್ತದೆ. ಆದರೆ ಆ ಉತ್ತರವನ್ನು ಪಡೆದುಕೊಳ್ಳುವ ಶಕ್ತಿಯನ್ನ ಮನುಷ್ಯ ಬೆಳೆಸಿಕೊಳ್ಳಬೇಕು. ಗಂಗಾಮತಸ್ಥರು ಹಲವಾರು ರೋಗಗಳಿಗೆ ಔಷಧಗಳನ್ನು ಕಂಡುಕೊಂಡಿದ್ದಾರೆ. ಪ್ರಕೃತಿಯ ಮಡಿಲಿನಲ್ಲಿ ಸಿಗುವ ಉತ್ಪನ್ನಗಳನ್ನು ಸಂಗ್ರಹಿಸುವುದು ಮತ್ತು ಅವುಗಳನ್ನು ತನ್ನ ಆಹಾರಕ್ಕಾಗಿ, ವಾಸಕ್ಕಾಗಿ, ಬಟ್ಟೆಗಾಗಿ, ರೋಗಗಳಿಗೆ ಔಷಧಿಗಳಾಗಿ ಮಾಡಿಕೊಂಡಿರುವುದು ತಿಳಿದು ಬರುತ್ತದೆ. ವಂಶಪಾರಂಪರ್ಯವಾಗಿ ಬಂದಂತಹ ಮದ್ದುಗಾರರು ಮಾತ್ರ ವೈದ್ಯವನ್ನು ಮಾಡಬೇಕು ಎಂಬುದಿದೆ. ಬೇರೆಯವರು ಇದೇ

ಔಷಧವನ್ನು ಸ್ವತಃ ಬಳಸಿಕೊಂಡರೂ ಕೂಡ ಅವು ಫಲಕಾರಿಯಾಗುವುದಿಲ್ಲ ಎಂದು ಹೇಳುವುದುಂಟು. ಹೀಗೆ ಗಂಗಾಮತಸ್ಥರು ಸಾಂಪ್ರದಾಯಿಕವಾಗಿ ಉಳಿಸಿಕೊಂಡು ಬಂದಿರುವ ವೈದ್ಯ ಪದ್ಧತಿ, ಬಡತನವೇ ಮನೆಮಾಡಿರುವ ಅವರಿಗೇ ಕೈಗೆಟುಕುವ ಕೈಲಾಸವಿದ್ದಂತೆ ಎಂದು ಹೇಳಬಹುದು.

**ಜನಪದ ಕಲೆಗಳು**

ಕಲೆಗಳು ವ್ಯಕ್ತಿಯ ಕಷ್ಟವನ್ನು ದೂರಮಾಡಿ, ಸಂತೋಷ ಸಂಭ್ರಮವನ್ನು ನೀಡುತ್ತವೆ. ಹುಟ್ಟು-ಸಾವುಗಳ ಮಧ್ಯದಲ್ಲಿ ಮನುಷ್ಯನ ಬದುಕು ಅರಳುತ್ತದೆ. ತನ್ನ ಬದುಕನ್ನು ಸಂತಸದಿಂದ ಹಗುರಮಾಡಿಕೊಳ್ಳಲು ಸಾಧ್ಯವಾದಷ್ಟು ಯತ್ನಿಸುತ್ತಾನೆ. ಇದಕ್ಕಾಗಿ ಅನೇಕ ಮಾಧ್ಯಮಗಳನ್ನು ಹುಡುಕಿಕೊಳ್ಳುತ್ತಾನೆ. "ಜನಪದ ಕಲೆಗಳು ಜನಪದರ ಬದುಕಿನ ಕ್ರಿಯಾಂಗಗಳೂ ಮತ್ತು ಅವರ ಸಾಂಸ್ಕೃತಿಕ ಬದುಕಿನ ಮೂರ್ತರೂಪಗಳೂ ಆಗಿವೆ. ಅವು ಅವರ ಬದುಕಿನ ಸುಖ-ದುಃಖಗಳನ್ನು ಸೆರೆಹಿಡಿದಿಟ್ಟ ಗಾಥೆಗಳು. ದೈವ ಶ್ರದ್ಧೆಯನ್ನು ತೋರಿಸಿದ ಭಕ್ತಿ ಕಾವ್ಯಗಳು. ಮನರಂಜನೆಗಾಗಿ ರೂಪಿಸಿಕೊಂಡ ಕಲಾತ್ಮಕ ರೂಪಗಳು. ಜನಪದ ಕಲೆಗಳು, ರೂಪುಗೊಳ್ಳುವುದು ಜನಪದ ಬದುಕಿನ ಒಂದು ಅಂಗವಾಗಿ ಅದರಲ್ಲೂ ಶ್ರಮ ನಿವಾರಣೆಯ ಅಂಗವಾಗಿ ಮತ್ತು ವಿಧಿಯನ್ನೋ ಆಚರಣೆಯನ್ನೋ ಪೂರೈಸುವ ಸಲುವಾಗಿ. ಅಂತಹ ವಾತಾವರಣ ನಿರ್ಮಾಣವಾದಾಗ ಅವು ತನಗೆ ತಾನೇ ಉದ್ಭವಿಸುತ್ತವೆ. ಓತಪ್ರೋತವಾಗಿ ಹರಿಯುತ್ತವೆ."[೭೪]

ರಾಗಿ ಬೀಸುವ ಕಲ್ಲು ಕೈಗೆ ಬರುತ್ತಿದ್ದಂತೆಯೇ ಬೀಸುವ ಹಾಡುಗಳು ಆ ಲಯಕ್ಕೆ ಅನುಗುಣವಾಗಿ ಹೊರಹೊಮ್ಮುತ್ತವೆ. ಮದುವೆಯ ಸಂಭ್ರಮ ಹಂತಹಂತವಾಗಿ ನಡೆಯುತ್ತಿದ್ದಂತೆಯೇ ಸೋಬಾನೆ ಪದಗಳು ಹಂತಹಂತವಾಗಿಯೇ ಮುಂದುವರೆಯುತ್ತವೆ. ನಾಟಿ ಮಾಡುವಾಗ, ಕೂಲಿ ಕೆಲಸ ಮಾಡುವಾಗ, ಭತ್ತದ ಒಕ್ಕಣೆ ಮಾಡುವಾಗ, ವೀಳ್ಯದೆಲೆ ಕೊಯ್ಯುವಾಗ, ಏತದಲ್ಲಿ ನೀರೆತ್ತುವಾಗ ಇಲ್ಲವೇ ಕುಂಭದಲ್ಲಿ ನೀರನುಯ್ಯುವಾಗ, ಹಾಡುಗಳು ತನಗೆ ತಾವೇ ಹುಟ್ಟಿ ಹಾಡಿಸುವುದನ್ನು ನೋಡಬಹುದು. ಗಂಗಾಮತಸ್ಥರು ಜಿಲ್ಲೆಯ ಬೇರೆ ಸಮುದಾಯದವರಿಗಿಂತ ಕಲೆಗಳ ವಿಷಯದಲ್ಲಿ ಎತ್ತಿದ ಕೈ ಎಂದೇ ಹೇಳಬೇಕು. ಪೂಜಾ ಕುಣಿತ, ಪಟದ ಕುಣಿತ, ಧ್ವಜಕಂಬದ ಕುಣಿತ ಮುಂತಾದ ಕಲೆಗಳನ್ನು ಬೇರೆಯವರ ಮನಮುಟ್ಟುವ ಹಾಗೆ ಪ್ರದರ್ಶಿಸುವುದನ್ನ ಕರಗತಮಾಡಿಕೊಂಡಿದ್ದಾರೆ. ಮಹಿಳೆಯರ

ಸೃಜನಶೀಲತೆಯ ಸಹಜ ಅಭಿವ್ಯಕ್ತಿಗಳಾದ ರಂಗೋಲಿ, ಹಚ್ಚೆಗಳು ಇವು ವೈಯಕ್ತಿಕ ಪ್ರತಿಭೆಯ ಗುರುತಾಗಿ ಕಂಡುಬರುತ್ತವೆ.

**ಭಜನೆ**

ನೊಂದ ಜನರಿಗೆ ಆನಂದ, ವಿಶ್ರಾಂತಿ ಸಿಗುವುದು ದೇವರ ನಾಮಸ್ಮರಣೆಯಲ್ಲಿ. ದೇವರ ಸ್ತುತಿ ಮತ್ತು ಸ್ತೋತ್ರ ರೂಪವಾದ ಹಾಡುಗಳನ್ನು ಭಜನೆ ಎನ್ನಬಹುದು. ದೇವರ ಸೇವೆಯನ್ನು ಮಾಡುವ ಹಲವು ವಿಧಗಳಲ್ಲಿ ಭಜನೆಯು ಒಂದಾಗಿದೆ ಎಂದರೆ ತಪ್ಪಾಗಲಾರದು. ಮಂಡ್ಯ ಜಿಲ್ಲೆಯಲ್ಲಿ ವಾಸಿಸುವ ಗಂಗಾಮತಸ್ಥರು ದಿನನಿತ್ಯದ ಕಾಯಕದಲ್ಲಿ ನೊಂದು-ಬೆಂದು ಸಾಕಾಗಿದ್ದರೂ ರಾಮಭಜನೆ ಮಾಡುವುದನ್ನು ಇಂದಿಗೂ ಮರೆತಿಲ್ಲ. ಪ್ರತಿ ಶನಿವಾರದಂದು ಸಾಯಂಕಾಲ ರಾಮಮಂದಿರದಿಂದ ಪ್ರಾರಂಭಗೊಂಡು, ಊರಿನ ಪ್ರಮುಖ ಬೀದಿಗಳಲೆಲ್ಲಾ ರಾಮನ ಫೋಟೋ ಹಿಡಿದು, ಗರಡುಗಂಬದ ದೀಪ ಹಿಡಿದು ರಾಮನ ಭಜನೆಯನ್ನು ಮಾಡುತ್ತಾರೆ. ಇವರಿಗೆ ವಾಸಿಸಲು ಮನೆ ಇಲ್ಲದಿದ್ದರೂ, ಇವರು ವಾಸಿಸುವ ಪ್ರತಿ ಗ್ರಾಮದಲ್ಲೂ "ರಾಮ ಮಂದಿರ" ಇರುವುದನ್ನು ಸಾಮಾನ್ಯವಾಗಿ ನೋಡಬಹುದು. ಪ್ರತಿ ಶನಿವಾರ ಹತ್ತರಿಂದ-ಹದಿನೈದು ಮಂದಿ ಸೇರಿ ಭಜನೆಯನ್ನು ಮಾಡುತ್ತಾರೆ. ತಾಳ, ಹಾರ್ಮೋನಿಯಂ, ತಬಲ ಇತ್ಯಾದಿ ಸಂಗೀತ ವಾದ್ಯಗಳನ್ನು ಭಜನೆಯ ಸಂದರ್ಭದಲ್ಲಿ ಬಳಸುತ್ತಾರೆ. ಹಬ್ಬ-ಹುಣ್ಣಿಮೆ ದಿನಗಳಲ್ಲಿಯೂ ಭಜನೆಯನ್ನು ಮಾಡುತ್ತಾರೆ. ಹೀಗೆ ಭಜನೆ ಮಾಡುವುದರಿಂದ ಅವರು ಸಂತೋಷವನ್ನು ಪಡುತ್ತಾರೆ.

ಗಂಗಾಮತಸ್ಥರ ಆರಾಧ್ಯ ದೈವವಾದ ಶ್ರೀರಾಮನನ್ನು ಕುರಿತು ಭಜನೆ ಗೀತೆಗಳನ್ನು ಹಾಡುತ್ತಾರೆ. ಈ ಭಜನೆಯ ಗೀತೆಗಳನ್ನು ಮಕ್ಕಳು, ದೊಡ್ಡವರು, ವೃದ್ಧರು, ಹೆಂಗಸರು ಎಲ್ಲಾ ಸೇರಿ ಹಾಡುತ್ತಾರೆ. ಇದರಲ್ಲಿ ಹರಿಭಜನೆ, ಗುರುಭಜನೆ, ರಾಮಭಜನೆ ಎಂದೆಲ್ಲ ಹಲವು ಬಗೆಗಳಿದ್ದರೂ, ಗಂಗಾಮತಸ್ಥರು ಹೆಚ್ಚಾಗಿ ರಾಮಭಜನೆಯನ್ನು ಹಾಡುತ್ತಾರೆ. ರಾಮನನ್ನು ಕುರಿತ ಗೀತೆ, ರಾಮಭಜನೆ ಎನಿಸಿಕೊಳ್ಳುತ್ತದೆ. ಕೆಲವು ಬಾರಿ ಹರಿಭಜನೆಯನ್ನು ಹಾಡುವುದುಂಟು. ತಾಳ, ತಬಲ, ಹಾರ್ಮೋನಿಯಂ ಮೊದಲಾದ ವಾದ್ಯಗಳನ್ನು ಬಳಸಿ ಹಾಡನ್ನು ಹಾಡುತ್ತಾರೆ. ಪ್ರತಿ ಶನಿವಾರ ಮತ್ತು ಹಬ್ಬ-ಹರಿದಿನಗಳಲ್ಲಿ ಭಜನೆ ಮಾಡುವ ಮಂದಿಯೆಲ್ಲ ಬೀದಿ-ಬೀದಿಗಳಲ್ಲಿ ಭಜನಾ ಗೀತೆಗಳನ್ನು ಹಾಡುತ್ತಾ ಬಂದರೆ, ಗ್ರಾಮದ ಜನರಲ್ಲಿ ಭಕ್ತಿ ಒಡಮೂಡುತ್ತದೆ. ತಮ್ಮ ದುಡದಲ್ಲಿದ್ದ ಕಾಣಿಕೆಯನ್ನು ಆ ಗರಡುಗಂಬಕ್ಕೆ ಹಾಕುತ್ತಾರೆ. ಗರಡುಗಂಬಕ್ಕೆ ಎಣ್ಣೆ ಬಿಟ್ಟು, ಗಂಧದಕಡ್ಡಿ ಹಚ್ಚಿ ಪೂಜೆಯನ್ನು ಸಲ್ಲಿಸುತ್ತಾರೆ. ಆ ಭಜನೆಯ ಕೆಲವು ಸಾಲುಗಳು ಹೀಗಿವೆ.

"ಹನುಮನ ಪ್ರಾಣ ಪ್ರಭು ರಘುರಾಮ
ನಿನ್ನ ಕುಲ ಸೋಮ ಕೋದಂಡರಾಮ
ಧರಣಿಯಂಬರ ದಿನಕರ ಚಂದಿರ ನಿನ್ನಯ ರೂಪವದು
ಸಾಗರದಲೆಗಳು ಸಮೀರನೊಡನೆ ನಿನ್ನಯ ನಾಮವ ಹಾಡಿ"

"ಶ್ರೀ ರಾಮ ರಘುರಾಮ ಕಲ್ಯಾಣ ರಾಮ ಜಾನಕಿ ಪ್ರಿಯತಮ
ಶ್ರೀ ರಾಮ ಶುಭ ನಾಮ, ಶ್ರೀ ರಾಮ ಶುಭನಾಮ"

## ವಿಚಿತ್ರ ವೇಷ

ಗಂಗಾಮತಸ್ಥರು ವಿಶೇಷವಾದ ಹಬ್ಬಗಳು ಮತ್ತು ಜಾತ್ರೆಗಳ ಸಂದರ್ಭದಲ್ಲಿ ವಿಚಿತ್ರ ವೇಷವನ್ನು ತೊಟ್ಟು ಕುಣಿಯುತ್ತಾರೆ. ಹೀಗೆ ಕುಣಿಯಲು ಕಾರಣ ಪ್ರಮುಖವಾಗಿ, ಆ ಮೂಲಕ ದೇವರಿಗೆ ಭಕ್ತಿಯನ್ನು ತೋರಿಸುವುದು ಮತ್ತು ಅಲ್ಲಿ ನೆರೆದಿರುವ ಜನರಿಗೆ ಮನರಂಜನೆ ನೀಡುವುದು. ಗುಂಡಾಪುರದ ಜಾತ್ರೆಯಲ್ಲಂತೂ ಗಂಗಾಮತಸ್ಥರು ಚಿತ್ರ-ವಿಚಿತ್ರವಾದ ವೇಷಗಳನ್ನು ತೊಟ್ಟು ಕುಣಿಯಲಿಲ್ಲವೆಂದರೆ, ದೇವತಾಕಾರ್ಯವೇ ನಡೆಯುವುದಿಲ್ಲ. ಮುಖಕ್ಕೆ, ಮೈ ಮತ್ತು ಕೈ-ಕಾಲುಗಳಿಗೆ ವಿವಿಧ ರೀತಿಯ ಬಣ್ಣಗಳನ್ನು ಬಳಿದುಕೊಂಡಿರುತ್ತಾರೆ. ಅಲ್ಲದೆ ಸೊಂಟಕ್ಕೆ ಹೊಂದಿಕೊಂಡಂತೆ ಸೊಪ್ಪನ್ನು ಕಟ್ಟಿಕೊಂಡಿರುತ್ತಾರೆ. ಕೈಯಲ್ಲಿ ಮಾವಿನ ಸೊಪ್ಪನ್ನು ಹಿಡಿದುಕೊಂಡು, ವಾದ್ಯಗಳ ತಾಳಕ್ಕೆ ಬಣ್ಣ ಬಳಿದುಕೊಂಡಿರುವ ಹಲವು ಜನರು ಕುಣಿಯುತ್ತಾರೆ. ಹೀಗೆ ಕುಣಿಯುವ ಇವರನ್ನು 'ಪರದೇಶಿಗಳು' ಎಂದು ಕರೆಯುತ್ತಾರೆ. ಇನ್ನು ಕೆಲವು ಹಬ್ಬಗಳಲ್ಲಿ ಜಿಲ್ಲೆಯ ವಿವಿಧೆಡೆಗಳಲ್ಲಿ ಇವರು ಮಂಕಿವೇಷವನ್ನ ತೊಟ್ಟು ಕುಣಿಯುತ್ತಾರೆ. ಸಿಡಿ ಹಬ್ಬಗಳಲ್ಲಿ, ಮಾರಮ್ಮನ ಹಬ್ಬಗಳಲ್ಲಿ, ಕಾರಹಬ್ಬಗಳಲ್ಲಿ, ಚೌಡಮ್ಮನ ಹಬ್ಬಗಳಲ್ಲಿ, ಗಂಗೆ ಪೂಜೆ ಮಾಡಿ, ಗಂಗೆ ತಡಿಯಿಂದ ನೀರು ತರುವ ಸಂದರ್ಭಗಳಲ್ಲಿ ಮುಂತಾದ ಹಬ್ಬ-ಹರಿದಿನಗಳಲ್ಲಿ ಕುಣಿಯುತ್ತಾರೆ.

## ಕೋಲಾಟ

ಗಂಗಾಮತಸ್ಥರು ಕೋಲಾಟ ಆಡುವ ಕಲೆಯನ್ನು ಕರಗತಮಾಡಿಕೊಂಡಿದ್ದಾರೆ. ಇವರಲ್ಲೆ ಅನುಭವ ಹೊಂದಿರುವ ಒಬ್ಬ ವ್ಯಕ್ತಿ ಕೋಲಾಟವನ್ನು ಕಲಿಸಿಕೊಡುತ್ತಾನೆ. ಕುಲದ ಮನೆ ಅಥವಾ ಚಾವಡಿ, ಇಲ್ಲವೇ ರಾಮಮಂದಿರದಲ್ಲಿ ಕೋಲಾಟದ ತರಬೇತಿಯನ್ನು ನೀಡುತ್ತಿದ್ದರು. ಗ್ರಾಮ ದೇವತೆ ಹಬ್ಬಗಳ ಮೆರವಣಿಗೆಯಲ್ಲಿ ಬಣ್ಣದ ಕೋಲುಗಳನ್ನು ತೆಗೆದುಕೊಂಡು ಕುಣಿಯುತ್ತಾ

ಕೋಲು ಹುಯ್ಯುತ್ತಾರೆ. ಸಿಡಿಹಬ್ಬ, ಜಾತ್ರೆಗಳು, ದೇವರ ಪರಸೆ, ಶಿವರಾತ್ರಿ, ಗೌರಿಹಬ್ಬ ಮುಂತಾದ ಸಂದರ್ಭಗಳಲ್ಲಿ ಕೋಲಾಟವನ್ನು ಹುಯ್ಯುತ್ತಾರೆ. ಹಿಂದಿನಿಂದ ಬಂದಿರುವ ಕೋಲಾಟದ ಸಂಪ್ರದಾಯವನ್ನು ಇವರು ಇಂದಿಗೂ ಉಳಿಸಿಕೊಂಡಿದ್ದಾರೆ. ಕೋಲಾಟ ಆಡುವಾಗ ಹಾಡುಗಳನ್ನು ಹಾಡುತ್ತಿದ್ದರು. ಆ ಕೋಲಾಟ ಪದದ ಒಂದು ತುಣುಕು ಹೀಗಿದೆ –

"ಶರಣು ಶರಣುವಯ್ಯ ಗಣನಾಯ್ಕ
ಎಳ್ಳುಂಡೆ ಜೇನುತುಪ್ಪ ಗಣನಾಯ್ಕ
ಗೊನೆ ಮೇಗಳ ಬಾಳೆಹಣ್ಣು ಗಣನಾಯ್ಕ
ನಿನಗೆ ತಪ್ಪದೆ ಒಪ್ಪಿಸುವೆ ಗಣನಾಯ್ಕ"

## ಜನಪದ ಕುಣಿತ

ಜನಪದ ಕಲೆಗಳ ಮೂಲನೆಲೆಯಾದ ಗ್ರಾಮೀಣ ಪ್ರದೇಶಗಳು ಇಂದಿಗೂ, ವಿವಿಧ ರೀತಿಯ ಜನಪದ ಕುಣಿತಗಳನ್ನ ಮರೆತಿಲ್ಲ. ಇವರು ಮರೆಯುವುದೂ ಇಲ್ಲ. ಆ ಕುಣಿತದಲ್ಲಿ ದೈವ ಭಕ್ತಿಯನ್ನು, ನಂಬಿಕೆ, ನಡವಳಿಕೆಗಳನ್ನ ಅವರು ಕಂಡುಕೊಂಡಿದ್ದಾರೆ. "ಮನುಷ್ಯ ಅನಾದಿಕಾಲದಿಂದ ಅನೇಕ ಜನಪದ ಕಲೆಗಳನ್ನು ರೂಢಿಸಿಕೊಂಡು ಬಂದಿದ್ದಾನೆ. ಇವುಗಳಲ್ಲೆಲ್ಲಾ ಕುಣಿತವೇ ಅತ್ಯಂತ ಪ್ರಾಚೀನವಾದುದ್ದೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಮೊದಮೊದಲು ಸಂತೋಷವಾದಾಗಲೆಲ್ಲ ಸಿಕ್ಕಾಪಟ್ಟೆ ಮಕ್ಕಳಂತೆ ಕುಣಿಯುತ್ತಿದ್ದ ಮನುಷ್ಯ, ಕ್ರಮೇಣ ಈ ಕುಣಿತವನ್ನೇ ತಾಳ–ಲಯಗಳಿಗೆ ಹೊಂದಿಸಿಕೊಂಡು ಕಲೆಯನ್ನಾಗಿಸಿದ. ಕುಣಿತ ಒಮ್ಮೆ ಕಲೆಯಾದ ಮೇಲೆ ಇದರ ಅಭಿವ್ಯಕ್ತಿಗೆ ನಿಶ್ಚಿತ ಕಾಲ–ಸ್ಥಳಗಳು ಗೊತ್ತಾದವು. ಇಂದಿನ ಎಲ್ಲಾ ಬಗೆಯ ಶಾಸ್ತ್ರೀಯ ನೃತ್ಯಗಳಿಗೆ ಜನಪದ ಕುಣಿತಗಳೇ ಮೂಲವಾಗಿವೆ"[೭೫] ಎಂದು ಹೇಳಬಹುದು.

ಗಂಗಾಮತಸ್ಥರು ಹಬ್ಬಗಳು, ಜಾತ್ರೆಗಳು, ವಿಶೇಷ ದಿನಗಳಲ್ಲಿ ವಿವಿಧ ರೀತಿಯ ಕುಣಿತಗಳನ್ನು ಮಾಡುತ್ತಾರೆ. ಅವುಗಳಲ್ಲಿ ಪ್ರಮುಖವಾದವೆಂದರೆ, ಸೋಮನ ಕುಣಿತ, ನಂದಿಕೋಲು ಕುಣಿತ, ವೀರಭದ್ರನ ಕುಣಿತ, ಡೊಳ್ಳುಕುಣಿತ, ಪಟ ಕುಣಿತಗಳು ಕಂಡು ಬರುತ್ತವೆ. ವಿವಿಧ ದೇವರುಗಳ ಪಟಗಳನ್ನು ಹೊತ್ತು ಕುಣಿಯುತ್ತಾರೆ. ಕುಣಿಯುವ ಸಂದರ್ಭದಲ್ಲಿ ಭಯ–ಭಕ್ತಿಯಿಂದ ಕುಣಿಯುತ್ತಾರೆ. ತಾಳಕ್ಕೆ ತಕ್ಕಂತೆ ಕುಣಿಯುವುದು ಕಂಡುಬರುತ್ತದೆ. ನಗೇರಿ, ಡೋಲು, ತಮಟೆ, ವಾದ್ಯಗಳು, ಗಿಲಕಿ, ತಾಳ ಮುಂತಾದ ಸಂಗೀತ ಸಾಧನಗಳನ್ನು ಬಳಸಲಾಗುತ್ತದೆ. ಮರದ ಕಾಲಿನ ಕುಣಿತ, ಕೀಲು ಕುದುರೆ, ಪಟವನ್ನು ತಲೆಯ ಮೇಲೆ ಹೊತ್ತು

ಅಥವಾ ಕರಗವನ್ನು ತಲೆಯ ಮೇಲೆ ಹೊತ್ತು, ಏಣಿಯ ಮೇಲೆ ಹತ್ತಿ ಕುಣಿಯುತ್ತಾರೆ. ಪದವನ್ನು ತಲೆಯ ಮೇಲೆ ಹೊತ್ತಿ ನೆಲದ ಮೇಲೆ ಇಟ್ಟಿರುವ ಹಣವನ್ನು ಬಾಯಲ್ಲಿ ಕಚ್ಚಿ ಎತ್ತುವ ದೃಶ್ಯ ರೋಮಾಂಚನವಾದುದ್ದು. ನಂದಿಕೋಲು ಕುಣಿತವನ್ನು ಮಾಡುವ ವ್ಯಕ್ತಿ ಎತ್ತರವಾಗಿ, ಸದೃಢವಾಗಿರುತ್ತಾನೆ. ಈತ ಕುಣಿಯುವುದನ್ನು ನೋಡಿದರೆ ದೇವರೇ ಇವರ ಮೈಮೇಲೆ ಬಂದಿದೆಯೇನೋ ಎನ್ನುವ ಭಾಸವಾಗುತ್ತದೆ. ಕುಣಿತದ ಎಲ್ಲಾ ದೇವತಾ ಮೂರ್ತಿಗಳಿಗೂ ವಿವಿಧ ರೀತಿಯ ಹೂವುಗಳಿಂದ ಅಲಂಕಾರವನ್ನು ಮಾಡಿರುತ್ತಾರೆ. ಇಂಥ ಕುಣಿತಗಳಿಂದ ಮಂಡ್ಯ ಜಿಲ್ಲೆಯ ಹೆಸರನ್ನು, ರಾಜ್ಯದ ವಿವಿಧ ಮೂಲೆಗಳಿಗೆ ರಾಷ್ಟ್ರದ ವಿವಿಧ ಭಾಗಗಳಲ್ಲಿ ಮತ್ತು ಅಂತರರಾಷ್ಟ್ರೀಯ ಮಟ್ಟದಲ್ಲಿ ಕೀರ್ತಿಯನ್ನು ಗಳಿಸಿರುವ ಸವಿತಾ ತಂದೆ ಚೀರಕುನ್ನಿ, ತಳಗವಾದಿ ಗ್ರಾಮ, ಮಳವಳ್ಳಿ ತಾಲ್ಲೂಕು ಈ ಪ್ರತಿಭಾನ್ವಿತ ಹುಡುಗಿಯನ್ನು ನೆನೆಯಲೇ ಬೇಕಾಗುತ್ತದೆ. ಹೀಗೆ ಗಂಗಾಮತಸ್ಥರು ಜನಪದ ಕುಣಿತದಲ್ಲಿ ವಿಶೇಷವಾದ ಪ್ರತಿಭೆಯನ್ನು ಹೊಂದಿ ಮನರಂಜನೆಯನ್ನು ನೀಡುತ್ತಾರೆ.

### ಕುಸ್ತಿ ಮತ್ತು ದೊಣ್ಣೆವರಸೆ

ಗಂಗಾಮತಸ್ಥರು ಕುಸ್ತಿ ಮತ್ತು ದೊಣ್ಣೆವರಸೆಯಲ್ಲಿ ಹೆಸರು ಮಾಡಿದ್ದಾರೆ. ಹಿಂದೆ ರಾಜರ ಪರಿವಾರದಲ್ಲಿದ್ದ ಇವರು, ಅಂದಿನಿಂದಲೂ ಕುಸ್ತಿಗೆ ಮತ್ತು ದೊಣ್ಣೆವರಸೆಗೆ ಪ್ರಸಿದ್ಧಿಯನ್ನು ಪಡೆದಿದ್ದವರು. ಆ ಕಲೆಗಳನ್ನ ಇಂದಿಗೂ ಜಾತ್ರೆಗಳ ಸಂದರ್ಭ, ಸ್ಪರ್ಧೆಗಳು ನಡೆಯುವ ಸಂದರ್ಭದಲ್ಲಿ ವಿಶೇಷವಾಗಿ ಪ್ರದರ್ಶಿಸುತ್ತಾರೆ. ಗುರುವಿನ ಮೂಲಕ ಗರಡಿಯಲ್ಲಿ ಕುಸ್ತಿಯ ತರಬೇತಿಯನ್ನ ಪಡೆದುಕೊಳ್ಳುತ್ತಾರೆ. ರಾಜ್ಯದ ವಿವಿಧ ಭಾಗಗಳಲ್ಲಿ ನಡೆಯುವ ಕುಸ್ತಿ ಪಂದ್ಯಾವಳಿಯಲ್ಲಿ ಭಾಗವಹಿಸಿ ವಿಜೇತರು ಆಗಿದ್ದಾರೆ. ಮಳವಳ್ಳಿಯ ಪಟ್ಟಣದಲ್ಲಿ ಹೆಸರುವಾಸಿಯಾಗಿರುವ ಪೈಲ್ವಾನ್ ರಾಮಣ್ಣ, ಕುಳ್ಳುಚ್ಚ, ಮಾದೇಶ, ಕೃಷ್ಣಪ್ಪ, ರವೀಂದ್ರ ಇತರ ವ್ಯಕ್ತಿಗಳು ಕುಸ್ತಿ ಮಾಡುವುದರಲ್ಲಿ ಪ್ರಸಿದ್ಧರಾಗಿದ್ದಾರೆ.

ದೊಣ್ಣೆವರಸೆಯನ್ನು ಗುರುವಿನಿಂದ ತಿಂಗಳಾನುಗಟ್ಟಲೆ ಆಸಕ್ತಿಯಿರುವವರು ತರಬೇತಿಯನ್ನು ಪಡೆಯುತ್ತಾರೆ. ದೊಣ್ಣೆಯನ್ನು ತಮ್ಮ ಕೈಗಳಿಂದ ತಿರುಗಿಸುವ ಗತ್ತು ನೋಡುಗರಿಗೆ ಆಶ್ಚರ್ಯವನ್ನು ಉಂಟುಮಾಡುತ್ತದೆ. ಮಳವಳ್ಳಿ ಪಟ್ಟಣದಲ್ಲಿ ದೊಣ್ಣೆವರಸೆಯಲ್ಲಿ ಪ್ರಸಿದ್ಧರಾಗಿರುವ, ದೊಣ್ಣೆವರಸೆ ಕರಿಯಪ್ಪ, ದೊಣ್ಣೆವರಸೆ ಕಲಿಯುವವವರಿಗೆ ಗುರುವಿದ್ದಂತೆಯೇ. ಈತ ಹಲವು ಪ್ರಶಸ್ತಿಗಳನ್ನು ತನ್ನದಾಗಿಸಿಕೊಂಡಿದ್ದಾನೆ. ಸಾಮಾನ್ಯವಾಗಿ ಕುಸ್ತಿಯನ್ನು ಸಿಡಿಹಬ್ಬ, ದಸರಾ ಪಂದ್ಯಾವಳಿ ಇತರ ಕಡೆ ನಡೆಯುವ ಪಂದ್ಯಾವಳಿಗಳಲ್ಲಿ ಮಾಡುತ್ತಾರೆ.

## ರಂಗದ ಕುಣಿತ

ಹಬ್ಬಗಳು, ಜಾತ್ರೆಗಳ ಸಂದರ್ಭದಲ್ಲಿ ಗಂಗಾಮತಸ್ಥರು ರಂಗಕ್ಕೆ ಬಂದು, ತಮಟೆ, ನಗಾರಿಗಳ ಸದ್ದಿಗೆ ಹೆಜ್ಜೆ ಹಾಕಿ ಕುಣಿಯುತ್ತಾರೆ. ಕುಣಿತದಲ್ಲಿ 'ಕೋಡಂಗಿ' ವೇಷವನ್ನು ಹಾಕುತ್ತಾರೆ. ತಲೆಗೆ ಬಣ್ಣದ ಕಾಗದಗಳಿಂದ ಮಾಡಿದ ಉದ್ದನೆಯ ಟೋಪಿ, ಕುಂಕುಮದಿಂದ ಮುಖಕ್ಕೆ ಅಲಂಕಾರ, ಕಾಡಿಗೆಯಿಂದ ದಪ್ಪನೆಯ ಮೀಸೆ, ತಲೆಗೆ ಹೂವು, ಕೈಯಲ್ಲಿ ಮಾವಿನ ಸೊಪ್ಪು ಹಿಡಿದು ಕುಣಿಯುತ್ತಾರೆ. ಶ್ರೀರಂಗಪಟ್ಟಣ, ಗಂಜಾಂ, ಆರತಿ ಉಕ್ಕಡ, ಗುಂಡಾಪುರ, ಹುಸ್ಕೂರು, ದೊಡ್ಡರಸಿನಕೆರೆ, ಮಳವಳ್ಳಿ ಮುಂತಾದ ಸ್ಥಳಗಳ ರಂಗದ ಕುಣಿತ ನೋಡುಗರ ಕಣ್ಮನಗಳನ್ನು ಸೂರೆಗೊಳ್ಳುತ್ತವೆ.

## ನಾಟಕದ ಕಲೆ

ಗಂಗಾಮತಸ್ಥರು ಜಿಲ್ಲೆಯಲ್ಲಿ ಆರ್ಥಿಕ ಸಂಕಷ್ಟದಲ್ಲಿದ್ದರೂ, ಕೂಲಿ ಮಾಡಿದರೂ ಪೌರಾಣಿಕ ನಾಟಕವನ್ನು ಆಡುತ್ತಾರೆ. ಕನಿಷ್ಟ ಪಕ್ಷ ವರ್ಷಕ್ಕೆ ಒಂದೆರಡು ನಾಟಕವನ್ನಾದರೂ ಆಡುತ್ತಾರೆ. ನಾಟಕದ ಪಾತ್ರಧಾರಿಗಳಿಗೆ ಅನುಗುಣವಾಗಿ ತಮ್ಮ ಸಮುದಾಯದವರೆಲ್ಲ ಸೇರಿ, ಬೇಕಾಗುವ ಪಾತ್ರಧಾರಿಗಳನ್ನು ಆಯ್ಕೆ ಮಾಡುತ್ತಾರೆ. ಇವರು ನಾಟಕವನ್ನು ಕುಲದ ಮನೆ ಅಥವಾ ರಾಮಮಂದಿರದಲ್ಲಿ ಕಲಿಯುತ್ತಾರೆ. ಇವರು ಆಡುತ್ತಿದ್ದ ನಾಟಕಗಳು ಎಂದರೆ ಶನಿಮಹಾತ್ಮೆ, ಸಂಪೂರ್ಣರಾಮಾಯಣ, ಕುರುಕ್ಷೇತ್ರ, ಪಾಂಡವ ವಿಜಯ, ದಕ್ಷಬ್ರಹ್ಮ, ಕಂಸಶೂರನವಧೆ ಮೊದಲಾದವು. ಸಾಮಾನ್ಯವಾಗಿ ಶಿವರಾತ್ರಿ ಹಬ್ಬ, ಗೌರಿ ಹಬ್ಬ ಮತ್ತು ಆ ಗ್ರಾಮಕ್ಕೆ ಸಂಬಂಧಿಸಿದ ಗ್ರಾಮ ದೇವತೆಗಳ ಹಬ್ಬಗಳ ಸಂದರ್ಭದಲ್ಲಿ ನಾಟಕವನ್ನು ಆಡುತ್ತಾರೆ.

ಇವರು ನಾಟಕವನ್ನಷ್ಟೇ ಅಲ್ಲದೆ ಯಕ್ಷಗಾನದ ರೀತಿಯಲ್ಲಿ ಚಾವಡಿಯಲ್ಲಿ ಗಂಗೆಗೌರಿ ಕಥೆಯನ್ನು ಆಡುತ್ತಾರೆ. ಇಲ್ಲಿ ಒಂದು ವಿಶೇಷವೆಂದರೆ ಹಾರ್ಮೋನಿಯಂನ್ನು ಬಳಸುವುದಿಲ್ಲ. ಇಲ್ಲಿ ಕೇವಲ ತಾಳವನ್ನು ಮಾತ್ರ ಹಾಕುತ್ತಿರುತ್ತಾರೆ. ಪಾತ್ರಧಾರಿಗಳು ಬಂದು, ತಮ್ಮ ನಟನೆಯನ್ನು ಮಾಡುತ್ತವೆ. ಇದಕ್ಕೆ ತಕ್ಕಂತೆ ತಾಳವನ್ನು ಹಾಕಲಾಗುವುದು.

## ರಂಗೋಲಿ

"ಮನೆಗಳು ಹೇಗಿದ್ದರೇನು, ನಮ್ಮ ಸಂಪ್ರದಾಯಗಳನ್ನು ಮರೆಯಲು ಸಾಧ್ಯವೇ"[೭೬] ಎನ್ನುವ ವಕ್ತೃವಿನ ಮಾತು ನೂರಕ್ಕೆ ನೂರರಷ್ಟು ಸತ್ಯವಾಗಿದೆ. ಪ್ರತಿನಿತ್ಯ ಮನೆಯ

ಮುಂಬಾಗಿಲನ್ನು ಗುಡಿಸಿ, ಸಗಣಿ ನೀರನ್ನು ಹಾಕಿ ರಂಗೋಲಿಯನ್ನು ಹಾಕುವ ಪದ್ಧತಿ ಗಂಗಾಮತಸ್ಥರಲ್ಲಿ ಇದೆ. ರಂಗೋಲಿಯು ಪ್ರತಿ ಮನೆಯ ಅಂಗಳವನ್ನು ಸಿಂಗರಿಸುವ ಸಾಧನವಾಗಿದೆ. ರಂಗೋಲಿ ಪುಡಿಯಿಂದ ಚುಕ್ಕಿಗಳನ್ನು ಹಾಕಿ ಕಲಾತ್ಮಕವಾಗಿ ಶೃಂಗಾರ ಮಾಡುತ್ತಾರೆ.

ಹೀಗೆ ವಿವಿಧ ರೀತಿಯ ಕಲೆಗಳನ್ನು ಗಂಗಾಮತಸ್ಥರು ತಮ್ಮೊಳಗೆ ಹಿಡಿದಿಟ್ಟುಕೊಂಡಿದ್ದಾರೆ. ಇಂತಹ ಜನಪದ ಕಲೆಗಳು ಇವರ ಬದುಕಿಗೆ ತೃಪ್ತಿ ತಂದಂತಹವುಗಳು ಮತ್ತು ನೆಮ್ಮದಿಯನ್ನು ನೀಡಿದಂಥವು. ಆದುದ್ದರಿಂದ ಇವರ ಕಲೆಗಳನ್ನು ಸರ್ಕಾರ ಗುರುತಿಸಿ–ಪ್ರೋತ್ಸಾಹಿಸಿದರೆ ಗಂಗಾಮತಸ್ಥರ ಕಲೆಗಳು ಉಳಿಯುತ್ತವೆಯಲ್ಲದೆ, ಅವರ ಬದುಕಿಗೂ ಒಂದು ದಾರಿ ದೀಪವಾಗುತ್ತದೆ.

## ಜನಪದ ಕ್ರೀಡೆಗಳು

ಜನಪದ ಕ್ರೀಡೆಗಳು ಗ್ರಾಮೀಣ ಜನರ ಬದುಕಿನೊಂದಿಗೆ ಬೆರೆತುಕೊಂಡಿವೆ. ಮನೋರಂಜನೆಗೆ, ಶಾರೀರಿಕ ಬಲಸಂವರ್ಧನೆಗೆ ಎರಡಕ್ಕೂ ಇವು ಸಹಾಯಕವಾಗಿವೆ. ಹಳ್ಳಿ ಮಕ್ಕಳು ಚಿಕ್ಕವರಾಗಿರುವಾಗಲೇ ಆಡುವುದನ್ನು ಸಹಜವಾಗಿ ರೂಢಿಸಿಕೊಂಡಿರುತ್ತಾರೆ. "ಯಾವುದೇ ಸಮುದಾಯದ ಸಂಸ್ಕೃತಿ ವಿಶೇಷಗಳನ್ನು ತಿಳಿದುಕೊಳ್ಳಲು ಆ ಸಮಾಜದಲ್ಲಿ ಚಾಲ್ತಿಯಲ್ಲಿರುವ ಆಟಗಳ ಪರಿಶೀಲನೆಯನ್ನು ನಡೆಸಬೇಕಾಗುತ್ತದೆ. ಕ್ರೀಡೆ ಅಥವಾ ವಿನೋದದ ಯಾವುದೇ ರೂಪ ಆಟವೆನಿಸಿಕೊಳ್ಳುತ್ತದೆ. ಆಟ ಎಲ್ಲರಲ್ಲೂ ಸಾಮಾನ್ಯವಾಗಿರುವ ಭಾವ ಪ್ರದರ್ಶಕ ನಡವಳಿಕೆಯ ಒಂದು ರೂಪ. ಕಲೆ, ಭಾಷೆ ಮತ್ತು ಧರ್ಮಗಳಂತೆ ಆಟವೂ ಒಂದು ಸಂಕೀರ್ಣ ಕಲ್ಪನೆ".[೭೭] ಆಟಗಳ ಉದ್ದೇಶ ಮನೋರಂಜನೆಯಾದರೂ, ಮಾನಸಿಕ, ಬೌದ್ಧಿಕ, ದೈಹಿಕ ವಿಕಾಸವೂ ತನಗೆ ಅರಿವಿಲ್ಲದೆಯೇ ಆಗಿರುತ್ತದೆ.

ಆಟಗಳು ಇಂದು ನಿನ್ನೆಯವಲ್ಲ. ಬಗೆ ಬಗೆಯ ಆಟಗಳು ಐದು ಸಾವಿರ ವರ್ಷಗಳ ಹಿಂದೆಯೇ ಇದ್ದುವೆಂಬುದಕ್ಕೆ ಪುರಾಣಗಳಿವೆ. ಅಂದಿನ ಈಜಿಪ್ಟಿನಲ್ಲಿ ಮಲ್ಲಯುದ್ಧ, ಅಂಗಸಾಧನೆ, ಭಾರ ಎತ್ತುವುದು–ಎಸೆಯುವುದು, ಚೆಂಡಾಟ, ಗೂಳಿಕಾಳಗ, ಗಾಳಹಾಕಿ ಮೀನು ಹಿಡಿಯುವುದು ಜನಪ್ರಿಯವಾಗಿದ್ದವು. ಬೊಂಬೆ, ಆಟಿಕೆದೋಣಿ, ಗೋಲಿ, ಬುಗುರಿ, ಚೆಂಡು ಕೆಲ ಹಲಗೆ ಆಟಗಳು ಆ ಕಾಲದಲ್ಲೇ ಮಕ್ಕಳ ಆಟದ ಸಾಮಗ್ರಿಗಳಾಗಿ ರೂಪುಗೊಂಡಿದ್ದವು".[೭೮] ಇಲ್ಲಿ ಆಟಗಳ ಪ್ರಾಚೀನತೆಯನ್ನ ಗುರುತಿಸಬಹುದು. ಮಾನವ ಒಂದು ಕಡೆ ವಾಸ ಮಾಡಲು ಎಂದು ಪ್ರಾರಂಭಿಸಿದನೋ ಅಂದೇ ಕ್ರೀಡೆಗಳ ಉಗಮವೂ ಪ್ರಾರಂಭವಾಗಿದೆ.

ಮಂಡ್ಯ ಜಿಲ್ಲೆಯ ಗಂಗಾಮತಸ್ಥರು, ಇತರ ಸಮುದಾಯದವರಂತೆಯೇ, ವಿವಿಧ ಕ್ರೀಡೆಗಳನ್ನ ಸಾಂಪ್ರದಾಯಿಕವಾಗಿ ಹಾಗೂ ನವೀನವಾಗಿ ಆಡುವುದನ್ನು ಕಾಣಬಹುದು. ಇವರು ಆಡುವ ಆಟಗಳನ್ನು ಮೂರು ವಿಭಾಗವಾಗಿ ಮಾಡಿಕೊಳ್ಳಬಹುದು. ಮಕ್ಕಳ ಆಟಗಳು, ಗಂಡಸರ ಆಟಗಳು, ಹೆಂಗಸರ ಆಟಗಳು.

## ಮಕ್ಕಳ ಆಟಗಳು

ಮಕ್ಕಳಾಟಗಳು ಮನೋರಂಜನೆಯನ್ನೇ ಮುಖ್ಯ ಗುರಿಯಾಗಿಸಿಕೊಂಡಿರುತ್ತವೆ. ಮಕ್ಕಳು ಸಂತೋಷದಿಂದ ಆಡುತ್ತ ಬೆಳೆಯಬೇಕೆಂಬ ಸಾಮಾಜಿಕ ಪ್ರಜ್ಞೆ, ಮಕ್ಕಳ ನೂರಾರು ಆಟಗಳಿಗೆ ಜನ್ಮ ಕೊಟ್ಟಿವೆ. ಮಕ್ಕಳ ಆಟಗಳನ್ನು ಗಂಡು ಮಕ್ಕಳ ಆಟ, ಹೆಣ್ಣುಮಕ್ಕಳ ಆಟಗಳೆಂದು ವಿಭಜಿಸಬಹುದು. "ಮಕ್ಕಳ ಆಟಗಳನ್ನು ಸಾಮಾನ್ಯವಾಗಿ ದೊಡ್ಡವರು ಆಡುವುದಿಲ್ಲ, ದೊಡ್ಡವರ ಆಟಗಳಲ್ಲಿ ಮಕ್ಕಳು ಸಹ ಭಾಗವಹಿಸುತ್ತಾರೆ. ಸಾಮಾನ್ಯವಾಗಿ ಹುಡುಗಿಯರ ಆಟಗಳನ್ನು ಹುಡುಗರು ಆಡುವುದಿಲ್ಲ. ಹುಡುಗರ ಆಟಗಳನ್ನು ಹುಡುಗಿಯರು ಆಡುವುದಿಲ್ಲ. ಹುಡುಗಿಯರು ಗಂಡು ಹುಡುಗರ ಆಟಗಳಲ್ಲಿ ಭಾಗವಹಿಸಿದರೆ "ಗಂಡು ಬೀರಿ" ಎಂತಲೂ, ಹುಡುಗರು ಹುಡುಗಿಯರ ಆಟಗಳಲ್ಲಿ ಭಾಗವಹಿಸಿದರೆ "ಹೆಣ್ಣಿಗ" ಎಂದು ಬಿರುದು ದೊರೆಯುವುದು. ಮಕ್ಕಳು ಎಲ್ಲರೊಡನೆಯೂ ಭಾಗವಹಿಸಬಹುದು."[೭೯]

ವೈವಿದ್ಯತೆಯ ದೃಷ್ಟಿಯಿಂದ ಮಕ್ಕಳ ಆಟಗಳೇ ಹೆಚ್ಚು. ಗಂಡು ಮಕ್ಕಳ ಆಟಗಳಲ್ಲಿ ಕೇವಲ ಗಂಡು ಮಕ್ಕಳು ಮಾತ್ರ ಭಾಗವಹಿಸಿದರೆ, ಹೆಣ್ಣು ಮಕ್ಕಳ ಆಟಗಳಲ್ಲಿ ಕೇವಲ ಹೆಣ್ಣು ಮಕ್ಕಳು ಮಾತ್ರ ಭಾಗವಹಿಸುತ್ತಾರೆ. ಅಪರೂಪಕ್ಕೆ ಅಪವಾದವೆಂಬಂತೆ ಕೆಲವು ಆಟಗಳಲ್ಲಿ ಹೆಣ್ಣು ಮಕ್ಕಳು ಮತ್ತು ಗಂಡು ಮಕ್ಕಳುಗಳು ಸೇರಿಯೇ ಆಡುತ್ತಾರೆ.

## ಕಣ್ಣಾ ಮುಚ್ಚಾಲೆ

ಕಣ್ಣಾ ಮುಚ್ಚಾಲೆ ಆಟವನ್ನು ಬರೇ ಗಂಡು ಮಕ್ಕಳು, ಬರೇ ಹೆಣ್ಣು ಮಕ್ಕಳು, ಒಮ್ಮೊಮ್ಮೆ ಹೆಣ್ಣು-ಗಂಡು ಮಕ್ಕಳೆಲ್ಲ ಕೂಡಿ ಆಡುತ್ತಾರೆ. ಹೆಸರೇ ಹೇಳುವಂತೆ ಇದು ಕಣ್ಣನ್ನು ಮುಚ್ಚಿ ಆಡುವ ಆಟ. ಇದಕ್ಕೆ ಇಂತಿಷ್ಟೇ ಸಂಖ್ಯೆಯ ಮಕ್ಕಳಿರಬೇಕೆಂದೇನು ಇಲ್ಲ. ಕನಿಷ್ಟ ಪಕ್ಷ ೫-೬ ಮಂದಿ ಮಕ್ಕಳಾದರೂ ಸಾಕಾಗುತ್ತದೆ. ಮಕ್ಕಳೆಲ್ಲಾ ಸುತ್ತಲೂ ನಿಂತು ೧ ರಿಂದ ೧೦ರವರೆಗೆ ಆಟದ ನಾಯಕನೆನಿಸಿಕೊಳ್ಳುವವನು ಒಬ್ಬೊರನ್ನು ಮುಟ್ಟಿ ಅಥವಾ ಕೈ ತೋರಿಸಿ ಎಣಿಸುತ್ತಾನೆ. ಮೊದಲಿಗೆ ಹತ್ತರ ಸಂಖ್ಯೆಯಾದವನು ಗೆದ್ದ ಹಾಗೆ. ಅದಾದ ನಂತರದಲ್ಲಿ ಮತ್ತೆ ಒಂದರಿಂದ ಹತ್ತರವರೆಗೆ

ಎಣಿಸುತ್ತಾನೆ. ಕೊನೆಯಲ್ಲಿ ಯಾವನು ಒಂದರ ಸಂಖ್ಯೆಯಾಗುತ್ತಾನೋ ಅವ ಸೋತ ಹಾಗೆ. ಅವ ಕಣ್ಣು ಮುಚ್ಚಿಕೊಳ್ಳಬೇಕು. ಹೆಣ್ಣು ಮಕ್ಕಳು ಕಣ್ಣಾ ಮುಚ್ಚಾಲೆಯಲ್ಲಿ ಸೋತವರನ್ನು ಆರಿಸುವಾಗ ಹೀಗೆ ಆಡುತ್ತಾರೆ.

ಕಾಂಚನ ಮಿನಿ ಮಿನಿ
ಡಾಂ ಡೂಂ
ಠಸ್ಸ ಪುಸ್ಸ
ಕೊಯ್ ಕೊಠಾರ್

ಮೇಲಿನಂತೆ ಹಾಡುತ್ತಾ, ಒಬ್ಬೊರಿಗೂ ಕೈ ತೋರಿಸುತ್ತಾ ಒಂದೊಂದು ಪದದಿಂದ ಗುರುತಿಸುತ್ತಾರೆ. 'ಕೊಠಾರ್' ಪದ ಯಾರಿಗೆ ಕೊನೆಗೊಳ್ಳುತ್ತದೋ ಅವರು ಗೆದ್ದ ಹಾಗೆ. ಹೀಗೆ ಸೋತವರನ್ನು ಗುರುತಿಸುವವರೆಗೆ ಆಡುತ್ತಾರೆ. ಕೊನೆಗೆ 'ಕೊಠಾರ್' ಪದ ಯಾರಿಗೆ ಬರುವುದಿಲ್ಲವೋ ಅವರು ಸೋತ ಹಾಗೆ. ಸೋತವರಿಗೆ ಕಣ್ಣು ಮುಚ್ಚುವವರು ಹೀಗೆ ಹಾಡುತ್ತಾರೆ. ಕೆಲವು ಸಾರಿ ಕಣ್ಣು ಮುಚ್ಚುವವರು ಹಿರಿಯ ಅಜ್ಜಿಯಾಗಬಹುದು. ಆಗ ಹಾಡುವ ಹಾಡೆಂದರೆ –

"ಕಣ್ಣಾ ಮುಚ್ಚೆ ಕಾಡೇ ಗೂಡೆ
ಉದ್ದಿನ ಮೂಟೆ ಉರುಳೆ ಹೋಯ್ತು
ನಮ್ಮಯ ಹಕ್ಕಿ ಬಿಟ್ಟೇ ಬಿಟ್ಟೇ"

ಎಂದು ಸೋತ ವ್ಯಕ್ತಿಯ ಕಣ್ಣು ಮುಚ್ಚಿದ ಕೈಯನ್ನು ಬಿಡುತ್ತಾರೆ. ಅಷ್ಟರಲ್ಲಿ ಗುಂಪಿನ ಎಲ್ಲಾ ಮಕ್ಕಳು ಸಂದಿ-ಗೊಂದಿ, ಹಿತ್ತಲು, ಮನೆಯ ಮೂಲೆ, ಬಾಗಿಲ ಹಿಂದೆ ಮುಂತಾದ ಸ್ಥಳಗಳಲ್ಲಿ ಅವಿತುಕೊಳ್ಳುತ್ತಾರೆ. ಸೋತ ವ್ಯಕ್ತಿ ಅವರು ಅವಿತಿರುವ ಎಡೆ ಹೋಗಿ ಅವರನ್ನು ಕರೆತಂದು ಅವರ ಹೆಸರನ್ನು ಹೇಳಿ ಇಂತಹವರು ಸೋತರೆಂದು ಕೂಗುತ್ತಾರೆ. ಆತ ತಲೆಮರಿಸಿಕೊಂಡಿದ್ದ ಮಂದಿ ಎಲ್ಲಾ ಬರುತ್ತಾರೆ. ಮತ್ತೆ ಸೋತವನಿಗೆ ಕಣ್ಣು ಮುಚ್ಚಿದ ಮೇಲೆ ತಿರುಗಿ ತಲೆ ಮರೆಸಿಕೊಳ್ಳುತ್ತಾರೆ. ಹೀಗೆ ಕಣ್ಣಾಮುಚ್ಚಾಲೆ ಆಟವನ್ನು ಆಡುತ್ತಾರೆ.

## ಮರಕೋತಿ ಆಟ

ಗಂಗಾಮತಸ್ಥರ ಮಕ್ಕಳಿಗೆ ಬಹುಪ್ರಿಯವಾದ ಆಟವಿದು. ಈ ಆಟವನ್ನು ಗಂಡು ಮಕ್ಕಳು ಮಾತ್ರ ಆಡುತ್ತಾರೆ. ಇದನ್ನು ಹೆಚ್ಚಾಗಿ ಬೆಳಗ್ಗೆ ಸಂಜೆ ಆಡುತ್ತಾರೆ. ಮರಕೋತಿ ಆಟದಲ್ಲಿ ಎಂಟು-ಹತ್ತು ಮಂದಿ ಭಾಗವಹಿಸುತ್ತಾರೆ. ಮಂಗ ಮಾಡಲು ನಿರ್ದಿಷ್ಟ ಸ್ಥಳದಿಂದ ಎಲ್ಲರೂ ಓಡಿ ಬಂದು

ಏರುವ ಮರ ಮುಟ್ಟಬೇಕು. ಕೊನೆಗೆ ಉಳಿದವನೇ ಮಂಗ. ಆ ಮರದ ಕೆಳಗೆ ಒಂದು ವೃತ್ತ ಬರೆದು ಅದರಲ್ಲಿ ಕೋಲನ್ನು ಇಟ್ಟಿರುತ್ತಾರೆ. ಅದನ್ನು ಬೀಸಿ ದೂರ ಒಗೆಯುತ್ತಾರೆ. ಕೋತಿಯಾದವನು ಅದನ್ನು ತಂದು ವೃತ್ತದಲ್ಲಿ ಹಾಕಿ ಮರದ ಅಡಿಯಿಂದ ಮೇಲಕ್ಕೆ ಹಾರಿ ಯಾರನ್ನಾದರೂ ಮುಟ್ಟಲು ನೋಡುತ್ತಾರೆ. ಬಲವಾಗಿ ಕೊಂಬೆ ಅಲ್ಲಾಡಿಸಿ ಬೀಳಿಸಲು ನೋಡುತ್ತಾನೆ. ಸಾದ್ಯವಾದರೆ ತಕ್ಷಣ ಹತ್ತಿ ಮುಟ್ಟಲು ನೋಡುತ್ತಾನೆ. ಹತ್ತುವಾಗ ಯಾರೂ ಕೋಲು ಮುಟ್ಟದಂತೆ ಎಚ್ಚರ ವಹಿಸಬೇಕು. ಇವನು ಬೇರೆಯವರನ್ನು ಮುಟ್ಟಲು ಅಸಕ್ತನಾಗಿದ್ದಾಗ ಯಾರಾದರೂ ವೃತ್ತಕ್ಕೆ ಜಿಗಿದು ಬಂದು ಬೇಗ ಕೋಲು ಒಗೆಯುತ್ತಾರೆ. ಮತ್ತೆ ಕೋತಿ ಅದನ್ನು ತಂದು ಇಡಬೇಕು. ಸಾಮಾನ್ಯವಾಗಿ ಮರ ಹತ್ತಲು ಬಾರದವರು ಈ ಆಟದಲ್ಲಿ ಸೋಲುತ್ತಾರೆ.

## ಲಗೋರಿ ಆಟ

ಗಂಡು ಮಕ್ಕಳ ಆಟಗಳಲ್ಲಿ ಲಗೋರಿಯು ಒಂದಾಗಿದೆ. ಇದಕ್ಕೆ ಚಂಡು ಹಾಗೂ ಏಳು ಕಲ್ಲು ಅಥವಾ 'ಬಕರೆ' ಚೂರುಗಳು ಬೇಕಾಗುತ್ತವೆ. ಈ ಆಟದಲ್ಲಿ ಎರಡು ಗುಂಪುಗಳಿರುತ್ತವೆ. ಒಂದೊಂದು ಗುಂಪಿನಲ್ಲಿಯೂ ಕನಿಷ್ಟ ನಾಲ್ಕು ಹುಡುಗರು ಇರಬೇಕು. ಗರಿಷ್ಟ ಎಷ್ಟು ಮಂದಿ ಬೇಕಾದರೂ ಇರಬಹುದು. ಆದರೆ ಎರಡು ಗುಂಪಿನಲ್ಲೂ ಸಮ ಸಂಖ್ಯೆಯಲ್ಲಿ ಸ್ಪರ್ಧಿಗಳಿರಬೇಕು. ಸಂಖ್ಯೆಯ ಮೇಲೆ ಮೈದಾನವನ್ನು ನಿರ್ಮಾಣ ಮಾಡಿಕೊಳ್ಳುತ್ತಾರೆ.

ಒಂದು ನಾಣ್ಯವನ್ನು ತೆಗೆದುಕೊಂಡು ಎರಡು ಗುಂಪಿನವರು ರಾಜ ಬೇಕೋ, ರಾಣಿ ಬೇಕೋ ಎಂದು ಕೇಳುತ್ತಾರೆ. ಅವರು ಕೇಳಿದು ಮೇಲೆ ಮುಖವಾಗಿ ಬೀಳುತ್ತದೋ, ಅವರು ಮೊದಲು ಚಂಡನ್ನು ಹೊಡೆಯುತ್ತಾರೆ. ಮೈದಾನದಲ್ಲಿ ವೃತ್ತವನ್ನು ಬರೆದು ಆ ಏಳು ಕಲ್ಲು ಅಥವಾ ಬಕರೆ ಚೂರುಗಳನ್ನು ಒಂದರ ಮೇಲೊಂದರಂತೆ ಜೋಡಿಸುತ್ತಾರೆ. ಚೆಂಡು ಹೊಡೆಯುವ ಗುಂಪಿನವರು ಜೋಡಿಸಿಟ್ಟಿರುವ ಕಲ್ಲಿಗೆ ಬಲವಾಗಿ ಹೊಡೆಯುತ್ತಾರೆ. ಚೆಂಡು ಹೊಡೆಯುವ ಗುಂಪಿನವರು ಆ ಚಂಡನ್ನು ಹಿಡಿದು, ಚೆಂಡು ಹೊಡೆದ ಗುಂಪಿನವರಿಗೆ ಚದುರಿದ ಕಲ್ಲುಗಳನ್ನು ಜೋಡಿಸುತ್ತಿರುವಾಗ ಹೊಡೆಯುತ್ತಾರೆ. ಅವರು ಜೋಡಿಸುವ ಮೊದಲು ಹೊಡೆದರೆ ಅವರಿಗೆ ಒಂದು ಅಂಕ ದೊರೆತರೆ, ಚೆಂಡು ಹೊಡೆದ ಗುಂಪಿನವರು ಯಥಾ ಪ್ರಕಾರ ಜೋಡಿಸಿ ವೃತ್ತಾಕಾರದ ಗೆರೆ ಎಳೆದು ಲಗ್ಗೆ ಎಂದರೆ ಇವರಿಗೊಂದು ಅಂಕ ದೊರೆತಂತೆ. ನಿಗಧಿತ ಅಂಕಗಳನ್ನು ಮೊದಲಿಗೆ ಯಾರುಗಳಿಸುತ್ತಾರೋ ಆ ಗುಂಪಿನವರು ಗೆದ್ದಹಾಗೆ. ಇಂತಹ ಕ್ರೀಡೆಯನ್ನು ಆಡುವುದರಿಂದ ಮನಸ್ಸಿಗೆ ಮನರಂಜನೆ ಸಿಗುವುದರೊಂದಿಗೆ ದೇಹಕ್ಕೆ ವ್ಯಾಯಾಮ ಮಾಡಿದಂತೆಯೂ ಆಗುತ್ತದೆ.

## ಗಿಲ್ಲಿ ದಾಂಡು

ಗಿಲ್ಲಿ ದಾಂಡು ಆಟವನ್ನು ಚಿಣ್ಣಿಕೋಲು ಆಟ ಎಂತಲೂ ಕರೆಯುತ್ತಾರೆ. ಈ ಆಟವನ್ನು ಗಂಡುಮಕ್ಕಳು ಮಾತ್ರ ಆಡುತ್ತಾರೆ. ಈ ಆಟಕ್ಕೆ ಬೇಕಾಗಿರುವ ಸಾಮಗ್ರಿಗಳೆಂದರೆ ಮೊಳದುದ್ದದ ದಾಂಡು. ಇದು ಎರಡಿಂಚು ಗಾತ್ರದ್ದಾಗಿರಬೇಕು. ಬೆರಳುದ್ದದ ಗಿಲ್ಲಿ. ಅದರ ಎರಡು ತುದಿಯನ್ನು ಕೆತ್ತಿ ಚೂಪು ಮಾಡಿರಬೇಕು.

ಇದನ್ನು ಆಡುವುದಕ್ಕೆ ಕನಿಷ್ಟ ಎರಡು ಮಂದಿ ಬೇಕು. ಗರಿಷ್ಟ ಹತ್ತು ಮಂದಿಯೂ ಆಡಬಹುದು. ಎರಡು ಗುಂಪುಗಳಲ್ಲಿ ಸಮ ಸಂಖ್ಯೆಯ ಸ್ಪರ್ಧಿಗಳಿರಬೇಕು. ಮೊದಲು ಯಾರು ಆಡಬೇಕು ಎಂಬುದನ್ನು ನಾಣ್ಯ ಚಿಮ್ಮಿಸಿ ನಿರ್ಧರಿಸುತ್ತಾರೆ. ಆಟ ಆಡುವವನು ಒಂದು ಚಿಕ್ಕ ಗುಳಿಯಲ್ಲಿ ಚಿಣ್ಣಿ ಇಟ್ಟು ಅದಕ್ಕೆ ದೊಣ್ಣೆ ತಾಗಿಸಿಡುತ್ತಾರೆ. 'ರೆಡಿಯೋ' ಎಂದು ಕೇಳಿದರೆ 'ರೆಡಿ' ಎಂದು ಹೇಳುತ್ತಾರೆ. ದಾಂಡಿನಿಂದ ಚಿಣ್ಣಿಯನ್ನು ಹಾರಿಸುತ್ತಾನೆ. ಗುಳಿಯ ಹತ್ತಿರ ದಾಂಡು ಇಡುತ್ತಾನೆ. ಅದಕ್ಕೆ ಎದುರಾಳಿ ಚಿಣ್ಣಿ ತಾಗಿಸಬೇಕು. ತಾಗಿಸಿದರೆ ಆಡುತ್ತಿರುವವನ ಆಟ ಮುಗಿದಂತೆ. ಇಲ್ಲದಿದ್ದರೆ ಮತ್ತೆ ಚಿಣ್ಣಿ ಹಾರಿಸಿ ಅಳತೆ ಹೇಳುತ್ತಾನೆ. ಇಷ್ಟು 'ದಾಂಡು' ಎಂದು ಅಂದಾಜು ಹೇಳಿ ಅದು ಸರಿಯಾದರೆ ಹಾಗೆಯೇ ಆಟ ಮುಂದುವರಿಸುತ್ತಾನೆ. ಆಟ ಆಡುವ ಕಾಲದಲ್ಲಿ 'ಕ್ಯಾಚ್' ಕೊಟ್ಟರೆ ಅವನ ಆಟ ಮುಗಿದು ಮತ್ತೊಬ್ಬ ಬರುತ್ತಾನೆ. ಚಿಣ್ಣಿಯ ತುದಿಗೆ ಏಟು ಕೊಟ್ಟು ಅದು ಪುಟನೆಗೆದಾಗ ಅದನ್ನು ದಾಂಡಿನಿಂದ ದೂರ ಹೋಗುವಂತೆ ಬಾರಿಸುತ್ತಾನೆ. ಅದನ್ನು ಎದುರು ಗುಂಪಿನಿಂದ ಓರ್ವ ದಾಂಡಿಗೆ ತಾಗಿಸಬೇಕು. ದೂರವಾದ್ದರಿಂದ ತಾಗುವುದು ಕಷ್ಟ. ಮತ್ತೆ ಚಿಣ್ಣಿಯನ್ನು ಪುಟ ಹಾರಿಸಿ, ದಾಂಡಿನಿಂದ ಬೀಸಿ ಹೊಡೆಯುತ್ತಾನೆ. ಚಿಣ್ಣಿಯನ್ನು ಯಾರಾದರೂ ಹಿಡಿದರೆ ಆಟ ಮುಗಿದಂತೆ. ಚಿಣ್ಣಿಯನ್ನು ಗಿಲ್ಲಿಯಂತಲೂ, ದಾಂಡನ್ನು ಕೋಲೆಂತಲೂ ಕರೆಯುತ್ತಾರೆ. ಸೋತ ವ್ಯಕ್ತಿಗೆ, ಗೆದ್ದ ಪಕ್ಷದವರು ಗುರುತಿಸಿದ ಸ್ಥಳದಲ್ಲಿ 'ಗುಳಿ' ಇರುವವರೆಗೆ ಕುಂಟಿಕೊಂಡು ಬರಬೇಕು. ಕುಂಟಿಕೊಂಡು ಬರುವಾಗ, ಮಧ್ಯದಲ್ಲಿ ನೆಲಕ್ಕೆ ಕಾಲುತಾಕಿಸಿದರೆ, ಆತ ಮತ್ತೆ ಮೊದಲಿನಿಂದಲೇ ಕುಂಟಿಕೊಂಡು ಬರಬೇಕು. ಈ ಆಟವಾಡುವುದರಿಂದ ಮಕ್ಕಳಿಗೆ ದೈಹಿಕ ವ್ಯಾಯಾಮವಾಗುತ್ತದೆ. ಬುದ್ಧಿಶಕ್ತಿಯು ಚುರುಕುಗೊಳ್ಳುತ್ತದೆ.

**ಪೇಂದದ ಆಟ**

ಚಚ್ಚೌಕದ ಮಣೆಯೊಂದನ್ನ ಬರೆದು ಅದರ ಮಧ್ಯದಲ್ಲಿ ಗೆರೆಯೊಂದನ್ನು ಹಾಕಿ, ಅದರ ಮೇಲೆ ಗೋಲಿಗಳನ್ನು ಇಟ್ಟು, ಎಷ್ಟು ಮಂದಿ ಆಟವಾಡುತ್ತಿರುತ್ತಾರೋ ಅವರೆಲ್ಲರೂ ಒಂದೊಂದು ಗೋಲಿಯನ್ನು ಇಡಬೇಕು. ಐದಾರು ಮಾರು ದೂರದ ಅಂತರದಿಂದ ಮತ್ತೊಂದು ಗೋಲಿಯನ್ನು ಹಾಕುತ್ತಾರೆ. ಪೇಂದ ಮಣೆಯ ಹತ್ತಿರ ಯಾರ ಗೋಲಿ ಹೋಗುತ್ತದೋ ಅವರು ತಮ್ಮ ಗೋಲಿ ಇದ್ದ ಕಡೆಯಿಂದ ಗೇಣೊಂದನ್ನು ಹಾಕಿ ಪೇಂದದ ಒಳಗಿರುವ ಗೋಲಿಗೆ ಎಡಗೈನ ಮೂರನೇ ಬೆರಳಿನಿಂದ ಹೊಡೆಯುತ್ತಾರೆ. ಹಾಗೆ ಹೊಡೆದಾಗ ಪೇಂದದಿಂದ ಎಷ್ಟು ಗೋಲಿಗಳು ಹೊರ ಬರುತ್ತವೋ ಅವನ್ನೆಲ್ಲ ಹೊಡೆದವ ತೆಗೆದುಕೊಳ್ಳುತ್ತಾನೆ. ಆಕಸ್ಮಾತ್ ಹಾಗೆ ಹೊಡೆದವನ ಗೋಲಿ ಪೇಂದದೊಳಗೆ ಸಿಲುಕಿಕೊಂಡರೆ ಅದನ್ನು ಆ ಮಣೆಯೊಳಗೆ ಇಡಬೇಕಾಗುತ್ತದೆ. ಆ ಆಟದ ಉದ್ದೇಶ ಹೆಚ್ಚೆಚ್ಚು ಗೋಲಿಗಳನ್ನು ಗೆಲ್ಲುವುದೇ ಆಟದ ಗುರಿಯಾಗಿರುತ್ತದೆ. ಈ ಆಟವು ಗಂಡು ಮಕ್ಕಳ ಆಟವಾಗಿದೆ.

**ಮೇರಿ ಆಟ**

ಈ ಆಟವೂ ಸಹ ಗಂಡು ಮಕ್ಕಳ ಆಟವಾಗಿದೆ. ಮಣೆಯೊಂದನ್ನು ಬರೆದು ಅದರಲ್ಲಿ ಮೂರು ಗುಳಿಗಳನ್ನು ತೋಡುತ್ತಾರೆ. ಮೂರು ಗೋಲಿಗಳನ್ನು ತೆಗೆದುಕೊಂಡು ಮೊದಲಿಗೆ ಎರಡು ಗೋಲಿಗಳನ್ನು ಮೂರ್ನಾಲ್ಕು ಮಾರು ದೂರದಲ್ಲಿ ನಿಂತು ಈ ಮಣೆಯೊಳಗೆ ಎಸೆಯುತ್ತಾರೆ. ಹಾಗೆ ಎಸೆದ ಗೋಲಿಗಳನ್ನು ಯಾವುದಾದರೊಂದು ಮಣೆಯೊಳಗೆ ಇದ್ದರೆ, ಅದು ಇರುವ ಸ್ಥಳವನ್ನು ಗಮನಿಸಿ ಹಿಂತಿ, ಮುಂತಿ, ಮೇಗ ಎನ್ನುತ್ತಾ ಯಾವುದಾದರೊಂದಕ್ಕೆ ಹೊಡೆಯಲು ಹೇಳುತ್ತಾನೆ. ಎದುರಾಳಿ ಹೇಳಿದ ಗೋಲಿಗೆ ಹೊಡೆದರೆ ಅವ ಗೆದ್ದ ಹಾಗೆ.

ಮೊದಲು ಮೇರಿಯೊಳಗೆ ಹಾಕಿದ ಎರಡು ಗೋಲಿಗಳು ಮಣೆಯಿಂದ ಹೊರಕ್ಕೆ ಬಂದರೆ ಆಟದಲ್ಲಿ ಸೋತ ಹಾಗೆ. ಒಂದು ಗೋಲಿ ಹೊರ. ಬಂದರೆ ಮಣೆಯ ಗೆರೆಯ ಮೇಲಿಟ್ಟು ಹೊಡೆಯಲು ಹೇಳುತ್ತಾರೆ. ಹಾಗೆ ಹೊಡೆಯುವಾಗ ಆ ಮಣೆಯಿಂದ ಆಚೆಗೆ ಗೋಲಿ ಬಿದ್ದರೆ ಅವ ಸೋತಹಾಗೆ. ಈ ಮೇರಿ ಆಟಕ್ಕೆ ಹಣ, ಕಾಸನ್ನು ಕಟ್ಟಿ ಆಡುತ್ತಾರೆ. ದುಡ್ಡು ಕಾಸು ಗೆಲ್ಲುವುದೇ ಈ ಆಟದ ಗುರಿಯಾಗಿದೆ ಎಂದು ಹೇಳಬಹುದು.

## ಬುಗರಿಯಾಟ

ಬುಗರಿಯಾಟವು ಸಹ ಗಂಡು ಹುಡುಗರ ಆಟವಾಗಿದೆ. ಹಲಸು, ಹಾಲೆ, ಹೊನ್ನೆ ಮರದ ಕೊಂಬೆಯಿಂದ ಹುಡುಗರೇ ಬುಗುರಿ ಮಾಡಿಕೊಳ್ಳುತ್ತಾರೆ. ಅದರ ಮಧ್ಯದ ಚೂಪು ಮಾಡಿದ ಜಾಗಕ್ಕೆ ನೇರವಾಗಿ ಹೋಗುವಂತೆ ಮೊಳೆ ಹೊಡೆಯುತ್ತಾರೆ. ಈ ಆಟವನ್ನು ಆಡಲು ಕನಿಷ್ಟ ಎರಡು ಮಂದಿ ಆಟಗಾರರು ಬೇಕಾಗುತ್ತದೆ. ಗರಿಷ್ಟ ಎಷ್ಟು ಮಂದಿ ಬೇಕಾದರೂ ಈ ಆಟವನ್ನು ಆಡಬಹುದು. ಬುಗುರಿಗೆ, ಸುತ್ತಲಿದಾರ ಅಥವಾ ಬಟ್ಟೆಯ ತುಂಡು ಹೊಸೆದು ಮಾಡಿದ ಚಾಟಿ ಸುತ್ತಿ ಆಟಗಾರರೆಲ್ಲ ಒಟ್ಟಿಗೆ ಏಕಕಾಲಕ್ಕೆ ನೆಲಕ್ಕೆ ಬಿಡುತ್ತಾರೆ. ನೆಲಕ್ಕೆ ಬಿಟ್ಟ ಬುಗುರಿಯನ್ನು ಅದೇ ಚಾಟಿಯಿಂದ ಮೇಲಕ್ಕೆ ಎತ್ತಿಕೊಳ್ಳುತ್ತಾರೆ.

ಹಾಗೆ ಬುಗುರಿಯನ್ನು ತೆಗೆಯುವಾಗ ಯಾರು ನೆಲಕ್ಕೆ ಬೀಳಿಸುತ್ತಾರೋ ಅಥವಾ ಕೊನೆಯಲ್ಲಿ ಯಾರು ಬುಗುರಿಯನ್ನು ಮೇಲಕ್ಕೆ ಎತ್ತುತ್ತಾರೋ ಅವರು ಸೋತ ಹಾಗೆ. ಆಟಗಾರರೆಲ್ಲ ಸೇರಿ ನೆಲದ ಮೇಲೆ ಬುಗುರಿಯ ಮೊಳೆಯಿಂದ ವೃತ್ತವೊಂದನ್ನು ಬರೆಯುತ್ತಾರೆ. ಸೋತವನ ಬುಗುರಿಯನ್ನು ವೃತ್ತದೊಳಗೆ ಇಟ್ಟು ತಮ್ಮ ಬುಗುರಿಗಳಿಗೆ ಚಾಟಿ ಸುತ್ತಿ ಬುಗುರಿ ಬಿಟ್ಟು ವೃತ್ತದಲ್ಲಿರುವ ಬುಗುರಿಯನ್ನು ಹೊರ ಹೊರಡಿಸುತ್ತಾರೆ. ಬುಗುರಿಯನ್ನ ಹೊರ ಹೊರಡಿಸಿದವನಿಗಿಂತ ಮೊದಲು ಬುಗುರಿಯನ್ನ ಆಡಲು ಬಿಟ್ಟ ಮೇಲೆ ಎತ್ತಿದರೆ ಬುಗುರಿ ಹೊಡೆದವ ಸೋತ ಹಾಗೆ. ಆಟದಲ್ಲಿ ನಿಗಧಿ ಪಡಿಸಿದಷ್ಟು ಸಲ ಆ ಬುಗುರಿಯನ್ನು ಹೊರಕ್ಕೆ ಓಡಿಸಿದ ಮೇಲೆ ಸೋತವನ ಬುಗುರಿಯನ್ನು ತೆಗೆದುಕೊಂಡು ಗೆದ್ದವನ ಬುಗುರಿಯ ಮೊಳೆಯಿಂದಲೇ ಆ ಬುಗುರಿಯನ್ನು ಸೀಳಿಯು ಬಿಡುತ್ತಾರೆ. ಇದೊಂದು ಪ್ರದರ್ಶನ ಹಾಗೂ ಮನರಂಜನಾ ಕ್ರೀಡೆಯಾಗಿದೆ. ಆದರೆ ಇಂದಿನ ಆಧುನೀಕರಣದಿಂದಾಗಿ ಈ ಕ್ರೀಡೆಯು ನಶಿಸುತ್ತಾ ಬಂದಿದೆ.

## ಉಪ್ಪುಪ್ಪು ಕಡ್ಡಿ ಆಟ

ಗಂಡು ಮಕ್ಕಳು – ಹೆಣ್ಣು ಮಕ್ಕಳು ಲಿಂಗ ಭೇದವಿಲ್ಲದೆ ಆಡುವ ಆಟ. ಉಪ್ಪುಪ್ಪು ಕಡ್ಡಿ ಆಟ. ಈ ಆಟವಾಡಲು ಬೇಕಾಗಿರುವ ಸಾಧನವೆಂದರೆ ಒಂದು ಬೆಂಕಿ ಕಡ್ಡಿಯಷ್ಟು ಉದ್ದದ ಕಡ್ಡಿ. ಒಂದಷ್ಟು ಮರಳು ಅಥವಾ ಮಣ್ಣು. ಈ ಆಟವಾಡಲು ಇಬ್ಬರು ಆಟಗಾರರು ಬೇಕಾಗುತ್ತಾರೆ. ಮರಳನ್ನು ಎರಡು ಗೇಣು ಉದ್ದಕ್ಕೆ ಜೋಡಿಸಿದ ಹಾಗೆ ಗುಡ್ಡೆ ಮಾಡಿ ಅದರೊಳಗೆ ಆ ಬೆಂಕಿ ಕಡ್ಡಿಯ ತುಂಡನ್ನು ಹೂತು ಹಾಕುತ್ತಾರೆ. ಎದುರಾಳಿ ಆ ಕಡ್ಡಿಯನ್ನು ಎಲ್ಲಿ ಹೂತಿದೆ ಎಂಬುದನ್ನು ಗುರುತಿಸಿ ಅದರ ಮೇಲೆ ತನ್ನ ಎರಡು ಕೈ ಬೆರಳುಗಳನ್ನು ಕೂಡಿಸಿ ಇಡಬೇಕು.

ಕಡ್ಡಿಯನ್ನು ಹೂತು ಹಾಕಿದ್ದವನು ಮರಳನ್ನು ಕೆದಕುತ್ತಾ ಬರುತ್ತಾನೆ. ಆಗ ಕಡ್ಡಿ ಕೈಬೆರಳು ಮಡಗಿದವನ ಸ್ಥಳದಲ್ಲಿ ಇದ್ದರೆ ಅವ ಗೆದ್ದಂತೆ. ಕೆದಕಿದವನಿಗೆ ಸಿಕ್ಕರೆ ಇವ ಗೆದ್ದಂತೆ. ಈ ಕ್ರೀಡೆ ಒಂದು ರೀತಿಯಲ್ಲಿ ಕಣ್ಣಿಗೆ ವ್ಯಾಯಾಮ ಮಾಡಿಸುವ ಕ್ರೀಡೆ ಎನ್ನಬಹುದು. ಎದುರಾಳಿ ಮರಳನ್ನು ಸಾಲು ಮಾಡುತ್ತಿರುವ ಹಾಗೆ ಮಾಡುತ್ತಲೇ ಅದರೊಳಗೆ ಕಡ್ಡಿಯನ್ನು ಹೂತಿರುತ್ತಾನೆ. ಅದನ್ನು ಇವ ಹದ್ದಿನ ದೃಷ್ಟಿ ಇಟ್ಟು ಗಮನಿಸುತ್ತಿರುತ್ತಾನೆ. ಆಟವಾಡುವಾಗ ಸಾಮಾನ್ಯವಾಗಿ ಹೀಗೆ ಹಾಡುತ್ತಾರೆ.

"ಉಪ್ಪುಪ್ಪು ಕಡ್ಡಿ
ಉಪ್ಪು ನೇರಲೆ ಕಡ್ಡಿ
ಯಾವೂರ್ಗೆ ಬಡ್ಡಿ
ಲಕ್ಷ್ಮೀಗೌಡನ ದೊಡ್ಡಿ"

## ಹೆಣ್ಣುಮಕ್ಕಳ ಮತ್ತು ಹೆಂಗಸರ ಆಟಗಳು

ಹೆಣ್ಣು ಮಕ್ಕಳು ಮತ್ತು ಹೆಂಗಸರೇ ಪ್ರಧಾನವಾಗಿ ಕೇಂದ್ರವಾಗಿರುವ ಕ್ರೀಡೆಗಳನ್ನು ಕೆಳಕಂಡಂತೆ ವಿಭಜಿಸಬಹುದು.

### ಗಿರಗಟ್ಟೆ

ಹೆಣ್ಣು ಮಕ್ಕಳಾಡುವ ಆಟವಿದು. ಈ ಆಟವಾಡಲು ಇಬ್ಬರು ಬೇಕು. ಪರಸ್ಪರ ಕೈ ಕೈ ಹಿಡಿದು ವೃತ್ತಾಕಾರದಲ್ಲಿ ಸುತ್ತುವುದೇ 'ಗಿರಗಿಟ್ಟೆ'. ಇಬ್ಬರು ಹುಡುಗಿಯರು ಕೈಗಳನ್ನು ಒಂದರ ಮೇಲೊಂದು ಅಡ್ಡ ಬರುವಾಗೆ ಹಾಕಿ ಮುಂದಕ್ಕೆ ಕೈಚಾಚಿ ನೀಡುವುದು. ಒಬ್ಬಳು ಅಂಗೈಗಳನ್ನು ಮೇಲೆ ಮಾಡಿ ಬೆರಳುಗಳನ್ನು ಅರ್ಧ ಮಡಚಿದರೆ ಇನ್ನೊಬ್ಬಳು ತನ್ನ ಅಂಗೈಗಳನ್ನು ಕೆಳಗೆ ಮಾಡಿ ಬೆರಳುಗಳನ್ನು ಆರ್ಧ ಮಡಚಿ ಎದುರಾಳಿಯ ಕೈಗಳನ್ನು ಹಿಡಿದು ಕೊಳ್ಳುತ್ತಾಳೆ. ಅನಂತರ ಇಬ್ಬರೂ ವೃತ್ತಾಕಾರವಾಗಿ ಗಿರಗಿರನೆ ತಿರುಗುತ್ತಾರೆ. ತಿರುಗಲಾರದೆ ಬೇಗ ಸುಸ್ತಾದವರು ಸೋತಂತೆ ಎಂದು ಭಾವಿಸಲಾಗುತ್ತದೆ.

### ಅಣ್ಣೆ ಕಲ್ಲಾಟ

ಹೆಣ್ಣು ಮಕ್ಕಳು ಮತ್ತು ಹೆಂಗಸರು ಮನೆಯಲ್ಲಿ ಬಿಡುವಿನ ವೇಳೆಯಲ್ಲಿ ಈ ಆಟವನ್ನು ಆಡುತ್ತಾರೆ. ಈ ಆಟಕ್ಕೆ ಬೇಕಾದ ಸಾಮಗ್ರಿ ಐದು ಉರುಟಾಗಿರುವ ಕಲ್ಲುಗಳು. ಅಣ್ಣೆ ಕಲ್ಲಾಟ

ಆಡಲು ಇಬ್ಬರು ಮಾತ್ರ ಕುಳಿತುಕೊಳ್ಳುತ್ತಾರೆ. ಕಲ್ಲಿನಲ್ಲಿ ಒಂದನ್ನು ಮೇಲೆಸೆದ ಕಲ್ಲನ್ನು ಹಿಡಿಬೇಕು. ನಂತರ ಎರಡೆರಡು ನಂತರ ನಾಲ್ಕನ್ನು ತೆಗೆದು ಎಸೆದ ಕಲ್ಲನ್ನು ಹಿಡಿಯಬೇಕು. ನಂತರ ಅಷ್ಟು ಕಲ್ಲನ್ನು ಮೇಲೆಸೆದು ಮುಂಗೈಯಿನ ಬೆರಳಿನಿಂದ ಹಿಡಿಯಬೇಕು. ಇದು ಬೆರಳಿನ ವ್ಯಾಯಾಮಕ್ಕೆ ಉಪಯೋಗಕಾರಿ ಆಟವಾಗಿದೆ. ಕಲ್ಲನ್ನು ಎಸೆದು ಕೆಳಗಿಟ್ಟಿದ್ದ ಕಲ್ಲನ್ನು ತೆಗೆದುಕೊಂಡು ಬೇಗ ಹಿಡಿಯದಿದ್ದರೆ ಕಲ್ಲು ಬೀಳುತ್ತವೆ. ಆಗ ಆಟವನ್ನು ಬೇರೆಯವರಿಗೆ ಬಿಟ್ಟುಕೊಡಬೇಕಾಗುತ್ತದೆ.

### ಅಳ್ಳು ಮಣೆ ಆಟ

ಈ ಆಟವನ್ನು ಹೆಣ್ಣು ಮಕ್ಕಳು ಮತ್ತು ಹೆಂಗಸರು ಆಡುತ್ತಾರೆ. ಅಳ್ಳುಗುಳ್ಳಿ ಮಣೆಯನ್ನು ಮರದ ಹಲಗೆಯಲ್ಲಿ, ಎರಡು ಸಾಲಿನಲ್ಲಿ ಏಳೇಳು ಮಣೆಗಳನ್ನು ತೋಡಿ ಮಾಡಿರುತ್ತಾರೆ. ಇದು ಬೇಸಿಗೆಯಲ್ಲಿ ಬೇಸರ ಕಳೆಯಲೆಂದು ಆಡುವ ಆಟವಾಗಿದೆ. ಇದಕ್ಕೆ ಹುಣಸೆಬೀಜ ಅಥವಾ ಪಾರಿವಾಳ ಮರದ ಬೀಜ ಅಥವಾ ಸಣ್ಣ ಸಣ್ಣ ಕಲ್ಲುಗಳನ್ನು ಬಳಸಿ ಈ ಆಟವಾಡುತ್ತಾರೆ. ಈ ಆಟವನ್ನು ಆಡಲು ಕನಿಷ್ಠ ಎರಡು ಮಂದಿ ಬೇಕು. ಗರಿಷ್ಠ ನಾಲ್ಕು ಮಂದಿ ಆ ಆಟವನ್ನು ಆಡಬಹುದು. ಅಳ್ಳುಮಣೆ ಆಟವನ್ನು ಅಳ್ಳುಗುಳಿ ಆಟವೆಂತಲೂ ಕರೆಯುತ್ತಾರೆ. ಅಳ್ಳುಮಣೆ ಆಟದಲ್ಲಿ ಹಲವಾರು ಬಗೆಗಳಿವೆ. ಅವುಗಳೆಂದರೆ,

### ಕಾಶಿ ಆಟ

ಅಳ್ಳು ಮಣೆಯ ಎರಡು ಸಾಲಿನ ಮಧ್ಯದ ಮಣೆಗೆ ಒಂದೊಂದು ಅಳ್ಳನ್ನು ಹಾಕಿ ಅದನ್ನು 'ಕಾಶಿ' ಎನ್ನುತ್ತಾರೆ. ಉಳಿದ ಹನ್ನೆರಡು ಮನೆಗಳಿಗೆ ಒಂದೊಂದು ಮನೆಗೂ ಹನ್ನೆರಡು ಅಳ್ಳುಗಳನ್ನು ತುಂಬುತ್ತಾರೆ. ಈ ಕಾಶಿ ಆಟವನ್ನು ಆಡುವಾಗ ಖಾಲಿ ಇರುವ ಮನೆಗೆ ಅಳ್ಳು ಕೊನೆಗೊಂಡರೆ ಅದನ್ನು ಸೀಟಿ, ಹೆಗ್ಗ ಬಂತು ಎಂದು ಎರಡು ಸಾಲಿನ ಪಕ್ಕದ ಮನೆಯ ಅಳ್ಳನ್ನು ತೆಗೆದುಕೊಳ್ಳುತ್ತಾರೆ.

ಅಳ್ಳು ಹಾಕುವಾಗ ಕಾಶಿ ಪಕ್ಕದ ಮನೆಗೆ ಅಳ್ಳು ಮುಗಿದು ಹೋದರೆ 'ಕಾಶಿ ಕೈ ತಡೆಯಿತು' ಎಂದು ಹೇಳಿ ಆಟವನ್ನು ನಿಲ್ಲಿಸಬೇಕು. ಕಾಶಿ ಮನೆಯ ಪಕ್ಕದ ಮನೆ ಖಾಲಿ ಇದ್ದಾಗ ಕಾಶಿ ಮನೆಯ ಎರಡನೇ ಮನೆಗೆ ಅಳ್ಳು ಕೊನೆಗೊಂಡರೆ ಅದನ್ನು ಸೀಟಿ ಕಾಶಿ ಮನೆಯ ಮೇಲೆ ಇಟ್ಟಿ 'ಕಾಶಿ ಬಂತು' ಎಂದು ಹೇಳುತ್ತಾರೆ. ಈ ಆಟದಲ್ಲಿ ಅಳ್ಳು ತುಂಬಿದ ಮನೆಯನ್ನು 'ಹೆಗ್ಗ' ಎಂದು ಹೇಳುತ್ತಾರೆ. ಈ ಕಾಶಿ ಆಟದಲ್ಲಿ ಹೆಗ್ಗ ಮುರಿದ ಮೇಲೆ ಆರು ಅಳ್ಳುಗಳು ಆ ಮನೆಗೆ ಬಂದ ಮೇಲೆ 'ಎಮ್ಮೆ ಈಯಿತು' ಆ ಅಳ್ಳನ್ನು ಆಯಾಯ ಸಾಲಿನವರು

ತೆಗೆದುಕೊಳ್ಳುತ್ತಾರೆ. ಈ ಕಾಶಿ ಆಟದಲ್ಲಿ ಕಾಶಿ ಇಬ್ಬರಿಗೂ ಅಥವಾ ಎರಡೂ ಕಾಶಿ ಒಬ್ಬರಿಗೆ ಬರಬಹುದು. ಎರಡೂ ಕಾಶಿಗಳು ಇಬ್ಬರಿಗೂ ಬಂದರೆ ಕಾಸಿ ಮನೆಯಲ್ಲಿ ಒಂದೊಂದು ಅಳ್ಳನ್ನು ಬಿಟ್ಟು ಉಳಿದ ಅಳ್ಳನ್ನು ಇಬ್ಬರು ಸಮನಾಗಿ ಹಂಚಿಕೊಳ್ಳುತ್ತಾರೆ. ಈ ಆಟವು ಹೆಂಗಸರಿಗೆ ಏಕಾಗ್ರತೆಯನ್ನು ಮತ್ತು ಬುದ್ಧಿಶಕ್ತಿಯನ್ನು ಹೆಚ್ಚಿಸುತ್ತದೆ.

**ಮೂಲೆ ಕಟ್ಟಾಟ**

ಮೂಲೆ ಕಟ್ಟಾಟದಲ್ಲಿ ಒಂದೊಂದು ಮನೆಗೂ ಐದೈದು ಅಳ್ಳುಗಳನ್ನು ತುಂಬಬೇಕು. ಮೂಲೆ ಕಟ್ಟಾಟವನ್ನು ಆಡುವಾಗ ಕಾಳು ಕೊನೆಗೊಂಡು ಅಳ್ಳುಹಾಕಿದ ಮನೆಯ ಅಳ್ಳು ಮುರಿದು ಆಡಬೇಕು. ಇದರಲ್ಲಿ ಎಮ್ಮೆ ಈದಾಗ ಅಂದರೆ ಅಳ್ಳನ್ನು ತೆಗೆದುಕೊಂಡಾಗ ಮೇಲೆ ನಾಲ್ಕು ಅಳ್ಳು ತುಂಬಿದ ಮನೆಯ ಅಳ್ಳನ್ನು ಎಮ್ಮೆ ಈಯಿತು ಎಂದು ಕಾಳನ್ನು ತೆಗೆದುಕೊಳ್ಳುತ್ತಾರೆ. ಅಳ್ಳು ಹಾಕುತ್ತಿರುವವರು ಅಳ್ಳು ತೆಗೆಯುವ ಹಾಗಿಲ್ಲ. ಮೂಲೆ ಮನೆಯಲ್ಲಿ ಮೂರು ಅಳ್ಳುಗಳಿದ್ದಾಗ ಆಟ ಆಡುತ್ತಿವವರ ಕೈಯಲ್ಲಿ ಕೊನೆ ಅಳ್ಳು ಬಂದರೆ ಆ ಅಳ್ಳನ್ನು ಮೂಲೆ ಮನೆಯ ಗುಳಿಯೊಳಗೆ ಇಡದೆ ಹಲಗೆಯ ಮೇಲೆ ಇಡಬೇಕು. ಇದನ್ನೇ ಮೂಲೆ ಕಟ್ಟಾಟ ಎನ್ನುತ್ತಾರೆ. ಮೂಲೆ ಕಟ್ಟಿದ ಮನೆಗೆ ಅಳ್ಳು ಕೊನೆಗೊಂಡರೆ ಮುಂದೆ ಅವರು ಆಟವಾಡುವ ಹಾಗಿಲ್ಲ. ಎದುರಾಳಿಗೆ ಬಿಟ್ಟು ಕೊಡಬೇಕು. ಮೂಲೆ ಕಟ್ಟಿದ ಮೇಲೆ ಆ ಮಣೆಗೆ ಮೂಲೆಕಟ್ಟಿದವರು ಅಳ್ಳನ್ನು ಹಾಕಿಕೊಂಡು ಆಟವಾಡಬೇಕು. ಎದುರಾಳಿ ಆಟವಾಡುವಾಗ ಆ ಮನೆಗೆ ಅಳ್ಳು ಹಾಕುವ ಹಾಗಿಲ್ಲ. ಮೂಲೆ ಕಟ್ಟಿದ ಮೇಲೆ ತುಂಬಿದ ಅಳ್ಳುಗಳನ್ನು ಮೂಲೆ ಕಟ್ಟಿದವರು ತೆಗೆದುಕೊಳ್ಳುತ್ತಾರೆ. ಪಿಗ್ಗ (ಖಾಲಿಮನೆ) ಬಿದ್ದವರು ಪೂರ್ಣ ಪಿಗ್ಗ ಬೀಳುವವರೆಗೆ ಆಡುತ್ತಾರೆ. ಪಿಗ್ಗ ಬಿದ್ದ ಮನೆಗೆ ಅಳ್ಳು ತುಂಬುವ ಹಾಗಿಲ್ಲ. ಏಳು ಮನೆಗಳಲ್ಲಿ ಮೂರು ಅಥವಾ ನಾಲ್ಕನೇ ಮನೆಗೆ ಅಳ್ಳು ತುಂಬಿದರೆ ಆ ಮೂರು ಅಥವಾ ನಾಲ್ಕನೇ ಮನೆಯನ್ನೆ ಮೂಲೆ ಮನೆ ಎಂದುಕೊಂಡು ಮೂಲೆ ಕಟ್ಟಬೇಕು. ಈ ಆಟ ಒಂದು ರೀತಿಯಲ್ಲಿ ಚಮತ್ಕಾರದ ಆಟವಾಗಿದೆ.

**ಜೊತೆ ಕಟ್ಟಾಟ**

"ಜೊತೆ ಕಟ್ಟಾಟದಲ್ಲಿ ಒಂದೊಂದು ಮನೆಗೂ ಏಳು, ಏಳು ಅಳ್ಳುಗಳನ್ನು ತುಂಬುತ್ತಾರೆ. ಮೂಲೆ ಮನೆಯ ಕಾಳುಗಳನ್ನು ಒಟ್ಟಿಗೆ ಮುರಿದು ಆಡುವುದರಿಂದ ಇದನ್ನು ಜೊತೆ ಕಟ್ಟಾಟ ಎನ್ನುತ್ತಾರೆ. ಈ ಆಟದಲ್ಲೂ ಒಂದೊಂದು ಮನೆಯು ಏಳು, ಏಳು ಬಾರಿ ಮುರಿಸಿಕೊಳ್ಳುತ್ತದೆ. ಹಾಗೆ ಮುರಿಸಿಕೊಂಡು ಆಟ ಕೊನೆಗೊಂಡಾಗ ಮೊದಲು ಹೇಗೆ ಏಳೇಳು ಅಳ್ಳುಗಳನ್ನು

ತುಂಬಿದ್ದೇವೋ ಹಾಗೆಯೇ ಇದ್ದು ಆಟ ನಿಲ್ಲುತ್ತದೆ. ಕಾಳು ಹಾಕುವಾಗ ವ್ಯತ್ಯಾಸವಾದರೆ ಈ ಆಟವನ್ನು ನಿಲ್ಲಿಸಬೇಕು".[೮೦]

## ಕುಂಟೋಬಿಲ್ಲೆ ಆಟ

ಹೆಣ್ಣು ಮಕ್ಕಳ ಆಟಗಳಲ್ಲಿ ಅತ್ಯಂತ ಮಹತ್ವದ್ದು ಕುಂಟೋಬಿಲ್ಲೆ. ಈ ಆಟವಾಡಲು ಕನಿಷ್ಟ ಎರಡು ಮಂದಿ ಸಾಕು. ಗರಿಷ್ಟ ನಾಲ್ಕು ಮಂದಿಯೂ ಈ ಆಟವನ್ನು ಆಡಬಹುದು. ತಮ್ಮ ಮನೆಯ ಮುಂದಿನ ಬೀದಿಯ ಅಂಗಳದಲ್ಲಿ ಎರಡು ಭಾಗವಾಗುವಂತೆ ಐದು ಮನೆಗಳನ್ನ ಚೌಕಾಕಾರವಾಗಿ ಬರೆಯುತ್ತಾರೆ. ಮೂರು ಉದ್ದಗೆರೆ ಎಳೆದು ಅದಕ್ಕೆ ಆರು ಅಡ್ಡಗೆರೆ ಎಳೆದರೆ ಅಂಕಣವಾಯಿತು. ಒಂದು ಬಚ್ಚೆ (ಬಕರೆಯ ಚೂರು)ಯನ್ನು ಒಂದೊಂದು ಮನೆಗೆ ಹಾಕಿ ಕುಂಟುತ್ತಾ ಗೆರೆ ತುಳಿಯದಂತೆ ಮನೆಯೊಳಗೆ ಹಾರಿ ಚೌಕದ ಬಚ್ಚೆ ಮತ್ತೊಂದು ಕಾಲಿನಿಂದ ಕುಂಟುತ್ತಲೇ ಒದೆಯುತ್ತಾರೆ. ಅದು ಗೆರೆಯ ಮೇಲೆ ಬಿದ್ದರೆ ಅಥವಾ ಮುಂದಿನ ಮನೆಯಿಂದ ಆಚೆಗೆ ಹೋದರೆ ಸೋತಂತೆ. ಗೆದ್ದವಳು ಮತ್ತೆ ಮೊಣಕೈ ಮೇಲೆ ಬಚ್ಚೆ ಇಟ್ಟುಕೊಂಡು ಕುಂಟಬೇಕು. ತಲೆಯ ಮೇಲೆ ಇಟ್ಟುಕೊಂಡು ಕುಂಟಬೇಕು. ಕಲ್ಲು ಬಿದ್ದರೆ ಮತ್ತೊಬ್ಬರಿಗೆ ಆಟ ಬಿಡಬೇಕು. ಮತ್ತೆ ಆಟ ಗೆಲ್ಲಲು, ಮೊದಲಿನಿಂದಲೇ ಪ್ರಯತ್ನಿಸಿ ಗೆಲ್ಲಬೇಕಾಗುತ್ತದೆ. ಈ ಆಟದಿಂದ ಉತ್ತಮವಾದ ದೈಹಿಕ ವ್ಯಾಯಾಮ ಆಗುತ್ತದೆ.

## ಬಳೆ ಆಟ

ಇದು ಹೆಣ್ಣು ಮಕ್ಕಳ ಆಟವಾಗಿದೆ. ಒಡೆದ ಬಳೆಯ ಚೂರುಗಳನ್ನು ಬಳಸಿ ಆಡುವ ಆಟವೇ ಬಳೆ ಆಟ. ಈ ಆಟಕ್ಕೆ ಕನಿಷ್ಟ ಇಬ್ಬರು ಆಟಗಾರರು ಬೇಕಾಗುತ್ತಾರೆ. ಗರಿಷ್ಟ ಎಷ್ಟು ಮಂದಿ ಬೇಕಾದರೂ ಈ ಆಟ ಆಡಬಹುದು. "೨೫ ರಿಂದ ೫೦ ರಷ್ಟು ಬಳೆಯ ಚೂರುಗಳನ್ನು ತೆಗೆದುಕೊಂಡು ಸುತ್ತಲೂ ವೃತ್ತಾಕಾರದಲ್ಲಿ ಕುಳಿತು ಬಳೆಯ ಚೂರುಗಳನ್ನು ಅಂಗೈಯಲ್ಲಿ ಹಿಡಿದುಕೊಂಡು ಮೇಲೆ ಎಸೆದು ಮೇಗೈಯನ್ನು ಹಿಡಿಯಬೇಕು. ಆ ಬಳೆಯ ಚೂರುಗಳಲ್ಲಿ ಕೆಲವು ಮೇಗೈ ಮೇಲೆ ಬೀಳುತ್ತವೆ. ಎದುರಾಳಿ ಅದರಲ್ಲಿ ಒಂದನ್ನು ತೋರಿಸಿ ಹಿಡಿಯುವಂತೆ ಹೇಳುತ್ತಾನೆ. ಅದನ್ನು ಬೆರಳ ಮೇಲೆ ತಂದು ಸಂದಿಯಲ್ಲಿ ಹಿಡಿದು ಇನ್ನುಳಿದ ಎಲ್ಲಾ ಚೂರುಗಳನ್ನು ಕೆಳಕ್ಕೆ ಹಾಕಿ ಒಂದೊಂದಾಗಿ ತೆಗೆಯುತ್ತಾ ಹೋಗಬೇಕು."[೮೧]

ಈ ರೀತಿ ಬಳೆಗಳನ್ನು ತೆಗೆಯುವಾಗ ಬೆರಳ ಸಂದಿಯಲ್ಲಿ ಹಿಡಿದ ಬಳೆಯ ಚೂರು ಕೆಳಕ್ಕೆ ಬಿದ್ದರೆ ಅವ ಸೋತು ಆಟವನ್ನು ಬಿಟ್ಟುಕೊಡಬೇಕು. ಹೀಗೆ ಕಡಿಮೆ ಸಮಯದಲ್ಲಿ ಹೆಚ್ಚು

ಬಳೆಗಳನ್ನು ಯಾರು ತೆಗೆಯುತ್ತಾರೋ ಅವರು ಗೆಲ್ಲುತ್ತಾರೆ. ಈ ಕ್ರೀಡೆಯಿಂದ ದೇಹಕ್ಕೆ ವ್ಯಾಯಾಮ ಸಿಗದಿದ್ದರೂ ಮನಸ್ಸಿಗೆ ಮನರಂಜನೆ, ಬುದ್ಧಿ ಚುರುಕಾಗುತ್ತದೆ.

### ಗಂಡಸರ ಆಟಗಳು

### ಘಟ್ಟಭಾರ (ಚೌಕಾಬಾರ)

ನೆಲದ ಮೇಲೆ ಚಚ್ಚೌಕದ ಮಣೆಗಳನ್ನು ಬರೆದು ಕವಡೆ ಅಥವಾ ಪಚ್ಚಿಗಳನ್ನು ಬಳಸಿ ಈ ಆಟವನ್ನು ಆಡುತ್ತಾರೆ. ಈ ಆಟಕ್ಕೆ ಬೇಕಾದ ಸಾಮಗ್ರಿ ಎಂದರೆ ಸಣ್ಣ ನಾಲ್ಕು ಕಲ್ಲು, ಕಡ್ಡಿ, ಕುರಿಪಿಕ್ಕೆ, ಅಳ್ಳು ಹೀಗೆ ಯಾವುದು ಬೇಕಾದರೂ ತೆಗೆದುಕೊಳ್ಳಬಹುದು. ಆಟವಾಡುವವರಿಗೆ ಯಾವುದು ಹತ್ತಿರದಲ್ಲಿ ಸುಲಭವಾಗಿ ಸಿಗುತ್ತದೋ ಅದನ್ನೇ ತೆಗೆದುಕೊಳ್ಳುತ್ತಾರೆ. ಈ ಆಟವನ್ನು ಚೌಕಾಬರದ ಆಟವೆಂತಲೂ ಕರೆಯುತ್ತಾರೆ. ಈ ಆಟವನ್ನು ಇಬ್ಬರು ಅಥವಾ ನಾಲ್ಕು ಮಂದಿ ಒಟ್ಟಿಗೆ ಆಡಬಹುದಾಗಿದೆ. ಘಟ್ಟ ಭಾರದ ಆಟದಲ್ಲಿ ಎರಡು ವಿಧಗಳಿವೆ.

### ಐದು ಮಣೆಯ ಆಟ

ಐದು ಮನೆಯ ಆಟಕ್ಕೆ ಪ್ರತಿಯೊಬ್ಬರೂ ನಾಲ್ಕು ಕಾಯಿಗಳನ್ನು ಬಳಸುತ್ತಾರೆ. ನಾಲ್ಕು ಪಚ್ಚಿಗಳನ್ನು ಬಳಸಿ ಈ ಆಟ ಆಡುತ್ತಾರೆ.

### ಏಳು ಮಣೆಯ ಆಟ

ಏಳು ಮಣೆಯ ಆಟಕ್ಕೆ ಪ್ರತಿಯೊಬ್ಬರೂ ಆರು ಕಾಯಿಗಳನ್ನು ಬಳಸುತ್ತಾರೆ. ಈ ಆಟವನ್ನು ಆರು ಪಚ್ಚಿ ಬಳಸಿ ಆಡುತ್ತಾರೆ. ಎರಡು ಮಣೆ ಆಟದಲ್ಲೂ ಎದರು ಬದರು ಇರುವ ಗಟ್ಟಗಳಲ್ಲಿ ತಮ್ಮ ಕಾಯಿಗಳನ್ನು ಇಟ್ಟು ಕವಡೆ ಅಥವಾ ಹುಣಸೆ ಪಚ್ಚೆಗಳನ್ನು ಬಿಟ್ಟು ಎಷ್ಟು ಸಂಖ್ಯೆ ಬೀಳುತ್ತದೋ ಎಷ್ಟು ಸಂಖ್ಯೆಯಂತೆ ಒಂದೊಂದು ಕಾಯಿ ನಡೆಸುತ್ತಾ ಆಡುತ್ತಾರೆ. ಎದುರಾಳಿಯ ಕಾಯಿ ಇರುವ ಮನೆಗೆ ಇವರ ಕಾಯಿ ಹೋದಾಗ ಕಾಯಿ ಹೊಡೆದೆ ಎನ್ನುತ್ತಾರೆ. ಆಗ ಎದುರಾಳಿ ಆ ಮನೆಯಿಂದ ತನ್ನ ಕಾಯಿ ತೆಗೆದು ತನ್ನ ಗಟ್ಟಕ್ಕೆ ಕೊನೆಗೆ ಬಂದು ಒಳನುಗ್ಗಿ ಒಳಗಿನ ಮನೆಗಳಲ್ಲೂ ಕಾಯಿ ನಡೆಸಿ, ಗಟ್ಟದ ಮುಂದೆ ಬಂದು ಕಾಯಿ ಹಣ್ಣು ಮಾಡುತ್ತಾನೆ. ಯಾರು ಮೊದಲಿಗೆ ಎಲ್ಲಾ ಕಾಯಿಗಳನ್ನು ಹಣ್ಣು ಮಾಡುತ್ತಾರೆ ಅವರು ಗೆದ್ದ ಹಾಗೆ. ಏಳು ಮಣೆ

ಆಟಗಳಲ್ಲಿ ಮೊದಲಿಗೆ ಘಟ್ಟದಲ್ಲಿ ಕಾಯಿ ಇಟ್ಟುಕೊಳ್ಳದೆ ಹೊರಗೆ ಕಾಯಿ ಇಟ್ಟದ್ದು ೧, ೫, ೬ ಬಿದ್ದಾಗ ಒಂದೊಂದರಂತೆ ಕಾಯಿ ಗಟ್ಟಕ್ಕೆ ತಂದು ನಡೆಸುತ್ತಾರೆ.

ಐದು ಮಣೆಯ ಆಟದಲ್ಲಿ ಎರಡು ಸುತ್ತು ಬಂದು ಕಾಯಿ ಹಣ್ಣು ಮಾಡಿದರೆ ಏಳು ಮಣೆ ಆಟದಲ್ಲಿ ಮೂರು ಸುತ್ತು ಬಂದು ಹಣ್ಣು ಮಾಡುತ್ತಾರೆ. ಗೆದ್ದಾದ ಮೇಲೆ ಎಲ್ಲರ ಕಾಯಿಗಳನ್ನು ಮಧ್ಯದ ಘಟ್ಟದಲ್ಲಿಟ್ಟು ಕೈ ಕಾಯಿಸುತ್ತಾರೆ. ಗೆದ್ದವರು ತಮ್ಮೆರಡು ಕೈಗಳನ್ನು ಬಳಸಿ ಹೊಡೆಯುತ್ತಾರೆ. ಹಾಗೆ ಹೊಡೆಯಲಿಕ್ಕೆ ಕೈ ಎತ್ತಿದಾಗ ಕೈ ಕಾಯಿಸುತ್ತಿರುವ ಸೋತ ವ್ಯಕ್ತಿ ಹೊಡೆತದಿಂದ ತಪ್ಪಿಸಿಕೊಂಡಂತೆಲ್ಲ ಒಂದೊಂದು ಕಾಯನ್ನು ತೆಗೆದುಕೊಳ್ಳುತ್ತಾನೆ. ಗಟ್ಟದಲ್ಲಿದ್ದ ಕಾಯಿಗಳೆಲ್ಲ ತೀರಿದ ಮೇಲೆ ಆಟ ಮುಕ್ತಾಯವಾಗುತ್ತದೆ. ಆಟದ ಮುಖ್ಯ ಗುರಿ ಮನರಂಜನೆಯಾಗಿದೆ.

## ಹುಲಿ ಕುರಿಯಾಟ

ನೆಲದ ಮೇಲೆ ಹುಲಿ-ಕುರಿ ಮಣೆಯ ಚಿತ್ರವನ್ನು ಬರೆದು ಸಣ್ಣ ಹಾಗೂ ದಪ್ಪ ಕಲ್ಲು ಅಥವಾ ಕುರಿಯ ಪಿಕ್ಕೆ, ಕಲ್ಲುಗಳನ್ನು ಬಳಸಿ ಈ ಆಟವನ್ನು ಆಡುತ್ತಾರೆ. ಎಮ್ಮೆ, ದನ, ಕುರಿ, ಆಡು ಮೇಯ್ಯಿಸಲು ಹೋಗುತ್ತಿದ್ದ ಗಂಗಾಮತಸ್ಥರು ತಮ್ಮ ಬೇಸರಿಕೆಯನ್ನು ಕಳೆಯುವುದಕ್ಕಾಗಿ ಹುಲಿ-ಕುರಿಯಾಟವನ್ನು ಆಡುತ್ತಿದ್ದರು. ಈ ಆಟವನ್ನು ಇಬ್ಬರು ಆಡುತ್ತಾರೆ. ಈ ಆಟಕ್ಕೆ ಬಳಸುವ, ನಾಲ್ಕು ಕಲ್ಲುಗಳನ್ನು ಹುಲಿಯಂತಲೂ, ಹದಿನಾರು ಸಣ್ಣ ಕಲ್ಲುಗಳನ್ನು ಕುರಿಯಂತಲೂ ಕರೆಯುತ್ತಾರೆ. ಸಣ್ಣ ಕಲ್ಲುಗಳನ್ನು ನಡೆಸುವವನು ಕುರಿಯಾದರೆ, ದೊಡ್ಡ ಕಲ್ಲುಗಳನ್ನು ನಡೆಸುವವನು ಹುಲಿಯಾಗುತ್ತಾನೆ.

ಮೊದಲಿಗೆ ಹುಲಿಯವನು ನಾಲ್ಕು ಕಲ್ಲುಗಳನ್ನು ಚಿತ್ರದ ತಲೆಯ ಭಾಗದಲ್ಲಿ ಗೆರೆಗಳು ಸಂಧಿಸುವ ಎಡೆಯಲ್ಲಿ ಇಡುತ್ತಾನೆ. ಕುರಿಯವನು ತಳ ಭಾಗದಲ್ಲಿ ಮೊದಲು ಮೂರು ಕಲ್ಲುಗಳನ್ನು ಇಟ್ಟಿರುತ್ತಾರೆ. ಮೊದಲಿಗೆ ಹುಲಿಯವನು ತನ್ನ ಕಾಯನ್ನು ನಡೆಸುತ್ತಾ ಬಂದ ಮೇಲೆ ಕುರಿಯವನು ಒಂದೊಂದು ಕುರಿಯನ್ನು ಅಂದರೆ ಕಲ್ಲನ್ನು ಇಡುತ್ತಾನೆ. ಹುಲಿಯನ್ನು ಕಟ್ಟಿ ಹಾಕುವುದು ಕುರಿ ನಡೆಸುವವನ ಉದ್ದೇಶವಾದರೆ, ಒಂದೊಂದು ಕುರಿಯನ್ನು ಹಿಡಿದು ತಿನ್ನುವುದೇ ಹುಲಿ ನಡೆಸುವವನ ಗುರಿಯಾಗಿರುತ್ತದೆ.

ಕಾಯಿ ನಡೆಸುವಾಗ ಹುಲಿ ಎದುರಿಗೆ ಕುರಿ ಇದ್ದು, ಅದರ ಪಕ್ಕದ ಗೆರೆ ಕೂಡಿದ ಜಾಗ ಖಾಲಿ ಇದ್ದರೆ, ಹುಲಿಯವರು ಕುರಿಯ ಮೇಲೆ ಹಾರಿ ಕುರಿಯ ಕಾಯಿಗಳನ್ನು ತೆಗೆದುಕೊಳ್ಳುತ್ತಾನೆ. ಹುಲಿ ಹಾರದ ಹಾಗೆ ಕುರಿಗಳಿಂದ ಕಟ್ಟಿಹಾಕಿದರೆ ಕುರಿಯವನು ಗೆದ್ದಂತೆ.

ಕುರಿಗಳ ಮೇಲೆ ಹಾರಿ ಕುರಿಗಳನ್ನು ತೆಗೆದುಕೊಂಡರೆ ಹುಲಿಯವನು ಗೆದ್ದಂತೆ. ಇದೊಂದು ಹೊತ್ತು ಕಳೆಯಲು ಆಡುವ ಆಟವಾದರೂ ಮೋಜಿನ ಆಟವಾಗಿದೆ. ಈ ಆಟದಿಂದ ಬುದ್ಧಿಶಕ್ತಿ ಚುರುಕಾಗುತ್ತದೆ. ಇತ್ತೀಚಿನ ದಿನಗಳಲ್ಲಿ ಹುಲಿ-ಕುರಿಯಾಟ ಕಣ್ಮರೆಯಾಗುತ್ತಿದೆ.

**ಪಚ್ಚಿ ಆಟ (ಪಂಜ)**

ಹುಣಸೆ ಬೀಜವನ್ನು ಗುಂಡಾಗಿ ಮಸೆದ ಅಥವಾ ತೇದು ಆರು ಪಚ್ಚಿಗಳನ್ನು ಬಳಸಿ ಆಡುವುದರಿಂದ ಪಚ್ಚಿ ಆಟವೆನ್ನುತ್ತಾರೆ. ಈ ಆಟದಲ್ಲಿ ಹಣವನ್ನು ಪಣವಾಗಿ ಕಟ್ಟಿ ಆಡುವುದರಿಂದ ಇದೊಂದು ರೀತಿಯ ಜೂಜು ಎನ್ನಬಹುದು. ೧, ೩, ೫ ಬಿದ್ದಾಗ ಪಚ್ಚಿ ಬಿಟ್ಟವನು ಹಣ ತೆಗೆದುಕೊಂಡರೆ, ೨, ೪, ೬ ಬಿದ್ದಾಗ ಎದುರಾಳಿಗಳು ಹಣ ತೆಗೆದುಕೊಳ್ಳುತ್ತಾರೆ.

**ಇಸ್ಪೇಟ್ ಆಟ**

ಇಸ್ಪೀಟ್ ಆಟ ಎಲೆಗಳನ್ನು ಬಳಸಿ ಆಡುವ ಆಟವೇ ಇಸ್ಪೀಟ್ ಆಟ. ಇದೂ ಸಹ ಜೂಜೇ ಆಗಿದೆ. ಹಣವನ್ನು ಗೆಲ್ಲುವುದೇ ಈ ಆಟದ ಗುರಿಯಾಗಿದೆ. ಈ ಆಟದಲ್ಲಿ ರಮ್ಮಿ, ಪರೇಲು, ಅಂದರ್-ಬಾಹರ್, ಜೊತೆ ಕಟ್ಟು, ಬುಕ್ ಆಟ ಇವೇ ಮೊದಲಾದ ಆಟಗಳನ್ನು ಗಂಗಾಮತಸ್ಥರು ಆಡುತ್ತಾರೆ.

ಮಂಡ್ಯ ಜಿಲ್ಲೆಯಲ್ಲಿ ಇತರ ಸಮುದಾಯದವರು ಬೇರೆ ಬೇರೆ ಆಟಗಳನ್ನು ಆಡಿದರೂ, ಗಂಗಾಮತಸ್ಥರು ಆಡುವ ಪ್ರಮುಖವಾದ ಕ್ರೀಡೆಯನ್ನಷ್ಟೇ ವಕ್ತೃಗಳು ಹೇಳಿರುವಂತೆ ಅರ್ಥೈಸಲಾಗಿದೆ. "ಆಟಗಳಿಂದ ದೊರಕುವ ವ್ಯಾಯಾಮದಿಂದ ಮಕ್ಕಳ ಸ್ನಾಯುಬಲ ವೃದ್ಧಿಯಾಗುವುದು. ಅದರ ಜೊತೆಗೆ ಮನೋಲ್ಲಾಸ ದೊರೆತು ಬೌದ್ಧಿಕ ವಿಕಾಸವೂ ಸಿದ್ಧಿಸುವುದು"[೨೨] ಎನ್ನುವ ಮಾತು ನೂರಕ್ಕೆ ನೂರರಷ್ಟು ಸತ್ಯವಾದುದ್ದು. ಆದರೆ ಗಂಗಾಮತಸ್ಥರಿಗೆ ಇದ್ಯಾವುದರ ಅರಿವಿಲ್ಲದೆಯೂ ಸಾಂಪ್ರದಾಯಿಕವಾದ ಕ್ರೀಡೆಗಳನ್ನು ಆಡುತ್ತಾರೆ. ಆದರೆ ಇವರಲ್ಲಿರುವ ಒಂದು ಕೆಟ್ಟದಾದ ಆಟವೆಂದರೆ ಇಸ್ಪಿಟ್ ಆಟ, ಚೌಕಾಬಾರ ಇವುಗಳು. ಈ ಆಟಗಳಿಂದ ತಮ್ಮ ಸಂಸಾರವನ್ನೇ ಹಾಳು ಮಾಡಿಕೊಂಡಿರುವ ಅನೇಕ ಉದಾಹರಣೆಗಳನ್ನು ನೋಡಬಹುದು. ಬಡತನ ಮತ್ತು ಕೆಲಸದ ಒತ್ತಡ ಅಂದರೆ ಸದಾ ಕೂಲಿ ಇಲ್ಲವೇ ತಮ್ಮ ತೋಟದ ಕೆಲಸಗಳಿಂದಾಗಿ, ಇತ್ತೀಚೆಗೆ ಇವರಲ್ಲಿಯೂ ಕ್ರೀಡಾ ಮನೋಭಾವಗಳು ಕಡಿಮೆಯಾಗುತ್ತಿವೆ ಎಂದು ಹೇಳಬಹುದು.

## ೩.೧೨ ಧಾರ್ಮಿಕ ಜೀವನ

ಮಾನವ ಸಮೂಹದಲ್ಲಿ ಕಂಡು ಬರುವ ಪ್ರಮುಖವಾದ ಅಂಶಗಳಲ್ಲಿ ಧಾರ್ಮಿಕ ಜೀವನವೂ ಒಂದಾಗಿದೆ. ಮಾನವ ಎಂದು ಭೂಮಿಯ ಮೇಲೆ ಅವತರಿಸಿದನೋ ಅಂದಿನಿಂದಲೂ, ದೇವರ ಬಗ್ಗೆ ನಂಬಿಕೆ ಹೊಂದಿ ಪ್ರಕೃತಿಯನ್ನನ ಆರಾಧಿಸಲು ಎಂದು ಪ್ರಾರಂಭಿಸಿದನೋ ಅಂದಿನಿಂದಲೇ ಧಾರ್ಮಿಕ ಆಚರಣೆಗಳು ಪ್ರಾರಂಭವಾದುದ್ದು. ಪ್ರಕೃತಿಯ ವೈಚಿತ್ರ್ಯಗಳು ಆದಿಮಾನವನಲ್ಲಿ ಭಯ ಭಕ್ತಿಯನ್ನು ಹುಟ್ಟಿಸಿದವು.

ಮನುಷ್ಯನು ಶಕ್ತಿಯ ಕೋಪ ಕ್ರೋಧ ಭಾವಗಳನ್ನು ತಣಿಸಲು ಆ ಮೂಲಕ ಅದರ ಅನುಗ್ರಹ ಸಂಪಾದಿಸಲು ಅನೇಕ ಚಿತ್ರ ವಿಚಿತ್ರ ಮತಾಚರಣೆಗಳನ್ನು ಸೃಷ್ಟಿಸಿಕೊಂಡ. ತನ್ನನ್ನು ತಾನು ಸಂರಕ್ಷಿಸಿಕೊಳ್ಳಲು ಸಹಾಯಕವಾದವು. ಹೀಗೆ ದೇವರಾತಾಧನೆಗೆ ಸಂರಕ್ಷಣಾ ಭಾವನೆಯೇ ಮೂಲಪ್ರೇರಣೆ.[೮೩] ಆದಿಮಾನವ ಸೃಷ್ಟಿಯ ಚರಾಚರ ವಸ್ತುಗಳಿಗೆಲ್ಲ ಚೇತನವನ್ನು ಆರೋಪಿಸಿ ಎಲ್ಲಾ ಜೀವಿಗಳಲ್ಲೂ ಅಗೋಚರ ಶಕ್ತಿಯೊಂದು ಮನೆಮಾಡಿದೆ ಎಂದು ಭಾವಿಸಿದನಲ್ಲದೆ, ಆ ಶಕ್ತಿ ಏಕಕಾಲದಲ್ಲಿ ಒಳಿತು ಕೆಡುಕುಗಳನ್ನುಂಟು ಮಾಡಬಹುದು ಎಂದು ಎಣಿಸಿದ. ಅಂಥ ಶಕ್ತಿ ಒಲಿದರೆ ಒಳಿತೆಂದು ಭಾವಿಸಿ ಅದರ ಕೋಪತಾಪಗಳನ್ನು ತಣಿಸಬೇಕು ಎಂದು ಆ ಯತ್ನದಲ್ಲಿ ತೊಡಗಿದ. ಹರಿವ ನೀರಿನಲ್ಲಿ, ಬೃಹದಾಕಾರವಾಗಿ ಬೆಳೆದು ನಿಂತ ಮರಗಿಡಗಳಲ್ಲಿ, ಎತ್ತರಕ್ಕೆ ನಿಂತ ಬೆಟ್ಟಗುಡ್ಡಗಳಲ್ಲಿ ಸರ್ವಾಂತರ್ಯಾಮಿಯನ್ನು ಕಂಡ. ಆ ಶಕ್ತಿಯನ್ನು ಒಲಿಸಿಕೊಳ್ಳಲು ನಾನಾ ಮಾರ್ಗೋಪಾಯಗಳನ್ನು ಅನುಸರಿಸಿದ. ಅಂದಿನಿಂದಲೇ ಧಾರ್ಮಿಕ ಜೀವನ ಪ್ರಾರಂಭಿಸಿದ. ಈ ಹಿನ್ನೆಲೆಯಲ್ಲಿ ಮಂಡ್ಯ ಜಿಲ್ಲೆಯ ಗಂಗಾಮತಸ್ಥರ ವಾಸಿಸುವ ಪ್ರತಿಯೊಂದು ಗ್ರಾಮದಲ್ಲೂ ತಮ್ಮ ಸಂಪ್ರದಾಯಕ್ಕೆ ಸಂಬಂಧಿಸಿದ ದೇವಾಲಯಗಳನ್ನು ನಿರ್ಮಿಸಿಕೊಂಡಿದ್ದಾರೆ. ಅವುಗಳ ಬಗ್ಗೆ ನಂಬಿಕೆ ಇಡುವುದರೊಂದಿಗೆ, ಹೆದರಿ, ಭಯ-ಭಕ್ತಿಯಿಂದ ಜೀವನವನ್ನು ಸಾಗಿಸುತ್ತಿದ್ದಾರೆ. ಮಂಡ್ಯ ಜಿಲ್ಲೆಯ ಗಂಗಾಮತಸ್ಥರಿಗೆ ಪ್ರತ್ಯೇಕ ದೇವತೆಗಳು ಇದ್ದಾರೆ. ಇವರು ವಾಸಿಸುವ ಕೇರಿಗಳಲ್ಲಿ ತಮಗೆ ಸಂಬಂಧಿಸಿದ ದೇವರುಗಳ ಚಿಕ್ಕ ಗುಡಿಗಳಿವೆ. ಈ ದೇವರುಗಳ ಪೂಜೆಯನ್ನು ಇವರೇ ಮಾಡುತ್ತಾರೆ. ಆ ದೇವರುಗಳಿಗೆ ಶುಕ್ರವಾರ, ಮಂಗಳವಾರ ಕಡ್ಡಾಯವಾಗಿ ಪೂಜೆಸಲ್ಲಿಸುವುದರೊಂದಿಗೆ, ಹುಣ್ಣಿಮೆ, ಅಮಾವಾಸ್ಯೆ, ಹಬ್ಬ-ಹರಿದಿನಗಳಲ್ಲೂ ಪೂಜೆಯನ್ನು ಮಾಡುತ್ತಾರೆ. ಇವರು ಪೂಜಿಸುವ ಗಂಡು ದೇವರುಗಳು ಕಡಿಮೆ ಇದ್ದು; ಹೆಣ್ಣು ದೇವರುಗಳ ಸಂಖ್ಯೆ ಹೆಚ್ಚಾಗಿವೆ. ಗಂಡು ಮತ್ತು ಹೆಣ್ಣು ದೇವರು ಎರಡು ಒಂದೇ ಆಗಿದ್ದರೆ ಅವರದು ಒಂದು ಕುಲ. ಗಂಡು ದೇವರು ಒಂದು, ಹೆಣ್ಣು ದೇವರು ಮತ್ತೊಂದು ಆಗಿದ್ದರೆ, ಗಂಡೋಳಿ ಪಾಲು, ಹೆಣ್ಣೋಳಿ ಪಾಲು ಎಂದು ಕರೆಯುತ್ತಾರೆ. ಇವರು ಮಾಡುವ ಎಲ್ಲಾ ಧಾರ್ಮಿಕ ಆಚರಣೆಗಳಲ್ಲೂ

ತಮ್ಮ ಕುಲದೇವತೆಯಾದ 'ಗಂಗೆ'ಯನ್ನ ಪೂಜಿಸಿ ಮುಂದಿನ ದೇವತಾಕಾರ್ಯವನ್ನು ಮಾಡುತ್ತಾರೆ.

ಗಂಗಾಮತಸ್ಥರಲ್ಲೂ ಸಿದ್ದಪ್ಪಾಜಿಯ ನೀಲಗಾರರು, ವೆಂಕಟರಮಣಸ್ವಾಮಿಯ ಒಕ್ಕಲಿನ ದಾಸರು, ಭೈರವೇಶ್ವರ ಒಕ್ಕಲಿನ ಜೋಗಿಗಳು ಇದ್ದಾರೆ. "ಇವರು ಶಿವ ಹಾಗೂ ವಿಷ್ಣು ಆರಾಧಕರಾಗಿದ್ದು ನಂಜನಗೂಡು, ಧರ್ಮಸ್ಥಳ, ತಿರುಪತಿ ಮೊದಲಾದ ಯಾತ್ರಾ ಸ್ಥಳಗಳಿಗೆ ಹೋಗಿಬರುತ್ತಾರಲ್ಲದೆ ತೊಳಸಮ್ಮ, ಮಾರಮ್ಮ, ಪಟಾಳದಮ್ಮ ಮೊದಲಾದ ದೇವತೆಗಳಿಗೂ ನಡೆದುಕೊಳ್ಳುತ್ತಾರೆ".[೮೪] ಇವರು ಪೂಜಿಸುವ ಗಂಡು ದೇವರುಗಳೆಂದರೆ ಅಂತರವಳ್ಳಿ ಸಿದ್ದಪ್ಪ, ಮಾದೇಶ್ವರ, ಕಾಳಭೈರವೇಶ್ವರ, ಬೋರೇದೇವರು, ವೀರಭದ್ರೇಶ್ವರ, ತಿಮ್ಮಪ್ಪ, ಯತ್ತಂಬಾಡಿ ಕಾಳಪ್ಪ, ನಂಜುಂಡೇಶ್ವರ, ಶಿವ, ವಿಷ್ಣು ಈ ದೇವತೆಗಳಲ್ಲಿ ಒಂದು ಗಂಡು ದೇವರು, ಅವರ ಮನೆದೇವರಾಗಿರುತ್ತದೆ. ಇದರ ಜೊತೆಗೆ ಶನಿಮಹಾತ್ಮ ಮತ್ತು ನಾಗರ ಕಲ್ಲನ್ನು ಪೂಜಿಸುತ್ತಾರೆ. ಗಂಗಾಮತಸ್ಥರ ಹೆಚ್ಚು ಭಕ್ತಿ ಹೆಣ್ಣು ದೇವರ ಬಗ್ಗೆಯೆ. ಇವರು ವರ್ಷಕ್ಕೆ ಒಮ್ಮೆಯಾದರೂ ದೊಡ್ಡದಾಗಿ ಆಚರಿಸುವ ಹಬ್ಬ ಹೆಣ್ಣುದೇವರದ್ದಾಗಿರುತ್ತದೆ. ಆ ದೇವರುಗಳೆಂದರೆ ಕಬ್ಬಾಳಮ್ಮ, ಪಟ್ಟಲದಮ್ಮ, ಮಸಣಕ್ಕಮ್ಮ, ಬೀಡನಮ್ಮ, ರಾಮವ್ವ, ಕಾಳಮ್ಮ, ಮುದ್ದಮ್ಮ, ಚೌಡಮ್ಮ, ಮಂಚಮ್ಮ, ಹೆಬ್ಬರಸದಮ್ಮ, ಕಿಚ್ಚಲಮಾರಮ್ಮ, ಮದ್ದೂರಮ್ಮ, ಬೆಟ್ಟದರಸಮ್ಮ, ರಾಕಾಸಮ್ಮ, ಉರುಗಮ್ಮ, ಉಂತೂರಮ್ಮ, ಮಾರಮ್ಮ ಹೀಗೆ ಜಿಲ್ಲೆಯ ಗಂಗಾಮತಸ್ಥರು ಹಲವಾರು ಹೆಣ್ಣು ದೇವರನ್ನ ಪೂಜಿಸುವ ಒಕ್ಕಲಿನವರಿದ್ದಾರೆ.

ಗಂಗಾಮತಸ್ಥರ ಮನೆದೇವರು ಒಂದು ಗಂಡು, ಒಂದು ಹೆಣ್ಣು ದೇವರಾದರೂ, ಅವರು ಉಳಿದ ದೇವರನ್ನೂ ಪೂಜಿಸುತ್ತಾರೆ. ಇವರಿಗೆ ಮಾರಮ್ಮ ಇಷ್ಟ ದೈವ. ಈಕೆ ಕಷ್ಟ ಕಾರ್ಪಣ್ಯಗಳನ್ನ, ರೋಗ-ರುಜಿನಗಳನ್ನು ಹೋಗಲಾಡಿಸುವ ಶಕ್ತಿವಂತೆ ಎಂದು ಹೇಳುತ್ತಾರೆ. ವಾಂತಿ-ಭೇದಿ, ದಡಾರ, ಸಿಡುಬು ಮುಂತಾದ ಕಾಯಿಲೆಗಳು ಬಂದಾಗ ಮಾರಮ್ಮನಿಗೆ ಮೊಸರನ್ನ, ಬೆಲ್ಲದನ್ನ, ಹಣ್ಣು, ಪಾನಕ, ಬೇವಿನಸೊಪ್ಪು ಇವುಗಳಿಂದ ತಂಪು ಮಾಡುತ್ತಾರೆ. ಇದರಿಂದ ಆ ಕಾಯಿಲೆಗಳು ವಾಸಿಯಾಗುತ್ತವೆ ಎಂಬುದು ಇವರ ಅಭಿಪ್ರಾಯವಾಗಿದೆ. ಹಲವು ಕಡೆಗಳಲ್ಲಿ 'ಕಬ್ಬಾಳಮ್ಮ ಮತ್ತು ಪಟ್ಟಲದಮ್ಮ ದೇವತೆಗಳ ಚಿಕ್ಕ ಗುಡಿಗಳಿವೆ. ಈ ದೇವಿಯರ ಪೂಜೆಗಳೂ ಇದ್ದು, ಶಿವರಾತ್ರಿಯ ದಿನ ಅವಗಳನ್ನು ಕಟ್ಟಿ ಹೂ-ಹೊಂಬಾಳೆಯಾಗಿಸಿ, ಹೊಳೆ ಮೆಟ್ಟಿಸಿ ಗ್ರಾಮಕ್ಕೆ ಬಂದು ಕುಣಿಸಿ, ಮಧ್ಯರಾತ್ರಿಯ ನಂತರ ಬೀದಿ ಬೀದಿಯಲ್ಲಿ ಮೆರವಣಿಗೆ ನಡೆಯುತ್ತದೆ. ರಾತ್ರಿ ೮-೯ ಗಂಟೆಗೆ ಹೂ-ಹೊಂಬಾಳೆಯಾಗಿ ಕಬ್ಬಾಳಮ್ಮ ದೇವಸ್ಥಾನದ ಮುಂಭಾಗದಲ್ಲಿ ತಂಬಿಟ್ಟಿನ ಆರತಿ ನೀಡುತ್ತಾರೆ. ಮಾರಮ್ಮನಿಗೂ ನೀಡುತ್ತಾರೆ."[೮೫] ನಂತರ

ಕುಂಟಬೋರಪ್ಪನಿಗೂ ಇದೇ ರೀತಿ ಆರತಿ ನೀಡುತ್ತಾರೆ. ಕಬ್ಬಾಳಮ್ಮನಿಗೆ ತೆರೆಹಿಡಿದು ಬಂದು ಮರಿಯನ್ನು ಬಲಿ ಕೊಡುತ್ತಾರೆ. ನಂತರ ಗ್ರಾಮದಲ್ಲಿ ಸಮಗ್ರ ರಾತ್ರಿ ಮೆರವಣಿಗೆ ನಡೆಯುತ್ತದೆ. ಮನೆ ಮನೆಗೂ ಆರತಿ ನೀಡುತ್ತಾರೆ. ಈ ಹಬ್ಬ ಸಾಮಾನ್ಯವಾಗಿ ಮಂಗಳವಾರವೇ ಬೀಳುತ್ತದೆ.

ಮಂಡ್ಯ ತಾಲ್ಲೂಕಿನ ಕಡಿಲುವಾಗಿಲು, ಮರಡಿಪುರ, ಶ್ರೀರಂಗಪಟ್ಟಣ ತಾಲ್ಲೂಕಿನ ಗಂಜಾಂ, ಮಳವಳ್ಳಿ ಬ್ಲಫ್, ಮದ್ದೂರು, ದೊಡ್ಡರಸಿನಕೆರೆ, ಮೆಣಸಗೆರೆ, ನಾಗಮಂಗಲ ಮುಂತಾದ ಕಡೆಗಳಲ್ಲಿ ಯಾವುದೇ ದೇವತಾಕಾರ್ಯ ನಡೆದರೂ ಗಂಗಾಮತಸ್ಥರಲ್ಲಿರುವ ವೀರ ಮಕ್ಕಳು ಸಾಮಾನ್ಯವಾಗಿ ಮಸಣಕ್ಕಮ್ಮ ಅಥವಾ ಗ್ರಾಮದಲ್ಲಿರುವ ಹೆಣ್ಣುದೇವರ ದೇವಸ್ಥಾನದಲ್ಲಿ ಇಟ್ಟಿರುವ ಚಕ್ರಾದಿ ಬಳೆಗಳ ಬಡಿಯುವುದರ ಮೂಲಕ ಹಾಡಿಕೊಂಡು ರಾತ್ರಿಯ ವೇಳೆ, ಕೆರೆ, ಹೊಳೆ, ಇಲ್ಲಿಂದ ಹೊಸ ಮಣ್ಣಿನ ಬಿಂದಿಗೆಯಿಂದ ಗಂಗೆಯನ್ನು ಪೂಜಿಸಿ 'ಗಂಗೆ'ಯನ್ನು ತಂದು ದೇವಾಲಯದಲ್ಲಿಡುತ್ತಾರೆ. ಇದಾದ ನಂತರವೇ ದೇವತಾ ಕಾರ್ಯಕ್ಕೆ ಚಾಲನೆ ನೀಡುತ್ತಾರೆ".[೮೬]

ದಾಸಯ್ಯ, ಜೋಗಯ್ಯ ಮತ್ತು ಸಿದ್ದಪ್ಪಾಜಿ ನೀಲಗಾರರು ಇವರು ತಮ್ಮ ಮನೆಗಳಲ್ಲಿ, ಅವರಿಗೆ ಸಂಬಂಧಿಸಿದ ದೇವರುಗಳನ್ನು ಪೂಜಿಸುತ್ತಾರೆ. ದಾಸಯ್ಯನ ಒಕ್ಕಲಿನವರು ಪ್ರತಿ ಶನಿವಾರ ತಮ್ಮ ಮನೆಯಲ್ಲಿರುವ ದೇವರಿಗೆ ಪೂಜೆ ಸಲ್ಲಿಸುತ್ತಾರೆ. ಜೋಗಿಗಳು ಪ್ರತಿ ಗುರುವಾರ ಭಾನುವಾರ, ತಮ್ಮ ಮನೆಯಲ್ಲಿರುವ ದೇವರ ವಿಗ್ರಹಕ್ಕೆ (ತ್ರಿಶೂಲ) ಪೂಜೆ ಮಾಡುತ್ತಾರೆ. ಸಿದ್ದಾಪ್ಪಾಜಿ ನೀಲಗಾರರು ಸಹ ನವಿಲಿನ ಕಡ್ಡಿ, ಬೆತ್ತವನ್ನು ಪೂಜಿಸುತ್ತಾರೆ. ತಿರುಪತಿಗೆ ವರ್ಷಕ್ಕೆ ಒಮ್ಮೆಯಾದರೂ ದಾಸ ಒಕ್ಕಲಿನವರು ಹೋಗುವುದುಂಟು. ಶಿವರಾತ್ರಿಯ ಸಂದರ್ಭದಲ್ಲಿ ಚುಂಚುನಗಿರಿಯ ಭೈರವೇಶ್ವರನ ಸನ್ನಿಧಿಗೆ ಜೋಗಯ್ಯದಿರು ಹೋಗುತ್ತಾರೆ. ಜೋಗಿಯ ವಂಶಸ್ಥರು ತಮ್ಮ ಹಿರಿಯ ಮಗನಿಗೆ ಹದಿನೆಂಟು ವರ್ಷ ತುಂಬಿದ ನಂತರ ಜೋಗಿ ಬಿಡುತ್ತಾರೆ. ನಂಜುಂಡೇಶ್ವರನ ಒಕ್ಕಲಿನವರು ವರ್ಷಕ್ಕೆ ಒಮ್ಮೆಯಾದರೂ ನಂಜುಂಡೇಶ್ವರನ ದರ್ಶನ ಪಡೆದು ಬರುತ್ತಾರೆ. ಮಹದೇಶ್ವರ ಸ್ವಾಮಿಯ ಒಕ್ಕಲಿನವರು ಶಿವರಾತ್ರಿ ಅಥವಾ ಕಾರ್ತಿಕ ಮಾಸದಲ್ಲಿ ಹೋಗುತ್ತಾರೆ. ಒಟ್ಟಾರೆಯಾಗಿ ತಮ್ಮ ಮನೆದೇವರನ್ನು ವರ್ಷದಲ್ಲಿ ಒಮ್ಮೆಯಾದರೂ ಹೋಗಿ ಪೂಜೆ ಸಲ್ಲಿಸಿ ಬರುವುದು ವಾಡಿಕೆ. ಅದೆಂತಹ ಕಷ್ಟಗಳಿದ್ದರೂ ಸಹ ಇವರು ಮಾತ್ರ ದೇವರ ಪೂಜೆಯನ್ನ ಮಾಡಿಸುವುದನ್ನ ಮಾತ್ರ ಮರೆಯುವುದಿಲ್ಲ.

ಗಂಗಾಮತಸ್ಥರ ಮಠದ ಸ್ವಾಮೀಜಿಯಿಂದ ಹಾಗೂ ದೇವರಗುಡ್ಡರಿಂದ ಕೆಲವರು ದೀಕ್ಷೆಯನ್ನು ತೆಗೆದುಕೊಳ್ಳುತ್ತಾರೆ. ಇವರು ಕಡ್ಡಾಯವಾಗಿ ಪ್ರತಿನಿತ್ಯ ತಮ್ಮ ಮನೆಯ ದೇವರಿಗೆ ಹಾಗೂ ದೀಕ್ಷೆ ತೆಗೆದುಕೊಂಡ ದೇವರಿಗೆ ಪೂಜೆ ಸಲ್ಲಿಸಬೇಕು. ಇವರು ಬಹಳ ಭಕ್ತಿಯಿಂದ, ಧಾರ್ಮಿಕ ವಿಧಿ-ವಿಧಾನಗಳಿಗೆ ಬದ್ಧರಾಗಿರುತ್ತಾರೆ. ಇವರನ್ನ ಸಮಾಜದಲ್ಲಿ ಎಲ್ಲರೂ

ಗೌರವದಿಂದ ಕಾಣುತ್ತಾರೆ. ಸಾಮಾನ್ಯವಾಗಿ ಮಾರಮ್ಮ ಎಂಬ ಹೆಸರಿನಿಂದಿರುವ ಎಲ್ಲಾ ದೇವತೆಗಳು ಅಥವಾ ಹೆಣ್ಣು ದೇವರುಗಳ ಪೂಜಾರಿಗಳು ಗಂಗಾಮತಸ್ಥರೇ ಆಗಿದ್ದಾರೆ. ಇವರಿಗೆ ಕಷ್ಟಗಳು ಬಂದು ಪರಿಹಾರವಾದ ನಂತರದಲ್ಲಿ 'ಶನಿಮಹಾತ್ಮ'ನ ಕಥೆಯನ್ನು ತಮ್ಮ ಮನೆಯಲ್ಲಿ ಓದಿಸುತ್ತಾರೆ. ಶನಿಮಹಾತ್ಮನ ದೇವಸ್ಥಾನಕ್ಕೂ ಹೋಗುತ್ತಾರೆ.

## ಚೊಕ್ಕ ಭೋಜನದ ದೈವಗಳು

ಗಂಗಾಮತಸ್ಥರು ಪೂಜಿಸುವ ದೇವತೆಗಳಲ್ಲಿ, ಕೆಲವು ದೇವತೆಗಳು ಚೊಕ್ಕ ಭೋಜನದ ದೈವಗಳಿವೆ. ಅವುಗಳೆಂದರೆ ಮಸಣಕ್ಕಮ್ಮ ಮತ್ತು ಮಾಸ್ತಮ್ಮ. ಈ ಎರಡು ದೇವರುಗಳಿಗೆ ಪ್ರಾಣಿಗಳ ಬಲಿಯನ್ನು ಕೊಡುವುದಿಲ್ಲ. ಏನಿದ್ದರೂ ಸಿಹಿ–ಸಪ್ಪೆ, ಹಣ್ಣು, ಮೊಸರನ್ನ, ಬೆಲ್ಲದನ್ನ ಇವುಗಳನ್ನು ಮಾತ್ರ ನೈವೇದ್ಯ ನೀಡುತ್ತಾರೆ. ಮಾಂಸದಿಂದ ಮಾಡಿದ ಯಾವುದೇ ಅಡುಗೆಯ ಅಭಿಷೇಕ ಮಾಡುವುದಿರಲಿ, ಮಾಂಸವನ್ನು ತಿಂದವರು ಕೂಡ ಆ ದೇವಸ್ಥಾನಗಳಿಗೆ ಪ್ರವೇಶ ಮಾಡುವಂತಿಲ್ಲ. ಏಕೆಂದರೆ ಇವರಿಬ್ಬರು ಪರಿಶುದ್ಧವಾದ ದೇವತೆಗಳು. ಮಾಸ್ತಮ್ಮ ಮತ್ತು ಮಸಣಕ್ಕಮ್ಮ ಇವರಿಬ್ಬರು ಅಕ್ಕತಂಗಿಯರು. ಒಂದೇ ದೇವಾಲಯದಲ್ಲಿ ಎರಡು ವಿಗ್ರಹಗಳನ್ನು ಪ್ರತಿಷ್ಠಾಪಿಸಲಾಗಿರುತ್ತದೆ. ಸಾಮಾನ್ಯವಾಗಿ ಚಕ್ರಾದಿ ಬಳೆಗಳನ್ನು ಇಲ್ಲಿಯೇ ಇಟ್ಟಿರುತ್ತಾರೆ. ಅಲ್ಲದೆ ಮಸಣಕ್ಕಮ್ಮ ಬರದೆ ಯಾವುದೇ ದೇವರ ಕಾರ್ಯ ನಡೆಯುವುದಿಲ್ಲ".[೮೭]

## ಮಾಂಸಾಹಾರಿ ದೇವತೆಗಳು

ಗಂಗಾಮತಸ್ಥರು ಸಾಮಾನ್ಯವಾಗಿ ಬಲಿ ನೀಡುವುದು ಹೆಣ್ಣು ದೇವತೆಗಳಿಗೆ ಮಾತ್ರ. ಕಾರಣ ನಮಗೆ ಎಲ್ಲಾ ಸಂದರ್ಭದಲ್ಲಿಯೂ ರಕ್ಷಣೆ ನೀಡುವ ದೇವರುಗಳೆಂದರೆ, ಹೆಣ್ಣು ದೇವತೆಗಳಾಗಿವೆ. ಮಾಸ್ತಮ್ಮ ಮತ್ತು ಮಸಣಕ್ಕಮ್ಮ ಇವರನ್ನು ಹೊರತು ಪಡಿಸಿ ಎಲ್ಲಾ ದೇವತೆಗಳಿಗೂ 'ಬಲಿ' ಕೊಡುತ್ತಾರೆ. ಬಲಿ ಕೊಡುವ ದೇವತೆಗಳೆಂದರೆ ಕಬ್ಬಾಳಮ್ಮ, ಪಟ್ಟಲದಮ್ಮ, ಬೀಡನಮ್ಮ, ರಾಮಾವ್ವ, ಕಾಳಮ್ಮ, ಮುದ್ದಮ್ಮ, ಚೌಡಮ್ಮ, ಮಂಚಮ್ಮ, ಹೆಬ್ಬರಸದಮ್ಮ, ಕಿಚ್ಚಲಮಾರಮ್ಮ, ಮದ್ದೂರಮ್ಮ, ಬೆಟ್ಟದರಸಮ್ಮ, ರಾಕಾಸಮ್ಮ, ಉರುಗಮ್ಮ, ಉಂತೂರಮ್ಮ, ದಂಡಿನ ಮಾರಮ್ಮ, ಊರು ಮಾರಮ್ಮ, ಕೊಂಡದಮ್ಮ ಮುಂತಾದ ದೇವತೆಗಳಿಗೆ ಕುರಿ, ಕೋಳಿ, ಮರಿಯನ್ನು ಬಲಿ ಕೊಡುವುದು ಸಾಮಾನ್ಯವಾಗಿ ಮಂಡ್ಯ ಜಿಲ್ಲೆಯಲ್ಲೆಲ್ಲ ಕಂಡು ಬರುತ್ತದೆ. ಈ ದೇವತೆಗಳಿಗೆ ಅರ್ಪಿಸುವ 'ಬಲಿ'ಯು ಹರಕೆಯದೂ ಆಗಿರಬಹುದು; ಇಲ್ಲವೇ ಆ ದಿನ

ಕುಲದವರು ಸಂಗ್ರಹಿಸಿದ ವರಿವಟದ ಬಲಿ ಆಗಿರಬಹುದು. ಒಟ್ಟಾರೆಯಾಗಿ ಹೆಣ್ಣು ದೇವರುಗಳ ಹಬ್ಬವನ್ನು ದೊಡ್ಡ ಹಬ್ಬವೆಂದು ಆಚರಿಸುತ್ತಾರೆ.

ಗಂಡು ದೇವರುಗಳಿಗೆ ಸಾಮಾನ್ಯವಾಗಿ 'ಬಲಿ'ಯನ್ನು ಕೊಡುವುದಿಲ್ಲ. ಕಾರಣ ಆ ದೇವತೆಗಳೆಲ್ಲವೂ 'ಶಿವ'ನ ಪ್ರತಿರೂಪವೆಂದು ಭಾವಿಸಿರುವುದೇ ಆಗಿದೆ. ಆದರೆ ಗಂಡು ದೇವರುಗಳ ಭಂಟರಿಗೆ ಪ್ರಾಣಿಬಲಿಯನ್ನು ಕೊಡುತ್ತಾರೆ. ಮಾದೇಶ್ವರ, ನಂಜುಂಡೇಶ್ವರ, ಕಾಳೇಶ್ವರ, ಬೋರೇದೇವರು ಮುಂತಾದ ದೇವರುಗಳಿಗೆ ಹಣ್ಣು-ಹಂಪಲಗಳ ನೈವೇದ್ಯ ಮಾಡುತ್ತಾರೆ. ಆದರೆ ಯಾವುದೇ ಸಂದರ್ಭದಲ್ಲೂ ಪ್ರಾಣಿ ಬಲಿಯನ್ನು ಕೊಡುವುದಿಲ್ಲ. ಅಲ್ಲದೆ ಈ ದೇವರುಗಳಿಗೆ ಹೋಗುವ ದಿನ ಮಾಂಸವನ್ನು ತಿನ್ನುವುದಿಲ್ಲ. ಗಂಗಾಮತಸ್ಥರ ಧಾರ್ಮಿಕ ಜೀವನವೂ ಉತ್ಕೃಷ್ಟವಾದ ಆಚರಣೆಯನ್ನು ಹೊಂದಿರುವುದು ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ತಿಳಿದುಬಂದಿರುತ್ತದೆ.

**ಕತ್ತಿ ಪವಾಡ**

ಗಂಗಾಮತಸ್ಥರು 'ಗಂಗೆ'ಯನ್ನು ಪೂಜಿಸಿ ಗಂಗೆಯನ್ನು ತರುವಾಗ, ದೇವರ ಮೆರವಣಿಗೆಯಲ್ಲಿ, ಕೊಂಡದ ಸಂದರ್ಭದಲ್ಲಿ, ಸಿಡಿ ಹಬ್ಬಗಳಲ್ಲಿ, ಗ್ರಾಮದೇವತೆಯ ಹಬ್ಬಗಳಲ್ಲಿ ಕತ್ತಿಪವಾಡವನ್ನು ಮಾಡುತ್ತಾರೆ. ಕತ್ತಿ ಪವಾಡ ಮಾಡುವ ವ್ಯಕ್ತಿಯ ಕತ್ತಿಗೆ ಹೂವನ್ನು ಸುತ್ತಲಾಗಿರುತ್ತದೆ. ಕತ್ತಿಯನ್ನು ಬೀಸುತ್ತ, ಒಮ್ಮೆ ತನ್ನ ಹೊಟ್ಟೆಗೆ ತಿವಿದುಕೊಳ್ಳುತ್ತಾ, ಮತ್ತೊಮ್ಮೆ ನೆಲಕ್ಕೆ ಚುಚ್ಚಿ, ದೇವರಿಗೆ ಮತ್ತೊಮ್ಮೆ ತೋರಿಸುತ್ತ, ನೋಡುಗರಿಗೆ ಆಶ್ಚರ್ಯವನ್ನು ಉಂಟುಮಾಡುತ್ತ ಕತ್ತಿ ಪವಾಡ ಮಾಡುತ್ತಾರೆ. ಕಡಿಲುವಾಗಿಲು, ಕನ್ನಲಿ, ಚಿಕ್ಕರಸನಕೆರೆ, ಉಕ್ಕಡ, ಕಾಡುಕೊತ್ತನಹಳ್ಳಿ, ಕಲ್ಕುಣಿ ಮುಂತಾದ ಸ್ಥಳಗಳಲ್ಲಿ ಕತ್ತಿ ಪವಾಡ ಮಾಡುತ್ತಾರೆ. ಇದು ಅವರ ದೈವ ಭಕ್ತಿಯನ್ನು ತೋರಿಸುತ್ತದೆ.

**ಕಾಯಿ ಪವಾಡ**

ಹೊಳೆ ಅಥವಾ ಕೆರೆಯಲ್ಲಿ ಗಂಗೆಯನ್ನು ಪೂಜಿಸಿ ರಾತ್ರಿಯ ವೇಳೆಯಲ್ಲಿ 'ಗಂಗೆ'ಯನ್ನು ದೇವಾಲಯಕ್ಕೆ ತರುವ ಸಂದರ್ಭದಲ್ಲಿ ಕಾಯಿಪವಾಡವನ್ನು ಮಾಡುತ್ತಾರೆ. ಚಕ್ರಾದಿಬಳೆಗಳನ್ನು ಬಡಿಯುತ್ತಾ, ಹಾಡನ್ನು ಹಾಡುತ್ತ, ಚೌಡಮ್ಮ, ಕಾಳಮ್ಮ, ಮಸಣ್ಣ ಮುಂತಾದ ದೇವತೆಗಳ ಪಟವನ್ನು ಹೊತ್ತು ಬರುವ ಸಂದರ್ಭದಲ್ಲಿ ಕಾಯಿಪವಾಡವನ್ನು ಮಾಡುತ್ತಾರೆ. ಒಬ್ಬರ ಪಕ್ಕ ಒಬ್ಬರು ನಿಂತಿರುತ್ತಾರೆ. ಅವರ ಹೆಗಲ ಮೇಲೆ ಒಬ್ಬೊಬ್ಬರು ಕುಳಿತು ಕೊಳ್ಳುತ್ತಾರೆ. ಮತ್ತೊಬ್ಬನ

ಹೆಗಲ ಮೇಲೆ ಕಾಯಿಯನ್ನು ಹೊಡೆಯುವ ವ್ಯಕ್ತಿ ನಿಂತಿರುತ್ತಾನೆ. ಮಕ್ಕರಿಯಿಂದ ಕಾಯಿಯನ್ನು ಆತನ ಕೈಗೆ ಒಂದೊಂದಾಗಿ ಕೊಡುತ್ತಾನೆ. ಒಬ್ಬರ ತಲೆಯ ಮೇಲೆ ಒಂದೊಂದು ಕಾಯಿಯನ್ನು ಹೊಡೆಯುತ್ತಾರೆ. ಕಾಯಿ ಹೊಡೆದ ತಕ್ಷಣ ಎರಡು ಹೋಳಾಗುತ್ತದೆ. ಎಲ್ಲರೂ ಭಕ್ತ ಪರವಶರಾಗಿ ಗಂಗಾಮಾತೆಗೆ ಜೈ, ಚೌಡಮ್ಮನಿಗೆ ಜೈ, ಮಾರಮ್ಮನಿಗೆ ಜೈ ಎಂದು ಎಲ್ಲಾ ದೇವತೆಗಳಿಗೆ ಕೂಗುತ್ತಾ ಬರುತ್ತಾರೆ. ಈ ಸಂದರ್ಭದಲ್ಲಿ ಪಂಜಿನ ಸೇವೆಯನ್ನು ಮಾಡುತ್ತಾರೆ. ಕಾಯಿಯನ್ನು ತಲೆಯ ಮೇಲೆ ಹೊಡೆಸಿಕೊಂಡವರಿಗೆ ಯಾವುದೇ ರೀತಿಯ ತೊಂದರೆಯಾಗುವುದಿಲ್ಲ. ದೇವರು ಅವರಿಗೆ ಒಲಿಯುತ್ತಾನೆಂಬ ನಂಬಿಕೆ."[೮೮] ಕಡಿಲುವಾಗಿಲಿನಲ್ಲಿ ಕಾಯಿಪವಾಡಕ್ಕೆ ಹೆಚ್ಚು ಪ್ರಸಿದ್ಧಿ.

ಹೀಗೆ ಗಂಗಾಮತಸ್ಥರು ತಮ್ಮದೇ ಮಹತ್ವಪೂರ್ಣವಾದ ಧಾರ್ಮಿಕ ಜೀವನವನ್ನ ಹೊಂದಿದ್ದಾರೆ. ಮಳವಳ್ಳಿ ಪಟ್ಟಣದಲ್ಲಿ ಒಂದು ಮಠವನ್ನು ಸ್ಥಾಪಿಸಿಕೊಂಡಿದ್ದಾರೆ. ಶ್ರೀ ರಾಮಾರೂಢ ಮಠ ಎಂದು ಹೆಸರಿರುವ ಈ ಮಠವು ಜಿಲ್ಲೆಯ ಗಂಗಾಮತಸ್ಥರ ಧಾರ್ಮಿಕ ಆಚರಣೆಗಳಿಗೆ ಮಾದರಿಯಾಗಿದೆ. ಗಂಜಾಂನಲ್ಲಿರುವ ಧರ್ಮದ ಚಾವಡಿ, ಇವೆಲ್ಲವೂ ಗಂಗಾಮತಸ್ಥರ ದೈವ ಭಕ್ತಿಯನ್ನು ತೋರಿಸುತ್ತದೆ. ಇವರ ಭಕ್ತಿ ಎಷ್ಟೆಂದರೆ, ಪ್ರಾಣದ ಹಂಗನ್ನು ಬಿಟ್ಟು ತಲೆಯ ಮೇಲೆ ಕಾಯಿ ಹೊಡೆಸಿಕೊಳ್ಳುವುದು, ಸಿಡಿ ಏರುವುದು, ಬಾಯಿಬೀಗ ಹಾಕಿಸಿಕೊಳ್ಳುವುದು, ಕೊಂಡ ಹಾಯುವುದು ಇವೆಲ್ಲವೂ ಭಕ್ತಿಯ ಪಾರಮ್ಯವನ್ನು ತೋರಿಸುತ್ತವೆ. ಒಟ್ಟಾರೆ ಗಂಗಾಮತಸ್ಥರ ಧಾರ್ಮಿಕ ಜೀವನವು ಉತ್ತಮವಾಗಿದೆ. ದೈವದ ಬಗ್ಗೆ ಅಪಾರವಾದ ಭಕ್ತಿ, ನಂಬಿಕೆಯನ್ನು ಇಟ್ಟುಕೊಂಡವರಾಗಿದ್ದಾರೆ.

## ಅಡಿ ಟಿಪ್ಪಣಿಗಳು

೧. ಚಿದಾನಂದ ಎನ್. ಕುಳಗೇರಿ, ಭಾರತೀಯ ಸಮಾಜದ ಅಧ್ಯಯನ, ಶ್ರೀ ಸಿದ್ಧಲಿಂಗೇಶ್ವರ ಪ್ರಕಾಶನ ಗುಲ್ಬರ್ಗಾ, ೨೦೦೬, ಪುಟ ೦೧.

೨. ರಾಮಚಂದ್ರಜೋಷಿ, ಸಮಾಜಶಾಸ್ತ್ರದ ಮೂಲತತ್ವಗಳು ಮತ್ತು ಸಾಮಾಜಿಕ ಚಿಂತನೆ, ಶ್ರೀ ಸಿದ್ದಲಿಂಗೇಶ್ವರ ಪ್ರಕಾಶನ, ಗುಲ್ಬರ್ಗಾ, ೨೦೦೯, ಪುಟ – ೩೫.

೩. ಜಾನಪದ ಮಾಲೆ–೧, ಜಾನಪದ ಕೈಪಿಡಿ, ಪ್ರಧಾನ ಸಂಪಾದಕರು ಡಾ॥ ಹೆಚ್.ಜೆ.ಲಕ್ಕಪ್ಪಗೌಡ.

೪. ಚಿದಾನಂದ ಎನ್ ಕುಳಗೇರಿ, ಭಾರತೀಯ ಸಮಾಜ ಅಧ್ಯಯನ, ಶ್ರೀ ಸಿದ್ದಲಿಂಗೇಶ್ವರ ಪ್ರಕಾಶನ, ಗುಲ್ಬರ್ಗಾ, ೨೦೦೬, ಪುಟ – ೭೬.

೫. ವಕ್ತೃ: ಪೀಚಯ್ಯ ತಂದೆ ತೈಲೂರು ಪುಟ್ಟಯ್ಯ, ೮೫ ವರ್ಷ, ಕುಲುಮೆದೊಡ್ಡಿ, ಮಳವಳ್ಳಿ ತಾಲ್ಲೂಕು.

೬. ವಕ್ತೃ : ಅಣ್ಣಯ್ಯ, ೩೫ ವರ್ಷ, ಪ್ರೌಢಶಾಲಾ ಶಿಕ್ಷಕರು, ಕಲ್ಕುಣಿ, ಮಳವಳ್ಳಿ ತಾಲ್ಲೂಕು.

೭. ಡಾ. ಎಂ.ಜಿ. ಈಶ್ವರಪ್ಪ "ಜಾನಪದ ಇಬ್ಬನಿಗಳು" ಕನ್ನಡ ಪುಸ್ತಕ ಪ್ರಾಧಿಕಾರ, ಕರ್ನಾಟಕ ಸರ್ಕಾರ, ಬೆಂಗಳೂರು – ೧೯೯೯, ಪು – ೪೯.

೮. ಗೌರವ ಸಂಪಾದಕ ಡಾ.ರಾ.ಗೌ – ಅಭಿವ್ಯಕ್ತಿ, ಸಾಹಿತ್ಯ ಮಾಸಿಕ ಎಂ.ಎಲ್. ಶ್ರೀಕಂಠೇಗೌಡ ಸಂಶೋಧನಾ ಕೇಂದ್ರ, ಕರ್ನಾಟಕ ಸಂಘ (ರಿ), ಮಂಡ್ಯ, ಸಂಪುಟ – ೧, ಸಂಚಿಕೆ–೧, ಜನವರಿ – ೨೦೦೮.

೯. ಮಂಡ್ಯ ಜಿಲ್ಲಾ ಗ್ಯಾಸೆಟಿಯರ್, ಪು – ೧೭೫.

೧೦. ಎಚ್ಚಾರ್ಕೆ, ಭಾರತದ ಆರ್ಥಿಕಾಭಿವೃದ್ಧಿ, ಸ್ವಪ್ನ ಬುಕ್‌ಹೌಸ್, ಬೆಂಗಳೂರು, ೨೦೦೫, ಪು. ೧೩೯.

೧೧. ಕೃಷಿ ಉತ್ಪಾದನೆ ೧೯೯೪–೯೫, ಕೃಷಿ ನಿರ್ದೇಶನಾಲಯ ಬೆಂಗಳೂರು – ೧೯೯೫, ಪು. ೯೬.

೧೨. ಕಲ್ಲೂರು ಎಂ.ಎಸ್. ಮತ್ತು ಪ್ರಭಾಕರ ಶಿಶಿಲ, ಕೃಷಿ ಅರ್ಥಶಾಸ್ತ್ರ ಕಲಾ ಪ್ರಕಾಶನ, ಬೆಂಗಳೂರು, ೨೦೦೦, ಪು. ೧೮೩.

೧೩. ವಕ್ತೃ : ಸಿದ್ದಯ್ಯ ತಂದೆ ದೊಡ್ಡ ಬೋರಯ್ಯ, ವಯಸ್ಸು – ೪೯, ಕ್ಯಾತನಹಳ್ಳಿ, ಪಾಂಡವಪುರ ತಾ॥.

೧೪. ವಕ್ತೃ : ಚೌಡಯ್ಯ ತಂದೆ ಸಿದ್ದಯ್ಯ, ವಯಸ್ಸು – ೪೯, ಬಾಳೆಹೊನ್ನಿಗ, ಮಳವಳ್ಳಿ ತಾ॥.

೧೫. ಡಾ. ದೇ.ಜ.ಗೌ. ಸಂಪಾದಕ, "ಸುವರ್ಣ ಮಂಡ್ಯ" ಮಂಡ್ಯ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ೨೦೦೬, ಪು. ೧೬೯.

೧೬. ವಕ್ತೃ : ನಂಜಯ್ಯ ತಂದೆ ಚಿಕ್ಕಯ್ಯ ವಯಸ್ಸು – ೭೫, ಚಿಕ್ಕರಸಿನಕೆರೆ, ಮದ್ದೂರು ತಾ॥.

೧೭. ಡಾ. ಈಶ್ವರಪ್ಪ ಎಂ.ಜಿ. "ಜಾನಪದ ಇಬ್ಬನಿಗಳು" ಕನ್ನಡ ಪುಸ್ತಕ ಪ್ರಾಧಿಕಾರ, ೧೯೯೯, ಪು. ೧೬.

೧೮. ವಕ್ತೃ : ಪೀಚಯ್ಯ ತಂದೆ ತೈಲೂರು ಪುಟ್ಟಯ್ಯ, ೮೫ ವರ್ಷ, ಕುಲಮೆದೊಡ್ಡಿ, ಮಳವಳ್ಳಿ ತಾಲ್ಲೂಕು.

೧೯. ಡಾ॥ ಸಿ.ಪಿ. ಸಿದ್ಧಾಶ್ರಮ "ದಿಟದ ದಿಟ್ಟಿಯ ಪಯಣ" ೨೦೦೫, ಪು. ೧೭೨.

೨೦. ವೆಂಕಟರಾಜ ಪುಣಿಂಚತ್ತಾಯ "ಮೊಗವೀರರ ಸಂಸ್ಕೃತಿ" ಉಪ ಸಂಸ್ಕೃತಿ ಅಧ್ಯಯನ, ಪುಟ. ೨೨, ವರ್ಷ – ೧೯೯೩.

೨೧. ವಕ್ತೃ : ಸಿದ್ದಯ್ಯ ತಂದೆ ದೊಡ್ಡಮಾರಯ್ಯ, ವಯಸ್ಸು – ೪೬, ಕಲ್ಕುಣಿ, ಮಳವಳ್ಳಿ ತಾ॥.

೨೨. ವೆಂಕಟರಾಜ ಪುಣಿಂಚತ್ತಾಯ "ಮೊಗವೀರರ ಸಂಸ್ಕೃತಿ" ಉಪಸಂಸ್ಕೃತಿ ಅಧ್ಯಯನ, ಪು. ೧೬, ವರ್ಷ–೧೯೯೩.

೨೩. ವಕ್ತೃ : ಚಿಕ್ಕಬೋರಯ್ಯ ತಂದೆ ಮುದ್ದಯ್ಯ ವಯಸ್ಸು – ೭೫, ದೇಶಹಳ್ಳಿ, ಮದ್ದೂರು ತಾ॥.

೨೪. ಮೈತ್ರಿ ಕೆ.ಎಂ. ಬುಡಕಟ್ಟು ಕುಲಕಸುಬುಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, ೨೦೦೨, ಪು. ೧೫.

೨೫. ಅಭಿವ್ಯಕ್ತಿ, ಸಾಹಿತ್ಯ ಮಾಸಿಕ, ಸಂಪುಟ–೧, ಸಂಚಿಕೆ – ೧, ಜನವರಿ – ೨೦೦೮, ಎಂ.ಎಲ್. ಶ್ರೀಕಂಠೇಗೌಡ ಸಂಶೋಧನಾ ಕೇಂದ್ರ ಕರ್ನಾಟಕ ಸಂಘ (ರಿ), ಮಂಡ್ಯ ಗೌರವ ಸಂಪಾದಕರು ಡಾ॥ ರಾಗೌ, ಪು. ೭೪.

೨೬. ವಕ್ತೃ : ಎಂ. ಮಹದೇವ ತಂದೆ ಮಾದಯ್ಯ ೩೯ ವರ್ಷ ವಯಸ್ಸು, ಅಪ್ಪಾಜಯ್ಯನದೊಡ್ಡಿ, ಮಳವಳ್ಳಿ ತಾ॥.

೨೭. ಪ್ರಶಾಂತ್ ಎಚ್.ಡಿ. ಈಶಾನ್ಯ ಕರ್ನಾಟಕದಲ್ಲಿ ಪ್ರಾಥಮಿಕ ಶಿಕ್ಷಣ ಮತ್ತು ಸಮಾಜ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, ೨೦೦೫, ಪು. ೩೯.

೨೮. ವಕ್ತೃ : ಚಿಕ್ಕಚನ್ನಯ್ಯ ತಂದೆ ಕಾಳಯ್ಯ ವಯಸ್ಸು – ೭೫, ಹೊಳಲು, ಮಂಡ್ಯ ತಾ॥.

೨೯. Elwin V., A New Deal for Tribal India, New Delhi, Ministry of Home affairs, 1963, p. 103.

೩೦. ದೇಜಗೌ "ಜಾನಪದ ಸೌಂದರ್ಯ" – ೧೯೭೭, ಪು. ೧೩೨.

೩೧. ವಕ್ತೃ : ನಿಂಗಮ್ಮ ಗಂಡ ಹುಚ್ಚಪ್ಪ, ವಯಸ್ಸು–೫೬, ಅಪ್ಪಾಜಯ್ಯನದೊಡ್ಡಿ, ಮಳವಳ್ಳಿ ತಾ॥.

೩೨. ವಕ್ತೃ : ಮಹದೇವಮ್ಮ ಗಂಡ ಮಹದೇವಸ್ವಾಮಿ, ವಯಸ್ಸು – ೬೪, ಕಲ್ಕುಣಿ, ಮಳವಳ್ಳಿ ತಾ॥.

೩೩. ವಕ್ತೃ : ಲೀಲಾವತಿ, ಸಿ. ಗಂಡ ರಾಮಚಂದ್ರ, ವಯಸ್ಸು – ४೫, ಗಂಜಾಂ, ಶ್ರೀರಂಗಪಟ್ಟಣ ತಾ॥.

೩೪. ವಕ್ತೃ : ಸಿದ್ದಮ್ಮ ಗಂಡ ಕುಂಟಬೋರಯ್ಯ, ವಯಸ್ಸು – ೬೯, ಚಿನಕುರುಳಿ, ಪಾಂಡವಪುರ ತಾ॥.

೩೫. ದೊಡ್ಡಮನಿ ಲೋಕರಾಜು ಎ.ಕೆ. (ಸಂ), ಕರ್ನಾಟಕ ಸಿಂದೋಳ್ಳು ಸಮುದಾಯದ ಸಮಾಜಶಾಸ್ತ್ರೀಯ ಅಧ್ಯಯನ, ೨೦೦೫ರಲ್ಲಿ ಕನ್ನಡ ವಿಶ್ವವಿದ್ಯಾನಿಲಯ, ಹಂಪಿಗೆ ಸಲ್ಲಿಸಿದ ಅಪ್ರಕಟಿತ ಪಿಎಚ್.ಡಿ. ಪ್ರಬಂಧ, ಪು. ४೧.

೩೬. ಡಾ. ಅಂಬಳಿಕೆ ಹಿರಿಯಣ್ಣ "ಮಲೆನಾಡಿನ ವೈಷ್ಣವ ಒಕ್ಕಲಿಗರ ಸಂಸ್ಕೃತಿ" ಕನ್ನಡ ಪುಸ್ತಕ ಪ್ರಾಧಿಕಾರ–೧೯೯೯, ಪು. ೬೩.

೩೭. ಜಾನಪದ ಮಾಲೆ–೧, ಜಾನಪದ ಕೈಪಿಡಿ, ಪ್ರಧಾನ ಸಂಪಾದಕ ಡಾ॥ ಎಚ್.ಜೆ.ಲಕ್ಕಪ್ಪಗೌಡ, ಕನ್ನಡ ಪುಸ್ತಕ ಪ್ರಾಧಿಕಾರ–೧೯೯೭, ಪು. ೧४.

೩೮. ವಕ್ತೃ : ನಿಂಗಮ್ಮ ಗಂಡ ಹೊಟ್ಟೆಈರಯ್ಯ, ವಯಸ್ಸು – ೭೫, ಕನ್ನಲಿ, ಮಂಡ್ಯ ತಾ॥.

೩೯. ಜಾನಪದ ಮಾಲೆ–೧ ಜಾನಪದ ಕೈಪಿಡಿ, ಪ್ರಧಾನ ಸಂಪಾದಕ ಡಾ॥ ಎಚ್.ಜೆ.ಲಕ್ಕಪ್ಪಗೌಡ, ಕನ್ನಡ ಪುಸ್ತಕ ಪ್ರಾಧಿಕಾರ–೧೯೯೭, ಪು. ೧೫.

४೦. ವಕ್ತೃ : ಉರಗಮ್ಮ ಗಂಡ ಚನ್ನಯ್ಯ, ವಯಸ್ಸು – ೭೦, ಕುಂತೂರು, ಮಳವಳ್ಳಿ ತಾ॥.

४೧. ವಕ್ತೃ : ಚಿಕ್ಕಸ್ವಾಮಿ ತಂದೆ ಪುಟ್ಟಬಸವಯ್ಯ, ವಯಸ್ಸು – ೩೮, ಗಂಗಾಮತಸ್ಥ ಬೀದಿ, ಮಳವಳ್ಳಿ.

४೨. ಅಕ್ಕಮಹಾದೇವಿ, ಬುಡಕಟ್ಟು ನ್ಯಾಯ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೮४, ಪು. ೧४.

೪೩. ಡಾ. ಅಂಬಳಿಕೆ ಹಿರಿಯಣ್ಣ, ಕಚ್ಚೆಗೌಳಿಗರ ಸಂಸ್ಕ್ರತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩, ಪು. ೫೭.
೪೪. ಡಾ. ಕೃಷ್ಣಮೂರ್ತಿ ಹನೂರು, ಮ್ಯಾಸಬೇಡರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩, ಪು. ೯೩.
೪೫. ಡಾ॥ ಎಚ್.ಜೆ. ಲಕ್ಕಪ್ಪಗೌಡ – ಪ್ರಧಾನ ಸಂಪಾದಕ, ಜಾನಪದ ಮಾಲೆ–೧, "ಜಾನಪದ ಕೈಪಿಡಿ" ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೯೭, ಪು. ೧೬೫.
೪೬. ವೆಂಕಟರಾಜ ಪುಣಿಂಚತ್ತಾಯ, "ಮೊಗವೀರರ ಸಂಸ್ಕೃತಿ" ಉಪಸಂಸ್ಕೃತಿ ಅಧ್ಯಯನ ಮಾಲೆ, ೧೯೯೩, ಪು. ೨೪.
೪೭. ಭಾರತದ ಗ್ಯಾಸೆಟಿಯರ್, ಕರ್ನಾಟಕ ರಾಜ್ಯ, ಮಂಡ್ಯಜಿಲ್ಲೆ, ೨೦೦೩, ಪು. ೧೭೫.
೪೮. ವಕ್ತೃ : ಕಂಬರಾಜ ತಂದೆ ರಾಮಣ್ಣ, ವಯಸ್ಸು ೩೪ವರ್ಷ, ಮಳವಳ್ಳಿ ಪಟ್ಟಣ.
೪೯. ವಕ್ತೃ : ಪಾಪಣ್ಣ ತಂದೆ ತಿಮ್ಮಯ್ಯ, ವಯಸ್ಸು – ೭೦, ಗಂಜಾಂ, ಶ್ರೀರಂಗಪಟ್ಟಣ ತಾ॥.
೫೦. ಸಿ.ಪಿ. ಸಿದ್ದಾಶ್ರಮ, "ದಿಟದ ದಿಟ್ಟಿಯ ಪಯಣ", ೨೦೦೫, ಪು. ೧೭೦.
೫೧. ಡಾ॥ ಎಚ್.ಜೆ. ಲಕ್ಕಪ್ಪಗೌಡ, ಪ್ರಧಾನ ಸಂಪಾದಕ, ಜಾನಪದ ಮಾಲೆ–೧, "ಜಾನಪದ ಕೈಪಿಡಿ" ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೯೭, ಪು. ೧೯.
೫೨. ಡಾ. ಅಂಬಳಿಕೆ ಹಿರಿಯಣ್ಣ "ಮಲೆನಾಡಿನ ವೈಷ್ಣವ ಒಕ್ಕಲಿಗರ ಸಂಸ್ಕೃತಿ" , ೧೯೯೯, ಪು. ೫೬.
೫೩. ವಕ್ತೃ : ಚನ್ನಯ್ಯ ತಂದೆ ಚೂರಿ ಚನ್ನಯ್ಯ ವಯಸ್ಸು – ೭೦, ಗಾಮನಹಳ್ಳಿ, ಶ್ರೀರಂಗಪಟ್ಟಣ ತಾ॥.
೫೪. ವೆಂಕಟರಾಜ ಪುಣಿಂಚತ್ತಾಯ "ಮೊಗವೀರರ ಸಂಸ್ಕೃತಿ" ಉಪಸಂಸ್ಕೃತಿ ಮಾಲೆ, ೧೯೯೩, ಪು. ೧೩.
೫೫. ವೆಂಕಟರಾಜ ಪುಣಿಂಚತ್ತಾಯ . "ಮೊಗವೀರರ ಸಂಸ್ಕೃತಿ" ಉಪಸಂಸ್ಕೃತಿ ಮಾಲೆ, ೧೯೯೩, ಪು. ೩೩.
೫೬. ಡಾ.ರಾಗೌ – ಗೌರವ ಸಂಪಾದಕ "ಅಭಿವ್ಯಕ್ತಿ" ಸಂಪುಟ–೧, ಸಂಚಿಕೆ–೧, ಜನವರಿ, ೨೦೦೮, ಪು. ೭೪.
೫೭. ಡಾ. ಅಂಬಳಿಕೆ ಹಿರಿಯಣ್ಣ "ಮಲೆನಾಡಿನ ವೈಷ್ಣವ ಒಕ್ಕಲಿಗರ ಸಂಸ್ಕೃತಿ", ೧೯೯೯, ಪು. ೧೩೩.

೫೮. ವಕ್ತೃ : ಜಯರಾಮು ಕೆ. ತಂದೆ ಕಾಳಯ್ಯ, ವಯಸ್ಸು – ೪೪, ಅಪ್ಪಾಜಯ್ಯನದೊಡ್ಡಿ, ಮಳವಳ್ಳಿ ತಾ॥.

೫೯. ಅಂಬೇಡ್ಕರ್ ಬರಹಗಳು ಮತ್ತು ಭಾಷಣಗಳು, ಸಂ. ೧, ಕನ್ನಡ ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೯೧, ಪುಟ. ೩೯.

೬೦. ವಕ್ತೃ : ವಿಜಯಮ್ಮ ಗಂಡ ಈಶ್ವರನಾಯಕ್, ವಯಸ್ಸು – ೪೨, ಅಧ್ಯಕ್ಷರು, ಗಂಗಾಪರಮೇಶ್ವರಿ ಸಹಕಾರ ಸಂಘ, ಮಳವಳ್ಳಿ.

೬೧. ವಕ್ತೃ : ಜಿ.ಎಸ್.ವೆಂಕಟರಾಜು ತಂದೆ ಶ್ರೀನಿವಾಸಯ್ಯ, ವಯಸ್ಸು–೬೦, ಕಾರ್ಯದರ್ಶಿ, ಶ್ರೀಗಂಗಾಧರೇಶ್ವರ ಮೀನುಗಾರರ ಸಹಕಾರ ಸಂಘ (ನಿ), ಗಂಜಾಂ.

೬೨. ವಕ್ತೃ : ಸಿದ್ದಮ್ಮ ಗಂಡ ಶಿವಯ್ಯ ವಯಸ್ಸು – ೩೮, ಹೊನ್ನಾಗನಹಳ್ಳಿ, ಪಾಂಡವಪುರ ತಾ॥.

೬೩. ವಕ್ತೃ : ಮಹೇಶ್ ತಂದೆ ರಾಜಣ್ಣ, ವಯಸ್ಸು – ೩೦, ಅಧ್ಯಕ್ಷರು, ಶ್ರೀಗಂಗಾಂಭಿಕ ಯುವಕ ಮಿತ್ರಮಂಡಳಿ, ಬಾಳೆಹೊನ್ನಿಗ.

೬೪. ವಕ್ತೃ : ಡಾ॥ ಚಂದ್ರಶೇಖರ್ ತಂದೆ ಪುಟ್ಟಮಾದಯ್ಯ. ವಯಸ್ಸು – ೪೮, ಅಧ್ಯಕ್ಷರು, ಬೆಸ್ತರ ಸರ್ಕಾರಿ ನೌಕರರ ಕ್ಷೇಮಾಭಿವೃದ್ಧಿ ಸಂಘ, ಮಳವಳ್ಳಿ.

೬೫. ಡಾ॥ ಕೂಡ್ಲೂರು ವೆಂಕಟಪ್ಪ "ಗೊಂಬೆ ಚಿತ್ತಾರದ ಮಡೆಕಡೆದೊ ", ೨೦೦೯, ಪು. ೯೩.

೬೬. ಡಾ॥ ಮಂಜುನಾಥ ಬೇವಿನಕಟ್ಟಿ, ಜನಪದ ನಂಬಿಕೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, ೧೯೯೬.

೬೭. 'ಜಾನಪದ ಜಗತ್ತು' ಸಂಪುಟ–೨೯, ಸಂಚಿಕೆ–೪, ಅಕ್ಟೋಬರ್–ಡಿಸೆಂಬರ್, ೨೦೦೮, ಪು. ೨೨.

೬೮. ಡಾ. ರಾಗೌ–ಗೌರವ ಸಂಪಾದಕ "ಅಭಿವ್ಯಕ್ತಿ" ಸಂಪುಟ–೧, ಸಂಚಿಕೆ–೧, ಜನವರಿ–೨೦೦೮, ಪು. ೭೮.

೬೯. ಡಾ॥ ಎಚ್.ಜೆ.ಲಕ್ಕಪ್ಪಗೌಡ–ಪ್ರಧಾನ ಸಂಪಾದಕ, ಜಾನಪದ ಮಾಲೆ–೧, "ಜಾನಪದ ಕೈಪಿಡಿ", ೧೯೯೭, ಪು. ೨೮೯.

೭೦. ಡಾ॥ ಅಂಬಳಿಕೆ ಹಿರಿಯಣ್ಣ "ಮಲೆನಾಡಿನ ವೈಷ್ಣವ ಒಕ್ಕಲಿಗರ ಸಂಸ್ಕೃತಿ", ೧೯೯೯, ಪು. ೩೦೨.

೨೧. ಎಸ್.ಕೆ.ಕರೀಂಸಾಬ್, ಜಾನಪದ ವೈದ್ಯ, ಕರ್ನಾಟಕ ಯಕ್ಷಗಾನ ಅಕಾಡೆಮಿ, ಬೆಂಗಳೂರು, ೧೯೮೯, ಪು. ೨೮೯.

೨೨. ವಕ್ತೃ : ಚಲುವಮ್ಮ ಗಂಡ ಸಣ್ಣಯ್ಯ, ವಯಸ್ಸು – ೬೯, ತೊರೆಬೊಮ್ಮನಹಳ್ಳಿ, ಮದ್ದೂರು ತಾ॥.

೨೩. ವಕ್ತೃ : ಬೋರಯ್ಯ ತಂದೆ ಚನ್ನಯ್ಯ, ವಯಸ್ಸು – ೭೩, ಕೆನ್ನಾಳು, ಪಾಂಡವಪುರ ತಾ॥.

೨೪. ಡಾ. ಎಂ.ಜಿ. ಈಶ್ವರಪ್ಪ 'ಜಾನಪದ ಇಬ್ಬನಿಗಳು' ಜಾನಪದ ಮಾಲೆ ಕನ್ನಡ ಪುಸ್ತಕ ಪ್ರಾಧಿಕಾರ, ೧೯೯೯, ಪು. ೧೭೫.

೨೫. ಡಾ॥ ಎಚ್.ಜೆ. ಲಕ್ಕಪ್ಪಗೌಡ, ಪ್ರಧಾನ ಸಂಪಾದಕ "ಜಾನಪದ ಕೈಪಿಡಿ" ಜಾನಪದ ಮಾಲೆ, ೧೯೯೭, ಪು. ೧೪೨.

೨೬. ವಕ್ತೃ : ನಂಜಮ್ಮ ಗಂಡ ಕರಡಿಸಿದ್ದಯ್ಯ, ಬೂಕನಕೆರೆ, ಕೆ.ಆರ್. ಪೇಟೆ ತಾ॥.

೨೭. ಡಾ. ಅಂಬಳಿಕೆ ಹಿರಿಯಣ್ಣ "ಮಲೆನಾಡಿನ ವೈಷ್ಣವ ಒಕ್ಕಲಿಗರ ಸಂಸ್ಕೃತಿ" ಜಾನಪದ ಮಾಲೆ, ೧೯೯೯, ಪು. ೨೨೫.

೨೮. ಜ್ಞಾನಗಂಗೋತ್ರಿ, ಸಂಪುಟ–೬, ಕರ್ನಾಟಕ ಸಹಕಾರಿ ಪ್ರಕಾಶನ ಮಂದಿರ, ಬೆಂಗಳೂರು, ೧೯೭೩, ಪು. ೨.

೨೯. "ಸುವರ್ಣ ಮಂಡ್ಯ" ಸಂಪಾದಕ, ಡಾ. ದೇಜಗೌ, ೨೦೦೬, ಪು. ೩೪೦.

೩೦. ವಕ್ತೃ : ದುಂಡಮ್ಮ ಗಂಡ ಕರಿಸಿದ್ದಯ್ಯ, ವಯಸ್ಸು – ೮೦, ಮಾಯಸಂದ್ರ, ನಾಗಮಂಗಲ ತಾ॥.

೩೧. ವಕ್ತೃ : ಲಕ್ಷ್ಮೀ ಗಂಡ ರಾಜ ವಯಸ್ಸು – ೩೮, ಮೆಣಸಗೆರೆ, ಮದ್ದೂರು ತಾ॥.

೩೨. ಡಾ. ಅಂಬಳಿಕೆ ಹಿರಿಯಣ್ಣ "ಜಾನಪದ : ಕೆಲವು ಅಧ್ಯಯನಗಳು", ೧೯೯೪, ಪು. ೭೨.

೩೩. ಡಾ. ಅಂಬಳಿಕೆ ಹಿರಿಯಣ್ಣ "ಮಲೆನಾಡಿನ ವೈಷ್ಣವ ಒಕ್ಕಲಿಗರ ಸಂಸ್ಕೃತಿ", ೧೯೯೯, ಪು. ೧೬೩.

೩೪. ಭಾರತದ ಗ್ಯಾಸೆಟಿಯರ್, ಕರ್ನಾಟಕ ರಾಜ್ಯ, ಮಂಡ್ಯ ಜಿಲ್ಲೆ, ೨೦೦೩, ಪು. ೧೭೫.

೩೫. ದೇಜಗೌ–ಪ್ರಧಾನ ಸಂಪಾದಕ "ಸಿರಿಯೊಡಲು" ೧೯೯೪, ಪು. ೧೩೬.

೩೬. ವಕ್ತೃ : ಕೆ.ಬಿ.ಲಕ್ಷ್ಮಣ ತಂದೆ ಬೋರಯ್ಯ, ವಯಸ್ಸು – ೪೮, ಕಡಿಲುವಾಗಿಲು, ಮದ್ದೂರು ತಾ॥.

೮೭. ವಕ್ತೃ : ಚಿಕ್ಕ ಚನ್ನಯ್ಯ ತಂದೆ ಕೆಂಚಯ್ಯ, ವಯಸ್ಸು – ೭೫, ಕಡಿಲುವಾಗಿಲು, ಮದ್ದೂರು ತಾ॥.

೮೮. ವಕ್ತೃ : ಡಿ.ಸಿದ್ದಲಿಂಗಯ್ಯ ತಂದೆ ಬಿಳಿಯಯ್ಯ, ವಯಸ್ಸು – ೫೦, ಕಡಿಲುವಾಗಿಲು, ಮದ್ದೂರು ತಾ॥.

# ಅಧ್ಯಾಯ - ನಾಲ್ಕು

## ಆಚರಣೆಗಳು

೪.೧ ಜೀವನಾವರ್ತನ ಆಚರಣೆಗಳು

೪.೨ ವಾರ್ಷಿಕಾವರ್ತನ ಆಚರಣೆಗಳು

# ಅಧ್ಯಾಯ – ನಾಲ್ಕು

## ಆಚರಣೆಗಳು

ಮನುಷ್ಯನ ಜೀವನದ ಅವಿಭಾಜ್ಯ ಅಂಗಗಳಾಗಿ, ಅವರ ಬದುಕನ್ನು ರೂಪಿಸಿ, ಸಂಸ್ಕೃತಿಯನ್ನು ಪೋಷಣೆ ಮಾಡುವ ಶಕ್ತಿ ಆಚರಣೆಗಳಿವೆ. ಜನಾಂಗೀಯ ಆಚರಣೆ ಜನರ ಸಂಸ್ಕೃತಿಯಾಗಿದೆ. ಅಲ್ಲದೆ ನಾಗರೀಕತೆಯನ್ನು ಬೆಳೆಸುವಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತವೆ. ಮನುಕುಲದ ಅಭಿವೃದ್ಧಿಗಾಗಿ ಅತ್ಯವಶ್ಯವೆಂದು ಎಣಿಕೆಗೊಂಡಿರುವ ನಂಬಿಕೆಗಳೇ ಸಂಪ್ರದಾಯಗಳಾಗಿ ವಿಧಿನಿಷೇಧಗಳಾಗಿ, ಉಪಾಸನೆಗಳಾಗಿ ಸಾಕಾರತೆ ಪಡೆಯುತ್ತವೆ. ಇಂತಹ ಆಚರಣೆಗಳು ಇರುವುದರಿಂದಲೇ ಸಂಪ್ರದಾಯಗಳು ಜೀವಂತವಾಗಿವೆ. ಈ ಆಚರಣೆಗಳು ಪ್ರಾದೇಶಿಕವಾಗಿ ಮತ್ತು ಜನಾಂಗೀಯವಾಗಿ ಭಿನ್ನತೆಯನ್ನು ಹೊಂದಿರುತ್ತವೆ. ಈ ಕಾರಣಗಳಿಂದಲೇ ಬೇರೆ ಬೇರೆ ಪ್ರದೇಶಗಳಲ್ಲಿ ನಡೆಯುವ ಸಾಂಪ್ರದಾಯಿಕ ವೃತ್ತಿ, ಹುಟ್ಟು–ಸಾವು, ಹಬ್ಬಗಳು, ಜಾತ್ರೆಗಳು ಮುಂತಾದ ಆಚರಣೆಗಳಲ್ಲಿ ಸಾದೃಶ್ಯ ಮತ್ತು ವೈದೃಶ್ಯಗಳೆರಡನ್ನೂ ಗುರುತಿಸಬಹುದು.

ಜನ ಸಮೂಹಗಳಲ್ಲಿ ಕಂಡುಬರುವ ಸಂಪ್ರದಾಯಗಳು ಪರಂಪರಾಗತವಾಗಿ ಉಳಿದು ಬಂದಿವೆ. "ಆಚರಣೆಗಳು ಎಂದರೆ ಮನುಷ್ಯ ರೂಪಿಸಿಕೊಂಡ ನಂಬಿಕೆಯ ವಿಧಿವಿಧಾನಗಳು. ಮನುಷ್ಯ ಹುಟ್ಟಿನಿಂದ ಹಿಡಿದು ಸಾಯುವವರೆಗೆ ಹಾಗೂ ಆತ ಸತ್ತ ನಂತರ ಅನೇಕ ರೀತಿಯ ಆಚರಣೆಗಳನ್ನು ಆಚರಿಸುವುದು ಇಂದಿನ ಸಮಾಜದಲ್ಲಿ ಕ್ರಿಯಾಶೀಲವಾಗಿಯೇ ಉಳಿದಿದೆ. ಜನಪದ ಕಥೆ, ಜನಪದರ ಹಾಡುಗಳು ಒಟ್ಟಾರೆ ಸಾಹಿತ್ಯಿಕ ವರ್ಗವಿಜ್ಞಾನ ಮತ್ತು ತಂತ್ರಜ್ಞಾನದ ಪ್ರಭಾವಕ್ಕೆ ಸಿಕ್ಕಿ ನಶಿಸಿಹೋಗಬಹುದು. ಆದರೆ ಆಚರಣೆಗಳು ಎಂದೆಂದಿಗೂ ಕ್ರಿಯಾಶೀಲವಾಗಿಯೇ ಉಳಿಯುತ್ತವೆ. ಅವು ಎಂದೆಂದಿಗೂ ಬತ್ತಲಾರವು. ಏಕೆಂದರೆ ಅವು ಜನಪದರ ಸಂಸ್ಕೃತಿಯ ಜೀವಂತ ಪಳಯುಳಿಕೆಯಾಗಿವೆ".[೧]

ಆಚರಣೆ ಸಂಪ್ರದಾಯಗಳು ಒಂದು ನಿರ್ದಿಷ್ಟ ಸಮೂಹದ ಸ್ವಭಾವವನ್ನು ಪ್ರಕಟಿಸುವ ಸಂಯೋಜಿತ ರೂಪಗಳು. ಇವುಗಳು ಸಮೂಹಕ್ಕೆ ಸಂಬಂಧಿಸಿದವಾಗಿವೆ. ಹಿಂದಿನಿಂದ ಉಳಿದು ಬಂದಿರುವ ಸಂಪ್ರದಾಯಗಳಿಗೆ ಒಂದು ವಿನ್ಯಾಸ ಅಥವಾ ನಮೂನೆ ಇದೆ ಎನ್ನಬಹುದು. ಮಂಡ್ಯ ಜಿಲ್ಲೆಯಲ್ಲಿ ನೆಲೆಸಿರುವ ಗಂಗಾಮತಸ್ಥರು ತಮ್ಮ ಆಚರಣೆಗಳನ್ನು ಸಂಪ್ರದಾಯಗಳನ್ನು ಉಳಿಸಿ–ಬೆಳೆಸಿಕೊಂಡು ಬರುತ್ತಿದ್ದಾರೆ. ಈ ಆಚರಣೆಗಳನ್ನು ಅಧ್ಯಯನದ ದೃಷ್ಟಿಯಿಂದ ಎರಡು

ವಿಭಾಗಗಳಾಗಿ ವಿಭಾಗಿಸಿಕೊಳ್ಳಬಹುದು. ಮೊದಲನೆಯದು ಜೀವನಾವರ್ತನ ಆಚರಣೆಗಳು, ಎರಡನೆಯದು ವಾರ್ಷಿಕಾವರ್ತನ ಆಚರಣೆಗಳು.

## ೪.೧ ಜೀವನಾವರ್ತನ ಆಚರಣೆಗಳು

ಮನುಷ್ಯನ ಜೀವನವನ್ನು ರೂಪಿಸುವಲ್ಲಿ, ಸಂಸ್ಕೃತಿಯನ್ನು ಪೋಷಿಸುವಲ್ಲಿ, ಸಾಮಾಜಿಕ ಜೀವನ ಮುನ್ನಡೆಸುವಲ್ಲಿ ಸಂಪ್ರದಾಯ ಆಚರಣೆಗಳಿಗೆ ವಿಶಿಷ್ಟ ಮಹತ್ವವಿದೆ. "ಸಾಮಾಜಿಕ ಚಟುವಟಿಕೆಯೊಂದು ನಿಗದಿತ ಕಾಲ, ಸಂದರ್ಭಗಳಲ್ಲಿ ಮತ್ತೆ ಮತ್ತೆ ನಡೆಯುತ್ತ ಸಿದ್ಧರೂಪ ಪಡೆದಾಗ ಸಂಪ್ರದಾಯವಾಗುತ್ತದೆ. ಸಂಪ್ರದಾಯಗಳು ಸಾಮಾಜಿಕ ಸಂಕಲ್ಪ ಶಕ್ತಿಯ ಬಹುಮುಖ್ಯ ಮೂರ್ತ ರೂಪಗಳು. ಸಾಮೂಹಿಕ ಸಂಕಲ್ಪದ ಫಲವಾಗಿ ಕಾಣಿಸಿಕೊಳ್ಳುವ ಸಂಪ್ರದಾಯಗಳು ಒಂದು ರೀತಿಯ ಶಾಸನ ಶಕ್ತಿಗಳು ಆಗಿವೆ"[೨] ಎನ್ನುವ ವಿಚಾರ ಸತ್ಯವಾದುದ್ದು.

ಮಂಡ್ಯ ಜಿಲ್ಲೆಯ ಬೇರೆ ಸಮುದಾಯದವರಂತೆ, ಗಂಗಾಮತಸ್ಥರು ಸಂಪ್ರದಾಯದ ಆಚರಣೆಗಳನ್ನು ಮಾಡುತ್ತಾರೆ. ಇವರು ತಮ್ಮ ಜೀವನಾವರ್ತನದಲ್ಲಿ ಅನೇಕ ರೀತಿಯ ಸಂಪ್ರದಾಯ ವಿಧಿ-ವಿಧಾನಗಳನ್ನು ಕಟ್ಟು ಪಾಡಿನಿಂದ ಆಚರಿಸುತ್ತಾರೆ. ಬೇರೆ ಸಮುದಾಯದವರಂತೆಯೇ ಇವರ ಜೀವನಾವರ್ತನ ಆಚರಣೆಗಳು ಕಂಡು ಬಂದರೂ ಅನೇಕ ಆಚರಣೆಗಳಲ್ಲಿ ವಿಶೇಷತೆಯನ್ನು ಇವರು ಹೊಂದಿರುವುದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕಂಡುಬಂದಿದೆ.

ಗಂಗಾಮತಸ್ಥರಲ್ಲಿ, ಹುಟ್ಟಿನಿಂದ-ಸಾವಿನವರೆಗೆ ಅನೇಕ ಆಚರಣೆಗಳು ಸಂಪ್ರದಾಯಗಳು ಕಂಡುಬರುತ್ತವೆ. ಇಂಥ ಆಚರಣೆಗಳು ಪುರಾತನ ಸಂಸ್ಕೃತಿಯ ಹಲವು ಮುಖಗಳನ್ನು ಪರಿಚಯ ಮಾಡಿಕೊಡುತ್ತವೆ. ಅಲ್ಲದೆ ಈ ಸಮುದಾಯದ ಮೂಲ ಸ್ವರೂಪವನ್ನು ಅರ್ಥೈಸಿಕೊಳ್ಳಲು ಇವರ ಜೀವನಾವರ್ತಗಳಾದ, ಹುಟ್ಟು, ಋತುಮತಿ, ನಿಶ್ಚಿತಾರ್ಥ, ಮದುವೆ, ಸೀಮಂತ, ಒಪ್ಪುವೀಳ್ಯಶಾಸ್ತ್ರ, ದೇವರು ತರುವುದು, ದೀಕ್ಷೆ ನೀಡುವುದು, ಸಾವು ಮುಂತಾದವುಗಳಿಗೆ ಸಂಬಂಧಪಟ್ಟ ಸಂಪ್ರದಾಯ ಆಚರಣೆಗಳನ್ನು ನೋಡಬಹುದು. ನನ್ನ ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ವಕ್ತೃಗಳಿಂದ ಸಂಗ್ರಹಿಸಿದ ಮಾಹಿತಿಗಳನ್ನು ಆಧರಿಸಿ ಆಚರಣೆಗಳನ್ನು ಈ ಕೆಳಗೆ ವಿಶ್ಲೇಷಿಸಲಾಗಿದೆ.

### ಹುಟ್ಟು (ಜನನ)

ಭಾರತವು ಸಂಪ್ರದಾಯಿಕ ಆಚರಣೆಗಳನ್ನು ಪುರಾತನ ಕಾಲದಿಂದಲೂ, ಇಂದಿನವರೆವಿಗೂ ಸಾಧ್ಯವಾದಷ್ಟನ್ನು ಉಳಿಸಿಕೊಂಡು ಬಂದಿದೆ. ಇಲ್ಲಿ ಹಲವಾರು

ಸಮುದಾಯಗಳು ನೆಲೆಸಿರುವುದು ನಮ್ಮ ಸಂಸ್ಕೃತಿಯ ಪ್ರತೀಕವಾಗಿದೆ. ನಮ್ಮ ಸಂಪ್ರದಾಯದಂತೆ ಮೊದಲ ಹೆರಿಗೆ, ಆಕೆಯ ತೌರು ಮನೆಯಲ್ಲೇ ನಡೆಯಬೇಕು ಎಂಬುದು ಹಿಂದಿನಿಂದಲೂ ಪಾಲಿಸಿಕೊಂಡು ಬಂದಿರುವ ಪದ್ಧತಿ. "ಮೊದಲ ಹೆರಿಗೆ ತಾಯಿಯ ಮನೆಯಲ್ಲಿಯೆ ನಡೆಯುತ್ತದೆ. ಹೆಣ್ಣು ಹೆರಿಗೆಯ ಕೆಲವು ದಿನಗಳ ಮುಂಚೆ ಗಂಡನ ಮನೆಯನ್ನು ತೊರೆಯಬೇಕಾಗುತ್ತದೆ. ಹೆರಿಗೆಯಾದ ಕೆಲವು ದಿನಗಳ ನಂತರ ಗಂಡನ ಮನೆಗೆ ಮತ್ತೇ ಸೇರಿಸಿಕೊಳ್ಳಬೇಕಾಗುತ್ತದೆ"[೩] ಇದು ನಮ್ಮ ಸಂಸ್ಕೃತಿಯಾಗಿದೆಯೆಂದು ಹೇಳಬಹುದು. ಚೊಚ್ಚಲ ಹೆರಿಗೆಗೆ ತಾಯಿ ಮನೆಗೆ ಕಳುಹಿಸುವ ಸಂಪ್ರದಾಯ ಹಿಂದಿನಿಂದಲೂ ಇದೆ. ಇದಕ್ಕೆ ಕಾರಣ ಬಹುಶಃ ಬಸುರಿ ಹೆಂಗಸು ತನ್ನ ತಾಯಿಯ ಪ್ರೀತಿಯಲ್ಲಿ ಆರೈಕೆಯನ್ನು ಪಡೆದುಕೊಳ್ಳಲಿ ಎಂಬುದಿರಬೇಕು. ಹೆರಿಗೆಯ ಸಂದರ್ಭದಲ್ಲಿ ಆಗುವ ನೋವನ್ನು ತಡೆದುಕೊಳ್ಳುವ ಧೈರ್ಯ ತವರು ಮನೆಯಲ್ಲಿರುತ್ತದೆ ಎಂಬಿತ್ಯಾದಿ ಕಾರಣಗಳಿಂದ, ಈ ಸಂಪ್ರದಾಯ ಬಂದಿರಬೇಕು.

ಮಂಡ್ಯ ಜಿಲ್ಲೆಯ ಗಂಗಾಮತಸ್ಥರಲ್ಲಿಯೂ ಚೊಚ್ಚಲ ಹೆರಿಗೆ ತವರಿನಲ್ಲೇ ನಡೆಯಬೇಕೆಂಬುದು ಸಂಪ್ರದಾಯವಾಗಿದೆ. ಇವರಲ್ಲಿ ಹೆಣ್ಣು ಮಗಳು ಬಸುರಿಯಾದ "ಮೊದಲ ಆರು ತಿಂಗಳು ಯಾವುದೇ ಆಚರಣೆಗಳು ಇರುವುದಿಲ್ಲ. ಈ ಅವಧಿಯಲ್ಲಿ ಆಕೆ ಹೆಚ್ಚು ಕೆಲಸ ಕಾರ್ಯಗಳನ್ನು ಮಾಡಲು ಹೇಳಲಾಗುವುದು. ಹೀಗೆ ಕೆಲಸ ಕಾರ್ಯಗಳನ್ನು ಮಾಡುವುದರಿಂದಾಗಿ ಹೆರಿಗೆ ಸುಲಭವಾಗುತ್ತದೆ."[೪] ಇದು ವೈಜ್ಞಾನಿಕವಾಗಿಯೂ ಸರಿಯಾದ ಕ್ರಮವಾಗಿದೆ.

### ಸೀಮಂತ ಶಾಸ್ತ್ರ

ಗಂಗಾಮತಸ್ಥರು ಗರ್ಭಿಣಿಗೆ ಏಳು ತಿಂಗಳು ತುಂಬುತ್ತಿದ್ದಂತೆ ಸೀಮಂತವನ್ನು ಮಾಡುತ್ತಾರೆ. ಇದನ್ನು ಸೋಗುಲುಯ್ಯಿಸುವುದು ಎಂದು ಕರೆಯುತ್ತಾರೆ. ಈ ಶಾಸ್ತ್ರ ಚೊಚ್ಚಲ ಹೆರಿಗೆಯ ಬಸುರಿಯರಿಗೆ ಮಾತ್ರ ಅನ್ವಯವಾಗುತ್ತದೆ. ತವರಿನವರು ಬಸುರಿಯನ್ನು ಕರೆತರುವ ಸಂಬಂಧದಲ್ಲಿ ಜೋಯಿಸರಿಂದ ಶಾಸ್ತ್ರ ಕೇಳಿ ದಿನ, ಗಳಿಗೆ ಮುಂತಾದವುಗಳನ್ನು ತಿಳಿದು, ಮನೆದುಂಬಿಸಿಕೊಳ್ಳುವ ಕಾಲವನ್ನು ಗಂಡನ ಮನೆಯವರಿಗೆ ತಿಳಿಸುತ್ತಾರೆ. ತವರಿನವರು ಗಂಡನ ಮನೆಗೆ ಐದು ಅಥವಾ ಏಳು ಜನ ಮುತ್ತೈದೆಯರು ಗರ್ಭಿಣಿಯನ್ನು ಕರೆತರಲು ಬರುತ್ತಾರೆ. ಶುಭಗಳಿಗೆಯಲ್ಲಿ ಆ ಬಸುರಿಯನ್ನು ಹಸೆ ಮಣೆಯ ಮೇಲೆ ಕೂರಿಸಿ ಹೂವು, ಬಳೆ, ಹೊಸ ಸೀರೆ, ರವಕೆ, ತೊಡಿಸಿ, ಕೆನ್ನೆಗೆ ಅರಿಸಿನ ಬಳಿದು, ಹಣೆಗೆ ಕುಂಕುಮವಿಟ್ಟು, ಒಂದು ಬಿಳಿಯ ಬಟ್ಟೆಗೆ ಅಕ್ಕಿ, ಕಾಯಿ, ಎಲೆ, ಅಡಿಕೆ, ಬೆಲ್ಲವನ್ನು ಹಾಕಿ ಅದನ್ನು ಕಟ್ಟಿ ಗರ್ಭಿಣಿಯ ಮಡಿಲಿಗೆ

ಹಾಕುತ್ತಾರೆ. ಆ ಪದಾರ್ಥಗಳನ್ನು ಮಡಿಲಿನಿಂದ ಹಾಕಿ ತೆಗೆದು, ಹಾಕಿ ತೆಗೆದು ಹೀಗೆ ಮೂರು ಸಾರಿ ಮಾಡುತ್ತಾರೆ. ಐದು ಜನ ಮುತ್ತೈದೆಯರು ಹಸೆಮಣೆಯ ಮೇಲೆ ಕುಳಿತಿರುವ ಗರ್ಭಿಣಿಗೆ ಅಕ್ಷತೆ ಇಕ್ಕಿ, ತಲೆ ಮೇಲೆ ಅರಿಸಿನದ ಅಕ್ಕಿಕಾಳನ್ನು ಹಾಕಿ ಶುಭವನ್ನು ಕೋರುತ್ತಾರೆ.

ಸೀಮಂತದ ಸಂದರ್ಭದಲ್ಲಿ ಸಾಮಾನ್ಯವಾಗಿ ಸಿಹಿ ಊಟವನ್ನು ಮಾಡಲಾಗುತ್ತದೆ. ಅಲ್ಲದೆ ಅದೇ ಊರಿನವರಿಗೂ, ತಮ್ಮ ಕುಲದ ಯಜಮಾನರುಗಳು, ಹಾಗೂ ಪ್ರಮುಖರಿಗೆ ಊಟದ ವ್ಯವಸ್ಥೆ ಮಾಡುತ್ತಾರೆ. ಆ ಬಸುರಿ ಹೆಂಗಸು ಹಿರಿಯರಿಗೆ, ಅತ್ತೆ–ಮಾವನಿಗೆ, ಯಜಮಾನರುಗಳ ಕಾಲಿಗೆ ನಮಸ್ಕಾರವನ್ನು ಮಾಡುತ್ತಾಳೆ. ನಮಸ್ಕಾರ ಮಾಡುವಾಗ ವೀಳ್ಯದೆಲೆ ಅಡಿಕೆಯನ್ನು ಕೊಡುವ ಸಂಪ್ರದಾಯವಿದೆ. "ತನ್ನ ತವರಿಗೆ ಬರುತ್ತಿದ್ದಂತೆಯೇ ಗ್ರಾಮದ ದೇವಸ್ಥಾನದಲ್ಲಿ ಪೂಜೆಯನ್ನು ಮಾಡಿ ನಂತರ, ತನ್ನ ತವರು ಮನೆಗೆ ಬರುತ್ತಾಳೆ. ಮನೆಗೆ ಬರುವಾಗ ತಮ್ಮ ಸಮುದಾಯದ ಹಿರಿಯರ ಕಾಲಿಗೆ ನಮಸ್ಕಾರವನ್ನು ಮಾಡುತ್ತಾಳೆ. ಇವರಿಗೂ ಸಹ ವೀಳ್ಯದೆಲೆಯನ್ನು ಕೊಡುವುದುಂಟು. ವೀಳ್ಯದೆಲೆ ಕೊಡುವುದು, ನಾನು ಪವಿತ್ರವಾದ ವೀಳ್ಯದೆಲೆ ಸಾಕ್ಷಿಯಾಗಿ ಬಂದಿರುವನೆಂದು. ಇದೇ ಸಂದರ್ಭದಲ್ಲಿ ಮನೆಯ ಒಳಗೆ ಬರುವುದಕ್ಕಿಂತ ಮೊದಲು ಅರಿಶಿನದ ನೀರು ಮಾಡಿ, ಅದರಿಂದ ಆರತಿ ಮಾಡಿ, ಮುಖದಿಂದ ಮೂರು ಬಾರಿ ಇಳಿ ತೆಗೆದು ಅವಳ ಕಾಲ ಮುಂದಿನ ನೆಲಕ್ಕೆ ಉಯ್ಯುತ್ತಾರೆ."[೫] ಹೀಗೆ ಮಾಡಲು ಕಾರಣವೆಂದರೆ ಯಾರ ದೃಷ್ಠಿಯು ತಗಲದಿರಲಿ, ಪೀಡೆ–ಪಿಶಾಚಿಯ ಕಾಟವಿರದಿರಲಿ ಎಂಬ ನಂಬಿಕೆಯಿಂದ ಹೀಗೆ ಮಾಡುತ್ತಾರೆ.

ಹೆರಿಗೆಯ ನೋವು ಕಂಡ ಕೂಡಲೇ, ಅನುಭವಿ ಸೂಲಗಿತ್ತಿಯನ್ನು ಕರೆದುಕೊಂಡು ಬರುತ್ತಾರೆ. ಸಾಮಾನ್ಯವಾಗಿ ಗಂಗಾಮತಸ್ಥರಲ್ಲೇ ಇಂಥ ಸೂಲಗಿತ್ತಿಯರು ಇರುತ್ತಾರೆ. ಹೇಳಿ ಕಳುಹಿಸಿದ ತಕ್ಷಣ ಅವಳು ಬಂದು ಗರ್ಭಿಣಿಯನ್ನು ನೋಡಿ, ತನಗೆ ಗೊತ್ತಿರುವ ಸುಲಭ ವಿಧಾನಗಳಿಂದ ಹೆರಿಗೆ ಮಾಡಿಸಿ ಹೊಕ್ಕಳ ಬಳ್ಳಿಯನ್ನು ಕತ್ತರಿಸಿ ಮಗುವಿನ ಹೊಕ್ಕಳ ಬಳ್ಳಿಯ ತುದಿಯನ್ನು ನೂಲಿನಿಂದ ಕಟ್ಟಿ ಅರಿಶಿನ ಕೊನೆಯೊಂದನ್ನು ಅಲ್ಲಿಟ್ಟು ಮತ್ತೆ ನೂಲಿನಿಂದ ಬಿಗಿದು ರಕ್ತಸ್ರಾವವನ್ನು ತಡೆಗಟ್ಟುತ್ತಾಳೆ. ಕೊಯ್ದ ಹೊಕ್ಕಳ ಬಳ್ಳಿಯನ್ನು ಗಂಗಾಮತಸ್ಥರು 'ಮಾಸು' ಎಂದು ಕರೆಯುತ್ತಾರೆ. ಈ ಹೊಕ್ಕಳ ಬಳ್ಳಿಯನ್ನು ಹುಲ್ಲಿನಲ್ಲಿ ಕಟ್ಟಿ ಮರದ ಕೊಂಬೆಯ ಮೇಲೆ ಇಡುತ್ತಾರೆ. ಇದಾದ ನಂತರ ಮಗುವಿಗೆ ತಾಯಿಯ ಹಾಲನ್ನು ಉಣಿಸಲಾಗುವುದು. ಹೆರಿಗೆಯಾದ ನಂತರದಲ್ಲಿ ಆ ಬಾಣಂತಿಯ ತಲೆಯ ಕೆಳಗೆ 'ಬಲೆ'ಯನ್ನು ಇಡಲಾಗುವುದು. ಮಗುವಿನ ತಲೆಯ ಹಿಂದೆಯು ಬಲೆಯ ದಾರವನ್ನು ಇಡುತ್ತಾರೆ. ಏಕೆಂದರೆ ದೇವರೇ ಇವರಿಗೆ ಬಲೆಯನ್ನು ಕೊಟ್ಟಿರುವುದರಿಂದ, ಅಂಥ ಪವಿತ್ರವಾಗಿರುವ, ನಮ್ಮ ಜೀವನಕ್ಕೆ ದಾರಿದೀಪವಾಗಿರುವ ಆ

ಬಲೆಯನ್ನು ಅವರುಗಳ ತಲೆಯ ಹಿಂದೆ ಇಟ್ಟರೆ ಯಾವುದೇ ತೊಂದರೆಯಾಗುವುದಿಲ್ಲವೆಂಬ ನಂಬಿಕೆ ಇಂದಿಗೂ ಗಂಗಾಮತಸ್ಥರಲ್ಲಿ ಇದೆ.

**ಸೂತಕ**

ಗಂಗಾಮತಸ್ಥರಲ್ಲಿ ಹೆರಿಗೆ ಸೂತಕದ ಆಚರಣೆ ಇಂದಿಗೂ ಇದೆ. ಇವರಲ್ಲಿ ಹೆರಿಗೆಯ ಸೂತಕ ಹನ್ನೊಂದು ದಿನಗಳವರೆಗೆ ಇರುತ್ತದೆ. ಚೊಚ್ಚಲ ಹೆರಿಗೆಯ ಸೂತಕ ತವರುಮನೆಯವರಿಗೆ ಮಾತ್ರ. ಆದರೆ ಚೊಚ್ಚಲ ಹೆರಿಗೆಯ ನಂತರದ ಸೂತಕ ಗಂಡನ ಮನೆಯವರಿಗೆ ಇರುತ್ತದೆ. ಆದರೆ ತವರು ಮನೆಯವರಿಗೆ ಹೆತ್ತ ಸೂತಕವಿರುವುದಿಲ್ಲ. ತವರು ಮನೆಯಲ್ಲಿಯೇನಾದರೂ ಚೊಚ್ಚಲ ಹೆರಿಗೆಯ ನಂತರದ ಹೆರಿಗೆಯಾದರೆ, ಸಾಂಪ್ರದಾಯಿಕವಾಗಿ ಮನೆಯನ್ನು ಹನ್ನೊಂದನೆ ದಿನಕ್ಕೆ ಶುದ್ಧಗೊಳಿಸಿ, ಮನೆ ದೇವರನ್ನು ಪೂಜಿಸುತ್ತಾರೆ. ಸೂತಕವಿರುವ ಮನೆಗೆ ಬೇರೆಯವರು ಪ್ರವೇಶಿಸುವುದಿಲ್ಲ. ಬಹುಶಃ ಇದಕ್ಕೆ ವೈಜ್ಞಾನಿಕವಾಗಿ ಹೇಳುವುದಾದರೆ ಹೊರಗಡೆಯಿಂದ ಬರುವವರು ಪರಿಶುದ್ಧವಾಗಿ ಬರುವುದಿಲ್ಲ. ಹಸಿ ಬಾಣಂತಿ ಮತ್ತು ಹಸುಳೆಗೆ, ಹೊರಗಿನಿಂದ ಬರುವವರಿಂದ ರೋಗಾಣುಗಳ ಸೋಂಕು ತಗುಲಬಹುದು ಎಂಬ ಕಾರಣವಿರಬಹುದು.

"ಹೆರಿಗೆಯ ನಂತರದ ಒಂಭತ್ತನೇ ದಿನದಿಂದ, ಮನೆಯನ್ನು 'ಶುದ್ಧ'ಗೊಳಿಸಿ ಮನೆಯೊಳಗೆ ದುಂಬು–ಧೂಳು ಹೊಡೆದು ಗೋಡೆಗಳಿಗೆ ಸುಣ್ಣ ಬಣ್ಣ ಹೊಡೆದು, ಸಗಣಿಯಿಂದ ನೆಲ ಸಾರಿಸಿ, ಬಟ್ಟೆಗಳನ್ನು ಮಡಿಮಾಡಿ, ಪಾತ್ರೆಗಳನ್ನೆಲ್ಲಾ ತೊಳೆದಿಡುತ್ತಾರೆ"[೬] ಎಂದು ಹೇಳುತ್ತಾರೆ ವಕ್ತೃ ಚೆನ್ನಮ್ಮ. ಹನ್ನೊಂದನೆಯ ದಿನ ಬೆಳಗ್ಗೆ 'ಗಂಗೆ' ತಡಿಗೆ ಹೋಗಿ ಹೊಸ ಮಣ್ಣಿನ ಬಿಂದಿಗೆಗೆ ನೀರು ತುಂಬಿಸಿ, ಹೂವು, ಹಣ್ಣು, ತೆಂಗಿನಕಾಯಿ, ಕಡ್ಡಿ ಕರ್ಪೂರದಿಂದ ಪೂಜೆ ಸಲ್ಲಿಸಿ ಗಂಗೆಯನ್ನು ಮನೆಗೆ ತರುತ್ತಾರೆ. ನಂತರ ಅಡಿಗೆಯನ್ನು ಸಿದ್ಧಪಡಿಸುತ್ತಾರೆ. ಸಾಮಾನ್ಯವಾಗಿ ಜೋಗಯ್ಯ ಮತ್ತು ದಾಸಯ್ಯರನ್ನು ಕರೆಯಿಸಿ ಪೂಜೆ ಮಾಡಿಸುತ್ತಾರೆ. ಕೆಲವರು ತಾವೇ ತಮ್ಮ ಮನೆ ದೇವರಿಗೆ ಪೂಜೆಯನ್ನು ಸಲ್ಲಿಸುವರಿದ್ದಾರೆ. ಆ ದಿನ ಸಿಹಿ–ಸಪ್ಪೆಯನ್ನು ಮಾಡಿ ಗಂಡನ ಮನೆಯವರನ್ನು, ಅಕ್ಕಪಕ್ಕದ ಮನೆಯವರನ್ನು ಕರೆದು ಊಟ ಹಾಕುತ್ತಾರೆ. ಸಕ್ಕರೆ ಪೊಟ್ಟಣವನ್ನು ಮಾಡಿ, ವೀಳ್ಯದೆಲೆ, ಬಾಳೆಹಣ್ಣಿನ ಜೊತೆಗೆ ಆ ದಿನ ಮುತ್ತೈದೆಯರಿಗೆ ಕೊಡುತ್ತಾರೆ. ಹೀಗೆ ಮಾಡಿದ ನಂತರದಲ್ಲಿ ಸೂತಕ ಕಳೆಯಿತು ಎಂಬ ನಂಬಿಕೆ ಇವರಲ್ಲಿದೆ.

## ನಾಮಕರಣ

ಹುಟ್ಟಿದ ಮಕ್ಕಳಿಗೆ ಸಂಪ್ರದಾಯಬದ್ಧವಾಗಿ ಹೆಸರನ್ನು ಸೂಚಿಸುವುದೇ ನಾಮಕರಣ. ಮಗುವಿಗೆ ಹೆಸರಿಡುವ ಮೊದಲು ಮಗುವಿಗೆ 'ಮುಡಿ' ಬಿಡುತ್ತಾರೆ. ತಮ್ಮ ಮನೆದೇವರಿಗೆ ಸಾಮಾನ್ಯವಾಗಿ 'ಮುಡಿ' ಕೊಡುವುದು ಸಂಪ್ರದಾಯವಾಗಿದೆ. ಇವರು ನಾಮಕರಣ ಮಾಡಿಸುವುದು ಅವರವರ ಅನುಕೂಲಕ್ಕೆ ತಕ್ಕಂತೆ ಕಟ್ಟಿಸುತ್ತಾರೆ. ಇಷ್ಟೇ ದಿವಸಕ್ಕೆ ಕಟ್ಟಿಸಬೇಕೆಂಬ ನಿಯಮವಿಲ್ಲ. ಆದರೆ ದಕ್ಷಿಣಕನ್ನಡದ ಮೊಗವೀರರಲ್ಲಿ "ಮಗು ಹುಟ್ಟಿದ ಏಳನೆಯ ದಿವಸ ಮಗುವಿಗೆ ನಾಮಕರಣ ಮಾಡುತ್ತಾರೆ"[೭] ಇದು ಅಲ್ಲಿಯ ಸಂಪ್ರದಾಯವಾಗಿದೆ. ಅಂದರೆ ಒಂದೇ ಸಮುದಾಯದವರಾದರೂ, ಪ್ರಾದೇಶಿಕವಾದ ಭಿನ್ನತೆಯನ್ನ ನೋಡಬಹುದಾಗಿದೆ.

ತಮ್ಮ ಮನೆದೇವರ ದೇವಾಲಯಕ್ಕೆ ಹೋಗಿ ಅಲ್ಲಿ ತಮ್ಮ ಮಗುವಿಗೆ ನಾಮಕರಣ ಮಾಡಿಸುತ್ತಾರೆ. ಗಂಗಾಮತಸ್ಥರು ತಮ್ಮ ಮಗುವಿಗೆ ಇಡಬೇಕಾದ ಹೆಸರನ್ನು ದೇವಸ್ಥಾನದ ಪೂಜಾರಿಗೆ ಹೇಳಿ, ಮತ್ತೆ ಅವರ ಮೂಲಕ ಹೆಸರನ್ನು ಹೇಳಿಸುತ್ತಾರೆ. ಇದೇ ಸಂದರ್ಭದಲ್ಲಿ ಆ ಮಗುವಿನ 'ಮುಡಿ'ಯನ್ನು ದೇವರಿಗೆ ಅರ್ಪಿಸುತ್ತಾರೆ. ಕೆಲವರು ತಮ್ಮ ಮನೆಯಲ್ಲೇ ನಾಮಕರಣವನ್ನು ಮಾಡಿಸುತ್ತಾರೆ. ಈ ಸಂದರ್ಭದಲ್ಲಿ ತಮ್ಮ ನೆಂಟರಿಷ್ಟರಿಗೆಲ್ಲಾ ಹೇಳಿ, ಸಿಹಿ ಊಟವನ್ನು ಮಾಡಿಸಿ, ಜೋಯಿಸ್ಯರನ್ನು ಕರೆಯಿಸಿ ಅವರಿಂದ ಹೆಸರನ್ನು ಕಟ್ಟಿಸುತ್ತಾರೆ. ಆದರೆ ದಾಸಯ್ಯರು ಮತ್ತು ಜೋಗಯ್ಯರು ನಾಮಕರಣವನ್ನು ಮಾಡಿಸುವಾಗ, ತಮ್ಮ ಮನೆಯಲ್ಲಿರುವ ದೇವರಿಗೆ ಧೂಪ ಹಾಕಿಸಿ, ಮಾಂಸದೂಟ ಮಾಡುತ್ತಾರೆ. ಜೋಗಯ್ಯ ಮಗುವಿನ ಹಣೆಗೆ ವಿಭೂತಿಯನ್ನು ಇಡುವುದರ ಮೂಲಕ ಪ್ರತಿಯೊಂದು ಸಾರಿಯು ಹಿರಿಯರು ಅಥವಾ ಮನೆಯವರು ಸೂಚಿಸಿದ ಹೆಸರನ್ನು ಹೇಳುತ್ತ ಕ್ರಿಯೆ ಮುಗಿಸುತ್ತಾರೆ. ಇವರ ನಂತರ ಮನೆಯವರು ಬಂಧು, ಬಳಗದವರೆಲ್ಲ ವಿಭೂತಿಯನ್ನು ಮಗುವಿಗೆ ಹಚ್ಚುತ್ತಾರೆ. ಪ್ರಸ್ತುತದಲ್ಲಿ ಈ ಹುಟ್ಟಿದ ಹೆಸರಿನ ಜೊತೆಗೆ ಮನೆಯವರು ತಮಗೆ ಬೇಕಾದ ಇಂದಿನ ನಾಗರೀಕತೆಗೆ ಅನುಗುಣವಾಗಿ ಬೇರೆ ಹೆಸರನ್ನು ಕರೆದುಕೊಳ್ಳುತ್ತಾರೆ. ಇದಕ್ಕೆ ಅಡ್ಡ ಹೆಸರೆಂಬ ವಾಡಿಕೆ. ಹೀಗೆ ಮನೆಯಲ್ಲಿ ನಾಮಕರಣವನ್ನು ಮಾಡಿದವರು, ವಾರದೊಳಗೆ ತಮ್ಮ ಮನೆದೇವರಿಗೆ ಹೋಗಿ ಮಗುವಿನ 'ಮುಡಿ'ಯನ್ನು ಕೊಡುತ್ತಾರೆ.

## ಅಕ್ಕಿ ಎಣ್ಣೆ ಹಾಕುವುದು

ಚೊಚ್ಚಲ ಹೆರಿಗೆಯಾಗಿ ನಂತರ ಸೂತಕ ಕಳೆದ ಮೇಲೆ ಗಂಡನ ಮನೆಯಿಂದ ಬಾಣಂತಿಗೆ ಬೇಕಾದ ಅಕ್ಕಿ, ಬೆಲ್ಲ, ಹುಚ್ಚೆಳ್ಳೆಣ್ಣೆ, ಸೀಗಡಿ, ಎಲೆ ಅಡಿಕೆ, ಕೊಬ್ಬರಿ, ಮಗುವಿಗೆ ಬಟ್ಟೆ,

ಪೌಡರು, ಸೋಪು, ಹರಳೆಣ್ಣೆ ಮುಂತಾದ ವಸ್ತುಗಳನ್ನು ತೆಗೆದುಕೊಂಡು ಹೋಗಿ ಶಾಸ್ತ್ರೋಕ್ತವಾಗಿ ಕೊಟ್ಟು ಬರುವುದು ವಾಡಿಕೆ. ಈ ಪದ್ಧತಿಯನ್ನು ಗಂಗಾಮತಸ್ಥರು ಅಕ್ಕಿ-ಎಣ್ಣೆ ತರುವುದು ಎಂದು ಹೇಳುತ್ತಾರೆ. ಈ ಸಂದರ್ಭದಲ್ಲಿ ನೆಂಟರಿಷ್ಟರನ್ನು ಮತ್ತು ಅಕ್ಕಪಕ್ಕದ ಪ್ರಮುಖರಾದವರನ್ನು ಕರೆದುಕೊಂಡು ಹೋಗುತ್ತಾರೆ.

## ತೊಟ್ಲು ತೆಗೆದುಕೊಂಡು ಹೋಗುವುದು

ಬಾಣಂತಿ ಮನೆಯಿಂದ ಆರು ತಿಂಗಳು ಹೊರಗೆ ಹೋಗುವಂತಿಲ್ಲ. ಸಾಮಾನ್ಯವಾಗಿ ಮಗುವಿಗೆ ೬ ರಿಂದ ೮ ತಿಂಗಳ ಅವಧಿಯಲ್ಲಿ ಗಂಡನ ಮನೆಗೆ ಕಳುಹಿಸಿಕೊಡಲು ಸಿದ್ಧತೆ ಮಾಡಿಕೊಳ್ಳುತ್ತಾರೆ. ಈ ಅವಧಿಯಲ್ಲಿ ತೊಟ್ಟಿಲು ತೆಗೆದುಕೊಂಡು ಹೋಗುತ್ತಾರೆ. "ತೊಟ್ಲು ತೆಗೆದುಕೊಂಡು ಹೋಗುವ ಮೊದಲು ಮಗುವಿಗೆ, ಹೆಣ್ಣಾದರೆ, ಕಾಲಿಗೆ ಬೆಳ್ಳಿಯ ಚೈನು, ಕಿವಿಗೆ ತಾರು, ಗಂಡು ಮಗುವಾದರೆ ಬೆಳ್ಳಿಯ ಉಡುದಾರ, ಕಿವಿಗೆ ತಾರು ಕೊಡುತ್ತಾರೆ. ತಾಯಿಗೆ ಹೊಸ ಸೀರೆಯನ್ನು ಉಡಿಸುತ್ತಾರೆ. ತೊಟ್ಲು ತೆಗೆದುಕೊಂಡು ಹೋಗುವುದಕ್ಕೆ ಗಂಡನ ಮನೆಯಿಂದ ಐದು ಜನ ಮುತ್ತೈದೆಯರು ಬರುತ್ತಾರೆ. ಆ ಸಂದರ್ಭದಲ್ಲಿ ಮಾಂಸದ ಅಡುಗೆಯನ್ನು ಮಾಡಿಸುತ್ತಾರೆ. ಮನೆಯಲ್ಲಿರುವ ದೇವರ ಪಟಗಳಿಗೆ ಪೂಜೆ ಸಲ್ಲಿಸಿ, ಮಗುವಿನ ಕೈಗೆ ಮತ್ತು ಸೊಂಟಕ್ಕೆ ಬಲೆಯ ದಾರವನ್ನು ಕಟ್ಟುತ್ತಾರೆ".[೮] ಕಾರಣವೆಂದರೆ ಮಗುವಿಗೆ ಯಾವುದೇ ಕೆಟ್ಟದೃಷ್ಟಿ ತಗುಲದಿರಲಿ ಎಂಬುದಾಗಿದೆ. ಮಗುವಿಗೆ ಹೊಸಬಟ್ಟೆ, ಹೊಸ ತೊಟ್ಟಿಲು, ಮನೆಯಲ್ಲಿ ಎಮ್ಮೆ, ಹಸು, ಮೇಕೆ, ಕುರಿ ಇವುಗಳಿದ್ದರೆ ಮೊಮ್ಮಗನ ಹೆಸರಿನಲ್ಲಿ ಅವುಗಳಲ್ಲಿ ಯಾವುದಾದರೊಂದು ಜಾನುವಾರನ್ನು ಹೊಡೆದು ಕಳುಹಿಸುತ್ತಾರೆ.

## ವಸಲು ಶಾಸ್ತ್ರ

ಮಗು ನೆಲದ ಮೇಲೆ ಕುಳಿತುಕೊಳ್ಳುವುದು, ತೆವಳುವುದನ್ನು ಕಲಿತ ಮೇಲೆ, ಮಗುವನ್ನು ಮನೆಯಂಗಳದಲ್ಲಿ ಬಿಡುತ್ತಾರೆ. ಹೀಗೆ ತೆವಳುವ ಮಗು ಗೋಡೆಯನ್ನು ಹಿಡಿದು ನಡೆಯುವುದನ್ನು ಕಲಿಯುತ್ತದೆ. ಇಂತಹ ಸಂದರ್ಭದಲ್ಲಿ ಮಗು ಮನೆಯ ವಸಲನ್ನು ದಾಟಿದರೆ, ವಸಲು ಪೂಜೆಯನ್ನು ಮಾಡುತ್ತಾರೆ. ಗಂಗಾಮತಸ್ಥರು ಇದನ್ನೇ ವಸಲುಶಾಸ್ತ್ರ ಎಂದು ಕರೆಯುತ್ತಾರೆ. ಆ ವಸಲನ್ನು ತೊಳೆದು, ಅರಿಶಿನ-ಕುಂಕುಮವನ್ನು ಇಟ್ಟು, ಹೂವು, ಹಣ್ಣು-ತೆಂಗಿನಕಾಯಿಯಿಂದ ಪೂಜೆ ಸಲ್ಲಿಸುತ್ತಾರೆ. ಮಗುವಿನ ಕೈಯಲ್ಲಿಯೂ ಪೂಜೆ ಮಾಡಿಸಿ ನಮಸ್ಕರಿಸುತ್ತಾರೆ. ನಂತರದಲ್ಲಿ ಐದು ಜನ ಮುತ್ತೈದೆಯರು ಪೂಜೆ ಮಾಡುತ್ತಾರೆ. ಅಕ್ಕಪಕ್ಕದಲ್ಲಿ

ಮಕ್ಕಳನ್ನೆಲ್ಲಾ ಕರೆದು, ದೊಡ್ಡವರಿಗೆ, ಚಿಕ್ಕವರಿಗೆ ಕಡಲೆಪುರಿ, ಹಾಗೂ ಸಿಹಿ, ವೀಳ್ಯದೆಲೆ ಅಡಿಕೆ, ಹಣ್ಣು ಇವುಗಳನ್ನು ಕೊಡುತ್ತಾರೆ. ಈ ಸಂಪ್ರದಾಯವನ್ನು ಇವರು ಈಗಲೂ ಉಳಿಸಿಕೊಂಡಿದ್ದಾರೆ. ಹೀಗೆ ಪೂಜೆ ಸಲ್ಲಿಸುವ ಕಾರಣವೆಂದರೆ, ಆ ಮಗು ವಸಲನ್ನು ದಾಟಿ ಹೋಗಿ ಬದುಕುವ ಸಾಮರ್ಥ್ಯಗಳಿಸುತ್ತದೆ ಎಂಬ ನಂಬಿಕೆಯಿದೆ.

**ಋತುಮತಿ (ದೊಡ್ಡವಳಾಗುವುದು)**

ಗಂಗಾಮತಸ್ಥರ ಹೆಣ್ಣು ಋತುಮತಿಯಾದ ಸಂದರ್ಭದಲ್ಲಿ ಕೆಲವು ಸಾಂಪ್ರದಾಯಿಕ ಆಚರಣೆಗಳನ್ನು ಮಾಡುತ್ತಾರೆ. "ಮಾನವ ಜೀವನದಲ್ಲಿ ಲೈಂಗಿಕಪಕ್ವತೆ ಒಂದು ಮಹತ್ವದ ಘಟ್ಟ. ಸಾಮಾನ್ಯವಾಗಿ ಪ್ರತಿಯೊಂದು ಸಮಾಜವೂ ಗಂಡು-ಹೆಣ್ಣುಗಳು ಲಿಂಗ ಪ್ರೌಢಿಮೆ ಹೊಂದುವಾಗ ಉಂಟಾಗಬಹುದಾದಂತಹ ಬದಲಾವಣೆಗಳನ್ನು ಗುರುತಿಸಿ ಸಾಂಪ್ರದಾಯಿಕ ರೀತಿಯಲ್ಲಿ ಲೌಕಿಕ ಪ್ರಪಂಚಕ್ಕೆ ಪರಿಚಯಿಸುತ್ತದೆ".[5] ಇವರೂ ಸಹ ಮಕ್ಕಳು ಪ್ರೌಢಾವಸ್ಥೆಯನ್ನು ತಲುಪಿದಾಗ ಹಲವು ಆಚರಣೆಗಳನ್ನು ಮಾಡುತ್ತಾರೆ.

ಹೆಣ್ಣುಮಗಳು ದೊಡ್ಡವಳಾದಾಗ ಮನೆಯ ಮುಂದಿನ ಸ್ಥಳದಲ್ಲಿ ಆಕೆಯನ್ನು ಇರಿಸುತ್ತಾರೆ. ಈ ಸಂದರ್ಭದಲ್ಲಿ ಹನ್ನೊಂದು ದಿನಗಳವರೆವಿಗೂ ಅವರ ಮನೆಯಲ್ಲಿ ಸೂತಕವಿರುತ್ತದೆ. ಹನ್ನೊಂದನೆಯ ದಿನ ಸೂತಕವನ್ನು ಕಳೆಯುತ್ತಾರೆ. ನಂತರ ಹನ್ನೆರಡನೆಯ ದಿವಸ ಸಾಧ್ಯವಾದರೆ ಆ ಹೆಣ್ಣನ್ನು ಹಸೆಮಣೆಯ ಮೇಲೆ ಕೂರಿಸಿ ಶಾಸ್ತ್ರವನ್ನು ಮಾಡುತ್ತಾರೆ. ಹೊಸ ಸೀರೆ, ರವಿಕೆ, ಲಂಗ, ಜೊತೆಗೆ ಯಾವುದಾದರೊಂದು ಚಿನ್ನದ ಒಡವೆಯನ್ನು ಮಾಡಿಸುತ್ತಾರೆ. ಇವುಗಳೆಲ್ಲವನ್ನು ಹೆಣ್ಣಿನ ತಾತನ ಮನೆಯವರು, ಅದರಲ್ಲೂ ಸೋದರ ಮಾವ ತರಬೇಕು. ಆ ದಿನ ಸಿಹಿ ಊಟವನ್ನು ಮಾಡಿಸಿ ಊಟವನ್ನು ಹಾಕುತ್ತಾರೆ. ಋತುಮತಿಯಾದ ಹೆಣ್ಣಿಗೆ ಒಳ್ಳೆಯ ಪೌಷ್ಠಿಕಾಂಶ ಆಹಾರವನ್ನು ಕೊಡುತ್ತಾರೆ. ಈಕೆಗೆ ಕನಿಷ್ಟ ಎರಡರಿಂದ ಮೂರು ತಿಂಗಳ ಆರೈಕೆ ಇರುತ್ತದೆ. ಈ ಅವಧಿಯಲ್ಲಿ ಆಕೆಗೆ ಶೀತವಾಗದಿರಲೆಂದು ತಲೆಗೆ ಬಟ್ಟೆಯನ್ನು ಕಟ್ಟಿರುತ್ತಾರೆ. ಉಷ್ಣದ ಆಹಾರವನ್ನು ಹೆಚ್ಚಾಗಿ ನೀಡುತ್ತಾರೆ. ಸೀಗಡಿ, ನಳ್ಳಿ, ಆಮೆ, ಕಾಡುಬೆಕ್ಕು, ಮೊಲ, ಆಡು ಮೊದಲಾದ ಮಾಂಸಗಳನ್ನು ನೀಡುತ್ತಾರೆ. ಹೀಗೆ ಹೆಣ್ಣು ದೊಡ್ಡವಳಾಗುವುದನ್ನು ಋತುಮತಿ, ಋತುಶಾಂತಿ ಮುಂತಾದ ಹೆಸರಿನಿಂದ ಕರೆಯುತ್ತಾರೆ.

**ಜೋಗಿ ಬಿಡುವುದು**

ಗಂಗಾಮತಸ್ಥರಲ್ಲಿರುವ ಜೋಗಿಗಳು ತಮ್ಮ ಹಿರಿಯ ಮಗನಿಗೆ ೧೮ ವರ್ಷ ತುಂಬಿದ ಬಳಿಕ ಜೋಗಿ ಬಿಡುವ ಆಚರಣೆಯನ್ನು ಮಾಡುತ್ತಾರೆ. ಈ ಸಂಸ್ಕಾರವನ್ನು ಮಾಡುವುದಕ್ಕಾಗಿಯೇ ಒಂದು ಹೋತವನ್ನು ದೇವರಿಗೆ ಅರಿಕೆ ಮಾಡಿಕೊಂಡಿರುತ್ತಾರೆ. ಜೋಗಿ ಬಿಡುವುದು ಗುರುವಾರ ಅಥವಾ ಭಾನುವಾರ. ಆ ದಿನ ದೇವರ ಗುಡ್ಡನಾದ 'ಚೂಲುದಾರ'ನನ್ನು ಕರೆಯಿಸಿ, ಪಟಾಲದಮ್ಮ, ಸಿದ್ದೇಶ್ವರ ಸ್ವಾಮಿಯ ವಿಗ್ರಹ, ಒಳಗೆರೆ ಹುಚ್ಚಮ್ಮ ಮುಂತಾದ ದೇವತೆಗಳನ್ನು ಅವರ ಮನೆಗೆ ಕರೆಯಿಸುತ್ತಾರೆ. ಅಂದು ಬೆಳಿಗ್ಗೆ ಗಂಗಾತಡಿಗೆ ಆ ದೇವರುಗಳನ್ನೆಲ್ಲಾ ಕರೆದುಕೊಂಡು ಹೋಗುತ್ತಾರೆ. ಹರಕೆ ಬಿಟ್ಟಿರುವ ಹೋತ, ಜೋಗಿ ಬಿಡುವ ವ್ಯಕ್ತಿ ಎಲ್ಲರೂ ಗಂಗಾತಡಿಗೆ ಹೋಗಬೇಕು. ಈ ಸಂದರ್ಭದಲ್ಲಿ ಕುಲದ ಯಜಮಾನರು ಸಹ ಇರುತ್ತಾರೆ. ಗಂಗೆ ಪೂಜೆ ಸಲ್ಲಿಸಿ, ದೇವರುಗಳಿಗೆ ಹೂವಿನಿಂದ ಅಲಂಕಾರ ಮಾಡಿ, ದೇವರ ಗುಡ್ಡನಿಗೆ ಮತ್ತು ಜೋಗಿ ಬಿಡುವ ವ್ಯಕ್ತಿಯ ಕತ್ತಿಗೆ ಹಾರವನ್ನು ಹಾಕಿ, ಮಡಿ ಬಟ್ಟೆಯ ಮೇಲೆ ಎಲ್ಲರು ನಡೆದು ಬರುತ್ತಾರೆ. ಅರಿಕೆಯ ಮರಿಗೂ ಹಾರವನ್ನು ಹಾಕಿರುತ್ತಾರೆ.

ಹೀಗೆ "ಮೆರವಣಿಗೆಯ ಮೂಲಕ ಬಂದು, ಮನೆಯ ಒಳಗೆ ಹೋಗುವುದಕ್ಕಿಂತ ಮೊದಲು, ಹರಕೆಯ ಮರಿಯನ್ನು ಕತ್ತರಿಸುತ್ತಾರೆ. ಇದನ್ನು ದಾಟಿಕೊಂಡು, ಅವರೆಲ್ಲರೂ ಮನೆಗೆ ಹೋಗಬೇಕು. ಮುತ್ತೈದೆಯು ಕಳಸವನ್ನು ಪೂಜಿಸಬೇಕು. ನಂತರ ಆ ವ್ಯಕ್ತಿಯ ಕಿವಿಗೆ ಚಿನ್ನದಿಂದ ಅಥವಾ ಬೆಳ್ಳಿಯಿಂದ ಮಾಡಿದ 'ಕಳವರ'ವನ್ನು ಎರಡು ಕಿವಿಗೂ ಹಾಕುತ್ತಾರೆ. ನಂತರ ಕೆಂಪು ವಸ್ತ್ರದಿಂದ ಕಿವಿಗಳು ಕಾಣದಂತೆ ಮುಚ್ಚುತ್ತಾರೆ. ಈ ಸಂಸ್ಕಾರವಾದ ನಂತರ ಆ ವ್ಯಕ್ತಿ ಕೆಟ್ಟ ಅಭ್ಯಾಸಗಳನ್ನು ಬಿಡಬೇಕು. ಪ್ರತಿ ಗುರುವಾರ ಮತ್ತು ಭಾನುವಾರ 'ತ್ರಿಶೂಲ'ದಂತಿರುವ ಸಿದ್ದೇಶ್ವರನಿಗೆ ಪೂಜೆ ಮಾಡಬೇಕು. ಜೋಗಿ ಬಿಟ್ಟ ನಂತರ ಮಾಂಸದೂಟವನ್ನು ತಮ್ಮ ಊರಿನ ಪ್ರಮುಖರನ್ನು ಕರೆದು ಹಾಕುತ್ತಾರೆ. ಬಡವರಾದರೆ ಚುಂಚನಗಿರಿಗೆ ಕರೆದುಕೊಂಡು ಹೋಗಿ, ಅಲ್ಲಿ ಜೋಗಿಯನ್ನು ಬಿಡುವುದುಂಟು."[೧೦] ಜೋಗಿ ಬಿಡುವ ಆಚರಣೆಯನ್ನು ಇಂದಿಗೂ ಗಂಗಾಮತಸ್ಥರು ಉಳಿಸಿಕೊಂಡಿದ್ದಾರೆ.

**ಮದುವೆ**

ಪ್ರತಿಯೊಬ್ಬ ಮನುಷ್ಯನ ಪ್ರಮುಖವಾದ ಘಟ್ಟ ಮದುವೆ. ಮದುವೆಯ ಮೂಲಕ ಕೂಡಿ ಬಾಳುವ ಬದುಕುವ ವ್ಯವಸ್ಥೆ ಮಾನವನಿಗಷ್ಟೇ ಇದೆ. ಗಂಡು-ಹೆಣ್ಣನ್ನು ಒಂದುಗೂಡಿಸಿ ಜೀವನ ಸಂಗಾತಿಗಳನ್ನಾಗಿ ಮಾಡುವ ವಿಶಿಷ್ಟ ಸಂದರ್ಭ. ಮದುವೆ ಬದುಕಿಗೆ ಒಂದು ಭದ್ರತೆಯನ್ನು,

ಜವಾಬ್ದಾರಿಯನ್ನು ತಂದುಕೊಟ್ಟು ಜೀವನಕ್ಕೆ ಉತ್ಸಾಹವನ್ನು, ಆನಂದವನ್ನೂ ತುಂಬುತ್ತದೆ. ಚಂದ್ರಶೇಖರ ಬಿ.ದಾಮ್ಲೆಯವರು ಹೇಳುವಂತೆ "ವಿವಾಹ ದೇಶದ ಎಲ್ಲೆಡೆ ಪ್ರಚಲಿತವಿರುವ ಒಂದು ಸಂಸ್ಕಾರ ವಿಧಿ"[1] ಎಂದಿದ್ದಾರೆ. ಒಟ್ಟಿನಲ್ಲಿ ಮದುವೆ ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಮಹತ್ವದ ಪಾತ್ರ ವಹಿಸುತ್ತದೆ. ಪ್ರತಿಯೊಂದು ಸಮುದಾಯಗಳು ಕೂಡ ತನ್ನದೇ ಆದ ಸಂಪ್ರದಾಯ ಆಚರಣೆಗಳ ಮೂಲಕ ಮದುವೆ ಮಾಡುವುದನ್ನು ಪ್ರಾಚೀನ ಕಾಲದಿಂದಲೂ ರೂಢಿಸಿಕೊಂಡು ಬಂದಿವೆ. ಮದುವೆ ನಮ್ಮ ಸಂಸ್ಕೃತಿಯ ಮತ್ತು ಜೀವನದ ಪ್ರತೀಕವೂ ಆಗಿದೆ.

ಮಂಡ್ಯ ಜಿಲ್ಲೆಯ ಗಂಗಾಮತಸ್ಥರು ಮದುವೆಯ ಸಂಪ್ರದಾಯ ಆಚರಣೆಗಳಲ್ಲಿ, ಬೇರೆ ಸಮುದಾಯದವರಿಗಿಂತ ಭಿನ್ನತೆಯನ್ನು ಹೊಂದಿದ್ದಾರೆ. ಅಲ್ಲದೆ ತಮ್ಮ ಪಾರಂಪರಿಕವಾದ ಸಂಪ್ರದಾಯಗಳನ್ನು ಇಂದಿಗೂ ಉಳಿಸಿಕೊಂಡಿರುವುದು ಔಚಿತ್ಯವೂ ಆಗಿದೆ. ಇವರಲ್ಲಿ ಅಂತರ್‌ಜಾತಿ ವಿವಾಹಕ್ಕೆ ಅವಕಾಶವಿಲ್ಲ. ಹಾಗೇನಾದರೂ ವಿವಾಹ ಆದಲ್ಲಿ ಕುಲದಿಂದಲೇ ಹೊರ ಹಾಕಲಾಗುತ್ತದೆ. ಗಂಗಾಮತಸ್ಥರಲ್ಲಿ ಮದುವೆಗೆ ಸಂಬಂಧಿಸಿದಂತೆ ಹಲವು ಆಚರಣೆಗಳು ಇವೆ.

**ಹೆಣ್ಣು ನೋಡುವುದು**

ಮದುವೆಯ ವಯಸ್ಸಿಗೆ ಬಂದ ಮಗನಿಗೆ ಹೆಣ್ಣು ನೋಡುವ ಕ್ರಿಯೆಯಲ್ಲಿ ಗಂಡಿನ ಕಡೆಯವರು ತೊಡಗುತ್ತಾರೆ. ಹಳೆಯ ಸಂಬಂಧಿಕರು ಆಗಿರಬಹುದು, ಹೊಸ ಸಂಬಂಧವಾಗಿರಬಹುದು, ಅಕ್ಕನ ಮಗಳು ಅಥವಾ ಸೋದರ ಮಾವನ ಮಗಳಾಗಿರಬಹುದು ಹೆಣ್ಣು ನೋಡುವುದಕ್ಕೆ ಗಂಗಾಮತಸ್ಥರು ಹೋಗುತ್ತಾರೆ. ಸಾಮಾನ್ಯವಾಗಿ ಮೂರು ಅಥವಾ ಐದು ಜನರು, ಹೆಚ್ಚೆಂದರೆ ಒಂಭತ್ತು ಜನರು ಶಾಸ್ತ್ರೋಕ್ತವಾಗಿ ಹೆಣ್ಣು ನೋಡುವುದಕ್ಕೆಂದು ಹೆಣ್ಣಿನ ಮನೆಗೆ ಹೋಗುವುದು ಸಂಪ್ರದಾಯ. ತದನಂತರ ಗಂಡಿನ ಕಡೆಯವರಿಗೆ ಹುಡುಗಿ ಒಪ್ಪಿಗೆಯಾದರೆ ನಮ್ಮ ಮನೆಗೆ ಬಂದು ನೋಡಿ ಎನ್ನುವುದು ವಾಡಿಕೆ.

ಹೆಣ್ಣು ನೋಡುವುದಕ್ಕೆ ಮನೆಗೆ ಬಂದಾಗ ಹುಳಿ ಪದಾರ್ಥಗಳನ್ನು ಕೊಡುವುದಿಲ್ಲ. ಏಕೆಂದರೆ ಮದುವೆಯ ಕಾರ್ಯ ನೆರವೇರುವುದಿಲ್ಲ ಎಂಬ ಭಾವನೆ. ಶಾಸ್ತ್ರೋಕ್ತವಾಗಿ ಹೆಣ್ಣು ಗಂಡಿನ ಸಂಬಂಧ ಕೂಡಿ ಬರದಿದ್ದರೆ ಸಂಬಂಧ ಮುರಿದು ಬೀಳುತ್ತದೆ. ಮುಂದೆ ಗಂಡಿನ ಕಡೆಯವರು ಬೇರೆ ಸಂಬಂಧವನ್ನು ಹುಡುಕುತ್ತಾರೆ.

## ಒಪ್ಪುವೀಳ್ಯಶಾಸ್ತ್ರ

ಗಂಡಿನ ಕಡೆಯವರಿಗೆ ಹೆಣ್ಣು ಒಪ್ಪಿಗೆಯಾದ ಮೇಲೆ ಹೆಣ್ಣಿನ ಕಡೆಯವರಿಗೆ ಗಂಡು ಒಪ್ಪಿಗೆಯಾದ ಮೇಲೆ, ಶಾಸ್ತ್ರೋಕ್ತವಾಗಿ ಶುಭದಿನ ಶಾಸ್ತ್ರಕ್ಕೆ ಕಡ್ಡಾಯವಾಗಿ ಬರಲೇಬೇಕು. ಹೆಣ್ಣನ್ನು ಮದುವೆಗೆ ನಿಶ್ಚಯಿಸುವ ಒಪ್ಪಿಗೆಯ ದಿನ ಹೆಣ್ಣಿನ ಕಡೆಯವರು ಮತ್ತು ಗಂಡಿನ ಕಡೆಯವರು ವೀಳ್ಯ ತಿದ್ದುವುದರ ಮೂಲಕ ನಿಮ್ಮ ಹೆಣ್ಣು ನಮಗೆ ಒಪ್ಪಿಗೆ, ನಿಮ್ಮ ಗಂಡು ನಮಗೆ ಒಪ್ಪಿಗೆ ಎಂದು ವೀಳ್ಯವನ್ನು ಪರಸ್ಪರ ಬದಲಾಯಿಸಿಕೊಳ್ಳುತ್ತಾರೆ. ಇದನ್ನೇ ನಿಶ್ಚಿತಾರ್ಥವೆಂದೂ ಸಹ ಕರೆಯುತ್ತಾರೆ. "ಈ ಜನಾಂಗದವರಲ್ಲಿ ಮದುವೆಯ ನಿಶ್ಚಿತಾರ್ಥವನ್ನು ತಮ್ಮ ಜೀವನದ ಆಧಾರಸ್ತಂಭವಾದ ಬಲೆಯನ್ನು ಮಧ್ಯದಲ್ಲಿಟ್ಟು ತಮ್ಮ ಕುಲದೇವತೆಯನ್ನು ಪೂಜಿಸಿ ಮದುವೆಯ ಮುಂದಿನ ಶುಭಕಾರ್ಯಗಳು ಸುಮಂಗಳವಾಗಿ ನೆರವೇರಲಿ ಎಂದು ಹಾಗೂ ವಿಘ್ನಗಳು ಅಡೆತಡೆಗಳು ಬರದಿರಲಿ ಎಂದು ಪ್ರಾರ್ಥಿಸುತ್ತಾರೆ."[೨೨]

ವೀಳ್ಯವನ್ನು ತಿದ್ದಿ, ಗಂಡಿನ ಕಡೆಯವರು ಮತ್ತು ಹೆಣ್ಣಿನ ಕಡೆಯವರು ವೀಳ್ಯವನ್ನು ಅದಲು-ಬದಲು ಮಾಡಿಕೊಳ್ಳುತ್ತಾರೆ. ಇದಾದ ನಂತರ ಕುಲದ ಯಜಮಾನರಿಗೆ, ಗ್ರಾಮದ ಪ್ರಮುಖರಿಗೆ ವೀಳ್ಯವನ್ನು ಕೊಡುತ್ತಾರೆ. ಇದೇ ಸಂದರ್ಭದಲ್ಲಿ ಗಂಡು-ಹೆಣ್ಣಿಗೆ ಶಾಸ್ತ್ರವನ್ನು ಐದು ಜನ ಮುತ್ತೈದೆಯರು ಮಾಡುತ್ತಾರೆ. ಇತ್ತೀಚಿನ ದಿನಗಳಲ್ಲಿ ಗಂಡು-ಹೆಣ್ಣು ಪರಸ್ಪರ ಚಿನ್ನದ ಉಂಗುರವನ್ನು ಅದಲು-ಬದಲು ಮಾಡಿಕೊಳ್ಳುವುದು ಅಲ್ಲಲ್ಲಿ ಕಂಡುಬರುತ್ತದೆ. ಸಿಹಿ ಊಟವನ್ನು ಮಾಡಿಸುತ್ತಾರೆ. ಇದನ್ನು ಮನೆಶಾಸ್ತ್ರವೆಂತಲೂ, ನಿಶ್ಚಿತಾರ್ಥವೆಂತಲೂ ಕರೆಯುತ್ತಾರೆ. ಗಂಡಿನ ಮನೆಯವರು ಹೆಣ್ಣಿಗೆ ಒಂದು ರವಿಕೆ ಕಣ, ಗಾಜಿನ ಬಳೆಗಳು, ಅರಿಸಿನ, ಕುಂಕುಮ, ಒಂದು ಚಿಪ್ಪು ಬಾಳೆಹಣ್ಣು, ಹೂ ಇತ್ಯಾದಿಗಳನ್ನು ತರುತ್ತಾರೆ. ಹೆಣ್ಣಿನ ಮನೆಯವರು ಒಂದು ತಟ್ಟೆಯಲ್ಲಿ ಕಳಸ, ಅರಿಸಿನ, ಕುಂಕುಮ, ವಿಭೂತಿಗಟ್ಟಿ ಇಟ್ಟು ಗಂಧದ ಕಡ್ಡಿ ಹಚ್ಚಿರುತ್ತಾರೆ. ಎರಡು ತಟ್ಟೆಗಳಲ್ಲಿ ಒಂದೊಂದು ಮಾರು ಹೂ ಇಟ್ಟಿರುತ್ತಾರೆ. ಹೆಣ್ಣಿನ ಕಡೆಯ ಮುಖ್ಯಸ್ಥನಿಗೆ ಹಣೆಗೆ ಅರಿಸಿನ ಕುಂಕುಮ ಹಚ್ಚಿ, ವಿಭೂತಿ ಬಳೆದು ಆತನ ಕೊರಳಿಗೆ ಹೂವನ್ನು ಹಾಕಿ ಎಲೆ ಅಡಿಕೆ, ಬಾಳೆಹಣ್ಣನ್ನು ಕೊಟ್ಟು ನಿಮ್ಮ ಹುಡುಗನಿಗೆ ನಮ್ಮ ಹುಡುಗಿಯನ್ನು ಕೊಡಲು ಒಪ್ಪಿದ್ದೇವೆ ಎಂದು ಹೇಳುತ್ತಾನೆ. ಇದೇ ರೀತಿ ಹೆಣ್ಣಿನ ಕಡೆಯ ಕುಲದ ಮುಖ್ಯಸ್ಥನ ಹಣೆಗೆ ಕುಂಕುಮವನ್ನು ಹಚ್ಚಿ ವಿಭೂತಿ ಬಳಿದು ಆತನಕೊರಳಿಗೆ ಹೂವನ್ನು ಹಾಕಿ ಎಲೆ ಅಡಿಕೆ, ಬಾಳೆಹಣ್ಣನ್ನು ಕೊಟ್ಟು ನಿಮ್ಮ ಹೆಣ್ಣನ್ನು ನಮ್ಮ ಹುಡುಗನಿಗೆ ವಿವಾಹ ಮಾಡಿಕೊಳ್ಳಲು ಒಪ್ಪಿದ್ದೇವೆ ಎಂದು ಹೇಳುತ್ತಾರೆ. ವರದಕ್ಷಿಣೆಯ ವಿಚಾರವನ್ನುಇದೇ ಸಂದರ್ಭದಲ್ಲಿ ತೀರ್ಮಾನಿಸುತ್ತಾರೆ.

ಒಪ್ಪುವೀಳ್ಯಶಾಸ್ತ್ರಕ್ಕೆ ಸಂಬಂಧಿಸಿದಂತೆ ದಕ್ಷಿಣ ಕನ್ನಡದಲ್ಲಿರುವ ಮೊಗಪೀರರ ಆಚರಣೆಯೇ ಬೇರೆಯಾಗಿದೆ. ಈ ಸಂಬಂಧ ನಮಗೆ "ನೆಂಟಸ್ತಿಕೆ ಆಗಬಹುದೆಂದಾದರೆ ಇಕ್ಕಡೆಯವರೂ ಸೇರಿ ಮುಂದೊಂದು ದಿನ ನಿಶ್ಚಯ ಮಾಡಿ ಗ್ರಾಮದೇವಸ್ಥಾನಕ್ಕೆ ಹೋಗುತ್ತಾರೆ. ಅಲ್ಲಿ 'ಪ್ರಸಾದಶಾಸ್ತ್ರ' ನಡೆಯುತ್ತದೆ. ದೇವರಿಗೆ ಮಂಗಳಾರತಿಯಾಗುವಾಗ ಪ್ರಸಾದ ಹೂ ಕೆಳಗೆ ಉದುರಿದರೆ, ಆ ಮದುವೆಗೆ ದೇವರ ಅಪ್ಪಣೆ ಉಂಟೆಂದು ಅರ್ಥ. ನಾಲ್ಕೈದು ಆರತಿ ಆಗುವವರೆಗೂ ಪ್ರಸಾದ ಹೂ ಉದುರದಿದ್ದರೆ ದೇವರ ಒಪ್ಪಿಗೆ ಇಲ್ಲವೆಂದು ಅರ್ಥ. ಅಂಥಾ ಸಂದರ್ಭದಲ್ಲಿ ಆ ನೆಂಟಸ್ತಿಕೆಯನ್ನು ಕೈಬಿಡಲಾಗುತ್ತದೆ."[೧೩] ಆದರೆ ಮಂಡ್ಯ ಜಿಲ್ಲೆಯಲ್ಲಿ 'ಬಣ್ಣ'ವನ್ನು ಪರಿಗಣಿಸಿ ಮದುವೆಯನ್ನು ನಿಶ್ಚಯಿಸುತ್ತಾರೆ. ೧೧ ಬಣ್ಣ ಹೊಂದಿರುವವರಿಗೆ ೧೨ ಬಣ್ಣದವರು ಹೆಣ್ಣನ್ನು ಕೊಡುವುದಿಲ್ಲ. ಬಣ್ಣ ಹೊಂದಾಣಿಕೆಯಾದರೆ ಮಾತ್ರ ಮದುವೆ ಮಾಡುತ್ತಾರೆ. ಇಲ್ಲದಿದ್ದರೆ ಆ ಸಂಬಂಧವನ್ನು ಬಿಟ್ಟುಬಿಡುತ್ತಾರೆ.

## ಲಗ್ನ ಕಟ್ಟಿಸುವುದು

ಗಂಗಾಮತಸ್ಥರು ಒಪ್ಪುವೀಳ್ಯಶಾಸ್ತ್ರವಾದ ಮೇಲೆ ಗಂಡು ಮತ್ತು ಹೆಣ್ಣಿನವರು ಒಂದು ತೆಂಗಿನಕಾಯಿ, ಒಂದು ಚಿಪ್ಪು ಬಾಳೆಹಣ್ಣು, ಎಲೆ-ಅಡಿಕೆ, ಅರಿಸಿನ, ಕುಂಕುಮ, ಕರ್ಪೂರ, ಗಂಧದ ಕಡ್ಡಿ ಮತ್ತು ಕಾಣಿಕೆಯನ್ನು ತೆಗೆದುಕೊಂಡು, ಜೋಯಿಸರಲ್ಲಿಗೆ ಹೋಗಿ ಲಗ್ನ ಕಟ್ಟಿಸುತ್ತಾರೆ. ಜೋಯಿಸರು ಪಂಚಾಂಗವನ್ನು ನೋಡಿ, ಗಣಕೂಟ ಲೆಕ್ಕಹಾಕಿ ಲಗ್ನ ಕಟ್ಟುತ್ತಾರೆ. ೩೨ ಕೂಟಗಳು ಗಂಡು ಮತ್ತು ಹೆಣ್ಣಿಗೆ ಸಮನಾಗಿ ಬಂದರೆ ಬಹಳ ಒಳ್ಳೆಯದಾಗುತ್ತದೆಂಬ ನಂಬಿಕೆ. ಹೆಣ್ಣಿನ ಹೆಸರಿಗೆ ಗಣ ಕೂಟ ಸರಿಯಾಗಿ ಬರಲಿಲ್ಲವೆಂದರೆ ಬೇರೊಂದು ಹೆಸರನ್ನು ಕಟ್ಟುತ್ತಾರೆ. ಈ ಸಂದರ್ಭದಲ್ಲಿ ಕುಲದ ಯಜಮಾನರು ಹಾಜರಿರುತ್ತಾರೆ. ಜೋಯಿಸರು ಎರಡು ಲಗ್ನ ಪತ್ರಿಕೆಗಳನ್ನು ಬರೆದು ಒಂದನ್ನು ಒಂದು ತಟ್ಟೆಯಲ್ಲಿಟ್ಟು ಹೂ, ಎಲೆ ಅಡಿಕೆ ಮತ್ತು ಬಾಳೆಹಣ್ಣಿನ ಜೊತೆಯಲ್ಲಿ ಹೆಣ್ಣಿನ ಕಡೆಯವರಿಂದ ಗಂಡಿನ ಕಡೆಯವರಿಗೆ ಕೊಡಿಸುತ್ತಾರೆ. ಇದೇ ರೀತಿ ಗಂಡಿನವರಿಂದ ಹೆಣ್ಣಿನ ಕಡೆಯವರಿಗೂ ಕೊಡಿಸುತ್ತಾರೆ. ಆ ಪತ್ರಿಕೆ ತಂದು ಹೊಸದಾಗಿ ಮುದ್ರಿಸಿ ಲಗ್ನಪತ್ರಿಕೆಯ ನಾಲ್ಕು ಮೂಲೆಗೂ ಅರಿಸಿನ ಕುಂಕುಮವನ್ನು ಹಚ್ಚಿ, ಅಕ್ಷತೆಯನ್ನು ಅದರೊಳಗೆ ಹಾಕಿ, ಮೊದಲು ಕುಲದ ಯಜಮಾನರಿಗೆ ಕೊಟ್ಟು, ನಂತರ ಬೇರೆಯವರಿಗೆ ಹಂಚುತ್ತಾರೆ.

### ಮದ್ದನಗೂಳು

ಗಂಗಾಮತಸ್ಥರಲ್ಲಿ ಮದ್ದನಗೂಳು ಮಾಡುವ ಸಂಪ್ರದಾಯವಿದೆ. ಗಂಡಿನ ಮನೆಯಲ್ಲಿ ಗಂಡಿಗೆ, ಹೆಣ್ಣಿನ ಮನೆಯಲ್ಲಿ ಹೆಣ್ಣಿಗೆ ೩, ೫ ಇಲ್ಲವೇ ೯ ದಿನಗಳು ಮದುವೆಗೆ ಕಾಲವಿದೆಯೆನ್ನುವಾಗ ಶಾಸ್ತ್ರದ ನೀರನ್ನು ಉಯ್ಯುವ ಪದ್ಧತಿಯಿದೆ. ಕಳಸ ಪೂಜಿಸಿ, ಕನ್ನಡಿ ಇಟ್ಟು, ಐದು ತಟ್ಟೆಗಳಲ್ಲಿ ಒಂದೊಂದಕ್ಕೂ, ಹಣ್ಣು, ಬೆಲ್ಲ, ಕಾಯಿ, ವೀಳ್ಯದೆಲೆ, ಸಿಹಿತಿಂಡಿಯನ್ನು ಇಡುತ್ತಾರೆ. ಈ ಸಂದರ್ಭದಲ್ಲಿ ಐದು ಜನ ಮುತ್ತೈದೆಯರು ಶಾಸ್ತ್ರವನ್ನು ಮಾಡುತ್ತಾರೆ.

ನೀರು ಉಯ್ಯುವ ಶಾಸ್ತ್ರ ಮುಗಿದ ನಂತರ ಮದ್ದನಗೂಳು ಪ್ರಾರಂಭವಾಗುತ್ತದೆ. ಹತ್ತಿರದ ಸಂಬಂಧಿಕರು ಚಪ್ಪರದ ದಿನ ಬರುವವರೆಗೂ ಮದ್ದನಗೂಳು ಮಾಡುತ್ತಾರೆ. ದಿನಕ್ಕೆ ಎರಡು ಮನೆಯವರು ವಿಶೇಷ ಊಟವನ್ನು ಮಾಡುವುದುಂಟು. ಕೆಲವು ಮನೆಗಳಲ್ಲಿ ಹೊಸಬಟ್ಟೆಯನ್ನು ತೆಗೆದು, ನೀರು ಊದು, ಶಾಸ್ತ್ರಮಾಡಿ ಊಟ ಹಾಕುತ್ತಾರೆ. ಮಾಂಸ, ಮೀನು, ಮೊಟ್ಟೆ ಇಲ್ಲವೇ ಸಿಹಿ ಊಟವನ್ನು ಮಾಡುತ್ತಾರೆ. ಇದನ್ನೆ ಮದ್ದನಗೂಳು ಎಂದು ಕರೆಯುತ್ತಾರೆ.

### ಚಪ್ಪರ ಕವೆ ಅಥವಾ ಶಾಸ್ತ್ರದ ಕೊನೆ

ಗಂಗಾಮತಸ್ಥರು ಚಪ್ಪರದಿನ ಚಪ್ಪರಕವೆಯನ್ನು ತರುತ್ತಾರೆ. ಇದು ಕೋಲುಗಳ್ಳಿಯದಾಗಿರುತ್ತದೆ. ಕೋಲುಗಳ್ಳಿಯನ್ನು ಮೊದಲು ಪೂಜಿಸಿ, ನಂತರ ಅದನ್ನು ಕಡಿಯುತ್ತಾರೆ. ಇವರಲ್ಲಿ ಕಂಬ ಅಥವಾ ಬಣ್ಣ ಎಂಬುದರ ಆಧಾರದ ಮೇಲೆ ಹೆಣ್ಣನ್ನು ಕೊಡುವ-ತರುವ ಸಂಪ್ರದಾಯ ರೂಢಿಯಲ್ಲಿದೆ. "೧೨ ಕಂಬದವರು ಶ್ರೇಷ್ಠರೆಂಬ ಭಾವನೆ, ೧೧ ಕಂಬದವರು ಸ್ವಲ್ಪ ಅವರಿಗಿಂತ ಕೆಳಗಿನವರೆಂಬ ಭಾವನೆ ಇದೆ. ಈ ಸಂಪ್ರದಾಯ ಹಿನ್ನೆಲೆಯಲ್ಲಿ ೧೨ ಕಂಬದವರು ನಾಲ್ಕು ಕವಲಿರುವ ೪ ಕೋಲು ಕಳ್ಳಿ ಕಂಬಗಳನ್ನು ಚಪ್ಪರದ ಮನೆಗೆ ತರುತ್ತಾರೆ. ಅದೇ ರೀತಿ ೧೧ ಕಂಬದವರು ೪ ಕವಲುಳ್ಳ ಎರಡನ್ನು, ಮೂರು ಕವಲುಳ್ಳ, ಒಂದು ಕಂಬವನ್ನು ಕಡಿದು ತರುತ್ತಾರೆ. ಅವುಗಳನ್ನು ತರುವಾಗ ಐದಾನ್ಯದ ಗಂಟು ಕಟ್ಟಿದ್ದು, ತಂದ ಕೂಡಲೆ ಮನೆಯ ಒಳಗಡೆ ಇಟ್ಟು ಪೂಜೆ ಸಲ್ಲಿಸುತ್ತಾರೆ."[೧೪]

### ಮದನಕೆಲಸ (ಮದಲಿಂಗನಶಾಸ್ತ್ರ)

ಗಂಗಾಮತಸ್ಥರು ಊರಿನ ಹಜಾಮನನ್ನು ಮನೆಗೆ ಕರೆಸಿ ಗಂಡಿನ ಗಡ್ಡವನ್ನು ಕೆರೆಸಲಾಗುತ್ತದೆ. ಹಜಾಮನಿಗೆ ಅಕ್ಕಿ, ಬೆಲ್ಲ, ತೆಂಗಿನಕಾಯಿ, ಬಾಳೆಹಣ್ಣು, ಎಲೆ ಅಡಿಕೆ ಮತ್ತು ಹೊಸ ಬಟ್ಟೆ, ಕಾಣಿಕೆಗಳನ್ನು ಒಂದು ಮೊರದಲ್ಲಿಟ್ಟು ಕೊಡಲಾಗುತ್ತದೆ. ನಂತರ ಗಂಡನ್ನು

ಮನೆಯ ತೊಟ್ಟಿಯಲ್ಲಿ ಕುಳ್ಳಿರಿಸಿ ತಲೆಗೆ ಹರಳೆಣ್ಣೆ, ಕೆನ್ನೆಗೆ ಅರಿಸಿನ ಹಚ್ಚಿ, ತಲೆಯ ಮೇಲೆ ಬಿಸಿ ನೀರನ್ನು ಹಾಕಿ ಸೀಗೆಕಾಯಿ ಮತ್ತು ಸೋಪು ಹಾಕಿ, ಸ್ನಾನ ಮಾಡಿಸುತ್ತಾರೆ. ಈ ಸಂದರ್ಭದಲ್ಲಿ ಹೆಂಗಸರು ಸೋಬಾನೆ ಪದವನ್ನು ಹಾಡುತ್ತಾರೆ. ಸ್ನಾನದ ನಂತರ ಶಾಸ್ತ್ರವನ್ನು ಮಾಡಿ ಗಂಡನ್ನು, ಹೆಣ್ಣಿನ ಮನೆಗೆ (ಮದುವೆ ಮನೆಗೆ) ಕರೆದುಕೊಂಡು ಬರುತ್ತಾರೆ.

## ಬಳೆತೊಡಿಸುವ ಶಾಸ್ತ್ರ

ಗಂಗಾಮತಸ್ಥರು ಮದುವೆಯ ಸಂದರ್ಭದಲ್ಲಿ ಬಳೆತೊಡುವ ಶಾಸ್ತ್ರವನ್ನು ಮಾಡುತ್ತಾರೆ. ಹೆಣ್ಣಿಗೆ ಸ್ನಾನ ಮಾಡಿಸುವುದಕ್ಕೆ ಮೊದಲೇ ಬಳೆಗಾರನಿಂದ ಕಂಕಣಬಳೆ (ಕರಿಬಳೆ)ಯನ್ನು ತೊಡಿಸಿರುತ್ತಾರೆ. ಈ ಸಮಯದಲ್ಲಿ ಬಂದಿರುವ ಹೆಂಗಸರಿಗೆ ಬಳಗದಬಳೆ ಎಂದು ಒಂದೊಂದು ಬಳೆಯನ್ನು ಬಳೆಗಾರನಿಂದಲೇ ತೊಡಿಸುತ್ತಾರೆ. ಬಳೆಗಾರನಿಗೆ ಅಕ್ಕಿ, ಬೆಲ್ಲ, ಸಾರಿನ ಪುಡಿ, ಮೆಣಸಿನಕಾಯಿ, ಬೇಳೆ, ಉಪ್ಪು, ತರಕಾರಿ, ವಿಳ್ಯದೆಲೆ, ಅಡಿಕೆ ಮತ್ತು ಕಾಣಿಕೆಯನ್ನು ಹೆಣ್ಣಿನ ಕೈಯಿಂದ ಕೊಡಿಸುತ್ತಾರೆ. ಇದನ್ನು 'ಅಕ್‌ಪಡಿ' ಎಂದು ಕರೆಯುತ್ತಾರೆ. ಹೆಣ್ಣು ಬಳೆಗಾರನಿಗೆ ನಮಸ್ಕಾರ ಮಾಡುತ್ತಾಳೆ. ಗಂಗಾಮತಸ್ಥರು ಬಡವರಾಗಿದ್ದರೂ ಸಹ ತಮ್ಮ ಹಳೆಯ ಸಂಪ್ರದಾಯವನ್ನು ಮಾತ್ರ ಬಿಟ್ಟಿಲ್ಲ.

## ಚಪ್ಪರ ಹಾಕೋದು

ಗಂಗಾಮತಸ್ಥರು ಮದುವೆಯ ಹಿಂದಿನ ದಿನ, ಮದುವೆ ಮಾಡುವ ಮನೆಯ ಮುಂದೆ ದೊಡ್ಡದಾಗಿ ಚಪ್ಪರವನ್ನು ಹಾಕುತ್ತಾರೆ. ಸಾಮಾನ್ಯವಾಗಿ ಹೆಣ್ಣಿನ ಮನೆಯವರೇ ಮದುವೆ ಮಾಡುತ್ತಾರೆ. ಗಂಡಿನವರ ಮನೆಯ ಮುಂದೆಯು ಸರಳವಾಗಿ ಚಪ್ಪರವನ್ನು ಹಾಕುತ್ತಾರೆ. ಹೊಂಗೆಸೊಪ್ಪು, ಮಾವಿನಸೊಪ್ಪು, ತೆಂಗಿನ ಗರಿಯನ್ನು ಚಪ್ಪರದ ಮೇಲೆ ಹಾಕುತ್ತಾರೆ. ಎಲ್ಲ ಕಂಬಗಳ ಸುತ್ತಲೂ ತೆಂಗಿನ ಗರಿಗಳನ್ನು ಹೆಣೆದಿರುತ್ತಾರೆ. ಚಪ್ಪರಕ್ಕೆ ಬಾಳೆ ಕಂಬಗಳನ್ನು ಹಾಗೂ ಎಳನೀರುಗಳನ್ನು ಕಟ್ಟಿ, ಮಾವಿನ ಸೊಪ್ಪಿನ ತೋರಣವನ್ನು ಕಟ್ಟಿರುತ್ತಾರೆ. ಚಪ್ಪರಕ್ಕೆ ಮೇಲುಕಟ್ಟು ಕಟ್ಟುತ್ತಾರೆ. ಅಂದರೆ ಚಪ್ಪರದ ನಾಲ್ಕು ಮೂಲೆಗಳಿಗೂ ಬಟ್ಟೆಯನ್ನು ಕಟ್ಟಿರುತ್ತಾರೆ. ಚಪ್ಪರದ ದಿವಸ ಹಳಮಕ್ಕಳು ಬರುತ್ತಾರೆ. ಇವರಿಗೆ ಹೊಸ ಬಟ್ಟೆಯನ್ನು, ಅಡಿಗೆಯ ಎಲ್ಲಾ ಪದಾರ್ಥಗಳನ್ನು ಅಕ್ಕಿ-ರಾಗಿ ತಟ್ಟೆಲೋಟ, ಕಾರದ ಪುಡಿ, ತರಕಾರಿ, ಹಣ್ಣು, ಕಾಣಿಕೆ ಎಲ್ಲವನ್ನು ಕೊಡುತ್ತಾರೆ.

### ಶಾಸ್ತ್ರದ ಭತ್ತ ಕುಟ್ಟಿಸುವುದು

ಹೆಣ್ಣಿನ ಮನೆಯಲ್ಲಿ ಮದುವೆಯಾದರೆ, ಗಂಡಿನ ಮನೆಯಲ್ಲಿ ಭತ್ತ ಕುಟ್ಟುವ ಶಾಸ್ತ್ರ ಮಾಡುತ್ತಾರೆ. ಮೂರು ಜನ ಮುತ್ತೈದೆಯರನ್ನು ಕರೆಸಿ ಒಂದು ಒನಕೆಗೆ ಅರಿಸಿನ ಕುಂಕುಮ ಹಚ್ಚಿ, ಹೂ, ಐದಾನ್ಯಗಂಟು ಕಟ್ಟಿ ಐದು ಸೇರು ಭತ್ತವನ್ನು ಕುಟ್ಟಿಸುತ್ತಾರೆ. ಕುಟ್ಟಿದ ಭತ್ತವನ್ನು ಕೇರದೆ ಹೊಟ್ಟು ಸಹಿತ ಇಡಿಸುತ್ತಾರೆ. ಮದುವೆ ಮುಗಿದ ಮೇಲೆ ಗಂಡು ಮತ್ತು ಹೆಣ್ಣಿನ ದೇವರು ಇರುವ ಕೋಣೆಗೆ, ಗಂಡು ಹೆಣ್ಣುಗಳಿಂದ ಹೊಟ್ಟು ಸಹಿತ ಇರುವ ಭತ್ತವನ್ನು ಎರಚಿಸುತ್ತರೆ."[೧೫]

### ಹೆಣ್ಣು ಅಥವಾ ಗಂಡು ಕರೆತರುವುದು

ಹೆಣ್ಣಿನ ಮನೆಯವರು ಮದುವೆ ಮಾಡಿದರೆ ಗಂಡನ್ನು, ಗಂಡಿನ ಮನೆಯವರು ಮದುವೆ ಮಾಡಿದರೆ ಹೆಣ್ಣನ್ನು ಕರೆತರುವ ಸಂಪ್ರದಾಯ ರೂಢಿಯಲ್ಲಿದೆ. ಹೆಣ್ಣಿಗೆ ತಮ್ಮನಾಗುವ ಅಥವಾ ಅಣ್ಣನಾಗುವ ವ್ಯಕ್ತಿ ಗಂಡಿನ ಮನೆಗೆ ಬಂದು ಶಾಸ್ತ್ರೋಕ್ತವಾಗಿ ಕರೆಯುತ್ತಾನೆ. ಈ ಸಂದರ್ಭದಲ್ಲಿ ಕರೆಯಲು ಬಂದಿರುವ ವ್ಯಕ್ತಿಗೆ ಉಪಚಾರವನ್ನು ಮಾಡಲಾಗುವುದು. ಪಂಚಾಮೃತವನ್ನು ಮಾಡಿ, ಆತನನ್ನು ಕೂರಿಸಿ ಬಾಳೆಎಲೆಗೆ ಹಾಕಿ ತಿನ್ನಲು ಕೊಡುತ್ತಾರೆ. ತದನಂತರದಲ್ಲಿ ಆತನೊಂದಿಗೆ ಹೆಣ್ಣಿನ ಮನೆಗೆ ಅಥವಾ ಮದುವೆ ನಡೆಯುವ ಸ್ಥಳಕ್ಕೆ ಗಂಡು ಹೋಗುತ್ತದೆ. ಏನಾದರೂ ಗಂಡಿನ ಮನೆಯಲ್ಲಿ ಮದುವೆ ನಡೆದರೆ, ಮೇಲೆ ತಿಳಿಸಿದ ರೀತಿಯಲ್ಲಿ ಹೆಣ್ಣಿನ ಮನೆಗೆ ಹೋಗಿ ಕರೆದುತರುವ ಸಂಪ್ರದಾಯವಿದೆ.

### ದೇವರು ತರುವುದು

ಪವಿತ್ರವಾದ ಗಂಗೆಯನ್ನು ಮದುವೆ ಮನೆಗೆ ತರುವುದಕ್ಕೆ ದೇವರು ತರುವುದು ಎನ್ನುತ್ತಾರೆ. "ಗಂಡು ಅಥವಾ ಹೆಣ್ಣನ್ನು ದೇವರ ಮನೆಗೆ ಕರೆತಂದ ನಂತರ ಸ್ವಲ್ಪ ಹೊತ್ತಿನ ಬಳಿಕ ಗಂಡು ಮತ್ತು ಹೆಣ್ಣಿನ ಕಡೆಯವರು ಮಾತ್ರ (ಗಂಡು ಮತ್ತು ಹೆಣ್ಣು ಬರುವುದಿಲ್ಲ) ವಾದ್ಯ ಸಮೇತ ಕಳಸದ ತಟ್ಟೆಯನ್ನು ತೆಗೆದುಕೊಂಡು ನೀರು ಇರುವ ಜಾಗ ಬಾವಿಯಾಗಿರಬಹುದು ಇಲ್ಲವೇ ಕೆರೆಯಾಗಿರಬಹುದು ಅಥವಾ ಹೊಳೆಯಾಗಿರಬಹುದು ಅಲ್ಲಿಗೆ ದೇವರು ಮತ್ತು ಮೀಸಲು ನೀರು ತರಲು ಹೋಗುತ್ತಾರೆ."[೧೬] ನೀರು ತರುವ ಸ್ಥಳವನ್ನು ಸಗಣಿಯಿಂದ ಶುದ್ಧಗೊಳಿಸಿ, ಅಗಸನ ಮಡಿಯನ್ನು ಹಾಸಿ, ಬಾಳೆಎಲೆಯ ಮೇಲೆ ಕುಂಬಾರನ ಮನೆಯಿಂದ ತಂದಿರುವ ಗಡಿಗೆಗಳನ್ನು ಇಡುತ್ತಾರೆ. ಅವುಗಳಿಗೆ ನೀರು ತುಂಬಿ, ಐದಾನ್ಯದ ಗಂಟುಗಳನ್ನು

ಇಟ್ಟೆ, ಹೊಂಬಾಳೆ ಮುಡಿಸಿ, ನೀರಿಗೆ ನಾಣ್ಯ, ಬೆಲ್ಲ ಹಾಕಿ ಪೂಜೆ ಸಲ್ಲಿಸಿ ತರುವ ಸಂಪ್ರದಾಯವಿದೆ. ಈ ಸಂದರ್ಭದಲ್ಲಿ ಮುತ್ತೈದೆಯು ಕಳಸವನ್ನು ಪೂಜಿಸಿ ಹಿಡಿದುಕೊಂಡಿರುತ್ತಾಳೆ. ಕೆಲವು ಕಡೆ ಗಂಡಿನ ಕಡೆಯವರು ಮತ್ತು ಹೆಣ್ಣಿನ ಕಡೆಯವರು ಗಡಿಗೆಯನ್ನು ಹೊತ್ತು ಬರುತ್ತಾರೆ. ಮದುವೆ ಮನೆಗೆ ದೇವರ ತಂದು ಹೆಣ್ಣು ಇರುವ ಜಾಗದಲ್ಲಿ ಅವರ ದೇವರನ್ನು, ಗಂಡಿರುವ ಕಡೆ ಅವರ ದೇವರನ್ನು ಇಟ್ಟುಕೊಳ್ಳುವ ಪದ್ಧತಿಯಿದೆ. ಮದುವೆ ಮುಗಿದ ಮೇಲೆ ಹೆಣ್ಣಿನ ತಲೆಯ ಮೇಲೆ ಗಂಡಿನವರ ಮುಖ್ಯ ಗಡಿಗೆಯನ್ನು ಹೊರಿಸಿಕೊಂಡು ಹೋಗಿ ಅರಳಿ ಮರಕ್ಕೆ ಪೂಜೆ ಸಲ್ಲಿಸಿ ಆ ಗಂಗೆಯನ್ನು ಅರ್ಪಿಸುತ್ತಾರೆ. ದೇವರು ತರುವ ಕಾರ್ಯದಲ್ಲಿ ಕುಲದ ಯಜಮಾನರುಗಳ ಪಾತ್ರ ಪ್ರಮುಖವಾಗಿರುತ್ತದೆ. ದೇವತಾ ಕಾರ್ಯಗಳನ್ನೆಲ್ಲಾ ಅವರೇ ನಿರ್ವಹಿಸುತ್ತಾರೆ.

### ಕಂಕಣ ಕಟ್ಟುವ ಶಾಸ್ತ್ರ

ಗಂಗಾಮತಸ್ಥರಲ್ಲಿ ಮದುವೆ ದಿನ ಗಂಡಿಗೆ ಅವರ ಸೋದರ ಮಾವನಿಂದ ಕಂಕಣವನ್ನು ಕಟ್ಟಿಸುತ್ತಾರೆ. ಗಂಡನ್ನು ಹಸೆ ಮಣೆಯ ಮೇಲೆ ಪೂರ್ವಾಭಿಮುಖವಾಗಿ ಕುಳ್ಳಿರಿಸಿ ಒಂದು ತಟ್ಟೆಯಲ್ಲಿ ಅಕ್ಕಿ ಸುರಿದು ಅದರ ಮೇಲೆ ಒಂದು ಬೆಲ್ಲದಚ್ಚನ್ನು ಇಟ್ಟು ಅಕ್ಕಿಯನ್ನು ಅದರಲ್ಲಿ ತುಂಬುತ್ತಾರೆ. ಬೆಲ್ಲದ ಮೇಲೆ ವೃತ್ತಾಕಾರವಾಗಿ ಕತ್ತರಿಸಿರುವ ವೀಳ್ಯದೆಲೆಯನ್ನು ಇಟ್ಟಿರುತ್ತಾರೆ. ಗಂಡಿನ ಬಲ ಹಸ್ತಕ್ಕೆ ಹಸುವಿನ ಬೆಣ್ಣೆ ಸವರಿ ಅದರಲ್ಲಿ ದೇವರ ಹಣವನ್ನು ಇಡಲಾಗುತ್ತದೆ. ಈ ದೇವರ ಹಣವನ್ನು ಸಾಮಾನ್ಯವಾಗಿ ಕುಲದ ಯಜಮಾನ ಇಟ್ಟಿರುತ್ತಾನೆ. ಇದು ವೃತ್ತಾಕಾರದ ಚಿನ್ನದ ಚೂರು. ಮದುವೆ ಕಾರ್ಯ ಮುಗಿದ ಮೇಲೆ ಹಿಂದಿರುಗಿಸುವಾಗ ಎಲೆ, ಅಡಿಕೆ, ಬಾಣೆಹಣ್ಣು ಮತ್ತು ವೀಳ್ಯದೆಲೆ ಕಾಣಿಕೆಯನ್ನು ಕೊಟ್ಟು ಹಿಂದಿರುಗಿಸುತ್ತಾರೆ.

ಗಂಡಿನ ಬಲಹಸ್ತವನ್ನು ಬೆಲ್ಲದ ·ಮೇಲಿರುವ ವೀಳ್ಯದೆಲೆಯ ದೇವರ ಹಣದ ಮೇಲೆ ಇಡಲಾಗುತ್ತದೆ. ಸೋದರ ಮಾವ ಗಂಡಿನ ಬಲಗೈಗೆ ವಿಭೂತಿ ಬಳಿದು ಅರಿಸಿನ ಕುಂಕುಮ ಹಚ್ಚಿ, ಗಂಧದ ಕಡ್ಡಿಯಿಂದ ಪೂಜೆ ಮಾಡುತ್ತಾನೆ. ನಂತರ ಬಲಗೈಯನ್ನು ಮೇಲಕ್ಕೆತ್ತಿಸಿದಾಗ ಅಂಟಿರುವ ಅಕ್ಕಿಕಾಳನ್ನು ಸೋದರಮಾವ ಗಂಡಿನ ತಲೆಯ ಮೇಲೆ ಹಾಕುತ್ತಾನೆ. ಗಂಡಿನ ಹಸ್ತಕ್ಕೆ ಅಂಟಿರುವ ವೀಳ್ಯದೆಲೆಯನ್ನು ಹಸ್ತದಲ್ಲಿದ್ದ ದೇವರ ಹಣವನ್ನು ತೆಗೆದು ಬಿಳಿಯ ವಸ್ತ್ರದಿಂದ ಕೈಯನ್ನು ಒರೆಸುತ್ತಾರೆ. ಹೀಗೆ ಮೂರು ಬಾರಿ ಮಾಡಿದಾಗ ಗಂಡಿನ ಬಲಕೈಗೆ ಬಿಳಿಯ ಮತ್ತು ಕರಿಯ ಮಿಶ್ರಣದ ಕಂಬಳಿಯ ದಾರಕ್ಕೆ ಒಂದು ಅರಿಸಿನದ ಕೊಂಬೆಯನ್ನು ಕಟ್ಟಿ ಅದನ್ನು ಕಟ್ಟುತ್ತಾರೆ. ಇದರ ಮೇಲೆ ಒಂದು ಅರಿಸಿನದ ಬಟ್ಟೆಯನ್ನು ಕಟ್ಟುತ್ತಾರೆ. ಇದಾದ ನಂತರ ಆ

ಊರಿನ ಹಜಾಮನಿಂದ ತಯಾರಾದ ಬಾಸಿಂಗವನ್ನು ಗಂಡಿನ ಹಣೆಗೆ ಕಟ್ಟುತ್ತಾರೆ. ಗಂಡಿಗೆ ಹೇಗೆ ಕಂಕಣವನ್ನು ಕಟ್ಟಿಸುತ್ತಾರೋ ಅದೇ ರೀತಿಯಲ್ಲಿ ಹೆಣ್ಣಿಗೂ ಕಂಕಣವನ್ನು ಸೋದರ ಮಾವನಿಂದ ಕಟ್ಟಿಸುತ್ತಾರೆ.

## ದಿಬ್ಬಣ

ವಾದ್ಯಗಳ ಸಮೇತ ಕಂಕಣದಾರಿಯಾದ ಗಂಡಿಗೆ ಬಿಳಿಯ ಜೋಡಂಚಿನ ಪಂಚೆಯಿಂದ ಕಚ್ಚೆ ಹಾಕಿಸಿ ದೇವಸ್ಥಾನಕ್ಕೆ ಕರೆದುಕೊಂಡು ಹೋಗಿ ಬಿಡುವುದೇ ದಿಬ್ಬಣ. ವಾದ್ಯದವರು ಮುಂದೆ, ಕಳಸದ ತಟ್ಟೆ ಹಿಡಿದಿರುವವರು ಹಿಂದೆ, ಐದು ತರಹದ ಸಾಮಾನು ತುಂಬಿರುವ ತಟ್ಟೆಗಳವರು ಮತ್ತು ಒಡಹುಟ್ಟಿನ ಗಡಿಗೆ ಹಿಡಿದಿರುವ ತಂಗಿ, ಇವರೊಟ್ಟಿಗೆ ಒಬ್ಬ ಛತ್ರಿಹಿಡಿದಿರುತ್ತಾನೆ. ಛತ್ರಿಯ ಮೇಲೆ ಹಾಕಿರುವ ಶಾಲು ಅಥವಾ ರಗ್ಗಿನ ನಾಲ್ಕು ಮೂಲೆಗಳನ್ನು ಒಬ್ಬೊಬ್ಬರು ಹಿಡಿದು ಸಾಗುತ್ತಾರೆ. ಇವರ ಹಿಂದೆ ಸಂಬಂಧಿಕರು, ಪ್ರಮುಖರು ಬರುತ್ತಾರೆ. ಇವರೆಲ್ಲಾ ದೇವಸ್ಥಾನವನ್ನು ತಲುಪಿದ ಮೇಲೆ ವಾದ್ಯದವರು ಚಪ್ಪರದ ಮನೆಗೆ ವಾಪಸ್ಸು ಬರುತ್ತಾರೆ. ನಂತರ ಹೆಣ್ಣಿನ ತಾಯಿ-ತಂದೆಯವರು ಆ ಗಂಡಿನ ಕಾಲು ತೊಳೆದು, ವರೋಪಚಾರ ನೀಡಿ ಗಂಡಿನ ಕೈಯಲ್ಲಿ ತೆಂಗಿನ ಕಾಯಿ ಹಿಡಿಸಿ ಚಪ್ಪರದ ಮನೆಗೆ ಕರೆತರುತ್ತಾರೆ.

## ಧಾರೆಶಾಸ್ತ್ರ

ತಾಳಿ ಕಟ್ಟುವಾಗ ಮಾಡುವ ಶಾಸ್ತ್ರಗಳೇ ಧಾರೆಶಾಸ್ತ್ರ. ಗಂಡು ಹಸೆಮಣೆಯ ಮೇಲೆ ಪೂರ್ವಾಭಿಮುಖವಾಗಿ ನಿಂತಾಗ ಇಬ್ಬರು ಅಗಸರು ಗಂಡಿನ ಮುಂದೆ ಒಂದು ಬಿಳಿ ಪಂಚೆಯ ತೆರೆ ಹಿಡಿದಿರುತ್ತಾರೆ. ಆಗ ಒಡವೆ, ವಸ್ತ್ರ, ಹೂವಿನ ಹಾರದಿಂದ ಅಲಂಕೃತವಾದ ಹೆಣ್ಣನ್ನು ಅವಳ ಸೋದರ ಮಾವ ಧಾರೆ ಮಂಟಪಕ್ಕೆ ಕರೆದುಕೊಂಡು ಬರುತ್ತಾನೆ. ಇವಳ ಜೊತೆ ಕಳಸ ಹಿಡಿದಿರುವ ಹೆಂಗಸು ಬರುತ್ತಾಳೆ. ಹೆಣ್ಣು ವಿವಾಹ ಮಂಟಪದ ಸುತ್ತ ಮೂರುಬಾರಿ ಪ್ರದಕ್ಷಿಣೆ ಹಾಕಿ, ದೇವರಿಗೆ ನಮಸ್ಕರಿಸಿ ವರನ ಅಭಿಮುಖವಾಗಿ ಹಸೆಮಣೆಮೇಲೆ ನಿಲ್ಲುತ್ತಾಳೆ. ಗಂಡು ಹೆಣ್ಣು ಪರಸ್ಪರ ಮುಖವನ್ನು ನೋಡಬಾರದು. ಜೋಯಿಸರು ಗಂಡಿನಿಂದ ಹೆಣ್ಣಿಗೆ, ಹೆಣ್ಣಿನಿಂದ ಗಂಡಿಗೆ ಸಮನ್‌ಮಾಲೆ (ಸಂಬಂಧ ಮಾಲೆ)ಯನ್ನು ಅವರ ಕೊರಳಿಗೆ ಹಾಕಿಸುತ್ತಾರೆ. ಎಳ್ಳು-ಜೀರಿಗೆಯನ್ನು ಜೋಯಿಸರು ವರನ ಕೈಯಲ್ಲಿ ಕೊಟ್ಟು ಹೆಣ್ಣಿನ ತಲೆಯ ಮೇಲೆ ಹಾಕಿಸುತ್ತಾರೆ. ಇದೇ ರೀತಿ ಹೆಣ್ಣಿನ ಕೈಯಿಂದಲೂ ಗಂಡಿಗೆ ಎಳ್ಳು-ಜೀರಿಗೆಯನ್ನು ಹಾಕಿಸುತ್ತಾರೆ. ನಂತರ ಗಂಡು ಮತ್ತು ಹೆಣ್ಣಿನ ನಡುವೆ ಇದ್ದ ತೆರೆಯನ್ನು ತೆಗೆಯುತ್ತಾರೆ. ಆದರೆ ದಕ್ಷಿಣ ಕನ್ನಡದ ಮೊಗವೀರರ

ಸಂಸ್ಕೃತಿಯು ಬೇರೆಯದಾಗಿದೆ. "ಚಪ್ಪರದಲ್ಲಿ ವಧುವರರಿಗೆ ಕುಳಿತುಕೊಳ್ಳಲು ಎರಡು ಆಸನಗಳನ್ನಿಟ್ಟಿರುತ್ತಾರೆ. ಅದರ ಸುತ್ತಲೂ ನಡೆಯಲು ನೆಲದ ಮೇಲೆ ಪಾವಡೆ (ಮಡಿವಸ್ತ್ರ) ಹಾಸಿರುತ್ತಾರೆ. ಆಸನಗಳಿಗೂ ಮಡಿವಸ್ತ್ರ ಹೊದಿಸಿರುತ್ತಾರೆ. ವರನ ಭಾವ ವರನ ಕೈಹಿಡಿದು, ವಧುವಿನ ಅತ್ತಿಗೆ ನಾದಿನಿಯರಲ್ಲೊಬ್ಬರು ವಧುವಿನ ಕೈ ಹಿಡಿದ ಧಾರೆ ಮಂಟಪಕ್ಕೆ ಮೂರು ಸುತ್ತು ಬರಿಸುತ್ತಾರೆ. ಬಳಿಕ ವಧುವು ವರನಿಗೂ, ವರನು ವಧುವಿಗೂ, ಪರಸ್ಪರ ಮಾಲೆಹಾಕಿಕೊಳ್ಳುತ್ತಾರೆ."[೧೭]

ಗಂಡಿನ ಎರಡು ಕೈ ಮೇಲೆ ಹೆಣ್ಣಿನ ಎರಡೂ ಕೈ ಇರಿಸಿ ಎಲೆ, ಅಡಿಕೆ ಇಟ್ಟು ಅದರ ಮೇಲೆ ತೆಂಗಿನಕಾಯಿಗಳನ್ನು ಇಟ್ಟು ಅದರ ಮೇಲೆ ಎರಡು ಬಾಳೆಹಣ್ಣುಗಳನ್ನು ಇರಿಸುತ್ತಾರೆ. ಹೆಣ್ಣಿನ ತಂದೆ ತಾಯಿ, ಗಂಡಿನ ತಂದೆ ತಾಯಿ ಅವರ ಬಂಧು ಬಳಗ, ಇತರ ಹಿರಿಯರು ಒಬ್ಬರಾದ ಮೇಲೆ ಒಬ್ಬರಂತೆ ಗಂಡು ಮತ್ತು ಹೆಣ್ಣಿನ ಕೈ ಮೇಲೆ ನಾಣ್ಯ ಇಟ್ಟು ಮೂರು ಬಾರಿ ಹಾಲು ಬಿಡುತ್ತಾರೆ. ಇದನ್ನು ಧಾರೆ ಎರೆಯುವುದು ಎನ್ನುತ್ತಾರೆ.ಇಷ್ಟರಲ್ಲಾಗಲೇ ಒಂದು ತಟ್ಟೆಯಲ್ಲಿ ಅಕ್ಕಿ ಅದರ ಮೇಲೆ ಬೆಲ್ಲ ಇರಿಸಿ ಹೆಣ್ಣಿಗೆ ಕಟ್ಟುವ ಮಂಗಳಸೂತ್ರವನ್ನು (ತಾಳಿ ಅಥವಾ ಮಾಂಗಲ್ಯ) ಇಟ್ಟು ಅದನ್ನು ಮದುವೆಗೆ ಬಂದಿರುವವರೆಲ್ಲರಿಂದ ಮುಟ್ಟಿಸಿ ತರುತ್ತಾರೆ. ಈ ಸಂದರ್ಭದಲ್ಲಿ ಒಳಗೆರೆ ಹುಚ್ಚಮ್ಮನ ಒಕ್ಕಲಿನವರು ಮತ್ತು ಸಿದ್ದಪ್ಪನ ಒಕ್ಕಲಿನವರು ಮದುವೆಯ ದಿನ ಮಾಂಸದ ಊಟವನ್ನು ಮಾಡಿರುತ್ತಾರೆ. ತಾಳಿ ಕಟ್ಟುವುದಕ್ಕಿಂತ ಮೊದಲೇ ಊಟವನ್ನು ಬಂದಿರುವ ಜನರಿಗೆ ಬಡಿಸುತ್ತಾರೆ. ಅವರು ಊಟ ಮಾಡಿ, ಎಂಜಲೆಲೆಯನ್ನು ಬಿಟ್ಟು ಮೇಲೆದ್ದಾಗ ಅವರು ತಾಳಿಯನ್ನು ಕಟ್ಟಿಸುತ್ತಾರೆ. ತಾಳಿ ಕಟ್ಟಿದ ನಂತರ ಎಂಜಲೆಲೆಗಳನ್ನು ಎತ್ತುತ್ತಾರೆ. ತಾಳಿಯನ್ನು ಕಟ್ಟಿದ ನಂತರ ಬಲೆಯನ್ನು ಪೂಜೆ ಮಾಡುತ್ತಾರೆ. ತದ ನಂತರ ತಮ್ಮ ಕುಲ ದೇವತೆಯಾದ ಗಂಗೆಯನ್ನು ಪೂಜಿಸುತ್ತಾರೆ. ಕೆಲವರು ತಾಳಿ ಕಟ್ಟಿದ ನಂತರ ಸಿಹಿ ಊಟವನ್ನು ಹಾಕಿಸುತ್ತಾರೆ. ಆದರೆ ಒಳಗೆರೆ ಹುಚ್ಚಮ್ಮ, ಸಿದ್ದೇಶ್ವರನ ಒಕ್ಕಲಿನವರು ಮಾತ್ರ ಮಾಂಸದ ಅಡಿಗೆಯನ್ನು ಮಾಡುತ್ತಾರೆ. ಗಂಡು-ಹೆಣ್ಣು ಧಾರಮೂರ್ತ ಮುಗಿದ ನಂತರ ಕುಲದ ಯಜಮಾನರುಗಳು ಮತ್ತು ತಂದೆ ತಾಯಿಯರು, ಪ್ರಮುಖ ಹಿರಿಯರ ಪಾದಗಳಿಗೆ ನಮಸ್ಕಾರವನ್ನು ಮಾಡುತ್ತಾರೆ. ಧಾರ ಮೂರ್ತವಾದ ಮೇಲೆ ಮುಯ್ಯಿಯನ್ನು ಹಾಕುತ್ತಾರೆ. ನಂತರ ವಧುವಿನಿಂದ ದೇವರ ಗಡಿಗೆಯ ನೀರನ್ನು ತೆಂಗಿನ ಮರಕ್ಕೆ ಅಥವಾ ಅರಳಿ ಮರಕ್ಕೆ ಉಯ್ಯಿಸುತ್ತಾರೆ.

### ಕಂಕಣ ಬಿಚ್ಚಿಸುವ ಶಾಸ್ತ್ರ

ಗಂಡು-ಹೆಣ್ಣಿನ ಕೈಗೆ ಕಟ್ಟಿರುವ ಕಂಕಣವನ್ನು ಬಿಚ್ಚಿಸುವ ಕಾರ್ಯ ನಡೆಯುತ್ತದೆ. ಇಬ್ಬರನ್ನು ಹಸೆಮಣೆಯ ಮೇಲೆ ಕುಳ್ಳಿರಿಸಿರುತ್ತಾರೆ. ಗಂಡಿನ ತಲೆಯಲ್ಲಿರುವ ಪೇಟವನ್ನು ಕಳೆಯುತ್ತಾರೆ. ಹೆಣ್ಣು ಮತ್ತು ಗಂಡಿನ ಕೊರಳಿನಲ್ಲಿರುವ ಸಮನ್ ಮಾಲೆಯನ್ನು ಬಿಚ್ಚುತ್ತಾರೆ. ನಂತರ ಬಾಸಿಂಗವನ್ನು ಬಿಚ್ಚುತ್ತಾರೆ. ಮತ್ತೆ ಸೋದರ ಮಾವನಿಂದ ಕಂಕಣವನ್ನು ಬಿಚ್ಚಿಸಲಾಗುತ್ತದೆ. ಇವನ್ನು ಹೆಣ್ಣಿನ ಮನೆಯವರು ಮನೆಗೆ ತಂದು ಇಟ್ಟುಕೊಂಡಿದ್ದು, ತಮ್ಮ ಮನೆ ದೇವರಿಗೆ ಕೊಡುತ್ತಾರೆ.

### ನೆರವಿ

ಹೆಣ್ಣಿನ ಮನೆಯವರು ಮದುವೆ ಮಾಡಿದ್ದರೆ ಗಂಡಿನ ಮನೆಯವರು, ಗಂಡಿನ ಮನೆಯವರು ಮದುವೆ ಮಾಡಿದ್ದರೆ ಹೆಣ್ಣಿನ ಮನೆಯವರು ನೆರವಿ (ಬೀಗರೂಟ)ಯನ್ನು ಮಾಡುತ್ತಾರೆ. ಮೂರು, ಐದು ಅಥವಾ ಏಳು ದಿನದ ಅಂತರವನ್ನಿಟ್ಟುಕೊಂಡು ನೆರವಿಯನ್ನು ಮಾಡುತ್ತಾರೆ. ಮರಿಮಾಂಸ, ಕುರಿಮಾಂಸ, ಕೋಳಿ, ಮೀನು, ಇವುಗಳ ಅಡುಗೆಯನ್ನು ಮಾಡಿಸುತ್ತಾರೆ. ಹೆಣ್ಣಿನ ಮನೆಯವರು ಮತ್ತು ಗ್ರಾಮದ ಪ್ರಮುಖರು ಊಟಕ್ಕೆ ಬರುತ್ತಾರೆ. ಊಟವಾದ ನಂತರ ಹೆಣ್ಣಿನ ಮನೆಯವರು ಗಂಡು-ಹೆಣ್ಣನ್ನು ಕರೆದುಕೊಂಡು ತಮ್ಮ ಮನೆಗೆ ಬರುತ್ತಾರೆ. ಇವರು ಹೋಗುವ ಸಂದರ್ಭದಲ್ಲಿ ಹೆಣ್ಣಿನ ಮನೆಗೆ ಗಂಡಿನ ಮನೆಯವರು ಮಾಂಸದ ಊಟವನ್ನು ಕೊಟ್ಟು ಕಳುಹಿಸುತ್ತಾರೆ. ಇದೇ ಅವರೆಲ್ಲರಿಗೂ ರಾತ್ರಿಯ ಊಟವಾಗಿರುತ್ತದೆ.

### ಕಜ್ಜಾಯದ ಬುತ್ತಿ

ಹೆಣ್ಣಿನ ಮನೆಯವರು ನೆರವಿಯನ್ನು ಮುಗಿಸಿ ಬಂದ ಮೂರು ದಿನದೊಳಗೆ ಕಜ್ಜಾಯದ ಬುತ್ತಿಯನ್ನು ಗಂಡಿಗೆ ಕೊಟ್ಟು ಕಳುಹಿಸಬೇಕು. ಹೊಸ ಹಂಡೆಯನ್ನು ತಂದು ಅದಕ್ಕೆ ಚಿರೋಟಿ, ಕಜ್ಜಾಯ, ಚಕ್ಕುಲಿ, ಕೋಡಬಳೆ, ಕರ್ಜಿಕಾಯಿ, ರವೆಉಂಡೆ ಮುಂತಾದ ಕರಿದ ಪದಾರ್ಥಗಳನ್ನು ಮಾಡಿ ಹಂಡೆಗೆ ತುಂಬಿಸಿ ಕಳುಹಿಸಬೇಕು. ಗಂಡಿನ ಜೊತೆಯಲ್ಲಿದ್ದವರಿಗೂ ಸಹ ತಿಂಡಿಯ ಬುತ್ತಿಯನ್ನು ಕಟ್ಟಿ ಕಳುಹಿಸುತ್ತಾರೆ.

## ಪ್ರಸ್ಥ

ಗಂಗಾಮತಸ್ಥ ಸಮುದಾಯದವರು ಹಿಂದೆ ಹೆಣ್ಣಿಗೆ ೭ ರಿಂದ ೧೨ ವರ್ಷದೊಳಗೆ ಮದುವೆ ಮಾಡುತ್ತಿದ್ದರು. ಆ ಸಂದರ್ಭದಲ್ಲಿ ಮೈನೆರೆಯದಿರುವ ಹೆಣ್ಣು ಮಕ್ಕಳೇ ಹೆಚ್ಚಾಗಿ ಮದುವೆ ಆಗುತ್ತಿದ್ದರು. ಹೆಣ್ಣು ಮೈ ನೆರೆದ ಒಂದು ತಿಂಗಳಿಗೆ ಮೂರು ದಿನ ಕಡಿಮೆ ಇದ್ದಾಗ ಪ್ರಸ್ಥದ ಶಾಸ್ತ್ರ ಮಾಡುತ್ತಿದ್ದರು. ಒಂದು ವೇಳೆ ಹೆಣ್ಣು ಮದುವೆಯಾಗುವುದಕ್ಕೆ ಮೊದಲೇ ಮೈನೆರೆದಿದ್ದರೆ, ಹೊರಗಾದ ೧೬ ರಿಂದ ೨೦ ದಿನಗಳೊಳಗಾಗಿ ಪ್ರಸ್ಥವನ್ನು ಮಾಡುತ್ತಿದ್ದರು. ಪ್ರಸ್ಥದ ದಿನ ಸಾಯಂಕಾಲ ಗಂಡಿನ ಕಡೆಯವರು ಒಂಭತ್ತು ಕಟ್ಟು ವೀಳ್ಯದೆಲೆ, ಒಂಭತ್ತು ಚಿಪ್ಪು ಬಾಳೆಹಣ್ಣು, ಒಂದು ತಟ್ಟೆ ಸಕ್ಕರೆ ಅಚ್ಚು, ಒಂದು ತಟ್ಟೆ ಉರಿಗಡಲೆ, ಒಂದು ತಟ್ಟೆ ಅಡಿಕೆ, ಒಂದು ತಟ್ಟೆ ಎಲ್ಲ ತರಹದ ಹಣ್ಣುಗಳು, ಒಂದು ತಟ್ಟೆ ನೆನೆ ಹಾಕಿ ಸೋಸಿದ ಅಕ್ಕಿ, ಎಳ್ಳು ಕಡ್ಲೆಕಾಳು, ಸೀರೆ, ಕುಪ್ಪಸ, ಲಂಗ, ಪರ್ಸು, ಪೌಡರ್, ಕರ್ಪೂರ, ಗಂಧದ ಕಡ್ಡಿ ಇವುಗಳೆಲ್ಲವನ್ನೂ ಬುಟ್ಟಿಯಲ್ಲಿ ತುಂಬಿಕೊಳ್ಳುತ್ತಾರೆ. ಹೆಣ್ಣಿನವರು ಗಂಡಿಗೆ ಹೊಸ ಬಟ್ಟೆ, ಹೂವಿನ ಹಾರ ಹಾಕಿ ಹಸೆಮಣೆಯ ಮೇಲೆ ಕುಳ್ಳಿರಿಸಿ ಅಕ್ಕಿ ಕಾಳು ಇಕ್ಕಿಸಿ ಸೋಗಲು ಉಯ್ಯುತ್ತಾರೆ. ಈ ಸಂದರ್ಭದಲ್ಲಿ ಸೋಬಾನೆ ಪದವನ್ನು ಕೆಲವು ಹೆಂಗಸರಿಂದ ಹೇಳಿಸುತ್ತಾರೆ.

ಗಂಡು ಮತ್ತು ಹೆಣ್ಣನ್ನು ಹಸೆಮಣೆಯಿಂದ ಮೇಲಕ್ಕೇಳಿಸಿದ ನಂತರ ಬಂದವರಿಗೆಲ್ಲ ಮಾಂಸದ ಅಡಿಗೆಯನ್ನು ಬಡಿಸಲಾಗುತ್ತದೆ. ನಂತರ ಗಂಡು ಮತ್ತು ಹೆಣ್ಣನ್ನು ಹೊಸ ಹಾಸಿಗೆ ಹಾಸಿ ಹಲವು ಬಗೆಯ ಹೂವಿನಿಂದ ಸಿಂಗರಿಸಿ, ತಟ್ಟೆಯಲ್ಲಿ ಹಣ್ಣು, ಸಿಹಿ, ಹಾಲು ಇರಿಸಿರುವ ಪ್ರಸ್ಥದ ಕೋಣೆಗೆ ಕಳುಹಿಸುತ್ತಾರೆ. ಈ ತೆರೆನಾದ ಪ್ರಸ್ಥವನ್ನು ಗಂಗಾಮತಸ್ಥರಲ್ಲಿ ಶೇಕಡ ೩೦ ರಷ್ಟನ್ನು ಕಾಣಲು ಸಾಧ್ಯ. ಏಕೆಂದರೆ ಬಡತನದ ಕಾರಣದಿಂದಾಗಿ ಎಲ್ಲರು ಮೇಲೆ ತಿಳಿಸಿದಂತೆ ಖರ್ಚುಮಾಡಿ ಮಾಡಲಾರರು. ಆದರೆ ಸರಳವಾಗಿ ಮಾಡಿದರು ಸಾಂಪ್ರದಾಯಿಕ ಆಚರಣೆಗಳನ್ನು ಮಾಡೇ ಮಾಡುತ್ತಾರೆ.

## ಕೂಡಾವಳಿ

ಗಂಗಾಮತಸ್ಥ ಸಮುದಾಯದಲ್ಲಿ 'ಕೂಡಾವಳಿ'ಯ ಸಂಪ್ರದಾಯವಿದೆ. ವಿಧವೆ ಅಥವಾ ಗಂಡನನ್ನು ಬಿಟ್ಟವಳು ಮಾಡಿಕೊಳ್ಳುವ ಮರು ಮದುವೆಗೆ ಕೂಡಿಕೆ ಅಥವಾ ಕೂಡಾವಳಿ ಎಂದು ಕರೆಯುತ್ತಾರೆ. ಗಂಡು ಈಕೆಯನ್ನು ಎರಡನೇ ಹೆಂಡತಿಯಾಗಿ ಸ್ವೀಕರಿಸುತ್ತಾನೆ. ಮೊದಲನೇ ಹೆಂಡತಿ ಇದ್ದೂ ಆಕೆಗೆ ಮಕ್ಕಳಾಗದಿದ್ದರೆ ಅಥವಾ ಹೆಂಡತಿ ಸತ್ತಿದ್ದರೆ ಕೂಡಾವಳಿ ಮಾಡಿಕೊಳ್ಳುತ್ತಾನೆ. "ಈ ಜನಾಂಗದ ಸಮಾಜದಲ್ಲಿ ವಿಧವಾ ವಿವಾಹ ಪದ್ಧತಿಯುಂಟು. ಅದನ್ನು

'ಕೂಡಾವಳಿ' ಎಂದು ಕರೆಯುತ್ತಿದ್ದರು. ಈ ವಿವಾಹ ಪದ್ಧತಿಯು ಶಾಸ್ತ್ರೋಕ್ತವಾಗಿ ಹಾಗೂ ನಿಯಮಿತವಾದ ರೀತಿಯಲ್ಲಿ ನಡೆಯುತ್ತದೆ. ಈ ಕಾರ್ಯಕ್ಕೆ ಹೊಸ ಕಪ್ಪು ಬಣ್ಣದ ಮಣ್ಣಿನ ಮಡಿಕೆಯನ್ನು ತಂದು ಅದರಲ್ಲಿ ಅನ್ನ ಮಾಡಿ, ಅದಕ್ಕೆ ಬೆಲ್ಲವನ್ನು ಸೇರಿಸಿ ಇವರ ಮುಂದಿನ ಬಾಳು ಸಿಹಿಯಾಗಿರುವಂತೆ ಆಶೀರ್ವಾದ ಪಡೆಯುತ್ತಾರೆ. ನಂತರ ಅಲ್ಲಿ ನೆರೆದಿರುವಂತಹ ಎಲ್ಲರಿಗೂ ತಾಂಬೂಲ ಹಾಗೂ ಸಿಹಿಯಾದ ಅನ್ನವನ್ನು ಕೊಡುತ್ತಾರೆ. ಅವರೆಲ್ಲರೂ 'ಮುಂದಿನ ಬಾಳಿನಲ್ಲಿ ಈಕೆ ವಿಧವೆಯಾಗದ ರೀತಿಯಲ್ಲಿ ನೋಡಿಕೊ' ಎಂದು ಅವರಿಗೆ ಆಶೀರ್ವದಿಸುತ್ತಾರೆ. ಇದನ್ನು ಈ ಜನಾಂಗದಲ್ಲಿ 'ಕೂಡಾವಳಿಯ ಶಾಸ್ತ್ರ' ಎಂದು ಕರೆಯುವುದುಂಟು."[೧೮]

ನಮ್ಮ ಜನಾಂಗದಲ್ಲಿ ವಿಧವೆಯಾದವರು, ಗಂಡನನ್ನ ಬಿಟ್ಟವಳನ್ನು ನಮ್ಮ ಕುಲದ ಯಜಮಾನರು ಎರಡನೇ ಮದುವೆಯನ್ನ, ಹೆಂಡತಿ ಸತ್ತವನಿಗೆ, ಇಲ್ಲವೇ ಹೆಂಡತಿ ಇದ್ದು ಮಕ್ಕಳಾಗದಿರವವನಿಗೆ ಕೂಡಾವಳಿ ಮಾಡುತ್ತಾರೆ'[೧೯] ಎಂದು ವಕ್ತೃ ಮರಿಯಯ್ಯ ಹೇಳುತ್ತಾನೆ. ಈ ಸಮುದಾಯದವರ 'ಕೂಡಾವಳಿ' ವಿಚಾರ ಬಂದಾಗ ಕುಲದ ಯಜಮಾನರು ಪ್ರಮುಖ ಪಾತ್ರ ವಹಿಸುತ್ತಾರೆ. ವಿವಾಹ ವಿಚ್ಛೇದನಗಳು ಈ ಸಮಾಜದಲ್ಲಿ ಕಂಡುಬಂದಾಗ ಆಧುನಿಕ ಸಮಾಜದಂತೆ ಕೋರ್ಟು ಕಛೇರಿ ಎಂದು ಹೋಗದೆ ತಮ್ಮ ಕುಲದ ಯಜಮಾನನ ಸಮ್ಮುಖದಲ್ಲಿ ಗಂಡ-ಹೆಂಡತಿಯರನ್ನು ಬೇರೆ ಬೇರೆ ಮಾಡುವಂತಹ ವಿವಾಹ ವಿಚ್ಛೇದನವು ನಡೆಯುತ್ತದೆ. ಅನೇಕ ಬಾರಿ ವಿಚಾರ ವಿನಿಮಯ ಮಾಡಿ ಆಲೋಚನೆ ಮಾಡಿ ಯಜಮಾನ ಈ ನಿರ್ಧಾರವನ್ನು ತೆಗೆದುಕೊಳ್ಳುತ್ತಾನೆ. ಇದನ್ನು ಸಮಾಜದ ಯಾರು ಕೂಡ ಪ್ರಶ್ನೆ ಮಾಡುವುದಿಲ್ಲ. ಎಲ್ಲರೂ ಒಪ್ಪಿಗೆ ಸೂಚಿಸುತ್ತಾರೆ. ಕೂಡಾವಳಿ ಪದ್ಧತಿಯನ್ನು ಇಂದಿಗೂ ಸಹ ಜಿಲ್ಲೆಯ ಗಂಗಾಮತಸ್ಥ ಸಮುದಾಯದಲ್ಲಿ ಕಾಣಬಹುದಾಗಿದೆ.

### ಬುಜ್ಜಣಿಗೆ ಪೆಟ್ಟಿಗೆ

ಗಂಗಾಮತಸ್ಥರು ಕಂಬ ಅಥವಾ ಬಣ್ಣದ ಆಧಾರದ ಮೇಲೆ ಹೆಣ್ಣನ್ನು ಕೊಡುವ-ತರುವ ಸಂಪ್ರದಾಯ ರೂಢಿಯಲ್ಲಿದೆ. ೧೨ ಕಂಬದವರು ಶ್ರೇಷ್ಠರೆಂಬ ಭಾವನೆ, ೧೧ ಕಂಬದವರು ಸ್ವಲ್ಪ ಅವರಿಗಿಂತ ಕೆಳಗಿನವರೆಂಬ ಭಾವನೆ ಇದೆ. ೧೨ ಕಂಬದವರು ೧೧ ಕಂಬದವರಿಗೆ ಹೆಣ್ಣನ್ನು ಕೊಡುವುದಿಲ್ಲ, ತರುವುದಿಲ್ಲ. ಮದುವೆಯ ದಿನ ಬಣ್ಣ ಪ್ರಮುಖ ಪಾತ್ರವಹಿಸುತ್ತದೆ. ಇವರ ಅರ್ಥದಲ್ಲಿ "ಮದುವೆಗೆ ಬೇಕಾದ ಕೆಲವು ಪ್ರಮುಖ ವಸ್ತುಗಳನ್ನು ಬುಜ್ಜಣಿಗೆ ಪೆಟ್ಟಿಗೆಯಲ್ಲಿಟ್ಟು ಗಂಡಿನ ಕಡೆಯವರು ಹೆಣ್ಣಿಗೆ ಕೊಡಬೇಕು. ೧೨ ಬಣ್ಣದವರು ಬುಜ್ಜಣಿಗೆಯ ಪೆಟ್ಟಿಗೆಯಲ್ಲಿ ೧೨ ವಸ್ತುಗಳನ್ನು ಇಟ್ಟಿರುತ್ತಾರೆ. ಅವುಗಳೆಂದರೆ, ಅರಿಸಿನ, ಕುಂಕುಮ, ಓಲೆ, ಮೂಗುತಿ, ಸೀರೆ, ಕುಬ್ಸ,

ಕಾಲುಂಗರ, ಕಾಲುಸರ, ಬಾಸಿಂಗ, ತಾಳಿ, ಹೂವು, ಬಳೆ ಇವುಗಳನ್ನು ಬುಜ್ಜಣಿಗೆಯ ಪೆಟ್ಟಿಗೆಯಲ್ಲಿಟ್ಟು ಹೆಣ್ಣಿಗೆ ಕೊಡುತ್ತಾರೆ. ೧೧ ಬಣ್ಣದವರು ಒಂದು ವಸ್ತುವನ್ನು ಕಡಿಮೆ ಮಾಡುತ್ತಾರೆ.[೨೦] ಇವರು ಮದುವೆಯ ದಿನ ಕಡ್ಡಾಯವಾಗಿ ಬುಜ್ಜಣಿಗೆಯ ಪೆಟ್ಟಿಗೆಯನ್ನು ಕೊಡಲೇಬೇಕು.

ಗಂಗಾಮತಸ್ಥರು ಮೇಲೆ ಹೇಳಿದ ಪ್ರಮುಖವಾದ ಆಚರಣೆಗಳನ್ನು ಪಾಲಿಸಿಕೊಂಡು ಬಂದಿದ್ದಾರೆ. ಅಷ್ಟೇ ಅಲ್ಲದೆ ವಿವಾಹವು ಕುಲದ ಯಜಮಾನ ಹಾಗೂ ವಧು-ವರರ ತಂದೆ-ತಾಯಂದಿರ ಮುಂದಾಳತ್ವದಲ್ಲಿ ನಡೆಯುತ್ತದೆ. ಒಂದೇ ಪಂಗಡದ ಕುಲ ಅಥವಾ ಒಂದೇ ದೇವರನ್ನು ಪೂಜಿಸುವವರ ನಡುವೆ ವಿವಾಹಗಳು ನಡೆಯುವುದಿಲ್ಲ. ವಧು-ವರರ ಇಚ್ಛಾನುಸಾರವೂ ಕೂಡ ಮದುವೆ ಮಾಡಿಕೊಳ್ಳಲು ಸಾಧ್ಯವಿಲ್ಲ. ಒಂದು ವೇಳೆ ಈ ರೀತಿಯ ಮದುವೆ ನಡೆದರೆ ಅಂತಹವರನ್ನು ಸಮಾಜದಿಂದ ಬಹಿಷ್ಕರಿಸಲಾಗುವುದು. ಇವರು ತಮ್ಮ ಸಂಬಂಧಿಕರಲ್ಲೇ ಹೆಣ್ಣು ತರುವ-ಕೊಡುವ ಸಂಪ್ರದಾಯ ಮಂಡ್ಯಜಿಲ್ಲೆಯಲ್ಲಿದೆ. ಅಕ್ಕನ ಮಗಳು, ಸೋದರ ಮಾವನ ಮಗಳನ್ನ ಇವರು ವಿವಾಹವಾಗುವುದೇ ಹೆಚ್ಚು. ಇದಕ್ಕೆ ಅವರು ಹೇಳುವ ಕಾರಣವೆಂದರೆ "ನಾವು ಬಡವರು, ಹೆಚ್ಚಿನ ರೀತಿಯಲ್ಲಿ ಮದುವೆ ಖರ್ಚು ಮಾಡಲು ಸಾಧ್ಯವಿಲ್ಲ. ಅಷ್ಟೇ ಅಲ್ಲದೆ ನಮ್ಮ ಆಸ್ತಿ-ಹಣ ನಮ್ಮ ನಮ್ಮಲ್ಲೆ ಉಳಿಯುತ್ತದೆ. ಆದುದ್ದರಿಂದ ನಾವು ಅಕ್ಕನ ಮತ್ತು ಸೋದರ ಮಾವನ ಮಗಳನ್ನೆ ತಂದು ಮದುವೆ ಮಾಡುತ್ತೇವೆ"[೨೧] ಎಂದು ಹೇಳುತ್ತಾರೆ. ಹೆಣ್ಣಿಗೆ ೧೪ ವರ್ಷದಿಂದ ೨೦ ವರ್ಷದೊಳಗೆ, ಗಂಡಿಗೆ ೧೮ ವರ್ಷದಿಂದ ೨೨ ವರ್ಷದೊಳಗೆ ಸಾಮಾನ್ಯವಾಗಿ ಮದುವೆಯನ್ನು ಮಾಡುತ್ತಾರೆ. ಗಂಗಾಮತಸ್ಥರಲ್ಲಿ ಮದುವೆಯ ಊಟ ಮತ್ತು ಆಚರಣೆಗಳಲ್ಲಿ ಬೇರೆ ಸಮುದಾಯದವರಿಗಿಂತ ಭಿನ್ನತೆ ಕಂಡುಬರುತ್ತದೆ. ಆದರೆ ಇತ್ತೀಚೆಗೆ ಕಡಿಮೆ ಪ್ರಮಾಣದಲ್ಲಾದರೂ 'ವರದಕ್ಷಿಣೆ' ಕೊಡುವ ಪದ್ಧತಿ ಇವರಲ್ಲಿಯೂ ಇದೆ.

## ಮರಣ

ಮನುಷ್ಯ ಹುಟ್ಟಿದ ನಂತರ ಒಂದಲ್ಲ ಒಂದು ದಿನ ಸಾಯಲೇ ಬೇಕು. 'ಹುಟ್ಟು ಆಕಸ್ಮಿಕ; ಸಾವು ಖಚಿತ" ಎಂಬಂತೆ ಹುಟ್ಟಿದ ನಂತರ ಸಾವು ಬರುತ್ತದೆ. ಹುಟ್ಟು-ಸಾವು ಒಂದು ನಾಣ್ಯದ ಎರಡು ಮುಖಗಳಿದ್ದಂತೆ. ಇದು ಪ್ರಕೃತಿಯ ನಿಯಮವೂ ಆಗಿದೆ. ಯಾರು ಸಾವಿನಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ಬರ್ಟನ್ ಬೆನೆಡಿಕ್ಟ್ ಅವರು ಮರಣವನ್ನು ಕುರಿತು "If the social fact of birth can be seen as gradual recognition beginning with the Mother, extending to the father and other members of the household, then

to the wider kin group and at last to community at large, the social fact of death can be seen as being recognized immediately by the community at large and more gradually borne in upon the kin group, the household and the nearest to the deceased"[೩೩] ಎಂದು ಹೇಳಿದ್ದಾರೆ. ಮನುಷ್ಯ ಹುಟ್ಟಿದಾಗ ಕೆಲವು ಆಚರಣೆಗಳನ್ನು ಮಾಡುವಂತೆಯೇ, ಸತ್ತಾಗಲೂ ಮಾಡುವುದುಂಟು.

ವ್ಯಕ್ತಿಯ ಒಳ್ಳೆಯತನವನ್ನ ಆತನ ಸಾವು ಹೇಳುತ್ತದೆ ಎಂಬುದು ಜನರ ಅಭಿಮತ. ಆತನ ಬದುಕಿನ ಸಾರ್ಥಕತೆಯನ್ನು ಅಳೆಯುವುದು ಮೃತನ ಮರಣ ವಿಧಾನವನ್ನು ನೋಡಿಯೇ. "ವ್ಯಕ್ತಿಯ ಬದುಕಿನ ಕರ್ಮಫಲಗಳಿಗೆ ಅನುಗುಣವಾಗಿ ಸ್ವರ್ಗ-ನರಕ ಕಲ್ಪಿಸಲು ಕೈಲಾಸವಾಸಿ ಶಿವ ಇದ್ದಾನೆ ಎಂಬುದು ನಿರೂಪಿತವಾಗಿದ್ದು, ಜನರ ಮನಸ್ಸಿನ ಮೇಲೆ ಪ್ರಭಾವ ಬೀರಿದೆ"[೩೪] ಆದುದ್ದರಿಂದಲೇ ಸಮಾಜಕ್ಕೆ ನ್ಯಾಯ-ಧರ್ಮಗಳಿಗೆ ವಿರುದ್ಧವಾಗಿ ವ್ಯಕ್ತಿ ನಡೆದುಕೊಳ್ಳುವುದಿಲ್ಲ. ಆಚರಣೆಗಳನ್ನು ಬಿಟ್ಟು ವ್ಯಕ್ತಿ ಇಲ್ಲ; ವ್ಯಕ್ತಿಯನ್ನು ಬಿಟ್ಟು ಆಚರಣೆಗಳಿಲ್ಲ. "ಮಾನವ ಜೀವಿತ ಕಾಲದಲ್ಲಿ ಆಚರಿಸಿಕೊಳ್ಳುವ ಕೆಲ ಆಚರಣೆಗಳಲ್ಲಿ ಕೊರತೆಗಳಾದರೂ ನಡೆಯುತ್ತದೆ. ಸತ್ತ ವ್ಯಕ್ತಿಗೆ ಸಂಬಂಧಿಸಿದ ಆಚರಣೆಗಳಲ್ಲಿ ಹೆಚ್ಚು ಕಡಿಮೆಯಾದರೂ ಆತನ ಆತ್ಮ ಇದ್ದವರನ್ನು ಕಾಡುತ್ತದೆ ಎಂಬ ಬಲವಾದ ನಂಜಿಕೆ ಇದೆ".[೩೫] ಆದುದ್ದರಿಂದಲೇ ಎಷ್ಟೇ ಕಷ್ಟವಿದ್ದರು ಶವ ಸಂಸ್ಕಾರ ಕ್ರಿಯೆಗಳನ್ನು ಚಾಚು ತಪ್ಪದೇ ಆಚರಿಸುತ್ತಾರೆ. ಶವಸಂಸ್ಕಾರಕ್ಕೆ ಸಂಬಂಧಿಸಿದ ಆಚರಣೆಗಳು ಪ್ರದೇಶದಿಂದ ಪ್ರದೇಶಕ್ಕೆ, ಜನಾಂಗದಿಂದ ಜನಾಂಗಕ್ಕೆ, ಜಾತಿಯಿಂದ ಜಾತಿಗೆ ವಿಭಿನ್ನವಾಗಿರುವುದನ್ನು ಕಾಣುತ್ತೇವೆ. ಈ ಹಿನ್ನಲೆಯಲ್ಲಿ ಗಂಗಾಮತಸ್ಥರ ಶವಸಂಸ್ಕಾರದ ಆಚರಣೆಗಳು ಬೇರೆ ಸಮುದಾಯದವರಂತೆಯೇ ಇದ್ದರೂ ಸಹ ಕೆಲವೊಂದು ವಿಶೇಷವಾದ ಆಚರಣೆಗಳನ್ನು ಮಾಡುತ್ತಾರೆ.

**ಹಾಲು ಅಥವಾ ನೀರು ಬಿಡುವುದು**

ವ್ಯಕ್ತಿಯ ಪ್ರಾಣ ಇನ್ನೇನೊ ಹೋಗುತ್ತಿದೆ ಎನ್ನುವಾಗ ಗಂಗಾಮತಸ್ಥರು ಹಾಲು ಅಥವಾ ನೀರನ್ನು ಬಾಯಿಗೆ ಬಿಡುತ್ತಾರೆ. ಈ ಸಂದರ್ಭ ಒದಗಿದಾಗ ಆ ವ್ಯಕ್ತಿಯನ್ನು ಮನೆಯ ಮುಂದಿನ ಪಡಸಾಲೆಯಲ್ಲಿ ಮಲಗಿಸುತ್ತಾರೆ. ಸಾಯುತ್ತಿರುವ ವ್ಯಕ್ತಿಯ ಬಾಯಿಗೆ ಒಂದು ತೊಟ್ಟು ಹಾಲು ಬಿಟ್ಟು ಋಣ ಕಳೆದುಕೊಳ್ಳಬೇಕು ಎಂಥಲೋ, ಕರ್ಮ ಕಳೆದುಕೊಳ್ಳಬೇಕು ಎಂಥಲೋ ಪ್ರತಿಯೊಬ್ಬರೂ ಸಾಯುತ್ತಿರುವ ವ್ಯಕ್ತಿಯ ಬಾಯಿಗೆ ಹಾಲು ಅಥವಾ ಕುಲದೇವತೆಯಾದ ಪವಿತ್ರ ಗಂಗೆಯನ್ನೋ ಬಿಡುತ್ತಾರೆ. ಸಾಯುವ ವ್ಯಕ್ತಿಗೆ ಪ್ರಾಣ ಹೋಗದೆ ಹೆಣಗಾಡುತ್ತಿದ್ದರೆ ಅವರಿಗೆ

ಯಾರ ಮೇಲೆ ಪ್ರೀತಿ ಇತ್ತೋ, ಅಂತಹವರು ಬಂದು ಬಾಯಿಗೆ ನೀರು ಬಿಟ್ಟರೆ ಪ್ರಾಣ ಹೋಗುತ್ತದೆ ಎಂಬ ನಂಬಿಕೆ ಇದೆ. ವ್ಯಕ್ತಿ ಸತ್ತ ನಂತರ ಮನೆಯ ಮುಂದೆ ಸೌದೆ ಕೊಂಟಿಗೆ ಬೆಂಕಿ ಹಚ್ಚಿ ಹೆಣ ಸಾಗಿಸುವವರೆವಿಗೂ, ಆ ಬೆಂಕಿಕೊಳ್ಳಿ ಉರಿಯುತ್ತಿರಬೇಕು.

ಶವದ ಬಾಯಿ, ಕಣ್ಣುಗಳನ್ನು ತೆರೆದುಕೊಂಡಿದ್ದರೆ ಅವನ್ನು ಮುಚ್ಚಿ ಕೈ ಕಾಲುಗಳನ್ನು ಮಡಿಸಿ ಸರಿಮಾಡುತ್ತಾರೆ. ಶವದ ತಲೆಯ ಹಿಂದೆ ಅಕ್ಕಿ ತುಂಬಿದ ತಟ್ಟೆಯಲ್ಲಿ ಬೆಲ್ಲ, ಎಲೆ-ಅಡಿಕೆಯನ್ನು ಇಟ್ಟಿರುತ್ತಾರೆ. ಅದರೊಳಗೆ ಒಂದು ನಾಣ್ಯವನ್ನು ಮಡುಗುತ್ತಾರೆ. ದೀಪವನ್ನು ಹಚ್ಚಿ, ಗಂಧದಕಡ್ಡಿಯನ್ನು ಸಹ ಹಚ್ಚಿಡುತ್ತಾರೆ. ಶವದ ಮೇಲೆ ಹೂವುಗಳನ್ನು ಹಾಕುತ್ತಾರೆ. ಸತ್ತ ವ್ಯಕ್ತಿಯನ್ನ ಉತ್ತರ ದಿಕ್ಕಿಗೆ ತಲೆ ಮಾಡಿ ಮಲಗಿರಿಸಿರುತ್ತಾರೆ.

## ಶವ ಸಂಸ್ಕಾರದ ಆಚರಣೆಗಳು

ವ್ಯಕ್ತಿ ಸತ್ತ ನಂತರದಲ್ಲಿ ಸಂಬಂಧಿಕರಿಗೆಲ್ಲಾ ಸುದ್ದಿಯನ್ನು ಕೊಡುತ್ತಾರೆ. ನಾಲ್ಕು ಮಂದಿ ಹೋಗಿ ಬಿದಿರಿನ ಬೊಂಬುಗಳನ್ನು ಕಡಿದು ತರುತ್ತಾರೆ. ಆ ಬಿದಿರಿನ ಬೊಂಬುಗಳನ್ನು ಶವವಿರುವ ಮನೆಯ ಮುಂದೆ ತಂದಿಟ್ಟುಕೊಂಡು ಚೊಟ್ಟವನ್ನು ಅದರಿಂದ ಸಿದ್ದಪಡಿಸುತ್ತಾರೆ. ಅಥವಾ ಕುರ್ಜಿಯನ್ನು ಕಟ್ಟುತ್ತಾರೆ. ಚೊಟ್ಟದಲ್ಲಿ ಶವವನ್ನು ಮಲಗಿಸಿದರೆ, ಕುರ್ಜಿಯಲ್ಲಿ ಶವವನ್ನು ಕೂರಿಸುತ್ತಾರೆ. ಎಳನೀರನ್ನು ತಂದು ಚೊಟ್ಟದ ನಾಲ್ಕು ಮೂಲೆಗಳಿಗೂ ಒಂದೊಂದನ್ನು ಕಟ್ಟುತ್ತಾರೆ. ಚೊಟ್ಟದ ಮೇಲೆ ಒಣ ಹುಲ್ಲನ್ನು ಹಾಸಿ, ಅದರ ಮೇಲೆ ಹೆಣದಿರುವ ತೆಂಗಿನ ಗರಿಯನ್ನು ಹಾಸುತ್ತಾರೆ. ನಂತರ ಚೊಟ್ಟವನ್ನು ಹೂವಿನಿಂದ ಅಲಂಕಾರ ಮಾಡುತ್ತಾರೆ.

## ಹೆಣದ ಪೂಜೆ

ಹೆಣವನ್ನು ಸ್ಮಶಾನಕ್ಕೆ ಕೊಂಡೊಯ್ಯುವ ಮೊದಲು ಹೆಣದ ಪೂಜೆಯನ್ನು ಮಾಡುತ್ತಾರೆ. ಪೂಜೆಗೆ ಮೊದಲು ಸ್ನಾನ ಮಾಡಿಸಬೇಕು. ಬೀದಿಯಲ್ಲಿ ಒಂದು ಚಿಕ್ಕದಾದ ಗುಂಡಿಯನ್ನು ತೆಗೆದು ಅದರ ಪಕ್ಕದಲ್ಲಿಯೇ ಒಲೆಯ ಕಲ್ಲೊಡ್ಡಿ ನೀರನ್ನು ಕಾಯಿಸುತ್ತಾರೆ. ಆ ಗುಂಡಿಯ ಮೇಲೆ ಒಂದು ಮರದ ಹಲಗೆಯನ್ನು ಇಟ್ಟು ಅದರ ಮೇಲೆ ಹೆಣವನ್ನು ಕುಳ್ಳಿರಿಸಿ ಅರಿಶಿನ ಪುಡಿ, ಸೀಗೆಕಾಯಿ ಪುಡಿಯನ್ನು ತಲೆಗೆ ಹಾಕುತ್ತಾರೆ. ಗಂಡ ಸತ್ತಿದ್ದಾಗ ಪ್ರಥಮವಾಗಿ ಹೆಂಡತಿಯ ಕೈಯಲ್ಲಿ ಮುರು ಚೆಂಬು ನೀರನ್ನು ಉಯ್ಯಿಸುತ್ತಾರೆ. ನಂತರ ಮಕ್ಕಳು, ಬಂಧು-ಬಳಗದವರು ನೀರು ಉಯ್ಯುಸುತ್ತಾರೆ. ಹೆಂಡತಿ ಸತ್ತರೆ ಗಂಡನ ಕೈಯಲ್ಲಿ ಮೊದಲು ನೀರನ್ನು ಉಯ್ಯಿಸುತ್ತಾರೆ. ಇಷ್ಟರಲ್ಲಾಗಲೇ ಹೆಣದ ಬಟ್ಟೆ (ಬಿಳಿಯದು) ತಂದು, ನೀರನ್ನು ಹಾಕಿ ಅರಿಶಿನದ ಪುಡಿಯನ್ನು

ಉದುರಿಸಿ, ಅದನ್ನು ಮುದುರಿ, ಒಳಹಾಕುತ್ತಾರೆ. ಹೆಣಕ್ಕೆ ಬಟ್ಟೆಯನ್ನು ತೊಡಿಸಿದ ಮೇಲೆ, ಹೂವಿನ ಹಾರ ಹಾಕಿ, ವಿಭೂತಿ, ದಾಸರಾದರೇ ನಾಮ, ಕುಂಕುಮ, ಹೆಂಗಸರಾದರೆ ಕೆನ್ನೆಗೆ ಅರಿಶಿನ, ಹಚ್ಚಿ ಪೂಜೆ ಸಲ್ಲಿಸುತ್ತಾರೆ. ಹೆಂಡತಿ ಸತ್ತಿದ್ದರೆ ಸೋಗಲು ಕಟ್ಟುತ್ತಾರೆ. ಗಂಡ ಮರಣವನ್ನ ಹೊಂದಿದ್ದರೆ, ತವರು ಮನೆಯವರು, ಬದುಕಿರುವ ಹೆಂಡತಿಗೆ ಹೊಸ ಬಳೆ, ಸೀರೆ, ರವಿಕೆಯನ್ನು ಉಡಿಸುತ್ತಾರೆ. ಅವಳನ್ನು ಗಂಡನ ಪಕ್ಕದಲ್ಲಿ ಕೂರಿಸಿ ಮುತ್ತೈದೆ ಭಾಗ್ಯವೆಂದು ಪೂಜಿಸುತ್ತಾರೆ.

ಗುರು ಮಕ್ಕಳು ಅಂದರೆ ತಮ್ಮ ಕುಲದ ಗುರುವಿನಿಂದ ಅಥವಾ ಮಠಾಧಿಪತಿಯಿಂದ ದೀಕ್ಷೆಯನ್ನು ಪಡೆದವರೇ ಗುರುಮಕ್ಕಳು. ಇಂಥ ವ್ಯಕ್ತಿಗಳು ಸತ್ತಾಗ, ಇವರ ಸಮುದಾಯದ ಗುರುಗಳನ್ನು ಕರೆಯಿಸಿ ಪಾದತೀರ್ಥಗಳನ್ನು ಹಾಕಿ ಶವಸಂಸ್ಕಾರವನ್ನು ಮಾಡುತ್ತಾರೆ. ಇವರಿಗೆ ಸ್ನಾನ ಮಾಡಿಸುವಾಗ, ದೇವರಿಗೆ ಅಭಿಷೇಕವನ್ನು ಮಾಡುವ ರೀತಿಯಲ್ಲಿ ಮಾಡುತ್ತಾರೆ. "ಹಾಲು, ಮೊಸರು, ಎಳೆನೀರು, ಜೇನುತುಪ್ಪ, ಪನ್ನೀರು ಇವುಗಳಿಂದ ಸ್ನಾನ ಮಾಡಿಸಲಾಗುವುದು"[೨೫] ಎಂದು ಶ್ರೀ ವಿದ್ಯಾನಂದಸ್ವಾಮೀಜಿ ಹೇಳುತ್ತಾರೆ.

ಪೂಜೆ ಮುಗಿಸಿದ ನಂತರ ಅರಿಶಿನ ಹಚ್ಚಿದ ಒಣಗಿರುವ ಬಟ್ಟೆಯನ್ನು ಚಟ್ಟದಲ್ಲಿ ಅಥವಾ ಕುರ್ಜಿನಲ್ಲಿ ಹೆಣವನ್ನು ಕೂರಿಸಿ ಕಟ್ಟುತ್ತಾರೆ. ಹೆಣವನ್ನು ನಾಲ್ಕು ಜನರು ಎತ್ತುಕೊಂಡಾಗ ಅಲ್ಲಿ ನೆರೆದಿದ್ದವರೆಲ್ಲಾ ಅರಿಶಿನದ ಅಕ್ಕಿಯನ್ನು ಎರಚುತ್ತಾರೆ. ಈ ಸಂದರ್ಭದಲ್ಲಿ ಸಂಬಂಧಿಕರೆಲ್ಲಾ ಬಾಯಿ ಬಡಿದುಕೊಳ್ಳುತ್ತಾರೆ. ನಂತರ ಕಡಲೆಪುರಿ, ಚಿಲ್ಲರೆಕಾಸು ಎರಚುವ ಪದ್ಧತಿಯಿದೆ. ಹೆಣವನ್ನು ಮೇಲಕ್ಕೆ ಎತ್ತಿಕೊಂಡು ಹೊರಟ ನಂತರ, ಹೆಣಕ್ಕೆ ಸ್ನಾನ ಮಾಡಿಸಿದ ಹಂಡೆಯನ್ನು ತಲೆ ಕೆಳಗಾಗಿ ಇಡಲಾಗುವುದು. ನೀರಿನ ಗುಂಡಿಯನ್ನು ಮುಚ್ಚುತ್ತಾರೆ. ಹೆಣವನ್ನು ಹೊತ್ತುಕೊಂಡು ಹೋಗುವಾಗ ತಂದೆ ಸತ್ತರೆ ಹಿರಿಯ ಮಗ, ತಾಯಿ ಸತ್ತರೆ ಕಿರಿಯ ಮಗ, ಮಕ್ಕಳಿಲ್ಲದಿದ್ದರೆ ಅಣ್ಣ ತಮ್ಮಂದಿರ ಮಕ್ಕಳು 'ತಲೆಗೊಳ್ಳಿ'ಯನ್ನು ಹಿಡಿದು ಮುಂದೆ ನಡೆಯುತ್ತಾರೆ. ಅವನ ಹಿಂದೆ ಶವವನ್ನ ಹೊತ್ತವರು ಬರುತ್ತಾರೆ. ಹೆಣವನ್ನು ಹೊತ್ತುಕೊಂಡು ಹೋಗಿ ಊರಿನ ಹೊರಗೆ ಮೂರು ಹಾದಿ ಕೂಡಿದ ಸ್ಥಳದಲ್ಲಿ ಇಡುತ್ತಾರೆ. ಆಗ ಮುಂದಿನವರು ಹಿಂದಕ್ಕೆ ಹಿಂದಿನವರು ಮುಂದಕ್ಕೆ ಹೆಣ ಹೊರುವವರು ಬದಲಾವಣೆ ಮಾಡಿಕೊಳ್ಳುತ್ತಾರೆ. ಹೆಣ ಹೊರುವವರ ಒಂದು ಕೈಯಲ್ಲಿ ಊದುಬತ್ತಿ ಹಚ್ಚಿ ಕೊಟ್ಟಿರುತ್ತಾರೆ. ಗಂಗಾಮತಸ್ಥ ಸಮುದಾಯಕ್ಕೆ ಸಂಬಂಧಿಸಿದ ಸ್ಮಶಾನಗಳು ಇಲ್ಲ. ಅಲ್ಲದೆ ಇವರಿಗೆ ಜಮೀನು ಕೂಡ ಇಲ್ಲದಿರುವುದರಿಂದ ಹೊಳೆಯ ಅಕ್ಕ-ಪಕ್ಕದಲ್ಲಿಯೇ ಶವಸಂಸ್ಕಾರ ಮಾಡುತ್ತಾರೆ.

## ಹೂಳುವುದು

ಜಿಲ್ಲೆಯಲ್ಲಿ ಸುಡುವ ಮತ್ತು ಹೂಳುವ, ಎರಡೂ ಪದ್ಧತಿಗಳು ಚಾಲ್ತಿಯಲ್ಲಿವೆ. ಕಲ್ಲುಣಿ, ದಬ್ಬಳ್ಳಿ, ಶ್ರೀರಂಗಪಟ್ಟಣ, ಬೆಸಗರಹಳ್ಳಿ, ಗೋಪಾಲಪುರ, ಹಕ್ಕಿಹೆಬ್ಬಾಳ, ಬಸ್ತಿಪುರ ಮುಂತಾದ ಕಡೆಗಳಲ್ಲಿ ಸಹಜ ಸಾವಿನಿಂದ ಸತ್ತವರನ್ನು ಹೂಳುತ್ತಾರೆ. ಬಾಣಂತಿ, ಬಸುರಿ, ಹಸುಳೆಗಳು, ಚಿಕ್ಕಮಕ್ಕಳು, ಗುರುಮಕ್ಕಳು, ಮಾಠಾಧೀಶರು ಸತ್ತಾಗ ಇವರನ್ನು ಹೂಳುತ್ತಾರೆ. ಉತ್ತರ ದಕ್ಷಿಣಾಭಿಮುಖವಾಗಿ ಆರು ಅಡಿ ಉದ್ದ, ಮೂರು ಅಡಿ ಅಗಲದ ಗುಂಡಿಯನ್ನು ಒಂದು ಆಳಿನ ಎತ್ತರ ತೆಗೆಯುತ್ತಾರೆ. ಗುಂಡಿ ತೋಡಲು ಸ್ಮಶಾನಕ್ಕೆ ಹೋಗಿದ್ದ ವ್ಯಕ್ತಿಗಳು ಆ ಸ್ಥಳವನ್ನು ಬಿಟ್ಟು ಎಲ್ಲೂ ಹೋಗಬಾರದು. ಹೆಣ ಮಣ್ಣು ಮಾಡಿದ ನಂತರವಷ್ಟೇ ಹೋಗಬೇಕು.

ಗಂಡ ಸತ್ತು ಹೆಂಡತಿ ಜೀವಂತವಾಗಿದ್ದಲ್ಲಿ, ಹೆಣದ ಮುಂದೆ ಆಕೆಯ ಕೈಯಲ್ಲಿ ಕಳಸದ ತಟ್ಟೆಯನ್ನು ಹಿಡಿಸಿಕೊಂಡು ಬರುವ ಪದ್ಧತಿಯಿದೆ. ಚಟ್ಟದಲ್ಲಿ ಅಥವಾ ಕುರ್ಚಿನಲ್ಲಿ ತಂದಂತಹ ಹೆಣವನ್ನು ಗುಂಡಿಯ ಸುತ್ತಲೂ ಮೂರು ಸುತ್ತು ಸುತ್ತಿಸಿ ಕೆಳಗಿಳಿಸುತ್ತಾರೆ. ಹೆಣವನ್ನು ಗುಂಡಿಯಲ್ಲಿ ಮಲಗಿಸಿ ಪೂಜೆ ಸಲ್ಲಿಸುತ್ತಾರೆ. ಆ ಹೆಣದ ಮೈ ಮೇಲಿದ್ದ ಆಭರಣ ಬಿಚ್ಚಿಕೊಂಡು ತೊಡಿಸಿದ್ದ ಬಟ್ಟೆಗಳ ಗಂಟುಗಳನ್ನು ಕತ್ತರಿಸಿ ಸಡಿಲಗೊಳಿಸುತ್ತಾರೆ. ಶರೀರವೆಲ್ಲವನ್ನು ಮಣ್ಣು ತಿಂದುಕೊಳ್ಳಲಿ ಎಂಬುದು ಕೆಲವರ ಅಭಿಪ್ರಾಯ. ಸತ್ತ ಮೇಲೆ ಯಾವ ದಾರವನ್ನು ಆತನಿಗೆ ಕಟ್ಟಿರಬಾರದು. ಒಂದು ವೇಳೆ ದಾರ ಕಟ್ಟಿದ್ದರೆ ಆತ ಸ್ವರ್ಗಕ್ಕೆ ಹೋಗದಂತೆ ತಡೆ ಹಿಡಿಯುವ ದೋಷಪೂರಿತ ಗಂಟು ಎಂಬ ನಂಬಿಕೆಯಿದೆ. ನಂತರ ಹೆಣದ ಮುಖ ಮತ್ತು ದೇಹವನ್ನು ಸಂಪೂರ್ಣವಾಗಿ ಶೃಂಗರಿಸಿ ಚಟ್ಟದ ಮೇಲೆ ಕಟ್ಟಿದ ಅರಿಶಿನದ ಬಟ್ಟೆಯಿಂದಲೇ ಮುಖ ಮತ್ತು ಶರೀರವನ್ನು ಕಾಣದ ಹಾಗೆ ಹೊದ್ದಿಸಿ ಸಂಪೂರ್ಣ ಮುಚ್ಚುತ್ತಾರೆ. ಗುಂಡಿಯೊಳಗೆ ಹೆಣವನ್ನು ದಕ್ಷಿಣಕ್ಕೆ ಮುಖ ಮಾಡಿ ಮಲಗಿಸುತ್ತಾರೆ. ಹೆಣ ಮಲಗಿಸಿ ಪೂಜೆ ಸಲ್ಲಿಸಿದ ವ್ಯಕ್ತಿ ತನ್ನ ಕೆಲಸ ಮುಗಿಸಿದ ಮೇಲೆ ಹಿಮ್ಮುಖವಾಗಿಯೇ ಗುಂಡಿಯಿಂದ ಮೇಲೆ ಬರಬೇಕು. ಆತ ಬಂದ ನಂತರ ಬದುಕಿರುವ ಗಂಡನ ಅಥವಾ ಹೆಂಡತಿಯ ಕೈಯಿಂದಲೇ ಹೆಣದ ಮೇಲೆ ಮೂರು ಹಿಡಿ ಮಣ್ಣು ಹಾಕಿಸಿ, ನಂತರ ಮಕ್ಕಳು-ಸಂಬಂಧಿಕರು ಹಾಕುತ್ತಾರೆ. ಸಮಾಧಿಯ ಒಂದು ಮೂಲೆಯಲ್ಲಿ ತುಳಸಿ ಗಿಡವನ್ನು ಇನ್ನೊಂದು ಮೂಲೆಯಲ್ಲಿ ತುಂಬೆ ಗಿಡವನ್ನು ನೆಟ್ಟು ಅವುಗಳಿಗೆ ನೀರು ಹಾಕುತ್ತಾರೆ. ನಂತರ ಗುಂಡಿ ತೋಡಲು ತೆಗೆದುಕೊಂಡು ಹೋಗಿದ್ದ ಎಲಗುದ್ದಲಿಯ ಕಾಮು ತಿರುಗಿಸಿ ತಳಕ ಬಳಕ ಹಾಕಿ ಮೂರು ಸಾರಿ ಇತ್ತಿಂದ ಅತ್ತ, ಅತ್ತಿಂದ ಇತ್ತ ಸಮಾಧಿಯ ಮೇಲೆ ಎಸೆಯುತ್ತಾರೆ.

## ಸುಡುವುದು

ಗಂಗಾಮತಸ್ಥರು ಶವವನ್ನು ಸುಡುವ ಮತ್ತು ಹೂಳುವ ಎರಡೂ ಪದ್ಧತಿಯನ್ನು ಅನುಸರಿಸುತ್ತಾರೆ. ಆದರೆ ಹೆಚ್ಚಿನ ಜನರು ಶವವನ್ನು ಸುಡುವ ಪದ್ಧತಿಯನ್ನೇ ಹೊಂದಿದ್ದಾರೆ. ಬಾಣಂತಿ, ಬಸುರಿ, ಹಸುಳೆ, ಚಿಕ್ಕಮಕ್ಕಳು, ಗುರುಮಕ್ಕಳು, ಮಠಾಧೀಶರು ಸತ್ತಾಗ ಕಡ್ಡಾಯವಾಗಿ ಹೂಳುತ್ತಾರೆ. ಆದರೆ ಆಕಸ್ಮಿಕ ಸಾವು, ಆತ್ಮಹತ್ಯೆ, ತೊನ್ನಿನ ರೋಗಿ, ಕುಷ್ಠರೋಗಿ, ಇವರುಗಳು ಸತ್ತಾಗ ಬೇರೆಯವರಿಗೆ ತೊಂದರೆಯಾಗದಿರಲಿ, ರೋಗ ಹರಡದಿರಲಿ ಎಂದು ಕಡ್ಡಾಯವಾಗಿ ಸುಡುತ್ತಾರೆ. ಸಾಮಾನ್ಯ ವ್ಯಕ್ತಿಗಳು ಸತ್ತಾಗಲೂ ಹಲವು ಕಡೆಗಳಲ್ಲಿ ಸುಡುವುದುಂಟು. ಇವರಿಗೆ ಸೌದೆ ಕೊರತೆ ಕಂಡುಬಂದಾಗ ಊರಿನ ಪ್ರಮುಖರ ಮನೆಯಿಂದ ಸೌದೆಯನ್ನು ಕಲೆ ಹಾಕುತ್ತಾರೆ. ಎತ್ತಿನ ಗಾಡಿಯ ಮೂಲಕ ಸೌದೆಯನ್ನು ಸಾಗಿಸುತ್ತಾರೆ. ಹೆಣವನ್ನು ಸ್ಮಶಾನಕ್ಕೆ ಹೊತ್ತಿಕೊಂಡು ಬಂದ ನಂತರ ಸುಡಲು ಹಾಕಿರುವ ಸೌದೆಯ ಸುತ್ತ ಮೂರು ಬಾರಿ ಹೆಣವನ್ನು ಹೊತ್ತುಕೊಂಡು ಸುತ್ತಲಾಗುವುದು. ನಂತರ ನೆಲದ ಮೇಲೆ ಇಡಲಾಗುವುದು. ಹೆಣವನ್ನು ಕುಳಿತುಕೊಳ್ಳುವಂತೆ ದಪ್ಪ ದಪ್ಪ ಮರದ ದಿಮ್ಮಿಗಳನ್ನು ಹಿಂದೆ ಅಕ್ಕ-ಪಕ್ಕ ಇಟ್ಟು ಕುಳ್ಳಿರಿಸಿ ಪೂಜೆ ಸಲ್ಲಿಸಿ ಬಂದಿದ್ದವರೆಲ್ಲ ಒಂದೊಂದು ಅಥವಾ ಹೆಚ್ಚು ಸೌದೆಯನ್ನು ಆ ಹೆಣಕ್ಕೆ ಜೋಡಿಸುತ್ತಾರೆ. ಉಳಿದ ಸೌದೆಯನ್ನು ಹೆಣದ ಸುತ್ತ ಒಟ್ಟುಗೂಡಿಸಿ ಸೌದೆ ಕಡಿಯಲು ತಂದಿದ್ದ ಕೊಡಲಿಯ ಕಾವು ತಿರುಗಿ ಎಸೆಯುತ್ತಾರೆ. ಇದಾದ ನಂತರ ಒಂದು ಕೋಳಿ ಮರಿಯನ್ನು ಅದರ ಮೇಲೆ ಎಸೆಯುತ್ತಾರೆ.

ತಂದೆಗೆ ಹಿರಿಯ ಮಗ, ತಾಯಿಗೆ ಕಿರಿಯ ಮಗ ಬೆಂಕಿಯನ್ನು ಶವಕ್ಕೆ ಇಡುತ್ತಾರೆ. ಕೆಲವರು ಸೌದೆಯ ಮೇಲೆ ಮಲಗಿಸಿದರೆ, ಕೆಲವರು ಶವವನ್ನು ಕೂರಿಸಿ, ಸೌದೆಯನ್ನು ಜೋಡಿಸುತ್ತಾರೆ. ಬೆಂಕಿಯನ್ನು ಶವಕ್ಕೆ ಹಾಕಿದ ನಂತರ ಹಿಂದಕ್ಕೆ ತಿರುಗಿ ನೋಡಬಾರದು ಎಂಬ ನಂಬಿಕೆಯಿದೆ. ಇದಾದ ನಂತರ ವೀಳ್ಯದೆಲೆ ಅಡಿಕೆಯನ್ನು ಕೊಡುತ್ತಾರೆ. ಅಲ್ಲೆ ಸುತ್ತಮುತ್ತ ಇರುವ ಗಂಗೆಯಿಂದ ಮುಖ-ಕೈ-ಕಾಲುಗಳನ್ನು ತೊಳೆದು, ತಲೆಯ ಮೇಲೆ ನೀರನ್ನು ಚಿಮುಕಿಸಿಕೊಳ್ಳುತ್ತಾರೆ.

## ಜ್ಯೋತಿ ನೋಡುವುದು

ಶವ ಸಂಸ್ಕಾರವಾದ ನಂತರ, ಸತ್ತವರ ಮನೆಯ ಹತ್ತಿರ ಬಂದು, ಆತನ ಶವವಿಟ್ಟಿದ್ದ ಸ್ಥಳದಲ್ಲಿ ದೀಪಕ್ಕೆ ಬಂದು ನಮಸ್ಕರಿಸುತ್ತಾರೆ. ಈ ಸ್ಥಳದಲ್ಲಿ ಒಂದು ಕನ್ನಡಿಯನ್ನು ಸಹ ಇಡಲಾಗುತ್ತದೆ. ಕೈ ಮುಗಿದ ನಂತರ ಸ್ವಲ್ಪ ಹೊತ್ತು ಆ ಸ್ಥಳದಲ್ಲಿ ಕುಳಿತುಕೊಳ್ಳುತ್ತಾರೆ.

ಇದರರ್ಥವೇನೆಂದರೆ 'ಈ ಜ್ಯೋತಿ ಸಾಕ್ಷಿಯಾಗಿ ನಾವು ಒಂದು ದಿನ ಸತ್ತು ಬಂದೇ ಬರುತ್ತೇವೆ' ಎಂದು ಪ್ರಮಾಣ ಮಾಡುವುದು.

ಶವ ಸಂಸ್ಕಾರ ಮುಗಿಸಿ ಬರುವಷ್ಟರಲ್ಲಿ ಆ ಮನೆಯನ್ನ ಹೆಂಗಸೊಬ್ಬಳು ಸಾರಿಸಿ, ಗುಡಿಸಿ, ಸ್ವಚ್ಛ ಮಾಡಿ ಆ ದೀಪಕ್ಕೆ ಮತ್ತಷ್ಟು ಎಣ್ಣೆ ಸುರಿದು ಹಚ್ಚಿ ಇಟ್ಟಿರುತ್ತಾರೆ. ಹೆಣಕ್ಕೆ ನೀರು ಉಯ್ಯಲು ತೆಗೆದಿದ್ದ ಗುಂಡಿಯನ್ನು ಮುಚ್ಚಿರುತ್ತಾರೆ. ಗುಂಡಿಯನ್ನು ತೆಗೆಯುವ ಉದ್ದೇಶ, ಆ ನೀರನ್ನು ಬೀದಿಯಲ್ಲಿ ಹರಿಯ ಬಿಟ್ಟರೆ ಜನರೆಲ್ಲ ತುಳಿದುಕೊಂಡು ತಿರುಗುತ್ತಾರೆ ಎಂಬ ನಂಬಿಕೆಯಾಗಿದೆ. ಇದನ್ನು ತುಳಿದರೆ ಅನಿಷ್ಟವಾಗುತ್ತದೆ ಎಂಬ ನಿಲುವು.

**ಸತ್ತ ಸೂತಕ**

ಗಂಗಾಮತಸ್ಥರು ಸತ್ತ ಸೂತಕವನ್ನು ಹನ್ನೊಂದನೆಯ ದಿನ ಕಳೆಯುತ್ತಾರೆ. ಒಂಭತ್ತನೇ ದಿನದಿಂದಲೇ ಮನೆಗೆ ಸುಣ್ಣ-ಬಣ್ಣ ಹೊಡೆದು ಸಗಣಿಯಿಂದ ನೆಲವನ್ನು ಬಳಿದು, ಬಟ್ಟೆಗಳನ್ನು ಮಡಿಮಾಡಿ, ಪಾತ್ರೆಗಳನ್ನು ತೊಳೆದು, ಶುದ್ಧಿಗೊಳಿಸಲಾಗುವುದು. ಹಸುವಿನ ಗಂಜಲವನ್ನು ತಂದು ಮನೆಗೆಲ್ಲಾ ಎರಚಲಾಗುತ್ತದೆ. ಕುಲದ ಗುರುಗಳು ಬಂದು ಹೋಮವನ್ನು ಮಾಡಿದ ನಂತರ, ಗಂಗೆಯ ತಡಿಗೆ ಹೋಗಿ ಪೂಜೆ ಸಲ್ಲಿಸಿ ಹೊಸದಾಗಿ ಬಿಂದಿಗೆಯಲ್ಲಿ ನೀರು ತರುತ್ತಾರೆ. ಹೀಗೆ ಮಾಡಿದ ನಂತರದಲ್ಲಿ ತಿಥಿಯ ಕಾರ್ಯವನ್ನು ಪ್ರಾರಂಭಿಸುತ್ತಾರೆ. ಒಂಭತ್ತನೇ ದಿನವೇ ಜೋಯಿಸರನ್ನು ಕರೆದು ಹೋಮವನ್ನು ಮಾಡಿಸಿದರೂ ಸಹ, ಅಧಿಕೃತವಾಗಿ ತಿಥಿ ಮುಗಿದ ನಂತರವೇ ಸೂತಕ ಕಳೆದ ಹಾಗೇ ಎನ್ನುತ್ತಾರೆ”.[೨೯]

**ತಿಥಿಯ ಆಚರಣೆ**

ಗಂಗಾಮತಸ್ಥರು ಸತ್ತ ವ್ಯಕ್ತಿಗೆ ಮುಕ್ತಿ ದೊರಕಿಸುವುದಕ್ಕಾಗಿ ಹನ್ನೊಂದನೆ ದಿನ ತಿಥಿ ಕಾರ್ಯವನ್ನು ಮಾಡುತ್ತಾರೆ. ತಿಥಿ ಕಾರ್ಯವನ್ನು 'ದಿವಸ' ಎಂದು ಕರೆಯುತ್ತಾರೆ. ತಿಥಿ ಕಾರ್ಯಕ್ಕೆ ನೆಂಟರಿಗೆಲ್ಲಾ ಹೇಳಲಾಗುತ್ತದೆ. ತಿಥಿಯ ದಿವಸ, ಸತ್ತ ವ್ಯಕ್ತಿ ತಿನ್ನುತ್ತಿದ್ದ ಪದಾರ್ಥಗಳನ್ನೆಲ್ಲಾ ತಯಾರಿಸಲಾಗುತ್ತದೆ. ಪರಂಗಿಹಣ್ಣು, ಬಾಳೆಹಣ್ಣು, ಸೀಬಿ ಹಣ್ಣು, ಮಾವಿನ ಹಣ್ಣು, ಸೇಬು, ದ್ರಾಕ್ಷಿ, ಸೌತೇಕಾಯಿ ಹೀಗೆ ಮುಂತಾದ ಹಣ್ಣುಗಳನ್ನು ತರುತ್ತಾರೆ. ಮಾಂಸದ ಸಾರು, ಕರಿಮೀನು, ಸೀಗಡಿ ಸಾರು, ಮೀನಿನ ಸಾರು, ಏಡಿಯ ಸಾರು, ಮೊಲದ ಸಾರು, ಇತ್ಯಾದಿ ಮಾಂಸಾಹಾರಿ ಆಹಾರಗಳನ್ನು ಸಿದ್ದಪಡಿಸುತ್ತಾರೆ.

ಗುರು ದೀಕ್ಷೆಯನ್ನು ಪಡೆದ ಗುರುಮಕ್ಕಳನ್ನ ಬಿಟ್ಟರೆ, ಉಳಿದವರಿಗೆಲ್ಲಾ ತಿಥಿಯ ದಿವಸ ಮಾಂಸದೂಟವನ್ನು ಮಾಡಿಸುತ್ತಾರೆ. ಸ್ಮಶಾನಕ್ಕೆ ತಿಂಡಿ ಪದಾರ್ಥಗಳು, ಕಡಲೆಪುರಿ, ಹಣ್ಣು-ಹಂಪಲು ಎಲ್ಲಾ ಪದಾರ್ಥಗಳನ್ನು ತೆಗೆದುಕೊಂಡು ಹೋಗುತ್ತಾರೆ. ಹೆಣ ಸುಟ್ಟ ಬೂದಿಯನ್ನು ಒಂದು ಚಿಕ್ಕ ಗಡಿಯಲ್ಲಿ ಸ್ವಲ್ಪ ತುಂಬಿ, ಉಳಿದ ಬೂದಿಯನ್ನು ಬೇಲಿಗೆ ಸುರಿಯುತ್ತಾರೆ. ನಂತರ ಹೆಣಸುಟ್ಟ ಸ್ಥಳಕ್ಕೆ ಅಥವಾ ಹೂತ ಸ್ಥಳಕ್ಕೆ ಮರುಳನ್ನು ಹಾಕಿ, ಅದರ ಮೇಲೆ ಬಾಳೆ ಎಲೆಯನ್ನು ಹಾಕುತ್ತಾರೆ. ಸ್ಮಶಾನದಲ್ಲೆ ಒಂದು ಮಡಿಕೆಯಲ್ಲಿ ಅನ್ನವನ್ನ ಬೇಯಿಸಿರುತ್ತಾರೆ. ಇದಕ್ಕೆ ಅರಿಶಿನದ ಪುಡಿಯನ್ನು ಹಾಕುತ್ತಾರೆ. ಇದನ್ನೇ ಹಿಂಡೆಕೂಳು ಎಂದು ಕರೆಯುತ್ತಾರೆ. ಆ ಬಾಳೆ ಎಲೆಯ ಮೇಲೆ ತಂದ ತಿಂಡಿ-ಸಾಮಾನುಗಳು ಅಲ್ಲೇ ಮಾಡಿದ ಅನ್ನ ಎಲ್ಲವನ್ನು ಹಾಕುತ್ತಾರೆ. ಸ್ಮಶಾನಕ್ಕೆ ದಾಸಯ್ಯ, ಜೋಗಯ್ಯ ಇಲ್ಲವೇ ದೇವರ ಗುಡ್ಡರನ್ನು ಕರೆಸುತ್ತಾರೆ. ಇದಲ್ಲದೆ ೧೦೧ ನಿಂಬೆಹಣ್ಣಿನ ಚೂರು, ೧೦೧ ಎಲೆ ಅಡಿಕೆ, ೧೦೧ ವಿಭೂತಿ ಉಂಡೆಗಳನ್ನು ಆ ಸ್ಥಳದಲ್ಲೇ ಇಡುತ್ತಾರೆ. ಆ ಸ್ಥಳದಲ್ಲಿ ಸತ್ತವರ ಫೋಟೋವನ್ನು ಇಟ್ಟು ಪೂಜಿಸಿ, ಸಮಾಧಿಯ ಬಳಿ ಇರುವ ತುಳಸಿಗೆ ಹಾಲು ತುಪ್ಪವನ್ನು ಬಿಡುತ್ತಾರೆ. ತಲಗೊಳ್ಳಿ ಹಿಡಿದ ವ್ಯಕ್ತಿ ತಲೆಯನ್ನು ಬೋಳಿಸಿಕೊಂಡು, ಹೊಸ ಬಟ್ಟೆಯನ್ನು ಧರಿಸಬೇಕು.

ಸಮಾಧಿಯ ಪೂಜೆ ಸಂಪೂರ್ಣ ಮುಗಿದ ಮೇಲೆ ತಲೆಗಡಿಗೆ ಹೊಡೆಯುತ್ತಾರೆ. ತಲಗೊಳ್ಳಿ ಹಿಡಿದವರ ಎಡದ ಭುಜದ ಮೇಲೆ ನೀರು ತುಂಬಿದ ಗಡಿಗೆಯನ್ನು ಇಡುತ್ತಾರೆ. ಈತ ಸಮಾಧಿಯನ್ನು ಮೂರು ಸುತ್ತು ಸುತ್ತಬೇಕು. ಮೊದಲನೇ ಸುತ್ತಿಗೆ ಕುಡುಗೋಲಿನಿಂದ ಒಂದು ರಂಧ್ರವನ್ನು, ಎರಡನೇ ಸುತ್ತಿಗೆ ಮತ್ತೊಂದು ರಂಧ್ರವನ್ನು ಮಾಡುತ್ತಾರೆ. ಮೂರನೇ ಸುತ್ತಿಗೆ ಆ ಗಡಿಗೆಯನ್ನು ಕೈಯಿಂದ ಬಿಡಲಾಗುತ್ತದೆ. ನಂತರ ಆತ ಬಾಯಿ ಬಡಿದುಕೊಳ್ಳುತ್ತಾನೆ. ಈ ಎಲ್ಲಾ ಕಾರ್ಯ ಮುಗಿದ ನಂತರದಲ್ಲಿ ಕಾಗೆ, ಕುಂಬಾರಕೋಳಿ, ಹದ್ದು, ಸಮಾಧಿಯ ಮೇಲಿರುವ ತಿಂಡಿ ಪದಾರ್ಥಗಳನ್ನು ತಿನ್ನಲು ಪ್ರಾರಂಭಿಸುತ್ತವೆ.

ನಂತರದಲ್ಲಿ ಗ್ರಾಮದಲ್ಲಿರುವ ದೇವಸ್ಥಾನಕ್ಕೆ ಹೋಗಿ ಮುಚ್ಚಿರುವ ದೇವಸ್ಥಾನದ ಬಾಗಿಲಲ್ಲಿ ಇಬ್ಬರು ದೊಣ್ಣೆ ಹಿಡಿದು ನಿಂತು 'ಸಗ್ಗದ ಬಾಗಿಲು ಬಗ್ಗನ್ ತೆಗಿ' ಎಂದು ಮೂರು ಸಾರಿ ಹೇಳುತ್ತಾರೆ. ಇದನ್ನೇ ಸ್ವರ್ಗದ ಬಾಗಿಲು ತೆಗೆಸುವುದು ಎಂದುಕರೆಯುತ್ತಾರೆ. ಸತ್ತ ವ್ಯಕ್ತಿಗೆ ಹೊಸಬಟ್ಟೆ, ಆತ ತಿನ್ನುತ್ತಿದ್ದ ಆಹಾರ ಪದಾರ್ಥಗಳು, ಮಧ್ಯಪಾನ, ಬೀಡಿ, ಸಿಗರೇಟು, ವೀಳ್ಯದೆಲೆ, ಮೀನು ಹಿಡಿಯುತ್ತಿದ್ದರೆ ಬಲೆ, ಎಲೆ ಕುಯ್ಯುತ್ತಿದ್ದರೆ, ಎಲೆ ಉಗುರು ಎಲ್ಲವನ್ನು ಮಡಗಿ ದಾಸಯ್ಯ, ಜೋಗಯ್ಯನನ್ನು ಕರೆದು ಧೂಪ ಹಾಕಿಸುತ್ತಾರೆ.

"ಗುರುವಿನಿಂದ ಗುರುದೀಕ್ಷೆ ಪಡೆದ ಗುರುಮಕ್ಕಳಾದರೆ, ಹನ್ನೊಂದನೇ ದಿವಸಕ್ಕೆ ತಿಥಿಕಾರ್ಯ ಮುಗಿದ ಮೇಲೆ ಹನ್ನೆರಡನೇ ದಿನ ಗುರುಗಳನ್ನು ಕರೆದು, ಗುರುಗಳಿಗೆ ಪಾದಪೂಜೆ ಮಾಡಬೇಕು. ಹಾಲು, ಜೇನುತುಪ್ಪ, ಮೊಸರು, ಎಳನೀರು, ಪನ್ನೀರು, ಇವುಗಳನ್ನು ಪಾದದ ಮೇಲೆ ಸುರಿದು ನಂತರ ಕಾಲು ತೊಳೆದು ಪೂಜೆ ಸಲ್ಲಿಸಬೇಕು. ಅವರಿಗೆ ಹೊಸಬಟ್ಟೆ, ಬೀಸಣಿಗೆ, ಚಾಪೆ, ತಟ್ಟೆ-ಲೋಟ, ಅಕ್ಕಿ, ಹಸಿಟ್ಟು-ಕಾರದಪುಡಿ, ಬೇಳೆ, ತರಕಾರಿ, ಉಪ್ಪು, ಹುಣಸೆಹಣ್ಣು ಮುಂತಾದ ಆಹಾರ ಪದಾರ್ಥಗಳನ್ನು ಕೊಡಬೇಕು. ನಂತರ ಅವರು ಸತ್ತ ವ್ಯಕ್ತಿಯ ಆತ್ಮಕ್ಕೆ ಶಾಂತಿಕೋರಿ, ಪೂಜೆ ಸಲ್ಲಿಸಿ ಹೋಗುತ್ತಾರೆ. ಇಷ್ಟೇ ಅಲ್ಲದೆ ಪ್ರತಿ ತಿಂಗಳು ಒಂದು ವರ್ಷ ಕಾಲ ಗುರುಗಳನ್ನು ಕರೆದು ಪೂಜೆ ಮಾಡಿಸಬೇಕು. ಆ ನಂತರ ಪ್ರತಿ ವರ್ಷದಂತೆ ಹನ್ನೆರಡು ವರ್ಷಗಳ ಕಾಲ ಗುರುಗಳಿಂದ ಪೂಜೆ ಮಾಡಿಸಬೇಕು. ಇದನ್ನು ತಪ್ಪಿಸಿದರೆ ಆ ವ್ಯಕ್ತಿಗೆ ಚಿರಶಾಂತಿ ದೊರೆಯುವುದಿಲ್ಲ" ಎಂದು ಹೇಳುತ್ತಾರೆ.

### ಅಸ್ಥಿ ಬಿಡುವುದು

ಸತ್ತ ವ್ಯಕ್ತಿಯ ಮೂಳೆಗಳನ್ನು ಗಡಿಗೆಯಲ್ಲಿ ತುಂಬಿ, ಗ್ರಾಮದ ಹತ್ತಿರದಲ್ಲಿರುವ ಹೊಳೆಯಲ್ಲಿ ಬಿಡುವುದಕ್ಕೆ ಅಸ್ಥಿ ಬಿಡುವುದು ಎನ್ನುತ್ತಾರೆ. ಹನ್ನೆರಡು ದಿವಸ ಅಂದರೆ ತಿಥಿ ಕಾರ್ಯ ಮುಗಿದ ನಂತರ ಹತ್ತಿರ ಹೊಳೆ ಪಕ್ಕದಲ್ಲಿ ಕೋಳಿ ಮಾಂಸದ ಅಡಿಗೆಯನ್ನು ಮಾಡಿ, ತಲೆ ಬೋಳಿಸಿಕೊಂಡ ವ್ಯಕ್ತಿ ಮತ್ತು ನೆಂಟರಿಷ್ಟರು ಅಲ್ಲಿಗೆ ಬರುತ್ತಾರೆ. ದಾಸಯ್ಯ ಮತ್ತು ಜೋಗಯ್ಯನನ್ನು ಕರೆದು, ಅಲ್ಲಿಯೇ ಅಸ್ಥಿ ಇರುವ ಗಡಿಗೆಗೆ ಪೂಜೆ ಮಾಡಿಸಿ ಎಡೆ ಇಕ್ಕಿ, ಆ ಗಡಿಗೆಗೆ ಸ್ವಲ್ಪ ಎಡೆ ಅನ್ನ ಹಾಕಿ, ವೀಳ್ಯದೆಲೆ-ಅಡಿಕೆ ಒಂದಾಣೆ ಹಾಕಿ, ತಲೆಗೊಳ್ಳಿ ಹಿಡಿದುಕೊಂಡವನಿಂದ ಆ ಗಡಿಗೆಯನ್ನು ಹೊಳೆಯಲ್ಲಿ ಬಿಡುತ್ತಾರೆ. ಆಗ ಸತ್ತ ವ್ಯಕ್ತಿಯ ಹೆಸರನ್ನು ಎಲ್ಲರೂ ಹೇಳಿ ನರಕ ಬಿಟ್ಟು, ಸ್ವರ್ಗಕ್ಕೆ ಸೇರಿಕೊಂಡ ಎಂದು ಎಲ್ಲರು ಹೇಳುತ್ತಾರೆ. ನಂತರ ಎಲ್ಲರು ಅಲ್ಲಿಯೇ ಊಟವನ್ನು ಮಾಡಿ, ಮಿಕ್ಕ ಊಟವನ್ನು ಹೊಳೆಗೆ ಬಿಟ್ಟು ಬರುತ್ತಾರೆ.

### ಗೂಡು ಹಾಕುವುದು ಅಥವಾ ಮನೆ ಬಿಡುವುದು

ಸತ್ತ ವ್ಯಕ್ತಿಯು ಕೆಟ್ಟ ಗಳಿಗೆಯಲ್ಲಿ ಸತ್ತಿದ್ದರೆ ಗೂಡು ಹಾಕುವುದು ಅಥವಾ ಮನೆ ಬಿಡುವ ಸಂಪ್ರದಾಯವುಂಟು. ಜೋಯಿಸರ ಬಳಿ ಹೋಗಿ ಸತ್ತ ವೇಳೆ, ದಿನ, ತಾರೀಖು ಇವುಗಳನ್ನು ತಿಳಿಸುತ್ತಾರೆ. ಶಾಸ್ತ್ರದ ಪ್ರಕಾರವಾಗಿ ಆ ವ್ಯಕ್ತಿ ಕೆಟ್ಟಗಳಿಗೆಯಲ್ಲಿ ಸತ್ತು, ಆತನ ಉಸಿರು ಮನೆಯಲ್ಲೇ ಸುತ್ತಾಡುತ್ತಿದ್ದರೆ, ಕೆಲವು ಸಂದರ್ಭದಲ್ಲಿ ಮನೆ ಬಿಡಬೇಕು. ಇಲ್ಲವೇ ಗೂಡು ಹಾಕಬೇಕು.

ಮನೆಯ ಮುಂದಿನ ಪಡಸಾಲೆಯಲ್ಲಿ ಇಟ್ಟಿಗೆಯಲ್ಲಿ ಸಣ್ಣದೊಂದು ಗೂಡನ್ನು ಕಟ್ಟುತ್ತಾರೆ. ಈ ಗೂಡನ್ನು ಹನ್ನೊಂದನೇ ದಿನದ ಸಾಯಂಕಾಲದ ವೇಳೆಯಲ್ಲಿ ಗೂಡು ಹಾಕುತ್ತಾರೆ. ಆ ದಿನ ಮನೆಯಲ್ಲಿ ಮಾಡಿದ ಆಹಾರ ಪದಾರ್ಥಗಳನ್ನು ಆ ಗೂಡಿನ ಒಳಗೆ ಇಟ್ಟು ಹರಳೆಣ್ಣೆ ದೀಪವನ್ನು ಇಟ್ಟು, ನೀರು ಮುಂತಾದ ವಸ್ತುಗಳನ್ನು ಅದರೊಳಗೆ ಇಟ್ಟು ಗೂಡನ್ನು ಮುಚ್ಚುತ್ತಾರೆ. ಮತ್ತೆ ಶಾಸ್ತ್ರದ ಪ್ರಕಾರವಾಗಿ ಮೂರು, ಆರು, ಒಂಭತ್ತು ತಿಂಗಳಲ್ಲಿ ಆ ಗೂಡನ್ನು ಕೀಳಲಾಗುವುದು. ಆ ದಿನ ದೇವರ ಗುಡ್ಡರನ್ನ, ದಾಸಯ್ಯ, ಜೋಗಯ್ಯರನ್ನ ಕರೆದು ಧೂಪ ಹಾಕಿಸಿ, ಅಕ್ಕ-ಪಕ್ಕದ ಕುಟುಂಬದವರಿಗೆ ಊಟ ಹಾಕುತ್ತಾರೆ. ಇದೇ ರೀತಿ ಮನೆ ಬಿಟ್ಟವರು, ದೇವರು ಧೂಪ ಹಾಕಿಸಿ ಪುನಃ ಮನೆಗೆ ಹೋಗುತ್ತಾರೆ".

ಹೀಗೆ ಗಂಗಾಮತಸ್ಥರು ಶವಸಂಸ್ಕಾರದ ಆಚರಣೆಗಳಲ್ಲಿ ವಿಭಿನ್ನತೆಯನ್ನು ಹೊಂದಿದ್ದಾರೆ. ಅಷ್ಟೇ ಅಲ್ಲದೆ ಇಂದಿನ ಆಧುನಿಕ ಕಾಲದಲ್ಲೂ ಅವರು ಸಾಂಪ್ರದಾಯಿಕ ಆಚರಣೆಗಳನ್ನು ಉಳಿಸಿಕೊಂಡು ಬಂದಿರುವುದು ಗಮನಾರ್ಹವಾದ ಸಂಗತಿಯಾಗಿದೆ. ಅವರನ್ನ ರಕ್ಷಿಸುವುದೇ ಶಿವಕೊಟ್ಟಿರುವ ಬಲೆ ಎಂದು ಹೇಳುವುದಾದರೊಂದಿಗೆ, ಎಲ್ಲಾ ಆಚರಣೆಗಳಲ್ಲೂ 'ಬಲೆ' ಪ್ರಮುಖವಾದ ಅಂಗವಾಗಿರುತ್ತದೆ.

## ೪.೨ ವಾರ್ಷಿಕಾವರ್ತನ ಆಚರಣೆಗಳು

ಭಾರತವು ಸನಾತನ ಪರಂಪರೆಯ ಸಾಗರವಾಗಿದೆ. ಇಂದು ವಿಜ್ಞಾನ ಪ್ರಗತಿ ಹೊಂದಿ, ಮಾನವನ ಬದುಕು ನಾಗರೀಕತೆಯ ಶಿಖರದೆಡೆಗೆ ದಾಪುಗಾಲಿಟ್ಟಿದ್ದರೂ ಸಂಪ್ರದಾಯ ಬದ್ಧವಾದ ಆಚಾರ-ವಿಚಾರಗಳು ಇಂದಿಗೂ ಜನಪದರ ಬದುಕಿನಲ್ಲಿ ಉಳಿದುಕೊಂಡು ಬಂದಿವೆ. "ಅನೇಕ ಆಚರಣೆಗಳಲ್ಲಿ ಹಬ್ಬಗಳು ಮತ್ತು ಜಾತ್ರೆಗಳು ಕಾಲಕಳೆದಂತೆ ನಗರೀಕರಣದ ಬದುಕಿನಲ್ಲಿ ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ಒತ್ತಡದಿಂದ ತಮ್ಮ ವೈಶಿಷ್ಟ್ಯವನ್ನು ಕಳೆದುಕೊಂಡಿರುವುದುಂಟು. ಆದರೆ ಗ್ರಾಮೀಣ ಪರಿಸರದಲ್ಲಿ ಇನ್ನೂ ಪ್ರಾಚೀನ ಪರಂಪರೆಯ ಅಸ್ತಿತ್ವ ಉಳಿದುಕೊಂಡಿರುವುದನ್ನು ಕಾಣಬಹುದು".[೨೯]

ವಾರ್ಷಿಕಾವರ್ತನ ಆಚರಣೆಗಳು ಬಹಳ ಮಟ್ಟಿಗೆ ಮಳೆ ಮತ್ತು ಬೆಳೆಯನ್ನು ಆಧರಿಸಿಕೊಂಡಿವೆ. ವಾರ್ಷಿಕಾವರ್ತನವು ಕಾಲದಿಂದ ಕಾಲಕ್ಕೆ ಬದಲಾಗುವ ಋತುಮಾನಗಳನ್ನು ಅವಲಂಬಿಸಿದ್ದು ಉತ್ಪಾದನಾ ವಿಧಾನಗಳೊಂದಿಗೆ ನೇರ ಸಂಬಂಧ ಹೊಂದಿದೆ. ಋತುಮಾನಗಳಿಗೆ ಹೊಂದಿಕೊಂಡು ವರ್ಷವೊಂದರಲ್ಲಿ ಆವರ್ತನಗೊಳ್ಳುವ ಆಚರಣೆಗಳನ್ನು ವಾರ್ಷಿಕಾವರ್ತನ ಆಚರಣೆಗಳೆಂದು ಕರೆಯುತ್ತಾರೆ. ಆಯಾಯ ಪ್ರದೇಶ, ಸಮುದಾಯಗಳು,

ಆರ್ಥಿಕ ಮಟ್ಟ ಇವುಗಳನ್ನ ಅವಲಂಬಿಸಿ ವಾರ್ಷಿಕಾವರ್ತನ ಆಚರಣೆಗಳು ಬದಲಾವಣೆಯನ್ನು ಹೊಂದುತ್ತವೆ. ಈ ಹಿನ್ನೆಲೆಯಲ್ಲಿ "ನಮ್ಮ ಸಂಸ್ಕೃತಿಯ ರಚನೆಗಳು ರೂಪುಗೊಳ್ಳುವುದರಲ್ಲಿ ಹವಾಮಾನ, ಬೆಳೆದ ಬೆಳೆ, ಕುಟುಂಬ ರಚನೆ, ಜಾತಿ ಎಲ್ಲವೂ ಪಾಲ್ಗೊಳ್ಳುತ್ತವೆ. ಆ ಮೂಲಕ ವಾರ್ಷಿಕಾವರ್ತನವನ್ನು ರೂಪಿಸುತ್ತವೆ. ಜಗತ್ತಿನ ಬೇರೆ ಬೇರೆ ಕಡೆ ಇಂಥ ಆಚರಣೆಗಳು ರೂಪುಗೊಂಡಿವೆ".[೩೦] ಅಂತೆಯೇ ಮಂಡ್ಯ ಜಿಲ್ಲೆಯ ಗಂಗಾಮತಸ್ಥರ ವಾರ್ಷಿಕಾವರ್ತನ ಆಚರಣೆಗಳನ್ನು ಪ್ರಮುಖವಾಗಿ ಹಬ್ಬಗಳು, ಜಾತ್ರೆಗಳು ಮತ್ತು ಹರಕೆಗಳೆಂದು ವಿಭಾಗಿಸಿಕೊಳ್ಳಬಹುದು. ಇವರು ವಾರ್ಷಿಕಾವರ್ತನ ಆಚರಣೆಗಳಲ್ಲಿಯೂ ವಿಶೇಷತೆಯನ್ನು ಹೊಂದಿದವರಾಗಿದ್ದಾರೆ.

## ಹಬ್ಬಗಳು

ಮಾನವನು ತನ್ನ ಅವಿಶ್ರಾಂತ ದುಡಿಮೆಯ ನಡುವೆ ಬಿಡುವು ಮಾಡಿಕೊಂಡು ಎಲ್ಲರೊಡನೆ ಕಲೆತು ಸಂತೋಷದಿಂದ ಕೂಡಿ ಬಾಳಲು ಹಬ್ಬ-ಹರಿದಿನಗಳು ಸಹಕಾರಿಯಾಗಿವೆ. ಕುಟುಂಬಗಳು ಬೆಳೆದು ವಿಭಜನೆಗೊಂಡು ಬದುಕಿನ ಅನಿವಾರ್ಯತೆಯಿಂದ ದೂರ ದೂರ ಚದುರಿ ಹೋದವರು ಹಬ್ಬಗಳ ನೆಪದಲ್ಲಿ ಆಗಾಗ್ಗೆ ಒಂದೆಡೆ ಕಲೆತು ತಮ್ಮ ಕಷ್ಟ-ಸುಖಗಳನ್ನು ಹಂಚಿಕೊಳ್ಳಲು ಸಹಕಾರಿಯಾಯಿತು. ಅಲ್ಲದೆ ದೇವತೆಗಳನ್ನು ಪೂಜಿಸುವುದರಿಂದ ನಾಡಿಗೆ ಮತ್ತು ತಮಗೆ ಒಳಿತುಂಟಾಗುತ್ತದೆಂಬ ನಂಬಿಕೆ ಹಬ್ಬಗಳು ಚಾಲ್ತಿಯಲ್ಲಿ ಉಳಿದು ಬರಲು ಕಾರಣವಾಯಿತು. ಹಬ್ಬಗಳ ಹಿನ್ನೆಲೆಯಲ್ಲಿ ಗ್ರಾಮದ ರಸ್ತೆ, ಚರಂಡಿಗಳು ಶುಚಿಗೊಂಡು ಗ್ರಾಮಗಳ ನೈರ್ಮಲ್ಯಕ್ಕೆ ಕಾರಣವಾಗುತ್ತದೆ. ಮನೆಯ ದುಂಬು, ಧೂಳು ತೆಗೆದು ಗೋಡೆ ಬಿರುಕುಗಳನ್ನು ಮುಚ್ಚಿ ಸುಣ್ಣ, ಬಣ್ಣ ಹೊಡೆಯುವುದರಿಂದ ವರ್ಷಕ್ಕೊಮ್ಮೆ ಮನೆಯನ್ನು ನವೀಕರಿಸಿದಂತಾಗಿ ಸುಭದ್ರಗೊಳ್ಳುತ್ತದೆ. ತನ್ನ ಬದುಕಿನ ಎಲ್ಲ ಆಗುಹೋಗುಗಳಿಗೂ ದೈವವೇ ಕಾರಣವೆಂದು ನಂಬಿದ ಮಾನವ "ನಿಸರ್ಗವನ್ನು ನಿಯಂತ್ರಿಸುವ ಮತ್ತು ದೇವರನ್ನೊಲಿಸಿಕೊಳ್ಳುವ ಸತತ ಪ್ರಯತ್ನ".[೩೧] ನಡೆಸುದರ ಫಲದಿಂದಾಗಿ ಹಬ್ಬಗಳು ಹುಟ್ಟಿಕೊಂಡವು.

ಹಬ್ಬಗಳು ಸ್ಥಳದಿಂದ ಸ್ಥಳಕ್ಕೆ, ಸಮುದಾಯದಿಂದ ಸಮುದಾಯಕ್ಕೆ ಭಿನ್ನವಾಗಿರುತ್ತವೆ. "ಹಬ್ಬಗಳು ದೇವರ ಹೆಸರಿನ ಹಿನ್ನೆಲೆಯ ಆಚರಣೆಯಾದುದರಿಂದ ಅದರ ಅರ್ಥಮೌಲ್ಯಗಳನ್ನು ಜನಪದ ಸಮಾಜ ಪ್ರಶ್ನಿಸುವುದಿಲ್ಲ. ಸಾಮಾನ್ಯವಾಗಿ ಮೇಲ್ವರ್ಗದವರಲ್ಲಿ ಶಿಷ್ಟ ಸಂಪ್ರದಾಯಾನುಸಾರಿಯಾದ ಹಬ್ಬಗಳಿದ್ದರೆ, ಕೆಳವರ್ಗದವರಲ್ಲಿ ದೈವೀ ಮತ್ತು ಆಸುರೀಕ್ರಿಯೆಗಳ ಮೂಲಕ ಹಬ್ಬದ ಆಚರಣೆ ಜರುಗುತ್ತದೆ."[೩೨] ಈ ಹಿನ್ನೆಲೆಯಲ್ಲಿ ಗಂಗಾಮತಸ್ಥರು ಎಲ್ಲಾ

ಸಮುದಾಯದವರು ಆಚರಿಸುವ ಸಾರ್ವತ್ರಿಕ ಹಬ್ಬಗಳನ್ನು ಆಚರಿಸುವುದರ ಜೊತೆಗೆ ಕೆಲವು ವಿಶೇಷವಾದ ಹಬ್ಬಗಳನ್ನು ಆಚರಿಸುತ್ತಾರೆ.

**ಯುಗಾದಿ**

ಮಂಡ್ಯ ಜಿಲ್ಲೆಯ ಗಂಗಾಮತಸ್ಥರು ಆಚರಿಸುವ ಸಾರ್ವತ್ರಿಕ ಹಬ್ಬಗಳಲ್ಲಿ ಯುಗಾದಿಯು ಒಂದಾಗಿದೆ. ಯುಗಾದಿ ಎಂದರೆ ಇವರಿಗೆ ಹೊಸ ವರ್ಷ ಆರಂಭ. ಹೊಸ ಸಂವತ್ಸರದ ಮೊದಲ ಹಬ್ಬ. ಪಾಲ್ಗುಣ ಮಾಸ ಮುಗಿದು ಅಮಾವಾಸ್ಯೆಯ ಮಾರನೆಯ ದಿನ ಬರುವ ಚೈತ್ರ ಮಾಸದ ಶುಭೋದಯ ದಿನವೇ 'ಯುಗಾದಿ'. ಇವರ ಬದುಕಿನಲ್ಲಿ ಯುಗಾದಿ ಹಬ್ಬವು ವೈಶಿಷ್ಟ್ಯಪೂರ್ಣವಾಗಿ ಆಚರಣೆಯಲ್ಲಿದೆ. ಮನೆಯನ್ನು ಗುಡಿಸಿ, ತಾರಿಸಿ, ಮಾವಿನ ಸೊಪ್ಪಿನಿಂದ ಮನೆಯ ಹೆಬ್ಬಾಗಿಲಿಗೆ ತೋರಣ ಕಟ್ಟಿ ಅಂದಗೊಳಿಸುತ್ತಾರೆ. ಹಬ್ಬದ ದಿನ ಬೆಳಗ್ಗೆ ಮನೆ-ಮಂದಿಯೆಲ್ಲ ಸ್ನಾನ ಮಾಡಿ ಹೊಸಬಟ್ಟೆ ಧರಿಸಿ, ಬೇವು-ಬೆಲ್ಲವನ್ನು ತಿನ್ನುತ್ತಾರೆ. ಇದು ವರ್ಷ ಪೂರ್ಣ ಬರಬಹುದಾದ ನೋವು-ನಲಿವು ಎರಡನ್ನೂ ಸಮಾನವಾಗಿ ಸ್ವೀಕರಿಸುವ ಶಕ್ತಿ ನಮಗೆ ಸಿದ್ದಿಸಲಿ ಎಂಬುದಾಗಿದೆ. ಅನಂತರ ದೇವರಿಗೆ ಹಾಗೂ ತಮ್ಮ ದೈವ ಬಲದ ಪ್ರತೀಕವಾದ ಬಲೆಯನ್ನು ಪೂಜಿಸಿ ನಮಸ್ಕರಿಸುತ್ತಾರೆ.

ಹಬ್ಬದ ಹಿಂದಿನ ಮತ್ತು ಮುಂದಿನ ದಿನಗಳು ಸೇರಿದಂತೆ ಮೂರು ದಿನಗಳಲ್ಲಿ ಹಣದ ಜೂಜಿನ ಆಟಗಳು ಸಾಮಾನ್ಯವಾಗಿರುತ್ತವೆ. ಇಸ್ಪೀಟು, ಪಚ್ಚಿ ಮೊದಲಾದ ಆಟಗಳ ಮೂಲಕ ವರ್ಷ ಪೂರ್ಣ ಮುಂದೆ ತಮಗೆ ಲಾಭವೋ, ನಷ್ಟವೋ ಎಂಬುದರ ಅದೃಷ್ಟ ಪರೀಕ್ಷೆಯನ್ನು ನಡೆಸುತ್ತಾರೆ. ಹಬ್ಬದ ದಿನ ಹೋಳಿಗೆಯ ಊಟ ಮಾಡುತ್ತಾರೆ. ಮಾರನೆಯ ದಿನ 'ವರ್ಷತೊಡಕು' (ವಸ್ತುಡುಕು) ಆಚರಿಸಲಾಗುತ್ತದೆ. ಆ ದಿನ ಮರಿ, ಕುರಿ, ಕೋಳಿ ಅಥವಾ ಕಾಡಿನಿಂದ ಬೇಟೆಯಾಡಿ ತಂದ ಪ್ರಾಣಿಗಳ ಅಂದರೆ ಮೊಲ, ಜಿಂಕೆ, ನರಿ, ಆಮೆ, ನವಿಲು ಮುಂತಾದ ಮಾಂಸದ ಅಡುಗೆಯನ್ನು ಸಿದ್ದಪಡಿಸುತ್ತಾರೆ. ಅಂದು ಸಂಜೆ ಪಶ್ಚಿಮ ದಿಗಂತದಲ್ಲಿ ಕಾಣುವ ಬಿದಿಗೆ ಚಂದ್ರನ ದರ್ಶನ ಮಾಡುತ್ತಾರೆ. ಇದನ್ನು 'ಚಂದು' ನೋಡುವುದು ಎನ್ನುತ್ತಾರೆ. ಚಂದ್ರನ ಕೋಡುಗಳು ಸಮಾನವಾಗಿದ್ದರೆ ಸಮಾಜಕ್ಕೆ ಒಳಿತಾಗುತ್ತದೆಂದು, ಬಲಭಾಗದ ಕಡೆಗೆ ಚಂದ್ರನ ಕೋಡು ತಗ್ಗಿದ್ದರೆ ಅನ್ನದ ಕೋಡು ಬಿದ್ದಿವೆಯೆಂದೂ, ಇದರಿಂದ ಆಹಾರ ಪದಾರ್ಥಗಳ ಬೆಲೆ ಕಡಿಮೆ ಪ್ರಮಾಣವೆಂದೂ ಭಾವಿಸುತ್ತಾರೆ. ಮಾಂಸದೂಟವನ್ನು ರಾತ್ರಿ ಮಾಡಿದ ನಂತರ ಬೇರೆಯವರ ಮನೆಗೆ ಕಲ್ಲು ಅಥವಾ ಹುಣಸೆಬೀಜವನ್ನು ಹೊಡೆದು ಬೈಯ್ಸಿಕೊಳ್ಳುವುದುಂಟು. ಹೀಗೆ ಬೈಯ್ಸಿಕೊಳ್ಳುವುದರಿಂದ ಒಳ್ಳೆಯದಾಗುತ್ತದೆಂಬ ನಂಬಿಕೆ ಇದೆ.

## ಸಂಕ್ರಾಂತಿ

ಸೂರ್ಯ ಪಥಚಲನೆಯ ಸಂಕ್ರಮಣ ಕಾಲದ ಸಂಕೇತವಾಗಿ ಆಚರಿಸಲಾಗುವ 'ಸಂಕ್ರಾಂತಿ'ಯು ಉತ್ತರಾಯಣ ಪುಣ್ಯಕಾಲದ ಪ್ರಾರಂಭವೂ ಆಗಿದೆ. ಈ ಶುಭದಿನದಂದು ಪವಿತ್ರ 'ಕಿಚ್ಚು' ಹಾಕಿ ಜಾನುವಾರುಗಳನ್ನು ಕಿಚ್ಚಿನಲ್ಲಿ ಹಾಯಿಸುವುದರಿಂದ ಅವುಗಳಿಗೆ ಯಾವುದೇ ಕೇಡು ಸಂಭವಿಸುವುದಿಲ್ಲವೆಂಬ ನಂಬಿಕೆಯಿದೆ. ಸಂಕ್ರಾಂತಿ ಹಬ್ಬದ ಹಿಂದಿನ ದಿನ ತಮ್ಮ ಮನೆಗಳ ಮುಂದೆ, ಹುಲ್ಲಿನ ಮೆದೆ ಇತ್ಯಾದಿಗಳಿಗೆ 'ಪತ್ರೆ'ಯನ್ನು ಸಿಕ್ಕಿಸುತ್ತಾರೆ. ಪತ್ರೆಯಲ್ಲಿ ಗಂಡು ಉತ್ತರಾಣಿ, ಮಾವಿನಸೊಪ್ಪು ಮತ್ತು ಅಂಕೋಲೆಕಡ್ಡಿಗಳನ್ನು ಸೇರಿಸುತ್ತಾರೆ. ಹಿಂದಿನ ದಿನ ಹೊಸ ಅಕ್ಕಿಯಿಂದ ಅನ್ನವನ್ನು ಮಾಡಿ ಜೀರಿಗೆ, ಅರಿಸಿನ ಹಾಕಿ 'ಹೊಸ ಮೀಸಲು' ಎಂದು ದೇವಾಲಯ ಮನೆಯಲ್ಲಿರುವ ಆಡು, ಕುರಿ, ದನ, ಎಮ್ಮೆಗಳ ಮೈ ತೊಳೆದು ಅವುಗಳ ಕೋಡಿಗೆ, ಮೈಗೆ ಬಣ್ಣ ಬಳಿದು, ಬಣ್ಣದ ಬಲೂನುಗಳನ್ನು ಕಟ್ಟಿಕೊಂಡು 'ಕಿಚ್ಚಿ'ನ ಸ್ಥಳಕ್ಕೆ ಬಂದು ಕಿಚ್ಚಾಯಿಸುತ್ತಾರೆ.

'ಕಿಚ್ಚು' ಹಾಯಿಸುವ ಸ್ಥಳದಲ್ಲಿ 'ಸಂಕ್ರಾಂತಮ್ಮ'ನನ್ನು ತಿದ್ದಿ ಪೂಜಿಸುವ ಪದ್ಧತಿಯಿದೆ. ಸುಮಾರು ಎರಡು ಅಥವಾ ಎರಡೂವರೆ ಅಡಿ ಎತ್ತರದ ಪಿರಮಿಡ್ ಆಕೃತಿಯಲ್ಲಿ ಮಣ್ಣಿನಿಂದ ಗೋಪುರ ಕಟ್ಟಿ, ಅದಕ್ಕೆ ಸುಣ್ಣದ ತಿಳಿ ಮತ್ತು ಕೆಮ್ಮಣ್ಣು ತಿಳಿ ಎರಚಿ ಗಣಗಲೆ ಹೂವುಗಳಿಂದ ಅಲಂಕಾರ ಮಾಡುತ್ತಾರೆ. ಪ್ರತಿ ಮನೆಯಿಂದ ಎತ್ತಿದ ಅಕ್ಕಿಗೆ ಜೀರಿಗೆ, ಅರಿಸಿನವನ್ನು ಹಾಕಿ ಬೇಯಿಸಿ ಕೊಡುತ್ತಾರೆ. ಈ ಅನ್ನವನ್ನ ಹುಲ್ಲಿನ ಮೆದೆಗಳಿಗೆ, ಮನೆಗೆ, ತೋಟಗಳಿಗೆ, ಪಂಗಲೋ ಎಂದು ಕೂಗುತ್ತಾ ಎಸೆಯುತ್ತಾರೆ. ಮಾರನೆಯ ದಿನ ಕೋಳಿಯನ್ನು ಇದಕ್ಕೆ ಬಲಿ ಕೊಡುತ್ತಾರೆ. ಹೆಣ್ಣು ಮಕ್ಕಳು ಸಂಭ್ರಮದಲ್ಲಿ ಮನೆ ಮನೆಗೆ ಎಳ್ಳು-ಬೆಲ್ಲ ಬೀರುವ ಪದ್ಧತಿ ಇದೆ. ಮಾರನೆಯ ದಿನ ಎಲ್ಲರ ಮನೆಯಲ್ಲಿ ಮಾಂಸಭೋಜನ ಇರುತ್ತದೆ.

## ಗೌರಿಹಬ್ಬ

ಗೌರಿಹಬ್ಬ ಸಾರ್ವತ್ರಿಕ ಹಬ್ಬವಾದರೂ ಜಿಲ್ಲೆಯ ಗಂಗಾಮತಸ್ಥರಿಗೆ ವಿಶೇಷವಾದ ಹಬ್ಬವಾಗಿದೆ. ಈ ಸಮುದಾಯದಲ್ಲಿ 'ಗಂಗೆ'ಯ ನಂತರದ ಸ್ಥಾನ 'ಗೌರಿ'ಗೆ ಇದೆ. ಗೌರಿಯು ಗಂಗೆಯ ಹಾಗೆ ಶಿವನ ಹೆಂಡತಿ ಎಂಬ ಕಾರಣದಿಂದ 'ಗೌರಿಹಬ್ಬ'ಕ್ಕೆ ಹೆಚ್ಚಿನ ಒತ್ತು ಕೊಟ್ಟಿದ್ದಾರೆ. ಭಾದ್ರಪದ ಮಾಸದ ಶುಕ್ಲ ಪಕ್ಷದ ತೃತೀಯ ದಿನದಂದು ಗೌರಿ ಹಬ್ಬವೂ, ಚತುರ್ಥಿಯಂದು ಗಣೇಶ ಹಬ್ಬವೂ ಬರುತ್ತದೆ. ವಿವಾಹವಾಗಿ ಹೊರ ಹೋಗಿರುವ ಹೆಣ್ಣು ಮಕ್ಕಳು ಗೌರಿ-ಗಣೇಶನ

ಹಬ್ಬದಲ್ಲಿ ಆಹ್ವಾನಿಸಲ್ಪಟ್ಟು ತೌರಿಗೆ ಆಗಮಿಸುತ್ತಾರೆ. ಗೌರಿ ಹಬ್ಬದಲ್ಲಿ ಮನೆಗೆ ಸುಣ್ಣ ಬಣ್ಣ ತುಂಬಿ, ಹೊಳೆ, ಕೆರೆ ಅಥವಾ ಬಾವಿಯಿಂದ ಬಿಂದಿಗೆಗೆ ಗಂಗೆಯನ್ನು ತುಂಬಿಸಿ ಪೂಜಿಸಿ ಮನೆಗೆ ತರುತ್ತಾರೆ.

ದೊಡ್ಡರಸಿನಕೆರೆಯಲ್ಲಿ ಗೌರಿಹಬ್ಬದ ದಿನ ಚಿಕ್ಕಮ್ಮನ ದೇವಸ್ಥಾನಕ್ಕೆ ಸುಣ್ಣ ತುಂಬಿ ಊರಲ್ಲಿ ತಮ್ಮ ಸಮುದಾಯದವರಿಂದ ಧವಸ–ಧಾನ್ಯ ಸಂಗ್ರಹಿಸಿ, ಅದರಿಂದ ಅಡುಗೆಯನ್ನು ಮಾಡುತ್ತಾರೆ. ಅಲ್ಲೇ ಸಾವಿಗೆಯನ್ನು ಮಾಡಿ, ಪಾಯಸವನ್ನು ತಯಾರಿಸುತ್ತಾರೆ. ಚಿಕ್ಕಮ್ಮನಿಗೆ ನೈವೇದ್ಯ ತೋರಿಸಲು ೧೦೧ ಬಾಳೆಎಲೆ ಇಟ್ಟು, ಒಂದೊಂದು ಬಾಳೆ ಎಲೆಗೂ ಒಂದೊಂದು ನಿಂಬೆಹಣ್ಣನ್ನು ಇಡುತ್ತಾರೆ. ಆ ಎಲ್ಲಾ ಬಾಳೆಎಲೆಗೂ ಅನ್ನ–ಸಾರು, ಸಾವಿಗೆ ಪಾಯಸವನ್ನು ಇಡಲಾಗುವುದು. ಈ ಸಂದರ್ಭದಲ್ಲಿ ದೇವಸ್ಥಾನ ಸುತ್ತ ಸುತ್ತುತ್ತ ಹಾಡು ಹಾಡುತ್ತಾರೆ. ಪೂಜಾರಿ ಬಂದು ದೇವರಿಗೆ ಪೂಜೆ ಸಲ್ಲಿಸಿ, ಇಟ್ಟಿರುವ ದೇವರ ಎಡೆಗೂ ಪೂಜೆ ಮಾಡಿ, ದೇವಸ್ಥಾನದ ಒಳಗೆ ಹೋದ ನಂತರದಲ್ಲಿ, ಬಾಳೆ ಎಲೆಯಲ್ಲಿರುವ ಪ್ರಸಾದವನ್ನು ಅಲ್ಲಿ ನೆರೆದಿರುವ ಗಂಗಾಮತಸ್ಥ ಭಕ್ತಾದಿಗಳೆಲ್ಲರೂ ಸೇವಿಸುತ್ತಾರೆ.”[೩೩]

ವೀಳ್ಯದೆಲೆತೋಟದಲ್ಲಿ ಇಟ್ಟಿಗೆಯಿಂದ ಚಿಕ್ಕದಾದ ದೇವರಗೂಡು ಮಾಡಿ ನಂತರ ಸಗಣಿ ನೀರು ಹಾಕಿ, ಸಣ್ಣದಾದ ಮೂರು ಕಲ್ಲುಗಳನ್ನು ಇಡುತ್ತಾರೆ. ಇವು ಸಾಮಾನ್ಯವಾದ ಕಲ್ಲುಗಳಲ್ಲ. ಬ್ರಹ್ಮ, ವಿಷ್ಣು, ಮಹೇಶ್ವರರ ಪ್ರತಿರೂಪವೇ. ಸೃಷ್ಠಿ, ಸ್ಥಿತಿ, ಲಯ ಇದರ ಹಿನ್ನಲೆಯಲ್ಲಿ ಈ ಆಚರಣೆ ಬಂದಿದೆ. ಈ ಸಂದರ್ಭದಲ್ಲಿ ಗೊಂಬಪ್ಪನನ್ನು ಇಟ್ಟು ಪೂಜಿಸುವುದುಂಟು. ಆಗ ‘ಆದಿಗೊಂಬಪ್ಪ; ಬೀದಿಗೊಂಬಪ್ಪ’ ಎಂದು ಹಾಡುತ್ತಾರೆ. ಅದರ ಪಕ್ಕದಲ್ಲಿ ಎಲೆ ಕುಯ್ಯುವ ಉಗುರು, ನೀರು ಉಯ್ಯಲು ಬಳಸುವ ಕುಂಬ, ಏಣಿಯನ್ನು ಇಟ್ಟು ಪೂಜೆ ಸಲ್ಲಿಸುತ್ತಾರೆ. ಆಗ ಮನೆಯಲ್ಲಿ ಮಾಡಿರುವ ಅಡಿಗೆಯನ್ನು ಇಟ್ಟು, ಅಭಿಷೇಕ ಮಾಡುತ್ತಾರೆ. ನಂತರ ಅಲ್ಲಿದ್ದವರೆಲ್ಲಾ ಪ್ರಸಾದ ಸೇವಿಸುತ್ತಾರೆ. ಆ ದಿನ ಮನೆಯಲ್ಲಿ ಸತ್ತಿರುವ ಹಿರಿಯರಿಗೆ ಎಡೆಯನ್ನು ಹಾಕುತ್ತಾರೆ. ಇದು ಪಿತೃಪಕ್ಷವಾಗಿದೆ. ಕೆಲವು ಕಡೆಯಲ್ಲಿ ಮಾತ್ರ ಗೌರಿಹಬ್ಬದ ದಿನವೇ ಪಿತೃಪಕ್ಷ ಮಾಡುತ್ತಾರೆ. ಅನ್ನ–ಸಾರು, ಸಾವಿಗೆ, ಪಾಯಸ, ಕಡುಬು, ತಾಳದ ಮಾಡುತ್ತಾರೆ. ಗೌರಿ ಹಬ್ಬದ ದಿನ ನಾಗರಕಲ್ಲಿಗೆ ಮತ್ತು ಹುತ್ತಕ್ಕೆ ಪೂಜೆ ಸಲ್ಲಿಸುತ್ತಾರೆ. ಮನೆಯಲ್ಲಿ ಪೂಜೆ ಮಾಡುವ ಸಂದರ್ಭದಲ್ಲಿ ಬಲೆಯನ್ನು ಸಹ ಪೂಜಿಸುತ್ತಾರೆ. ಗೌರಿಹಬ್ಬದ ಮಾರನೆಯ ದಿನ ಮಾಂಸದೂಟವನ್ನು ಮಾಡುತ್ತಾರೆ.

ಗೌರಿ ಹಬ್ಬವಾದ ಮಾರನೇ ದಿವಸ “ಗಂಗಮ್ಮನ ಹಬ್ಬ”ವನ್ನು ಮಾಡುತ್ತಾರೆ. ಮರಡಿಪುರ, ಶಿವಹಳ್ಳಿ, ಬಸ್ತೀಪುರ ಮುಂತಾದ ಸ್ಥಳಗಳಲ್ಲಿ ಆಚರಿಸುತ್ತಾರೆ. ಆ ದಿನ ಪ್ರತಿಯೊಂದು ಕುಟುಂಬದವರು ಹೊಳೆಯಿಂದ ಗಂಗೆಯನ್ನು ಪೂಜಿಸಿ ಬಿಂದಿಗೆಯಿಂದ

ಗಂಗೆಯನ್ನು ಮನೆಗೆ ತರುತ್ತಾರೆ. ಸಂಜೆ ಹೋಮ ಮಾಡಿಸುತ್ತಾರೆ. ಮಾರನೇ ದಿನ ಮನೆಯ ಗಂಡಸರು ಹೊಳೆಗೆ ಹೋಗಿ, ಅಲ್ಲಿ ಸಿಗುವ ಸಣ್ಣಮೀನು, ಸೀಗಡಿ, ಮೀನು, ಏಡಿ, ಆಮೆ ಇವುಗಳಲ್ಲಿ ಯಾವುದು ಸಿಗುವುದೋ ಅದನ್ನು ಹಿಡಿದು ತಂದು ಅಡುಗೆ ತಯಾರಿಸಿ 'ಗಂಗಾದೇವಿ'ಗೆ ಅಭಿಷೇಕ ಮಾಡುತ್ತಾರೆ. ಕಾರಣವೆಂದರೆ ಗಂಗೆಯಲ್ಲಿ ವಾಸಿಸುವಂತಹ ಇವುಗಳನ್ನು ಹಿಡಿದು ತಂದು ಗಂಗಾದೇವಿಗೆ ಪೂಜೆ ಸಲ್ಲಿಸಿದರೆ ನಮಗೆ ಒಳ್ಳೆಯದಾಗುತ್ತದೆಂಬ ನಂಬಿಕೆ ಇದೆ.

## ಶಿವರಾತ್ರಿ ಹಬ್ಬ

ಗಂಗಾಮತಸ್ಥರ ಸಾರ್ವತ್ರಿಕವಾದ ಹಬ್ಬಗಳಲ್ಲಿ ವಿಶೇಷವಾಗಿ ಆಚರಿಸುವ ಹಬ್ಬಗಳಲ್ಲಿ ಶಿವರಾತ್ರಿ ಹಬ್ಬವೂ ಒಂದಾಗಿದೆ. ಕಾರಣವೆಂದರೆ ಬದುಕಲು ಶಿವನೇ 'ಬಲೆ'ಯನ್ನು ಕೊಟ್ಟನೆಂಬುದು ಇವರ ನಂಬಿಕೆಯ ಜೊತೆಗೆ, ತಮ್ಮ ಕುಲದೇವತೆಯಾದ 'ಗಂಗೆ'ಯು ಶಿವನ ಹೆಂಡತಿ ಎಂಬುದರಿಂದ ಶಿವರಾತ್ರಿ ಹಬ್ಬವು ವಿಶೇಷವಾಗಿದೆ. ಮಾಘ ಮಾಸದ ಕೊನೆಗೆ 'ಮಹಾಶಿವರಾತ್ರಿ' ಹಬ್ಬವು ಬರುತ್ತದೆ. ಈ ಹಬ್ಬದಲ್ಲಿ ವಿಶೇಷವಾಗಿ 'ಜಾಗರಣೆ' ಉಪವಾಸ ವ್ರತಗಳಿಂದ ಶಿವನನ್ನು ಆರಾಧಿಸುತ್ತಾರೆ. ಕಾಯಿ-ಪಲ್ಯ-ಸಿಹಿ ಊಟವನ್ನು ಮಾಡಿ ಈ ದಿವಸದಂದು ಸತ್ತಿರುವ ಹಿರಿಯರಿಗೆ ಎಡೆಯನ್ನು ಹಾಕುತ್ತಾರೆ. ಹುಸ್ಕೂರು, ದಬ್ಬಳ್ಳಿ, ಚಿಕ್ಕರಸಿನಕೆರೆ ಮುಂತಾದ ಕಡೆಗಳಲ್ಲಿ ಕಾಣಬಹುದು. ಮಾರನೆಯ ದಿನ ಮಾಂಸದೂಟವನ್ನು ಮಾಡುತ್ತಾರೆ. ಇವರು ಶಿವರಾತ್ರಿಯನ್ನು ಮಂಗಳವಾರ ಆಚರಿಸುತ್ತಾರೆ. ದಿನಾಂಕದ ಪ್ರಕಾರ ಬೇರೆ ಯಾವುದೇ ದಿನದಂದು ಬಂದರು, ಅದರ ಮುಂದೆ ಬರುವ ಮಂಗಳವಾರ ಶಿವರಾತ್ರಿ ಹಬ್ಬ ಮಾಡುತ್ತಾರೆ.

## ಶ್ರೀರಾಮನವಮಿ

ಶ್ರೀರಾಮನನ್ನು ಕಂಡರೆ ಅಪಾರ ಭಕ್ತಿ ಗಂಗಾಮತಸ್ಥರಿಗೆ. ಉಗಾದಿಯ ಒಂಬತ್ತನೆಯ ದಿನದಂದು ಅಂದರೆ ಚೈತ್ರಶುದ್ಧ ನವಮಿಯಲ್ಲಿ ಶ್ರೀರಾಮನವಮಿಯನ್ನು ಆಚರಿಸಲಾಗುತ್ತದೆ. ಇವರು ವಾಸಿಸುವ ಪ್ರತಿ ಗ್ರಾಮದಲ್ಲೂ, ಇವರ ಕೇರಿಯಲ್ಲಿಯೇ ರಾಮಮಂದಿರ ಸಾಮಾನ್ಯವಾಗಿ ಇರುತ್ತದೆ. ಆ ದಿನ ವಿಶೇಷ ಪೂಜೆ ನಡೆಸಿ ಪಾನಕ, ನೀರು ಮಜ್ಜಿಗೆ, ಹೆಸರುಬೇಳೆ ಮತ್ತು ರಸಾಯನಗಳನ್ನು ಪ್ರಸಾದ ರೂಪದಲ್ಲಿ ವಿತರಣೆ ಮಾಡಲಾಗುತ್ತದೆ. ಸೀತಾ, ರಾಮ, ಲಕ್ಷ್ಮಣ ಮತ್ತು ಹನುಮಂತರಿರುವ ಪಟವನ್ನು ಹಿಡಿದು ಭಜನೆ ಮಾಡುತ್ತ ಊರಿನ ಪ್ರಮುಖ ಬೀದಿಗಳಿಗೆ

ಹೋಗುತ್ತಾರೆ. ಕೆಲವು ಕಡೆ ಶ್ರೀರಾಮನವಮಿ ದಿನ 'ಪರ'ವನ್ನು ಮಾಡುತ್ತಾರೆ. ಪ್ರತಿ ವರ್ಷವೂ ಮಳವಳ್ಳಿ ಪಟ್ಟಣದಲ್ಲಿ ಆ ದಿನ ಪರವನ್ನು ಮಾಡುವುದುಂಟು.

### ಪಿತೃಪಕ್ಷ (ಮಾರಲಮ್ಮಿ ಹಬ್ಬ)

ಗಂಗಾಮತಸ್ಥರು ತಮ್ಮ ಹಿರಿಯರಿಗೆ ಎಡೆಹಿಕ್ಕುವ ಪದ್ಧತಿಯಿದೆ. ಇದೇ ಪಿತೃಪಕ್ಷ ಅಥವಾ ಮಾರಲಮ್ಮಿ ಹಬ್ಬ ಎಂದು ಕರೆಯುತ್ತಾರೆ. ಕೆಲವರು ಗೌರಿ ಹಬ್ಬದಲ್ಲಿ ಮತ್ತು ಶಿವರಾತ್ರಿ ಹಬ್ಬದಂದು ಎಡೆ ಹಾಕಿದರೆ, ಕೆಲವರು ಮಹಾಲಯ ಅಮಾವಾಸ್ಯೆಯಂದು ಅಶ್ವಯುಜ ಮಾಸದ ನವಮಿಯವರೆಗಿನ ಕಾಲದಲ್ಲಿ ಸತ್ತ ಹಿರಿಯರಿಗೆ ಎಡೆ ಇಡುತ್ತಾರೆ. ಮಹಾಲಯ ಅಮಾವಾಸ್ಯೆಯ ಹಿಂದಿನ ಮೂರು, ನಾಲ್ಕು ದಿನಗಳಿಂದ ಆರಂಭಗೊಂಡು ಆಯುಧ ಪೂಜೆಯವರೆಗೆ ಬೇರೆ ಬೇರೆ ದಿನಗಳಲ್ಲಿ ತಮ್ಮ ಸತ್ತವರಿಗೆ ಎಡೆ ಹಾಕುತ್ತಾರೆ.

ಆ ದಿನ ಸತ್ತ ವ್ಯಕ್ತಿ ತಿನ್ನುತ್ತಿದ್ದ ಆಹಾರ ಪದಾರ್ಥಗಳನ್ನು ಮಾಡಿ, ಹೊಸಬಟ್ಟೆ, ಎಲೆ ಅಡಿಕೆ, ಗಂಡಸರಾದರೆ ಉಡುದಾರ, ಬೀಡಿ, ಹೆಂಡ ಎಲ್ಲವನ್ನು ಎಡೆಗೆ ಮಡಗಲಾಗುವುದು. ಮಾಂಸದ ಅಡುಗೆಯನ್ನು ಮಾಡಿ ಅದನ್ನು ಬಡಿಸುತ್ತಾರೆ. ಒಂದು ಕೋಣೆಯಲ್ಲಿ ಎಡೆ ಇಟ್ಟು ನಂತರ ಎಲ್ಲರೂ ಧೂಪ ಹಾಕಿ, ಆ ಕೋಣೆಯ ಬಾಗಿಲನ್ನು ಮುಚ್ಚುತ್ತಾರೆ. ಸತ್ತ ಹಿರಿಯರು ಆ ಸಂದರ್ಭದಲ್ಲಿ ಆಹಾರ ಪದಾರ್ಥಗಳನ್ನು ಸ್ವೀಕರಿಸುತ್ತಾರೆಂಬ ನಂಬಿಕೆ ಇದೆ.

### ಕಾರಬ್ಬ

ಗಂಗಾಮತಸ್ಥರು ಆಚರಿಸುವ ವಿಶೇಷ ಹಬ್ಬಗಳಲ್ಲಿ 'ಕಾರಬ್ಬ'ವು ಒಂದಾಗಿದೆ. ಆದರೆ ಈ ಹಬ್ಬವನ್ನು ಜಿಲ್ಲೆಯಾದ್ಯಂತ ಆಚರಿಸುವುದಿಲ್ಲ. ತಮ್ಮ ವ್ಯವಸಾಯಕ್ಕೆ ಬಳಸುವ ನೇಗಿಲು, ನೊಗ, ಕುಂಟೆ, ಕೂರಿಗೆ, ಹಲುಬೆ, ಗುದ್ದಲಿ, ಹಾರೆ, ಕುಡುಗೋಲು, ಕೊಡಲಿ, ಎಲೆ ಉಗುರು, ಬಲೆ ಮೊದಲಾದವುಗಳನ್ನು ತೊಳೆದು ಮನೆಯ ಜಗುಲಿಯಲ್ಲಿಟ್ಟು ಗಂಧ, ಅರಿಶಿನ ಕುಂಕುಮ, ಹೂವು ಮೊದಲಾದವನ್ನು ಹಾಕಿ ಹಾಲು ಅನ್ನ ಎಡೆಯಿಟ್ಟು ಪೂಜಿಸುತ್ತಾರೆ. ಈ ಹಬ್ಬವನ್ನು ಯುಗಾದಿ ಆದ ಮೂರು ತಿಂಗಳಿಗೆ ಮಾಡುತ್ತಾರೆ. ಅಂದು ರಾತ್ರಿ ಬೇಟೆಗೆ ಹೋಗಿ ಹಂದಿಯನ್ನು ಹೊಡೆದು ತರುತ್ತಾರೆ. ಇತ್ತೀಚಿಗೆ ಕಡಿಮೆಯಾಗಿದೆ. ಆದರೆ ಮಾರನೆಯ ದಿನ ಬಂದಿರುವ ನೆಂಟರಿಗೆಲ್ಲಾ ಹಂದಿಮಾಂಸದ ಊಟವನ್ನೇ ಹಾಕಬೇಕು. ಸಾಕಿರುವ ಹಂದಿಯನ್ನೆ ಕೊಯ್ದು ಊಟ ಮಾಡುತ್ತಾರೆ. ಈ ಹಬ್ಬವನ್ನು ಶಿವಹಳ್ಳಿ, ಮರಡಿಪುರ, ದುದ್ದ ಮುಂತಾದ ಕಡೆಗಳಲ್ಲಿ ಮಾಡುತ್ತಾರೆ.

## ಉಂತೂರಮ್ಮನ ಹಬ್ಬ

ಗಂಗಾಮತಸ್ಥರು ಯುಗಾದಿ ಆದ ಆರನೇ ದಿವಸ ಉಂತೂರಮ್ಮನ ಹಬ್ಬವನ್ನು ಮಾಡುತ್ತಾರೆ. ಆ ದಿನ ಮಂಗಳವಾರವಾಗಿರಬೇಕು. ಅಂದು ಸಂಜೆ ಹೊಳೆಗೆ ಹೋಗಿ ಗಂಗೆ ಪೂಜಿಸಿ ನೀರು ತಂದು ತಮ್ಮ ಮನೆಗಳಲ್ಲಿ 'ಮಡೆ' ಮಾಡುತ್ತಾರೆ. ಆ ದಿನ ಉಂತೂರಮ್ಮನ ಗುಡಿಗೆ ಹೋಗಿ ಮೊಸರು ಅನ್ನ, ಅಸಕ್ಕಿ ತೆಂಬಟ್ಟು ಮಾಡಿ ಬೇವಿನ ಸೊಪ್ಪು, ಹಣ್ಣು ಕಾಯಿ ತೆಗೆದುಕೊಂಡು ಹೋಗಿ ತಂಪು ಮಾಡುತ್ತಾರೆ. ಅದೇ ದಿನ ರಂಗಕಟ್ಟುತ್ತಾರೆ. ಕಾಲಿಗೆ ಗೆಜ್ಜೆ ಕಟ್ಟಿಕೊಂಡು, ತಮಟೆ, ನಗಾರಿ, ವಾದ್ಯ ಮುಂತಾದ ಸಂಗೀತದ ಪರಿಕರಗಳಿರುತ್ತವೆ. ರಾತ್ರಿ ಪ್ರಾರಂಭಿಸಿದರೆ ಮುಂಜಾನೆ ನಾಲ್ಕುಗಂಟೆಗೆ ಮುಗಿಸುತ್ತಾರೆ. ಬುಧವಾರ ಬೆಳಗ್ಗೆ ಉಂತೂರಮ್ಮನನ್ನ ಗ್ರಾಮದಲ್ಲೆಲ್ಲ ಮೆರವಣಿಗೆ ಮಾಡುತ್ತಾರೆ. ನಂತರ ದೇವರಿಗೆ ಹೂವು-ಹೊಂಬಾಳೆಯಿಂದ ಪೂಜೆ ಸಲ್ಲಿಸಿ ಮರಿಯನ್ನು ಬಲಿಕೊಡುತ್ತಾರೆ. ಬಂದಿರುವ ನೆಂಟರಿಗೆ ಮಾಂಸದ ಊಟವನ್ನು ಹಾಕುತ್ತಾರೆ. ಈ ಹಬ್ಬವನ್ನು ಮಂಡ್ಯತಾಲ್ಲೂಕಿನಲ್ಲಿ ಹೆಚ್ಚಾಗಿ ಆಚರಿಸುತ್ತಾರೆ.

## ಈರ ಹಬ್ಬ

ಗಂಗಾಮತಸ್ಥರಿಗೆ ದೊಡ್ಡದಾದ ಹಾಗೂ ಮಡಿವಂತಿಕೆಯ ಹಬ್ಬವೇ ಈರ ಹಬ್ಬ. ಈ ಹಬ್ಬವನ್ನು ಐದು ವರ್ಷಕ್ಕೊಮ್ಮೆ ಮಾಡುತ್ತಾರೆ. ಈ ಹಬ್ಬಕ್ಕೆಂದು ಹಲವು 'ಮರಿ'ಗಳನ್ನು ಹರಕೆ ಮಾಡಿಕೊಂಡಿರುತ್ತಾರೆ. ಈರಹಬ್ಬವನ್ನು ಮಂಗಳವಾರ-ಬುಧವಾರ ಎರಡು ದಿವಸ ಆಚರಿಸುತ್ತಾರೆ. ಜಿಲ್ಲೆದಾದ್ಯಂತ ಈರಹಬ್ಬವನ್ನು ಆಚರಿಸುತ್ತಾರೆ. ಮಳವಳ್ಳಿ, ಕುಲುಮೆದೊಡ್ಡಿ, ಚೀರನಹಳ್ಳಿ, ಕನ್ನಲಿ, ಕಸಲಗೆರೆ, ಗಂಜಾಂ, ನಾಗಮಂಗಲ ಮುಂತಾದ ಕಡೆಗಳಲ್ಲಿ ಆಚರಿಸುತ್ತಾರೆ. ಮಾರಮ್ಮ, ಪಟಾಲದಮ್ಮ, ಕಿಚ್ಚಲಮಾರಮ್ಮ, ಕಾಳಮ್ಮ, ಸಿದ್ದೇಶ್ವರ ಈ ದೇವರುಗಳನ್ನ ಹೊಳೆಯ ಹತ್ತಿರಕ್ಕೆ ವಾದ್ಯಗಳ ಸಮೇತ ಹೋಗಿ, ಗಂಗೆಯನ್ನು ಪೂಜಿಸಿ ದೇವರುಗಳನ್ನು ಹೊಳೆ ಮೆಟ್ಟಿಸಿ, ಹೂವುಗಳಿಂದ ಅಲಂಕಾರ ಮಾಡಿ, ಗಂಗೆಯನ್ನು ಐದು ಬಿಂದಿಗೆಯಲ್ಲಿ ಮುತ್ತೈದೆಯರು ಹೊತ್ತು, ಕಳಸಸಹಿತ, ಮಡಿವಾಳನ ಮಡಿಯ ಮೇಲೆ, ದೇವರುಗಳನ್ನು ಹೊತ್ತವರೊಂದಿಗೆ ಬರುತ್ತಾರೆ. ಹಬ್ಬದ ದಿನವನ್ನು ಕುಲದ ಯಜಮಾನರು ಒಂದು ತಿಂಗಳು ಮೊದಲೇ ನಿಗಧಿ ಮಾಡಿ ಪ್ರತಿ ಕುಟುಂಬದವರು ಎಷ್ಟೆಷ್ಟು ವರಿವಟ (ಹಣ)ವನ್ನು ಕೊಡಬೇಕೆಂಬುದನ್ನು ತೀರ್ಮಾನಿಸಲಾಗಿರುತ್ತದೆ. ಸಂಗ್ರಹವಾದ ಹಣದಿಂದ ೫೦ ಮರಿಯಿಂದ ೧೦೦ ಮರಿಗಳವರೆಗೆ ಖರೀದಿಸಲಾಗುತ್ತದೆ. ಹೊಳೆ ಮೆಟ್ಟು ಬಂದ ದೇವರುಗಳನ್ನು 'ಪರ' ಮಾಡುವ ಜಾಗದಲ್ಲಿ

ಇರಿಸಲಾಗುವುದು. ಹೊಳೆಯಿಂದ ತಂದ 'ಗಂಗೆ'ಯನ್ನು ಅಲ್ಲಿಯೇ ಇಡುತ್ತಾರೆ. ಈ ಸಂದರ್ಭದಲ್ಲಿ ತಂಬಟ್ಟಿನ ಆರತಿಯನ್ನು ಸಮುದಾಯದವರೆಲ್ಲಾ ಕೊಡುತ್ತಾರೆ.

ಬುಧವಾರದ ಮುಂಜಾನೆ ಆ ಎಲ್ಲಾ ದೇವರುಗಳಿಗೆ 'ಮರಿ'ಗಳ ಬಲಿಯನ್ನು ಕೊಡುತ್ತಾರೆ. ಅದರಲ್ಲಿ ಒಂದು ತಲೆಯನ್ನು ಅಗಸನಿಗೆ, ಒಂದು ತಲೆಯನ್ನು ಭಜಂತ್ರಿಗೆ ಕೊಡುತ್ತಾರೆ. ಮಾಂಸದ ಅಡುಗೆಯನ್ನು ಸಿದ್ದಪಡಿಸಲು ಮೀಸಲು ನೀರನ್ನು ಬಳಸಿಕೊಂಡು ಮಾಡುತ್ತಾರೆ. ಈ ಹಬ್ಬಕ್ಕೆ ನೆಂಟರಿಗೆಲ್ಲಾ ಹೇಳಲಾಗಿರುತ್ತದೆ. ಈ ಹಬ್ಬದ ವಿಶೇಷವೆಂದರೆ ಯಾರ ಮನೆಯಲ್ಲಿಯೂ ಅಡಿಗೆಯನ್ನು ಮಾಡುವುದಿಲ್ಲ. ದೇವರುಗಳ ಸನ್ನಿಧಿಯಲ್ಲಿ ಮಾಡಿದ 'ಪರ'ದ ಊಟವನ್ನು ಎಲ್ಲರೂ ಮಾಡುತ್ತಾರೆ.

**ಕಾಳಮ್ಮನ (ಕೊಲ್ಲಾಪುರದಮ್ಮ) ಹಬ್ಬ**

ಮಂಡ್ಯ ತಾಲ್ಲೂಕಿನ ಹೊಳಲು ಗ್ರಾಮದಲ್ಲಿರುವ ಕಾಳಮ್ಮನ ಹಬ್ಬವನ್ನು ಇಲ್ಲಿನ ಗಂಗಾಮತಸ್ಥರು ತುಂಬಾ ವಿಜೃಂಭಣೆಯಿಂದ ಆಚರಿಸುತ್ತಾರೆ. ಇಲ್ಲಿಯ ಕೊಲ್ಲಾಪುರದಮ್ಮ ದೇವತೆಯ ಬಗ್ಗೆ ಒಂದು ಕಥೆ ಇದೆ. ಒಮ್ಮೆ ಶೃಂಗೇರಿಯ ಜಗದ್ಗುರುಗಳು ಮಹಾರಾಷ್ಟ್ರದಲ್ಲಿರುವ ಕೊಲ್ಲಾಪುರದಮ್ಮನ ಸನ್ನಿದಿಗೆ ಹೋಗಿ ಆಶೀರ್ವಾದ ಪಡೆದು ವಾಪಾಸ್ಸಾಗುವ ಸಂದರ್ಭದಲ್ಲಿ ಹೊಳಲಿನ ಮಾರ್ಗವಾಗಿ ಬಂದಿದ್ದರಂತೆ. ಆಗ ಅಲ್ಲಿಯ ಗಂಗಾಮತಸ್ಥ ಜನರು ಆ ಜಗದ್ಗುರುಗಳನ್ನು ಪಲ್ಲಕ್ಕಿಯಲ್ಲಿ ಹೊತ್ತುಕೊಂಡು ಬೆಳ್ಳೂರಿನವರೆಗೆ ಹೋದರಂತೆ. ಅದರ ನೆನಪಿಗಾಗಿ ಈ ಕೊಲ್ಲೂರಮ್ಮ ಅಥವಾ ಕಾಳಮ್ಮನ ದೇವಸ್ಥಾನವನ್ನು ನಿರ್ಮಿಸಲಾಯಿತು"[೩೪] ಎಂದು ಹೇಳುತ್ತಾರೆ.

ಈ ದೇವಿಯ ಹಬ್ಬವನ್ನು ಪ್ರತಿವರ್ಷ ಮಾರ್ಚಿ ತಿಂಗಳಿನಲ್ಲಿ ವಿಶೇಷ ರೀತಿಯಲ್ಲಿ ಆಚರಿಸುತ್ತಾರೆ. ಮಂಗಳವಾರದಂದು ರಾತ್ರಿ ೧೦ ಗಂಟೆಗೆ ರಾಜದೀವಿಗೆಯೊಂದಿಗೆ ಹಬ್ಬ ಪ್ರಾರಂಭವಾಗುತ್ತದೆ. ಇದರೊಂದಿಗೆ ಪಾನಕದಗಾಡಿಯೊಂದಿಗೆ ಕಾಳಮ್ಮ, ಮಾರಮ್ಮ, ಪಟಾಲದಮ್ಮ, ಮುದ್ದಮ್ಮ, ರಾಮದೇವರು ಈ ದೇವತೆಗಳ ಪೂಜಾಕುಣಿತವಿರುತ್ತದೆ. ಮಾರನೆಯ ದಿನ ಮುಂಜಾನೆ ದೂಳು ಮರಿಯನ್ನು ಕಡಿಯುತ್ತಾರೆ. ಗಂಗಾಮತಸ್ಥ ಸಮುದಾಯದ ಪ್ರತಿ ಕುಟುಂಬದವರು ಕಾಳಮ್ಮನ ಗುಡಿಯ ಸುತ್ತಲು ಒಲೆಗಳನ್ನು ಹಾಕಿರುತ್ತಾರೆ. ಆ ದೂಳು ಮರಿಯ ಮಾಂಸವೆನ್ನು ಅವರೆಲ್ಲರು ಹಂಚಿಕೊಂಡು ಅಲ್ಲಿಯೇ ಅಡುಗೆ ಮಾಡಿ ಊಟ ಮಾಡುತ್ತಾರೆ.

## ಮಾರಮ್ಮನ ಹಬ್ಬ

ಗಂಗಾಮತಸ್ಥರಿರುವ ಪ್ರತಿ ಗ್ರಾಮದಲ್ಲೂ ಮಾರಮ್ಮನ ಹಬ್ಬವನ್ನು ಬೇರೆ ಬೇರೆ ಹೆಸರಿನಿಂದ ಆಚರಿಸುತ್ತಾರೆ. ದಂಡಿನ ಮಾರಮ್ಮ, ಊರು ಮಾರಮ್ಮ, ಉಕ್ಕಡದ ಮಾರಮ್ಮ, ಪಟಾಲದಮ್ಮ, ಹುಲಿಯೂರು ದುರ್ಗಿ ಮಾರಮ್ಮ ಹೀಗೆ ವಿವಿಧ ಹೆಸರುಗಳಿಂದ ಹಬ್ಬವನ್ನು ಆಚರಿಸುವುದುಂಟು. ಈ ಹಬ್ಬವನ್ನೆ ಊರು ಮಾರಿ-ನಾಡುಮಾರಿ ಎಂಬುದಾಗಿ ಆಚರಿಸುತ್ತಾರೆ. ಈ ಹಬ್ಬದಲ್ಲಿ ಸಾಮಾನ್ಯವಾಗಿ ಮೊಸರುಅನ್ನ, ಪಾನಕ, ಬೇವಿನಸೊಪ್ಪು ಇವುಗಳಿಂದ ನೈವೇದ್ಯ ಮಾಡಿ ಪೂಜೆಸಲ್ಲಿಸುತ್ತಾರೆ. ಮಾರ್ಚ್-ಏಪ್ರಿಲ್ ತಿಂಗಳಲ್ಲಿ ಹಬ್ಬವನ್ನು ಮಾಡುತ್ತಾರೆ. ಹಬ್ಬದ ಉದ್ದೇಶವೆಂದರೆ ಬೇಸಿಗೆಯಲ್ಲಿ ಹಲವಾರು ರೋಗಗಳು ಬರುತ್ತವೆ. ಅದರಲ್ಲೂ ಬಿಸಿಲಿನ ತಾಪಕ್ಕೆ ಮಕ್ಕಳುಗಳಿಗೆ ತೊಂದರೆಯಾಗುವುದುಂಟು. ಯಾರಿಗೂ ತೊಂದರೆಯಾಗದಿರಲಿ, ರೋಗ ರುಜಿನಗಳು ಬರದಿರಲಿ ಎಂಬ ಭಾವನೆಯಿಂದ ಮಾರಮ್ಮನ ಹಬ್ಬವನ್ನು ಆಚರಿಸುತ್ತಾರೆ. ಮಾರಿ ಎಂದರೆ ಕೆಟ್ಟವಳು ಈ ಕೆಟ್ಟವಳನ್ನು ಓಡಿಸುವ ಅಮ್ಮನೇ ಮಾರಮ್ಮ.

ಗಂಜಾಂನಲ್ಲಿ ಮಾರಮ್ಮನ ಹಬ್ಬದ ದಿನದಂದು ಹೊಳೆಯಿಂದ ಕರಗವನ್ನು ತಂದು ಮಾರಮ್ಮನ ಕಲ್ಲು ಕಟ್ಟೆಯ ಮೇಲೆ ಇಡುತ್ತಾರೆ. ಈಕೆಗೆ ಬೆಳ್ಳಿಯಚೊಂಬು, ಬೆಳ್ಳಿ ಛತ್ರಿ, ಬೆಳ್ಳಿಕಣ್ಣು, ಬೆಳ್ಳಿ ಬಾಯಿ, ಚಿನ್ನದ ತಾಳಿ ಇವುಗಳಿಂದ ಮಾರಮ್ಮನಿಗೆ ಅಲಂಕಾರ ಮಾಡಿರುತ್ತಾರೆ. ಈ ದೇವಿಯ ಮುಂದೆ ಎಳನೀರಿನ ದೀಪವನ್ನು ಹಚ್ಚುತ್ತಾರೆ. ಕುಲದವರೆಲ್ಲಾ ವರಿವಟವನ್ನು (ಶುಲ್ಕ) ಕೊಡಬೇಕು. ತೆಂಬಟ್ಟಿನ ಆರತಿಯಿಂದ ಎಲ್ಲರೂ ಪೂಜಿಸಿದ ನಂತರ ನಾಲ್ಕು ಮೂಲೆಯಲ್ಲೂ ಮರಿಯನ್ನು ಕತ್ತರಿಸಲಾಗುವುದು. ಹಬ್ಬ ಒಂದು ವಾರಕ್ಕೆ ಮೊದಲೇ ಊರಿನಲ್ಲಿ ಸಾರುತ್ತಾರೆ. ಆ ನಂತರ ಯಾರು ಕೂಡ 'ಕರಕಲು' ಹಾಕಬಾರದು. ಮರಿ ಮಾಂಸವನ್ನು ಎಲ್ಲರು ಹಂಚಿಕೊಳ್ಳುತ್ತಾರೆ. ನಂತರ ಅದರಿಂದ ಅಡುಗೆ ಮಾಡಿ, ಮಾರಮ್ಮನಿಗೆ ಎಡೆ ಕೊಡಬೇಕು. ಈ ಸಂದರ್ಭದಲ್ಲಿ ಹಣ್ಣು, ಜವನ, ಸೌತೆಕಾಯಿ ಚೂರನ್ನು ಮಾರಮ್ಮನ ಮೇಲೆ ಎಸೆಯುತ್ತಾರೆ. ಇದರಿಂದ ಮಾರಮ್ಮನಿಗೆ ತಂಪು ಆಗುತ್ತದೆ. ಆಗ ಮಾರಮ್ಮ ನಮಗೆ ಒಳ್ಳೆಯದು ಮಾಡುತ್ತಾಳೆ ಎಂಬ ನಂಬಿಕೆ.

ಊರುಮಾರಿ-ನಾಡಮಾರಿ ಹಬ್ಬದಂದು ಎರಡು ದೇವರಿಗೂ ಬಲಿ ನೀಡಿದ ಮರಿಗಳನ್ನು ಕುಲದ ಯಜಮಾನನ ಸಮ್ಮುಖದಲ್ಲಿ ಮಾಂಸವನ್ನು ಪಾಲು ಮಾಡಿಕೊಳ್ಳುತ್ತಾರೆ. ಇದರಿಂದ ಅಡುಗೆ ಮಾಡಿ ಊರು ಮಾರಿಗೆ ಮಾಂಸದೂಟವನ್ನು ಚಿಕ್ಕಯಜಮಾನನಲ್ಲಿ ಕೊಡುತ್ತಾರೆ. ಅದನ್ನೆಲ್ಲಾ ಸಂಗ್ರಹಿಸಿ ರಾತ್ರಿ ೧೨ ಗಂಟೆಯ ನಂತರ ಆ ಊರುಮಾರಿ ದೇವರ ಸಹಿತ, ಆ

ಗ್ರಾಮದ ಎಲ್ಲೆಯನ್ನು ಬಿಟ್ಟು ದೇವರನ್ನು ಇಟ್ಟು, ಆದ ಊಟವನ್ನು ಮಾಡಿ, ಮಾರಿಯನ್ನು ಅಲ್ಲಿಯೇ ಬಿಟ್ಟು ಬರುತ್ತಾರೆ. ಇದೇನೆಂದರೆ ನಮ್ಮ ಊರಿನಲ್ಲಿರುವ ಕೆಟ್ಟದೆಲ್ಲಾ ಬೇರೆ ಊರಿಗೆ ಹೋಗಿ, ನಮ್ಮ ಗ್ರಾಮಕ್ಕೆ ಶುಭವಾಗಲಿ ಎಂಬುದಾಗಿದೆ.

**ಕೊಂಡದಮ್ಮ ಹಬ್ಬ**

ಗಂಗಾಮತಸ್ಥರ ಪವಿತ್ರವಾದ ಹಬ್ಬಗಳಲ್ಲಿ ಕೊಂಡದಮ್ಮನ ಹಬ್ಬವು ಕೂಡ ಒಂದಾಗಿದೆ. ಇವರು ಕಾಡಿಗೆ ಬೇಟೆಯಾಡಲು ಹೋದ ಸಂದರ್ಭದಲ್ಲಿ ರಕ್ಷಣೆ ನೀಡುವ ದೇವತೆ ಕೊಂಡದಮ್ಮ. ಆದುದ್ದರಿಂದಲೇ ಕಾಡಿನಲ್ಲೇ ಕೊಂಡದಮ್ಮನ ಹಬ್ಬವನ್ನು ಆಚರಿಸುತ್ತಾರೆ. ಮಳೆಗಾಲದಲ್ಲಿ ಶುಕ್ರವಾರದಂದು ಈ ಹಬ್ಬವನ್ನು ಆಚರಿಸುತ್ತಾರೆ. ಹಬ್ಬದ ಹಿಂದಿನ ದಿನ ಹಲವರು ರಾತ್ರಿಯ ವೇಳೆಯಲ್ಲಿ ಬೇಟೆಗೆ ಹೋಗಿರುತ್ತಾರೆ. ಬೇಟೆಯಿಂದ ದೊರೆತ ಪ್ರಾಣಿಗಳ ಮಾಂಸದ ಅಡುಗೆಯನ್ನು ಮಾಡಿ, ಒಂದು ಮರದ ತಡದಲ್ಲಿ ಕಲ್ಲಿನಿಂದ ಕೊಂಡದಮ್ಮನನ್ನು ಪ್ರತಿಷ್ಠಾಪಿಸಿ, ಅದರ ಪಕ್ಕದಲ್ಲಿ ಬೇಟೆಗೆ ಬಳಸುವ ಬಲೆ, ತುಪಾಕಿ, ಉಳ್ಳು ಮೊದಲಾದವುಗಳನ್ನು ಸಹ ಇಡುತ್ತಾರೆ. ಆ ಆಹಾರವನ್ನು ದೇವರಿಗೆ ನೈವೇದ್ಯ ತೋರಿಸಿ, ನಂತರ ಅವರೆಲ್ಲರೂ ಊಟ ಮಾಡುತ್ತಾರೆ. ಈ ದೇವತೆ ಯಾವಾಗಲೂ ಇವರನ್ನ ಕಾಯುತ್ತಿರುತ್ತಾಳೆ ಎಂದು ಹೇಳುತ್ತಾರೆ”.[೩೫]

ಹೀಗೆ ಗಂಗಾಮತಸ್ಥರು ಹಲವಾರು ಹಬ್ಬಗಳನ್ನ ತಮ್ಮ ಹಿಂದಿನ ಸಂಪ್ರದಾಯದಂತೆ, ವಿಶೇಷ ರೀತಿಯಲ್ಲಿ ಇಂದಿಗೂ ಆಚರಿಸುತ್ತಾರೆ. ಇಂಥ ಹಬ್ಬಗಳು ಇವರಿಗೆ ಸಂತೋಷವನ್ನು ಕೊಡುವುದರೊಂದಿಗೆ ಅವರ ಮಾನಸಿಕ ಆರೋಗ್ಯ ವೃದ್ಧಿಗೆ ಕಾರಣವಾಗಿವೆ. ಬಹುಶಃ ಪ್ರತಿಯೊಂದು ಗ್ರಾಮಗಳಲ್ಲೂ ಒಂದೊಂದು ಹೆಸರಿನಿಂದ, ಒಂದೇ ರೀತಿಯ ಉದ್ದೇಶವನ್ನು ಇಟ್ಟುಕೊಂಡು ಹಬ್ಬಗಳನ್ನು ಆಚರಿಸುತ್ತಾರೆ. ಇವು ಅವರ ಸಂಸ್ಕೃತಿಯ ಪ್ರತೀಕವು ಹಾಗೂ ಕಾಯಕ ಮಾಡಲು ಶಕ್ತಿ ಕೊಡುವ ಹಬ್ಬಗಳಾಗಿವೆ.

**ಜಾತ್ರೆಗಳು**

ಜಾತ್ರೆಗಳು ಮನುಷ್ಯನ ಸೃಜನಶೀಲತೆಯನ್ನ ಅಭಿವೃದ್ಧಿಪಡಿಸಿ, ಆಸಕ್ತಿಯನ್ನು ಕೆರಳಿಸುತ್ತವೆ. ಗ್ರಾಮದೇವತೆಗಳ ಹಬ್ಬದೊಡನೆ ಜಾತ್ರೆಯೂ ಆಚರಿಸಲ್ಪಡುತ್ತವೆ. ಧಾರ್ಮಿಕ ಸಂಘಟನೆಯಲ್ಲಿ ಕಾಲಕ್ರಮೇಣ ಸಾಂಸ್ಕೃತಿಕವಾಗಿ ಕಲಾಪ್ರದರ್ಶನ ಪ್ರಾರಂಭವಾಯಿತು. ಗ್ರಾಮೀಣ ಜನತೆಗೆ ಮನರಂಜನೆಯನ್ನೊದಗಿಸುವ ಮಾಧ್ಯಮವಾಗಿ ಜಾತ್ರೆಗಳಿವೆ. ದುಡಿಮೆಯೇ ದೇವರೆಂದು ನಂಬಿರುವ ಮಣ್ಣಿನ ಮಕ್ಕಳಿಗೆ ಜಾತ್ರೆಗಳು ಮನರಂಜನೆ ನೀಡಿ ದುಡಿದ ಮನಕ್ಕೆ ಮುದ

ನೀಡುತ್ತವೆ. ಜನಪದ ಕಲಾವಿದರು ತಮ್ಮ ಕಲೆಗಳಿಂದ ಮಾಡಿಕೊಂಡಿರುವ ಕಲಾವಿದರು ಜನತೆಯ ಮನಸ್ಸನ್ನು ರಂಜಿಸುವುದರ ಜೊತೆಗೆ, ದೈವತೆಯ ಮಹಿಮೆಯನ್ನು ತೋರಿಸುವುದು ಕೂಡ ಜಾತ್ರೆಗಳ ಗುಣವಾಗಿದೆ.

ಹಬ್ಬಗಳು ಮತ್ತು ಜಾತ್ರೆಗಳು ಒಂದಕ್ಕೊಂದು ಪೂರಕವಾದವು. “ಈ ಜಾತ್ರೆಗಳು ನಮ್ಮ ನಾಡಿನಲ್ಲಿ ಜರುಗುವ ಸ್ಥಳದ ಹೆಸರಿನಿಂದ ಅಥವಾ ಅಲ್ಲಿಯ ದೈವದ ಹೆಸರಿನಿಂದ ಜನಪ್ರಿಯವಾಗಿರುವುದುಂಟು. ಜಾತ್ರೆಗಳು ಸಮಸ್ತ ಸಾಮಾಜಿಕ ಪರಂಪರೆಯ ಅಭಿವ್ಯಕ್ತಿಯಾಗಿರುವ ಜಾನಪದದ ಅನೇಕ ಅಂಶಗಳನ್ನು ಒಳಗೊಂಡಿರುವಂಥವು. ಜಾತ್ರೆಗಳು ಜನತೆಯಲ್ಲಿ ಉತ್ಸಾಹವನ್ನು ಉಕ್ಕಿಸುತ್ತವೆ; ಮನರಂಜನೆ ನೀಡುತ್ತವೆ. ಇವು ಬದುಕಿನ ಬಾಂಧವ್ಯವನ್ನು ಬೆಸೆಯುತ್ತವೆ. ಜೀವನ ಸಂಗಾತಿಯನ್ನು ಆರಿಸಿಕೊಳ್ಳುವ ಸದವಕಾಶವನ್ನು ನೀಡುತ್ತವೆ”.[೩೬] ಜಾತ್ರೆಗಳು ಬದುಕಿನ ಭಾಗವಾಗಿ, ಧಾರ್ಮಿಕತೆಯ ಮೌಲ್ಯವನ್ನು ಮೂಡಿಸುವ, ಭಾವನೆಗಳನ್ನು ಉದ್ದೀಪಿಸುವ ಕೆಲಸವನ್ನು ಮಾಡುತ್ತವೆ. ನಮ್ಮ ಕಲೆಯನ್ನು ವೃದ್ಧಿಸುವ ನೋಡುಗರಿಗೆ ಮೈರೋಮಾಂಚನಗೊಳಿಸುವ ಶಕ್ತಿ ಜಾತ್ರೆಗಳಿಗಿವೆ. ಈ ಹಿನ್ನಲೆಯಲ್ಲಿ ಜಿಲ್ಲೆಯಲ್ಲಿರುವ ಗಂಗಾಮತಸ್ಥರು ಸಾಂಸ್ಕೃತಿಕವಾದ ಕಲೆಗಳನ್ನು ಕಲಿತು, ಅವುಗಳನ್ನ ಜಾತ್ರೆಗಳಲ್ಲಿ ಪ್ರದರ್ಶಿಸುವ ಮೂಲಕ ಜಿಲ್ಲೆಯಲ್ಲಿ ಬೇರೆ ಸಮುದಾಯದವರಿಗಿಂತ ವಿಶೇಷವಾಗಿದ್ದಾರೆ. ಕೆಲವೊಂದು ಜಾತ್ರೆಗಳು ಇವರಿಂದಲೇ ಪ್ರಾರಂಭವಾಗುವುದಲ್ಲದೆ, ಇವರ ಉಪಸ್ಥಿತಿ ಇಲ್ಲದಿದ್ದರೆ ಆ ಜಾತ್ರೆಗಳೇ ನಡೆಯುವುದಿಲ್ಲ.

### ಅರ್ಕೇಶ್ವರನ ಜಾತ್ರೆ

ಮಂಡ್ಯ ಪಟ್ಟಣದ ಗುತ್ತಲಿನಲ್ಲಿರುವ ಅರ್ಕೇಶ್ವರನ ಜಾತ್ರೆ ಫೆಬ್ರವರಿಯಲ್ಲಿ ಕಾಮನ ಹುಣ್ಣಿಮೆಯ ದಿನ ನಡೆಯುತ್ತದೆ. ಜಾತ್ರೆಯ ದಿವಸ ತೇರು ಎಳೆಯುತ್ತಾರೆ. ಎಲ್ಲಾ ಸಮುದಾಯದವರು ಜಾತ್ರೆಯಲ್ಲಿ ಭಾಗವಹಿಸುವುದಾದರೂ ಗಂಗಾಮತಸ್ಥರು ಜಾತ್ರೆಯಲ್ಲಿ ಪ್ರಮುಖರಾಗಿದ್ದಾರೆ. ಅರ್ಕೇಶ್ವರನ ತೇರಾದ ಮೂರನೇ ದಿನ ರಾತ್ರಿ ಹೂವಿನ ಪಲ್ಲಕ್ಕಿ ಉತ್ಸವ ನಡೆಯುತ್ತದೆ. ಪಲ್ಲಕ್ಕಿಗೆ ಬಾಳೆದಿಂಡಿನ ಹಾಳೆಗಳನ್ನು ಹರಿದು ಕಟ್ಟಿ ಬಾಳೆಪಟ್ಟಿಯ ಮೇಲೆ ಹೂವುಗಳಿಂದ ಅಲಂಕಾರ ಮಾಡುತ್ತಾರೆ. ಪಲ್ಲಕ್ಕಿಗೆ ಮತ್ತು ದೇವರಿಗೆ ಹೂವಿನಿಂದ ಅಲಂಕಾರ ಮಾಡುವವರು ಗಂಗಾಮತಸ್ಥರಾಗಿದ್ದಾರೆ. ಹೂವಿನ ಬೆಳೆಯನ್ನ ಬೆಳೆಯುವುದರಿಂದ ಹಿಡಿದು ಹೂವುಗಳನ್ನು ಅಂದವಾಗಿ ಕಟ್ಟಿ ಮಾರಾಟ ಮಾಡುವವರು ಜಿಲ್ಲೆಯಲ್ಲಿ ಇವರೇ ಆಗಿರುವುದರಿಂದಲೇ ಬಹುಶಃ ಹೂವಿನ ಅಲಂಕಾರದಲ್ಲಿ ಪ್ರಮುಖರಾಗಿದ್ದಾರೆ. ಗಂಗಾಮತಸ್ಥರು

ಇರುವ ಗ್ರಾಮಗಳಲ್ಲಿ ನಡೆಯುವ ಎಲ್ಲಾ ಜಾತ್ರೆಗಳಲ್ಲಿ, ಹಬ್ಬಗಳಲ್ಲಿ ಧ್ವಜ ಕಂಬಕ್ಕೆ, ಪೂಜಾ ಪಟಕ್ಕೆ ಹೂವಿನಿಂದ ಅಲಂಕರಿಸಿರುವವರು ಗಂಗಾಮತಸ್ಥರೇ ಆಗಿದ್ದಾರೆ.

## ಪಟ್ಟಲದಮ್ಮನ ಜಾತ್ರೆ

ಮಂಡ್ಯ ತಾಲ್ಲೂಕಿನ ಬಸರಾಳು ಗ್ರಾಮದಲ್ಲಿ ಪಟ್ಟಲದಮ್ಮನ ಜಾತ್ರೆ ನಡೆಯುತ್ತದೆ. ಈ ದೇವಿಯ ಪೂಜಾರಿ ಗಂಗಾಮತಸ್ಥ ಸಮುದಾಯದವನೆ ಆಗಿದ್ದಾನೆ. ದೇವಸ್ಥಾನವು ಕಲ್ಲುಕಟ್ಟಡದ್ದು. ಈ ದೇವಿಗೆ ಕೊಂಡದ ಜಾತ್ರೆ ಫೆಬ್ರವರಿ ಕೊನೆಯ ವಾರದಲ್ಲಿ ನಡೆಯುತ್ತದೆ. ಮಡೆ, ಆರತಿ ಸೇವೆಯನ್ನು ಈ ದೇವಿಗೆ ಮಾಡಲಾಗುತ್ತದೆ. ಕೊಂಡವನ್ನು ಪೂಜಾರಿ ಹಾಯುತ್ತಾನೆ. ಕೊಂಡದ ನಂತರ ಭೈರವೇಶ್ವರನ ಧ್ವಜ ಕಂಬ ಪಟ್ಟಲದಮ್ಮ ಪೂಜೆಯನ್ನು ಗ್ರಾಮದಲ್ಲಿ ಮೆರವಣಿಗೆಯನ್ನು ಮಾಡುತ್ತಾರೆ. ಚಕ್ರಾದಿಬಳೆಗಳು ಕೂಡ ಈ ದೇವಾಲಯದಲ್ಲಿದ್ದು, ಅವುಗಳನ್ನ ಗಂಗಾಮತಸ್ಥರು ಬಡಿಯುತ್ತಾರೆ. ದೇವಸ್ಥಾನದ ಪೂರ್ಣ ಜವಾಬ್ದಾರಿಯೇ ಗಂಗಾಮತಸ್ಥರದು.

## ಕೊತ್ತತ್ತಿ ಬೋರೇದೇವರ ಜಾತ್ರೆ

ಪ್ರತಿವರ್ಷ ಏಪ್ರಿಲ್ ತಿಂಗಳಲ್ಲಿ ನಡೆಯುವ ಜಾತ್ರೆ. ಈ ಜಾತ್ರೆಯಲ್ಲಿ ಎಲ್ಲಾ ಸಮುದಾಯದವರು ಪಾಲ್ಗೊಂಡರೂ ಕೂಡ, ಗಂಗಾಮತಸ್ಥರದು ಪ್ರಮುಖವಾದ ಪಾತ್ರ. ದೇವರಿಗೆ ಹೂವಿನ ಅಲಂಕಾರ ಮಾಡುವರು. ಅಲ್ಲದೆ ಪಂಜಿನ ಸೇವೆಯನ್ನು ಇವರೇ ಮಾಡುತ್ತಾರೆ. ಗಂಗಾಮತಸ್ಥ ಜನಾಂಗಕ್ಕೆ ಸೇರಿದ ವೀರ ಮಕ್ಕಳ ಕುಣಿತದೊಂದಿಗೆ ಎರಡು ಬಂಡಿಗಳೂ ಬೋರೇದೇವರ ಗುಡಿಗೆ ಬರುತ್ತವೆ. ಭಾನುವಾರ ಮಧ್ಯರಾತ್ರಿಯಲ್ಲಿ ಬೋರೇದೇವರ ಗುಡಿಯ ಕೊಳದಲ್ಲಿ ಊರಿನ ಹೆಂಗಸರು ಮೀಸಲು ನೀರು ತರುತ್ತಾರೆ. ರಂಗದ ಕುಣಿತ ಆರಂಭವಾಗುತ್ತದೆ. ರಂಗದ ಕುಣಿತದಲ್ಲಿ ಪ್ರಮುಖ ಪಾತ್ರ ಬೆಸ್ತರದೆ. .ಈ ಜನಾಂಗಕ್ಕೆ ಸೇರಿದ ಹೆಂಗಸರು ರಂಗ ಕುಣಿತವನ್ನು ಅನುಸರಿಸಿಕೊಂಡು ಹಾಡು ಹಾಡುತ್ತಾರೆ.

"ಕರಿಯ ನೇರಳೆ ಮರಕ್ಕೆ ಕಲ್ಲು ಇಟ್ಟವನ್ಯಾರೊ
ಗುಂಪು ನೋಡಿ ಇಟ್ಟ ಗುರಿಕಾರ । ಮಾರವ್ವ
ನಿನ್ನ ವೀರ ಮಗ ಕೆಂಪು ನೋಡಿ ಇಟ್ಟ ಹವಳಾವ"[೩೭]

ಎಂದು ಹಾಡುತ್ತಾರೆ. ಊರಿನವರೆಲ್ಲಾ ಕೊಂಡಕ್ಕೆ ಸೌದೆ ತಂದು ಹಾಕುತ್ತಾರೆ. ಬೆಳಗಿನ ಜಾವ ಬೋರೇದೇವರ ಪೂಜಾಪಟವನ್ನು ಗಂಗಾಮತಸ್ಥರು ಹೂ ಹೊಂಬಾಳೆಯಿಂದ ಅಲಂಕರಿಸಿ, ಬಾಯಿ ಬೀಗದವರೊಡನೆ ಪೂಜೆ ಹೊತ್ತು ಊರಿನಲ್ಲಿ ಮೆರವಣಿಗೆ ಮಾಡುತ್ತಾರೆ.

## ಅರಕೆರೆ ಮಾರಮ್ಮನ ಜಾತ್ರೆ

ಅರಕೆರೆ ಬಿಸಿಲು ಮಾರಮ್ಮನ ಹಬ್ಬದಲ್ಲಿ ಅತ್ಯಂತ ಪ್ರಮುಖ ಪಾತ್ರವನ್ನು ದಿಮ್ಮಸಾಲೆ ವಹಿಸುತ್ತಾನೆ. ದಿಮ್ಮ ಸಾಲೆ ಬೆಸ್ತರವನು. ದಿಮ್ಮಸಾಲೆ ಮನರಂಜಿಸುವವನಾಗಿದ್ದಾನೆ. ಮಾರಮ್ಮನ ಹಬ್ಬದಲ್ಲಿ ದಿಮ್ಮಸಾಲೆ ಹಲವು ಸಂಗತಿಗಳಿಗೆ ಸಾಂಕೇತಿಕವಾಗಿದ್ದಾನೆ. ದಿಮ್ಮಸಾಲೆ ಮಾರಮ್ಮನ ಗಂಡ ಈತನ ಕಡೆಯುವವರು ಮಾಲೆಮರದ ತಳದಲ್ಲಿ ಬಲಿಬೀಳುತ್ತಾರೆ. ದಿಮ್ಮಸಾಲೆ ಮತ್ತು ಬಲಿ ಬೀಳುವವರು ಬೆಸ್ತ ಜನಾಂಗದವರು. ಬಲಿ ಬೀಳುವ ಬೆಸ್ತರು ವೀರಭದ್ರನ ಮುಖವಾಡವನ್ನು ಸೊಂಟಕ್ಕೆ ಕಟ್ಟಿರುತ್ತಾರೆ. ಈ ವೀರಭದ್ರ ರಾಜಕುಮಾರನಂತೆ. ಈ ರಾಜಕುಮಾರನನ್ನು ಮಲತಾಯಿ ಬಲಿ ತೆಗೆದುಕೊಂಡವಳು.

ದಿಮ್ಮಸಾಲೆಯ ಉಡುಪು ಹೇಗಿರುತ್ತದೆಂದರೆ ಮಂಡಿಯವರೆಗೆ ಕಚ್ಚೆ ಹಾಕುತ್ತಾನೆ. ಕೊರಳಿಗೆ ಹಸಿ ಅಡಿಕೆಕಾಯಿನ ಸರ ಹಾಕ್ತಾನೆ. ತಲೆಗೆ ಕೋಡಂಗಿ ಟೋಪಿ ಧರಿಸುತ್ತಾನೆ. ಕೈಲಿ ಎದೆ ಮಟ್ಟದ ದೊಣ್ಣೆ ಹಿಡಿದಿರುತ್ತಾನೆ. ದೊಣ್ಣೆಗೆ ಗೆಜ್ಜೆ ಸರವಿರುತ್ತದೆ. ದೊಣ್ಣೆಗೆ ಹಿಡಿಯ ಭಾಗದಲ್ಲಿ ಬಣ್ಣ ಬಣ್ಣದ ಬಟ್ಟೆ ಕಟ್ಟಿರುತ್ತಾನೆ. ದಿಮ್ಮಸಾಲೆಯು ಹಬ್ಬ ಆರಂಭದ ಹಿಂದಿನ ದಿನ ರಾತ್ರಿ ರಕ್ತಕೂಳನ್ನು ಊರಿನ ಬೀದಿಗಳಲ್ಲಿ ರಾತ್ರಿ ಹಾಕುತ್ತಾನೆ. ರಕ್ತ ಕೂಳು ಹಾಕಿದ ಮೇಲೆ ಊರಿನಲ್ಲಿ ಮಾಂಸ ನಿಷಿದ್ಧ. ನಂತರ ಈತ ಅರಕೆರೆ ಸುತ್ತಮುತ್ತಲಿನ ಇಪ್ಪತ್ತನಾಲ್ಕು ಹಳ್ಳಿಗಳಿಂದ ಕಾಣಿಕೆ ಪಡೆಯುವ ಹಕ್ಕು ದಿಮ್ಮಸಾಲೆಗೆ ಇದೆ. ಈತ ಮಾರಮ್ಮನ ಗಂಡ ಎಂಬ ನಂಬಿಕೆ ಭಕ್ತರಿಗಿರುವುದರಿಂದ ಮಾರಮ್ಮನಿಗೆ ಕಟ್ಟಿಕೊಂಡಿರುವ ಹರಕೆ ಹಣವನ್ನು ಈತನಿಗೆ ಒಪ್ಪಿಸುತ್ತಾರೆ. ಮಾರಮ್ಮನ ಹಬ್ಬ ಹದಿನೈದು ದಿನವಿರುವಾಗಲೇ ಈತ ಹಳ್ಳಿಗಳಿಗೆ ಧಾರ್ಮಿಕ ಭಿಕ್ಷೆಗಾಗಿ ಹೋಗುತ್ತಾನೆ.

ದಿಮ್ಮಸಾಲೆ ಧಾರ್ಮಿಕ ಭಿಕ್ಷುವಾಗಿ ೨೪ ಹಳ್ಳಿಗಳಲ್ಲಿ ಭಿಕ್ಷಾಟನೆಗಾಗಿ ಹೋಗುತ್ತಾನೆ. ಕಾಣಿಕೆ ಪಡೆಯುತ್ತಾನೆ. ಈತ ಮೇಲೆ ಹೇಳಿದ ವೇಷಭೂಷಣದ ಜೊತೆಗೆ ವಿಶೇಷ ಅಂಗವನ್ನು ಧರಿಸುತ್ತಾನೆ. ಅದು ಮರದ ಶಿಶ್ನ. ಇದನ್ನು ಸೊಂಟಕ್ಕೆ ಕಟ್ಟಿಕೊಳ್ಳುತ್ತಾನೆ. ಇದು ಎಲ್ಲರಿಗೂ ಕಾಣುವಂತಿರುತ್ತದೆ. ಮರದ ಶಿಶ್ನದ ಮುಂಭಾಗಕ್ಕೆ ಬೆಳ್ಳಿಕಟ್ಟನ್ನು ಹಾಕಿರುತ್ತಾನೆ. ಮರದ ಶಿಶ್ನಕ್ಕೂ ಕಾಲಿನ ಹೆಬ್ಬೆರಳಿಗೂ ದಾರ ಕಟ್ಟಿ ಮರದ ಶಿಶ್ನವನ್ನು ಕುಣಿಸುತ್ತಾನೆ. ಮರದ ಶಿಶ್ನವನ್ನು ಬಣ್ಣದ

ಬಟ್ಟೆಯಿಂದ ಮರೆ ಮಾಡಿರುತ್ತಾನೆ. ಸಾಮಾನ್ಯವಾಗಿ ಕೆಂಪು ಬಣ್ಣದ ಬಟ್ಟೆ ಅದಾಗಿರುತ್ತದೆ. ಮರದ ಶಿಶ್ನಾರಾಧನೆ ವಿಶಿಷ್ಟವಾಗಿದೆ".[೩೮]

## ಗಾಮನಹಳ್ಳಿಯ ಬೋರೇದೇವರ ಜಾತ್ರೆ

ಶ್ರೀರಂಗಪಟ್ಟಣ ತಾಲ್ಲೂಕಿನ ಗಾಮನಹಳ್ಳಿಯ ಬೋರೇದೇವರ ಜಾತ್ರೆ ಫೆಬ್ರವರಿ ತಿಂಗಳಲ್ಲಿ ನಡೆಯುತ್ತದೆ. ಒಂದು ವಾರ ಮುಂಚಿತವಾಗಿ 'ಕೊಂಡ' ಮಾಡುವ ಬಗ್ಗೆ ಸಾರಲಾಗುವುದು. ಯಾರು ಕರಕಲನ್ನು ಹಾಕಬಾರದು. ಬೋರೇದೇವರ ಜಾತ್ರೆಯು ಜಿಲ್ಲೆಯಲ್ಲೇ ಗಂಗಾಮತಸ್ಥರು ಆಚರಿಸುವ ಜಾತ್ರೆಗಳಲ್ಲೇ ವಿಶಿಷ್ಟವಾಗಿದೆ. ಭಾನುವಾರ ಗ್ರಾಮದವರೆಲ್ಲಾ ಗಾಡಿಕಟ್ಟಿಕೊಂಡು ಸೌದೆ (ಕೊಂಟು) ತುಂಬಿಕೊಂಡು ಬರುತ್ತಾರೆ. ನಂತರ ಮಧ್ಯರಾತ್ರಿ ಸೋಮವಾರ ಕೊಂಡಕ್ಕೆ ಬೆಂಕಿಯನ್ನು ಹಾಕಲಾಗುತ್ತದೆ. ಬೆಳಗ್ಗೆ ೭.೩೦ ಗಂಟೆಗೆ ಹೊನ್ನಾರತಿ ಗುಡ್ಡ ಕೊಂಡ ಹಾಯುತ್ತಾನೆ. ಕೊಂಡದ ನಂತರ ಎಲ್ಲಾ ಗಂಗಾಮತಸ್ಥರು ಮನೆಯಲ್ಲಿ ದೋಸೆ ಮಾಡಿಕೊಂಡು, ಹೂವು, ಹಣ್ಣು, ಕಾಯಿ, ಕರ್ಪೂರ, ಗಂಧದ ಕಡ್ಡಿಯ ಜೊತೆಗೆ ಬಂದು ಬೋರೇದೇವರಿಗೆ ಪೂಜೆ ಮಾಡಿಸುತ್ತಾರೆ. ಪ್ರತಿಯೊಬ್ಬರು ಒಂದೊಂದು ದೋಸೆಯನ್ನು ದೇವರಿಗೆ ಅರ್ಪಿಸುತ್ತಾರೆ. ಇದನ್ನು "ದೋಸೆ ಪರಸೆ" ಎಂದು ಕರೆಯುತ್ತಾರೆ. ಬೋರೇದೇವರ ಜಾತ್ರೆಗೆ ಸಂಬಂಧಿಸಿದಂತೆ ಎಲ್ಲಾ ಕೆಲಸಗಳನ್ನು ಮಾಡುವವರು ಗಂಗಾಮತಸ್ಥರೇ ಆಗಿದ್ದಾರೆ. ಅಲ್ಲದೆ ಅವರಿಗೆ ಸಂಬಂಧಿಸಿದ ವಿಶೇಷವಾದ ಆಚರಣೆಯು ಇದಾಗಿದೆ.

## ಸಿಡಿ

ಮಂಡ್ಯ ಜಿಲ್ಲೆಯಲ್ಲಿ ನಡೆಯುವ ಸಿಡಿಯಲ್ಲಿ ಗಂಗಾಮತಸ್ಥರದೇ ಪ್ರಮುಖಪಾತ್ರ. ಇಲ್ಲಿ ನಡೆಯುವಂತಹ ಸಿಡಿ ಹಬ್ಬಗಳಲ್ಲಿ "ಸಿಡಿ ಏರುವವನು ಸಾಮಾನ್ಯವಾಗಿ ಬೆಸ್ತರವನಾಗಿರುತ್ತಾನೆ"[೩೯] ಸಿಡಿ ಹಬ್ಬವನ್ನು ಮತ್ತು ಜಾತ್ರೆಯನ್ನು ಜಿಲ್ಲೆಯ ಕೆಲವು ಪ್ರದೇಶಗಳನ್ನ ಹೊರತುಪಡಿಸಿದರೆ, ಉಳಿದಂತೆ ಎಲ್ಲಾ ಕಡೆಗಳಲ್ಲೂ ಮಾಡುತ್ತಾರೆ. ಇಲ್ಲಿ ಕೆಲವು ಪ್ರಮುಖವಾದ ಗ್ರಾಮಗಳಲ್ಲಿ ನಡೆಯುವ ಸಿಡಿ ಜಾತ್ರೆಯನ್ನು ವಿವರಿಸಿದ್ದೇನೆ.

ಸಿಡಿ ಹಬ್ಬಕ್ಕೆ ಹೆಸರು ಮಾಡಿರುವುದು ಮಳವಳ್ಳಿ. ಇಲ್ಲಿಯ ಸುತ್ತ-ಮುತ್ತಲ ಗ್ರಾಮದವರು ಸಿಡಿ ಹಬ್ಬವನ್ನು ಆಚರಿಸುತ್ತಾರೆ. ಮಳವಳ್ಳಿಯ ಗ್ರಾಮದೇವತೆ ಪಟ್ಟಲದಮ್ಮ ಇವಳನ್ನು ಒಳಗೆರೆ ಹುಚ್ಚಮ್ಮ ಎಂದೂ ಕರೆಯುತ್ತಾರೆ. ಈ ದೇವಿಯ ಗದ್ದುಗೆ ಊರೊಳಗೆ ಗಂಗಾಮತಸ್ಥರ ಬೀದಿಯಲ್ಲಿದೆ. ಪಟ್ಟಣದ ಕೆರೆಯ ತಡಿಯಲ್ಲಿ ದೇವಾಲಯವು ಇದೆ. ಈ ದೇವಿಯ ಪೂಜಾರಿ

ಗಂಗಾಮತಸ್ಥ. ಒಳಗೆರೆ ಹುಚ್ಚಮ್ಮನ ದೇವಾಲಯದಲ್ಲಿ ಇಬ್ಬರು ದೇವಿಯರಿದ್ದಾರೆ. ಒಬ್ಬಳನ್ನು ದೊಡ್ಡಮ್ಮ ಎಂದೂ ಇನ್ನೊಬ್ಬಳನ್ನು ಚಿಕ್ಕಮ್ಮ ಎಂದೂ ಕರೆಯುತ್ತಾರೆ. ದೊಡ್ಡಮ್ಮನನ್ನೇ ಒಳಗೆರೆ ಹುಚ್ಚಮ್ಮ ಪಟ್ಟಲದಮ್ಮ ಎಂದೂ ಕರೆಯುತ್ತಾರೆ. ದೊಡ್ಡಮ್ಮ ಮತ್ತು ಚಿಕ್ಕಮ್ಮ ಅಕ್ಕ-ತಂಗಿಯರೆಂದು ಇಬ್ಬರನ್ನೂ ಒಂದೇ ಪೀಠದ ಮೇಲೆ ಕೂರಿಸಿದ್ದಾರೆ. ಮಳವಳ್ಳಿಯಲ್ಲಿ ಸಿಡಿ ಮಾಡುವುದು ಪಟ್ಟಲದಮ್ಮನ ಹೆಸರಿನಲ್ಲಿಯೇ ಸಿಡಿಯ ಸಾಮಗ್ರಿಗಳು, ಕುಳ್ಳಯ್ಯಸಿಡಿರಣ್ಣ ರಥ, ದೇವರುಗಳ ಪ್ರಭಾವಳಿಗಳು ಎಲ್ಲವೂ ಗಂಗಾಮತಸ್ಥರ ಬಳಿಯಲ್ಲಿಯೇ ಇರುವುದು. ಸಿಡಿ ಹಬ್ಬದ ಹಕ್ಕುದಾರರು ಗಂಗಾಮತಸ್ಥರೇ ಆಗಿದ್ದಾರೆ.

ಪಟ್ಟಲದಮ್ಮನ ಸಿಡಿ, ಕೊಂಡ, ತೇರು ಒಟ್ಟಿಗೆ ನಡೆಯುವುದು ವಿಶೇಷವಾಗಿದೆ. ಜನವರಿ ತಿಂಗಳ ಶುಕ್ರವಾರ ನಡೆಯುವ ಸಿಡಿ ಹಬ್ಬದ ಅಲಂಕಾರದ ಜವಾಬ್ದಾರಿಯು ಗಂಗಾಮತಸ್ಥರದೇ ಆಗಿದೆ. ಅಲಂಕರಿಸಿದ ತೇರಿನ ಮೇಲೆ ಹಿತ್ತಾಳೆಯ ದೊಡ್ಡಮ್ಮನ ಮತ್ತು ಚಿಕ್ಕಮ್ಮನ ವಿಗ್ರಹಗಳನ್ನು ಕೂರಿಸುತ್ತಾರೆ. ಈ ಉತ್ಸವ ಮೂರ್ತಿಗಳನ್ನಿರಿಸಿದ ತೇರು ರಾತ್ರಿ ಹನ್ನೆರಡು ಗಂಟೆಗೆ ನಡೆಯುತ್ತದೆ. 'ಸಿಡಿಗೊಂಬೆ' ಅಥವಾ 'ಸಿಡಿರಣ್ಣ' ಎಂಬ ಆರೇಳು ಅಡಿ ಎತ್ತರದ ಗಂಡು ವಿಗ್ರಹವನ್ನು ತೇರಿನ ಮುಂದೆ ಒಬ್ಬರು ಹೊತ್ತು ಹೋಗುತ್ತಾರೆ. ತೇರು ಪ್ರಾರಂಭವಾಗುತ್ತಿದ್ದಂತೆ ಬಾಯಿ ಬೀಗ ಹಾಕಿಸಿಕೊಳ್ಳುತ್ತಾರೆ. ಕುಪ್ಪುಸ್ವಾಮಿ ಐಯರ್ ವೃತ್ತದಿಂದ ಕೋಟೆ ಮುಂತಾದ ಪ್ರಮುಖ ಬೀದಿಗಳಲ್ಲಿ ಸುತ್ತಿ ಬೆಳಗ್ಗೆ ೬ ಗಂಟೆಗೆ ಸಿಡಿ ಮೆರವಣಿಗೆ ಮುಗಿಸಿ ದೇವಸ್ಥಾನಕ್ಕೆ ಬರುತ್ತದೆ. ಪಟ್ಟಲದಮ್ಮನ ದೇವಸ್ಥಾನದ ಮುಂದೆ ೫೦ ಅಡಿ ಕೊಂಡವನ್ನು ತೋಡಿರುತ್ತಾರೆ. ಹೂ, ಹೊಂಬಾಳೆಯ ಸಹಿತ ಪೂಜಾರಿ ಬಂದು ಕೊಂಡವನ್ನು ಹಾಯುತ್ತಾನೆ. "ಗಂಗಾಮತಸ್ಥರು ಹಕ್ಕುದಾರರು, ಮೊದಲು ನಿಲ್ಲುತ್ತಾರೆ. ದೇವಸ್ಥಾನದ ಎದುರು ಮುಖಮಾಡಿ ಎಲ್ಲರೂ ನಿಂತಿರುತ್ತಾರೆ. ಅರ್ಚಕರು ಎಡೆ ಅನ್ನ, ಕಾಯಿ, ಹಣ್ಣು, ಕರ್ಪೂರ, ದಕ್ಷಿಣೆ ೫ ಹಣ ನೀಡುತ್ತಾರೆ. ಮೊದಲ ಹಕ್ಕುದಾರ ಪೂಜೆ ಮಾಡಿ, ಆ ಹಣ ಪಡೆದುಕೊಳ್ಳುತ್ತಾನೆ".[೪೦]

ಮದ್ದೂರು ತಾಲ್ಲೂಕಿನ ದೊಡ್ಡರಸಿನಕೆರೆಯಲ್ಲಿ ಪಟ್ಟಲದಮ್ಮನ ಸಿಡಿ ನಡೆಯುತ್ತದೆ. ಇಲ್ಲಿ ಸುಣ್ಣ-ಬಣ್ಣ ತುಂಬುವುದರಿಂದ ಹಿಡಿದು ತೇರಿನ ಸಿದ್ದತೆ, ಸಿಡಿರಣ್ಣನಾಗುವ ವ್ಯಕ್ತಿ, ಕೊಂಡವನ್ನು ಹಾಯುವವನು, ಕ್ಯಾತಮ್ಮನ ಕರಗ ಹೊರುವವರು, ಎಲ್ಲವೂ ಬೆಸ್ತರದೇ ಆಗಿದೆ. ತೇರಿಗೆ ಇವರು ಒಂದು 'ಮರಿ'ಯನ್ನು ಬಲಿ ಕೊಡುತ್ತಾರೆ. ಅದನ್ನು ನಂತರದಲ್ಲಿ ತೇರಿನ ಸುತ್ತ ಮೂರು ಸುತ್ತು ಸುತ್ತಿಸುತ್ತಾರೆ. ನಂತರದಲ್ಲಿ ನಡುಕಟ್ಟನ್ನು ಕಟ್ಟಿ ಕೊಂಡಿಗೆ ವ್ಯಕ್ತಿಯನ್ನು ತೂಗಿ, ಮತ್ತೆ ಒಬ್ಬೊಬ್ಬರಾಗಿ ಊರನ್ನು ಸುತ್ತು ಹಾಕಿ ನಂತರದಲ್ಲಿ ಏಳೂರಮ್ಮನ ದೇವಸ್ಥಾನದಲ್ಲಿ ತೇರನ್ನು ನಿಲ್ಲಿಸುತ್ತಾರೆ.

ಪಟ್ಟಲದಮ್ಮನ ಪಟವನ್ನು ಹೊತ್ತ ಬೆಸ್ತರ ವ್ಯಕ್ತಿಗೆ ದೇವರು ಬರುತ್ತದೆ. ಆತ ಆವೇಶದಿಂದ ಉದ್ದನೆಯ ಮಚ್ಚಿನಿಂದ 'ಮರಿ'ಯನ್ನು ಕಡಿಯುತ್ತಾನೆ.

ಮಂಡ್ಯ ಜಿಲ್ಲೆಯ ಹನಿಯಂಬಾಡಿಯ ಚೌಡೇಶ್ವರಿ ಸಿಡಿ, ಹಲ್ಲೇಗೆರೆಯ ಲಕ್ಷ್ಮಿದೇವಿಯ ಸಿಡಿ, ಕೆ.ಆರ್.ಪೇಟೆಯ ದೊಡ್ಡಕೇರಮ್ಮನ ಸಿಡಿ, ಮದ್ದೂರಮ್ಮನ ಸಿಡಿ, ಒಟ್ಟಾರೆ ಜಿಲ್ಲೆಯಲ್ಲಿ ನಡೆಯುವ ಸಿಡಿ ಹಬ್ಬದಲ್ಲಿ ಪ್ರಮುಖವಾದ ಪಾತ್ರವನ್ನು ವಹಿಸುವವರು ಈ ಗಂಗಾಮತಸ್ಥ ಸಮುದಾಯದವರೇ ಆಗಿದ್ದಾರೆ.

## ಗುಂಡಾಪುರದ ಜಾತ್ರೆ

ಮಳವಳ್ಳಿ ತಾಲ್ಲೂಕಿನ ಬಾಳೆಹೊನ್ನಿಗ ಎಂಬ ಗ್ರಾಮದಲ್ಲಿ ಗಂಗಾಮತಸ್ಥರ ಸುಮಾರು ೩೦೦ ಕುಟುಂಬಗಳು ಇವೆ. ಪಕ್ಕದ ಗ್ರಾಮವಾದ ಗುಂಡಾಪುರದಲ್ಲಿರುವ ಬೆಟ್ಟದರಸಮ್ಮ ಎಂಬ ದೇವತೆಯ ಜಾತ್ರೆಯು ನಡೆಯುತ್ತದೆ. ಇದೇ ಗುಂಡಾಪುರದ ಜಾತ್ರೆ, ಈ ಜಾತ್ರೆಗೆ ಪ್ರಮುಖರಾದವರೆಂದರೆ ಬಾಳೆಹೊನ್ನಿಗ ಗ್ರಾಮದಲ್ಲಿರುವ ಗಂಗಾಮತಸ್ಥ ಜನಾಂಗದವರು. ಮಾರ್ಚ ತಿಂಗಳಲ್ಲಿ ನಡೆಯುವ ಈ ಹಬ್ಬಕ್ಕೆ ಸಾಮಾನ್ಯವಾಗಿ ಎಲ್ಲಾ ಜನರು ಬರುತ್ತಾರೆ. ಬಾಳೆಹೊನ್ನಿಗ ಗ್ರಾಮದ ಗಂಗಾಮತಸ್ಥರು ವಿಚಿತ್ರವಾದ ವೇಷಗಳನ್ನು ಹಾಕಿಕೊಂಡು, ಮುಖ-ಮೈಗೆ ಬಣ್ಣ ಹಚ್ಚಿಕೊಂಡು ಕುಣಿಯುತ್ತಾರೆ. ಇವರನ್ನು ಪರದೇಶಿಗಳೆಂದು ಕರೆಯುತ್ತಾರೆ. ಇವರು ಹೋಗಿ ಕುಣಿಯಲಿಲ್ಲವೆಂದರೆ ದೇವರ ಕಾರ್ಯ ನಡೆಯುವುದಿಲ್ಲ. ಇವರು ಹೋದ ನಂತರ ದೇವರ ಮೆರವಣಿಗೆ ನಡೆಯುತ್ತದೆ. ಒಂದು ವಾರ ಕಾಲ ವಿಶೇಷ ಪೂಜಾ ಕಾರ್ಯಗಳ ನಂತರದ ಕೊನೆಯ ದಿನ ಜಾತ್ರೆ ನಡೆಯುತ್ತದೆ.

## ಯತ್ತಂಬಾಡಿಯ ಕಾಳೇಶ್ವರ ಸ್ವಾಮಿ ಜಾತ್ರೆ

ಪ್ರತಿವರ್ಷ ಕಾಮನ ಹುಣ್ಣಿಮೆಯ ಗುರುವಾರ ಈ ಜಾತ್ರೆ ನಡೆಯುತ್ತದೆ. ಮಾರಿ ಹಬ್ಬವಾದ ಹದಿನೈದು ದಿನಕ್ಕೆ ಇಲ್ಲವೆ ಒಂದು ತಿಂಗಳಿಗೆ ಕಾಳೇಶ್ವರ ಮತ್ತು ಊರಮಾರಮ್ಮನ ಹಬ್ಬಗಳು ನಡೆಯುತ್ತವೆ. ಕಾಳೇಶ್ವರ ಸ್ವಾಮಿಯ ಪೂಜಾರಿ ಗಂಗಾಮತಸ್ಥ ಸಮುದಾಯದವನು. ಈತ ಗೊಲ್ಲರಹಳಿಯಿಂದ ಬಂದು ಪೂಜೆ ಮಾಡುತ್ತಾನೆ. ಒಟ್ಟು ನಾಲ್ಕು ಕುಟುಂಬದವರು, ಮೂರು ಮೂರು ತಿಂಗಳಿಗೆ ಒಬ್ಬೊಬ್ಬರಂತೆ ಪೂಜೆಯನ್ನು ಬಂದು ಸಲ್ಲಿಸುವರು. ಪೂಜೆ ಕೈಂಕರ್ಯಗಳಿಗೆ ಕ್ಯಾತಮ್ಮನ ಗುಡಿಯಿಂದ ಕ್ಯಾತಮ್ಮನ ಕರಗ, ಊರುಮಾರಮ್ಮನ ಕರಗ, ಹೊನ್ನಮ್ಮನ ಕರಗ, ಹಿರಿದೇವಮ್ಮನ ಕರಗ, ಛತ್ರಿ ಚಾಮರ ಸಹಿತ, ದೇವಸ್ಥಾನದ ಎದುರಿನಲ್ಲಿ

ಹರಿಯುವ ಶಿಂಷಾ ನದಿಯಿಂದ ಹೂ ಹೊಂಬಾಳೆಸಹಿತ ಬಂದು, ಕಾಳೇಶ್ವರನ ಪೂಜೆ ಮಾತ್ರ ಗ್ರಾಮದ ಒಳಗೆ ಹೋಗಿ ಉತ್ಸವವಾಗುತ್ತದೆ. ಉಳಿದ ಕರಗಗಳು ದೇವಾಲಯದಲ್ಲೇ ಉಳಿಯುತ್ತವೆ. ರಾತ್ರಿ ಪೂರ್ಣ ಪೂಜೆಗಳು ನಡೆಯುತ್ತವೆ.

ಶುಕ್ರವಾರ ಬೆಳಗ್ಗೆ ದೇವರಿಗೆ ಹಂದಿಗಳ ಬಲಿಕೊಡುವ ಕಾರ್ಯಕ್ರಮವಿದೆ. ಸುಮಾರು ೧೦೦೦ ಹಂದಿಗಳ ಬಲಿ ನಡೆಯುತ್ತದೆ. ಕಾಳೇಶ್ವರ ಸ್ವಾಮಿಯ ಪೂಜಾರಿ ೨೦-೧೦೦ ಕೆ.ಜಿ. ತೂಗುವ ಹಂದಿಯ ಮುಂಡವನ್ನು ಬಾಯಲ್ಲಿ ಕಚ್ಚಿ, ರಕ್ತವನ್ನು ಹೀರಿ ಎಸೆಯುತ್ತಾನೆ. ಈತ ಆವೇಶಾನ್ವಿತವಾಗಿ ವರ್ತಿಸುತ್ತಾನೆ. ಇದನ್ನು "ಹಂದಿಧಾರೆ" ಎಂದು ಕರೆಯುತ್ತಾರೆ. ಹರಕೆಯ ಹಂದಿಗಳನ್ನು ಈ ರೀತಿ ಬಲಿಕೊಡುತ್ತಾರೆ. ಇದಾದ ನಂತರ ಶಿಂಷಾ ಹೊಳೆಯ ದಡದ ಮರಳಿನಲ್ಲಿ ತೋಡಿರುವ ಗುಂಡಿಗೆ ಹಂದಿಯಿಂದ ಹೀರಿರುವ ರಕ್ತವನ್ನು ಕಕ್ಕುತ್ತಾರೆ. ನಂತರ ಹೊಳೆಯಲ್ಲಿ ಸ್ನಾನಮಾಡಿ, ದೇವಾಲಯಕ್ಕೆ ಬಂದು ಪೂಜೆ ಮಾಡುತ್ತಾರೆ.

## ಬಡಗೋಡಮ್ಮ ಅಥವಾ ಅರಸಮ್ಮನ ತೇರು

ನಾಗಮಂಗಲ ಪಟ್ಟಣದ ಬಡಗಲ ದಿಕ್ಕಿನಲ್ಲಿರುವ ಗುಡಿಯೇ ಬಡಗೋಡಮ್ಮನ ಗುಡಿ. ಇಲ್ಲಿ ಪ್ರತಿವರ್ಷ ಜಾತ್ರೆ ನಡೆಯುತ್ತದೆ. ಇಲ್ಲಿಯ ಪೂಜಾರಿ ಗಂಗಾಮತಸ್ಥರವನು. ಇಲ್ಲಿಯ ಅಮ್ಮ ಬಡಗೋಡಮ್ಮನಿಗೆ ನಿತ್ಯ ಪೂಜೆಯು ನಡೆಯುತ್ತದೆ. ಸಾಮಾನ್ಯವಾಗಿ ಮಾರ್ಚಿ ತಿಂಗಳ ಶುಕ್ರವಾರದಂದು ಪೂಜಾಕೈಂಕರ್ಯಗಳು ನಡೆದು, ಮುಂಜಾನೆ ವೇಳೆ, ಈ ದೇವತೆಗೆ ಪೂಜಾರಿಯಿಂದ ಕುರಿಗಳನ್ನು ಗಾವುಸಿಗಿಯುವ ಕಾರ್ಯ ನಡೆಯುತ್ತದೆ. ಅಂದರೆ ಕುರಿಯನ್ನು ಕುಯ್ದು, ಅದರಿಂದ ಬರುವ ರಕ್ತವನ್ನು ಪೂಜಾರಿ ಹೀರಿ, ಉಗಿಯುವುದೇ ಗಾವು ಸಿಗಿಯುವುದು.

## ಗಂಗಾ ಜಯಂತಿ

ಮಳವಳ್ಳಿ ಪಟ್ಟಣದಲ್ಲಿರುವ "ಶ್ರೀರಾಮಾರೂಢ ಮಠ"ದಲ್ಲಿ ಪ್ರತಿವರ್ಷವೂ ಜೂನ್ ತಿಂಗಳಲ್ಲಿ "ಗಂಗಾ ಜಯಂತಿ"ಯನ್ನು ಆಚರಿಸುತ್ತಾರೆ. ಇದು ಜಾತ್ರೆಯೇ ಆಗಿದೆ. ಈ ಜಯಂತಿಯನ್ನು ಹನ್ನೊಂದು ದಿವಸಗಳ ಕಾಲ ಆಚರಿಸುತ್ತಾರೆ. ೧೧ನೇ ದಿನ 'ಪರ' ಇರುತ್ತದೆ. ಈ ಜಾತ್ರೆಯ ಸಂದರ್ಭದಲ್ಲಿ, ಪ್ರತಿಯೊಂದು ಕೇರಿಯವರು ಒಂದೊಂದು ದಿನ, ಅದೇ ವರ್ಷ ಮದುವೆಯಾಗಿರುವ ಮುತ್ತೈದೆಯು, ಹೊಸ ಮಣ್ಣಿನ ಬಿಂದಿಗೆಯಿಂದ ಊರಿನ ಹೊರಗೆ ಇರುವ ಕೆರೆ, ಬಾವಿ, ಹೊಳೆಯಲ್ಲಿ ಮಂಗಳವಾದ್ಯಸಹಿತ ಮಠಕ್ಕೆ ಆ ಗಂಗೆಯನ್ನು ತಂದು ಇಡುತ್ತಾರೆ. ಹೀಗೆ ಒಟ್ಟು ಹತ್ತು ದಿನಗಳ ಕಾಲ ಹೀಗೆ 'ಗಂಗೆ'ಯನ್ನು ಮಣ್ಣಿನ ಬಿಂದಿಗೆಯಲ್ಲಿ ತಂದು

ಇಡುತ್ತಾರೆ. ಇವುಗಳಿಗೆ ಪ್ರತಿನಿತ್ಯವು ಪೂಜೆ ನಡೆಯುತ್ತಿರುತ್ತದೆ. ಮಳವಳ್ಳಿ ಪಟ್ಟಣದಲ್ಲಿ ೧೨ ಕೇರಿಗಳಿದ್ದು, ಅವುಗಳಲ್ಲಿ ೧೦ ಕೇರಿಯವರು ಮಾತ್ರ ಬಿಂದಿಗೆಯನ್ನು ತಂದಿಡುತ್ತಾರೆ. ಹನ್ನೊಂದನೆಯ ದಿನ 'ಪರ'ವನ್ನು ಮಾಡಿ, ಸಮುದಾಯದವರೆಲ್ಲರೂ ಪ್ರಸಾದ ಸ್ವೀಕರಿಸುತ್ತಾರೆ. ಅದೇ ದಿನ ರಾತ್ರಿ ಏಳು ಗಂಟೆಗೆ ತೇರಿನ ಮೇಲೆ ಸ್ವಾಮೀಜಿಯನ್ನ ಕೂರಿಸಿ ಹನ್ನೆರಡು ಬೀದಿಯಲ್ಲೂ ಮೆರವಣಿಗೆ ಮಾಡುತ್ತಾರೆ."[೪೧]

## ಶ್ರೀ ಅಹಲ್ಯದೇವಿ ಮಾರಮ್ಮನ ಜಾತ್ರೆ

ಶ್ರೀರಂಗಪಟ್ಟಣ ತಾಲ್ಲೂಕಿನ ಆರತಿ ಉಕ್ಕಡದಲ್ಲಿರುವ ಶ್ರೀ ಅಹಲ್ಯದೇವಿ ಮಾರಮ್ಮನ ಜಾತ್ರೆಯು ಕಾರ್ತಿಕ ಮಾಸದ ಕಡೆಯ ಸೋಮವಾರ ನಡೆಯುತ್ತದೆ. ಉಕ್ಕಡದ ಮಾರಮ್ಮ ಎಂದೂ ಸಹ ಕರೆಯುತ್ತಾರೆ. ಇಲ್ಲಿಯ ಪೂಜಾರಿಯನ್ನೊಳಗೊಂಡಂತೆ. ಈ ದೇವಾಲಯದ ಉಸ್ತುವಾರಿಯನ್ನ ನೋಡಿಕೊಳ್ಳುವವರು ಗಂಗಾಮತಸ್ಥರಾಗಿದ್ದಾರೆ. ಕಾರ್ತಿಕ ಮಾಸದ ಕಡೆಯ ಸೋಮವಾರ ಲಕ್ಷದೀಪೋತ್ಸವವನ್ನು ಮಾಡುತ್ತಾರೆ. ಆ ದಿನ ಸಾವಿರಾರು ಜನ ಭಕ್ತಾಧಿಗಳು ಆಗಮಿಸುತ್ತಾರೆ. ಆ ದಿನ ಪ್ರಸಾದದ ವಿನಿಯೋಗವು ಇರುತ್ತದೆ.[೪೨] ಇದೆಲ್ಲದರ ಜವಾಬ್ದಾರಿಯು ಗಂಗಾಮತಸ್ಥರದೇ ಆಗಿದೆ.

ಹೀಗೆ ಗಂಗಾಮತಸ್ಥರು ವಾಸಿಸುವ ಪ್ರತಿಯೊಂದು ಗ್ರಾಮದಲ್ಲೂ ದೇವತಾ ಕಾರ್ಯಗಳಲ್ಲಿ ವಿಶೇಷತೆ ಇದ್ದೇ ಇದೆ. ಜಿಲ್ಲೆಯಲ್ಲಿ ನಡೆಯುವ ಎಲ್ಲಾ ಜಾತ್ರೆಗಳಲ್ಲಿ ಸಾಮಾನ್ಯವಾಗಿ ಗಂಗಾಮತಸ್ಥರ ಉಪಸ್ಥಿತಿ ಇರುತ್ತದೆ. ಇವರು ಹಲವಾರು ಜಾತ್ರೆಗಳನ್ನ ಮಾಡುವುದು ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಕಂಡುಬಂದಿವೆ. ಅವುಗಳಲ್ಲಿ ಪ್ರಮುಖವಾದವುಗಳನ್ನು ಮಾತ್ರ ಹೇಳಲಾಗಿದೆ. ಒಟ್ಟಾರೆಯಾಗಿ ಗಂಗಾಮತಸ್ಥರು ಆಚರಣೆಯನ್ನು ಉಳಿಸಿಕೊಂಡಿರುವ ಪುಣ್ಯಪುರುಷರೆಂದೇ ಹೇಳಬೇಕು.

## ಹರಕೆ

ಯಾವುದೇ ವ್ಯಕ್ತಿಗೆ ಕಷ್ಟ ಬಂದಾಗ, ತಾವು ನಂಬಿರುವ ದೇವರಿಗೆ ಹರಕೆ ಮಾಡಿಕೊಳ್ಳುವುದು ಪದ್ಧತಿಯಾಗಿದೆ. ಹರಕೆ ಹಣದ ರೂಪದಲ್ಲಿರಬಹುದು, ಪ್ರಾಣಿ ಬಲಿಯಾಗಿರಬಹುದು, ತಲೆ ಮುಡಿಯಾಗಿರಬಹುದು, ಒಪ್ಪತ್ತು ಬಿಡುವುದಾಗಿರಬಹುದು, ವಸ್ತುಗಳ ರೂಪದಲ್ಲಿರಬಹುದು, ಹರಕೆ ಮಾಡಿಕೊಂಡ ನಂತರ ತನ್ನ ಕಷ್ಟಗಳು ಪರಿಹಾರವಾದ ಮೇಲೆ ಆ ದೇವರಿಗೆ ಹೋಗಿ ಹೊತ್ತುಕೊಂಡ ಹರಕೆಯನ್ನು ತೀರಿಸುತ್ತಾರೆ. ಗಂಗಾಮತಸ್ಥರು ತಾವು

ನಂಬಿರುವ ದೇವರಿಗೆ ಹಲವಾರು ಹರಕೆಗಳನ್ನು ಮಾಡಿಕೊಳ್ಳುವುದರೊಂದಿಗೆ, ಅದರಂತೆ ಹರಕೆಯನ್ನು ತೀರಿಸುವುದುಂಟು.

**ರಾಕಾಸಮ್ಮ ಹರಕೆ**

ಜಿಲ್ಲೆಯ ವಿವಿಧ ಭಾಗದಲ್ಲಿ ರಾಕಾಸಮ್ಮನಿಗೆ ಗಂಗಾಮತಸ್ಥರು ಹರಕೆ ಮಾಡಿಕೊಳ್ಳುತ್ತಾರೆ. ಕೋಡಿಪುರ, ಹುಸ್ಕೂರು, ಕಡಿಲುವಾಗಿಲು, ದೇಶವಹಳ್ಳಿ, ಓರಿಸವೆ, ಹೊಸಹೊಳಲು ಮುಂತಾದ ಕಡೆಗಳಲ್ಲಿ ಹರಕೆಯನ್ನು ಹೊತ್ತು ಐದು ವರ್ಷಕ್ಕೊಮ್ಮೆ ಹರಕೆಯನ್ನು ತೀರಿಸುತ್ತಾರೆ. ಈಕೆ ಇವರಿಗೆ ಬರುವ ಕಷ್ಟ-ಕಾರ್ಪಣ್ಯಗಳನ್ನು ಹೋಗಲಾಡಿಸುವ ದೇವತೆಯಾಗಿದ್ದು, ಗ್ರಾಮಗಳಲ್ಲಿ ಪ್ರತ್ಯೇಕ ಸ್ಥಳವನ್ನು ಕಲ್ಪಿಸಿದ್ದು, ಯಾವಾಗಲೂ ಪೂಜಿಸುವುದನ್ನು ಕಾಣಬಹುದು. ಹೀಗೆ ಹರಕೆ ತೀರಿಸುವಾಗ ಮಾಡುವ ಹಬ್ಬಕ್ಕೆ 'ಈರ ಹಬ್ಬ' ಎಂದು ಸಹ ಕರೆಯುತ್ತಾರೆ.

ಸಮುದಾಯದ ಹಲವರು ತಮ್ಮ ಕಷ್ಟ ಪರಿಹಾರ ಮಾಡಿದರೆ 'ಮರಿ'ಯನ್ನು ಬಲಿ ಕೊಡುವುದಾಗಿ ಹರಕೆ ಮಾಡಿಕೊಂಡಿರುತ್ತಾರೆ. ಹರಕೆ ತೀರಿಸುವ ದಿನವನ್ನು ಒಂದು ತಿಂಗಳು ಮುಂಚಿತವಾಗಿ ಗುರುತು ಮಾಡಿರುತ್ತಾರೆ. ಹರಕೆ ತೀರಿಸುವ ದಿನ ಊರಿನ ಕೆರೆಯಿಂದ ಪೂಜಿಸಿ ನೀರನ್ನು ತರುತ್ತಾರೆ. ನಂತರ ಎಲ್ಲಾ ಮರಿಗಳನ್ನು ದೇವತೆಗೆ ಬಲಿಕೊಟ್ಟು, ನಂತರ ಆ ಮರಿಗಳ ರಕ್ತ ಮತ್ತು ಮೂಳೆಗಳನ್ನು ಊರಿನ ಹೊರಭಾಗದಲ್ಲಿ ಗುಂಡಿ ತೋಡಿ ಅವುಗಳನ್ನು ಹೂಳುತ್ತಾರೆ. ಕಾರಣವೆಂದರೆ ನಾಯಿಗಳು ಇವನ್ನು ಮುಟ್ಟಬಾರದು ಎಂಬ ನಂಬಿಕೆಯಿಂದ. ನಾಯಿ ತಿಂದರೆ ಮಾಡಿದ ಪೂಜೆಯೆಲ್ಲವೂ ವ್ಯರ್ಥವಾಗುತ್ತದೆಂಬ ಪ್ರತೀತಿ. ನಂತರ ಗ್ರಾಮದ ಎಲ್ಲರನ್ನು ಕರೆದು ಮಾಂಸದ ಊಟವನ್ನು ಗಂಗಾಮತಸ್ಥರು ಬಡಿಸುತ್ತಾರೆ. ರಾಕಾಸಮ್ಮನ ಜೊತೆಗೆ ಮಸಣಕ್ಕಮ್ಮನ ಹರಕೆಯನ್ನು ತೀರಿಸುವವರು ಮೊದಲು ಮಸಣಕ್ಕಮ್ಮನಿಗೆ ಸಿಹಿ-ಸಪ್ಪೆಯನ್ನು ಮಾಡಿ ಎಡೆಯನ್ನು ತೋರಿಸಿ ಪೂಜಿಸಿ ಬಾಗಿಲನ್ನು ಮುಚ್ಚುತ್ತಾರೆ. ಯಾವುದೇ ಕಾರಣದಿಂದಲೂ ಈ ದೇವತೆಯಿರುವ ಮನೆಗೆ ಮಾಂಸದ ಊಟವನ್ನಾಗಲಿ, ಮಾಂಸ ತಿಂದ ಜನರಾಗಲಿ ಹೋಗುವಂತಿಲ್ಲ. ಈಕೆ ಚೊಕ್ಕಭೋಜನದವಳು. ಆದರೆ ರಾಕಾಸಮ್ಮನ ಹೆಸರನ್ನು ಹೇಳಿ ಭಕ್ತಾದಿಗಳಿಗೆ ಮಾಂಸದ ಊಟವನ್ನು ಹಾಕುತ್ತಾರೆ.[೪೩]

**ಡಿಂಕದಮ್ಮನ ಹರಕೆ**

ಪಾಂಡವಪುರ ತಾಲ್ಲೂಕಿನ ಹರಕೆ ಹೊತ್ತವರು ಡಿಂಕದಮ್ಮನ ಪರವನ್ನು ಮಾಡುತ್ತಾರೆ. ಎಲ್ಲಾ ಜನಾಂಗಗಳಂತೆ ಗಂಗಾಮತಸ್ಥರು ಸಹ ತಮ್ಮ ಕಷ್ಟಗಳ ಪರಿಹಾರಕ್ಕೆ ಹರಕೆಯನ್ನು

ಕಟ್ಟಿಕೊಂಡಿರುತ್ತಾರೆ. ತಮ್ಮ ಕಷ್ಟ-ಕಾರ್ಪಣ್ಯ ನಿವಾರಣೆಯಾದ ಮೇಲೆ, ನೆಂಟರಿಷ್ಟರು, ಸ್ನೇಹಿತರು, ಎಲ್ಲರೊಡನೆ ಭಾನುವಾರ, ಶುಕ್ರವಾರ, ಮಂಗಳವಾರ ಇವುಗಳಲ್ಲಿ ಯಾವುದಾದರೊಂದು ದಿನ ಬಂದು ಹರಕೆಯಂತೆ ಕುರಿ, ಕೋಳಿ, ಮೇಕೆ ಬಲಿಯನ್ನು ಕೊಡುತ್ತಾರೆ. ನಂತರ ಮಾಡಿದ ಅಡುಗೆಯನ್ನು ದೇವಿಗೆ ಎಡೆತೋರಿಸುತ್ತಾರೆ. ಆ ಪ್ರಾಣಿಯ ತಲೆಯನ್ನು ದೇವಾಲಯದ ಪೂಜಾರಿಗೆ ಕೊಡುತ್ತಾರೆ. ನಂತರ ಬಂದವರೆಲ್ಲ ಊಟ ಮಾಡುತ್ತಾರೆ.

## ಉಕ್ಕಡದ ಮಾರಮ್ಮನಿಗೆ ಹರಕೆ

ಶ್ರೀರಂಗಪಟ್ಟಣ ತಾಲ್ಲೂಕಿನ ಆರತಿ ಉಕ್ಕಡದ ಅಹಲ್ಯದೇವಿ ಮಾರಮ್ಮನಿಗೆ ಹರಕೆ ಮಾಡಿಕೊಳ್ಳುತ್ತಾರೆ. ಕುರಿ, ಕೋಳಿ, ಮರಿಯನ್ನು ಅರ್ಪಿಸುವುದಾಗಿ ಹರಕೆ ಮಾಡುತ್ತಾರೆ. ಇಲ್ಲಿಯ ಪೂಜಾರಿಯೂ ಸಹ ಬೆಸ್ತರವನೇ. ಹರಕೆಯನ್ನು ಭಾನುವಾರ, ಮಂಗಳವಾರ, ಶುಕ್ರವಾರ ಹಾಗೂ ಅಮಾವಾಸ್ಯೆ, ಹುಣ್ಣಿಮೆಯ ದಿನಗಳಲ್ಲಿ ತೀರಿಸುತ್ತಾರೆ. ಇಲ್ಲಿ ಭಕ್ತರ ದೋಷ ಪರಿಹಾರಕ್ಕಾಗಿ "ತಡೆ ಹೊಡೆಸುವುದು" "ಮೊಟ್ಟೆ ಹೊಡೆಸುವುದು" ಮಾಡುತ್ತಾರೆ. ಕುರಿ, ಕೋಳಿ, ಮೇಕೆಗಳನ್ನು ಬಲಿಕೊಡುವಾಗ "ಅಮ್ಮ ನಿನ್ನ ಹರಕೆ ಒಪ್ಪಿಸಿಕೋ" ಎಂದು ಹೇಳುತ್ತಾರೆ. ಬಲಿಕೊಟ್ಟ ನಂತರ, ದೇವಾಲಯದ ಪಕ್ಕದಲ್ಲಿಯೇ ಅಡುಗೆ ಮಾಡಿ, ದೇವಿಗೆ ಎಡೆ ಒಪ್ಪಿಸಿ, ಎಲ್ಲರೂ ಪ್ರಸಾದ ಸೇವಿಸುತ್ತಾರೆ.

## ಮಾರಮ್ಮನ ಹರಕೆ

ಗಂಗಾಮತಸ್ಥರು ಹೆಚ್ಚಿನದಾಗಿ ಮಾರಮ್ಮನಿಗೆ ಹರಕೆ ಮಾಡಿಕೊಳ್ಳುತ್ತಾರೆ. ದಂಡಿನ ಮಾರಮ್ಮ, ಊರು ಮಾರಮ್ಮ, ಚೌಡಮ್ಮ, ಕಾಳಮ್ಮ ಮುಂತಾದ ದೇವತೆಗಳಿಗೆ ಹರಕೆಯನ್ನು ಮಾಡಿಕೊಳ್ಳುತ್ತಾರೆ. ಅದರಂತೆ ಹರಕೆ ಸಿದ್ಧಿಸಿದ ಮೇಲೆ, ಆ ದೇವಾಲಯಕ್ಕೆ ಹೋಗಿ ಕುರಿ, ಕೋಳಿ, ಮರಿಯನ್ನು ಬಲಿಕೊಡುತ್ತಾರೆ. ಅಲ್ಲದೆ ಸೀರೆ, ಬಳೆ, ಬೆಳ್ಳಿ ಬಾಯಿ, ಮೂಗುತಿ, ತಾಳಿ ಮುಂತಾದವುಗಳನ್ನು ಹರಕೆ ಮಾಡಿಕೊಂಡು ಅವುಗಳನ್ನು ತೀರಿಸುತ್ತಾರೆ. ಒಟ್ಟಾರೆಯಾಗಿ ಗಂಗಾಮತಸ್ಥರು ಹರಕೆಯನ್ನು ಹೊತ್ತು, ತಮ್ಮ ಕಷ್ಟ ಪರಿಹಾರವಾದ ನಂತರ, ಹರಕೆ ತೀರಿಸುವುದನ್ನ ಮರೆಯುವುದಿಲ್ಲ.

## ಇತರ ಹರಕೆಗಳು

ಮಕ್ಕಳಿಗೆ ತೊಂದರೆಯಾದಾಗ ನಂಜನಗೂಡಿನ ನಂಜುಂಡೇಶ್ವರನಿಗೆ ಹರಕೆ ಹೊರುತ್ತಾರೆ. ಬೆಳ್ಳಿ ಕಿವಿ, ಬೆಳ್ಳಿ ಉಡುದಾರ, ಬೆಳ್ಳಿ ಮೂಗು ಇಲ್ಲವೇ ೧೦೧, ೫೦೧, ೧೦೦೧ ರೂ.ಗಳನ್ನು ಹಣದ ಮತ್ತು ವಸ್ತುವಿನ ರೂಪದಲ್ಲಿ ಹರಕೆ ಹೊರುತ್ತಾರೆ. ಮಹದೇಶ್ವರಸ್ವಾಮಿಗೆ ಕಪ್ಪ ಕಾಣಿಕೆಯನ್ನು ಕೊಡುವುದಾಗಿ ಹರಕೆ ಹೊರುತ್ತಾರೆ. ಸಿಡಿ ಹಬ್ಬದಲ್ಲಿ ಬಾಯಿಬೀಗ ಚುಚ್ಚಿಸಿಕೊಳ್ಳುವುದಾಗಿ ಹರಕೆ ಹೊರುತ್ತಾರೆ. ಉರುಳು ಸೇವೆ ಮಾಡುವುದಾಗಿ ಹರಕೆ, ಮತ್ತಿತಾಳೇಶ್ವರಸ್ವಾಮಿಯ ಸನ್ನಿಧಿಯಲ್ಲಿ ಒಪ್ಪತ್ತು ಬಿಡುವುದಾಗಿ ಹರಕೆ, ಮಗನಿಗೆ ತೊಂದರೆಯಾದರೆ ಜೋಗಿ ಬಿಡುವುದಾಗಿ ಹರಕೆ, ತಿರುಪತಿ ತಿಮ್ಮಪ್ಪನಿಗೆ ಹರಕೆ, ಕೊಂಡ ತುಳಿಯುವುದಾಗಿ ಹರಕೆ, ಹರಿಸೇವೆ ಮಾಡುವುದಾಗಿ, ಪರ ಮಾಡಿಸುವುದಾಗಿ ಮುಂತಾದ ರೀತಿಯಲ್ಲಿ ಹಲವಾರು ದೇವರುಗಳಿಗೆ ಹರಕೆಯನ್ನು ಹೊತ್ತು, ಅದರಂತೆಯೇ ಅವರು ತೀರಿಸುತ್ತಾರೆ.

ಹೀಗೆ ಗಂಗಾಮತಸ್ಥರು ವಾರ್ಷಿಕಾವರ್ತನ ಆಚರಣೆಯನ್ನು ತಮ್ಮದೇ ಆದ ಸಂಪ್ರದಾಯದಂತೆ ಇಂದಿಗೂ ಮಾಡುತ್ತಾರೆ. ಆಚರಣೆಯ ಬಗ್ಗೆ ನಂಬಿಕೆ ಇದೆ. ಈ ಆಚರಣೆಗಳು ಅವರಿಗೆ ಸಂತೋಷವನ್ನು ಮನರಂಜನೆಯನ್ನು ನೀಡುವುದರ ಜೊತೆಗೆ ತಮಗೆ ಒದಗಿ ಬರುವ ಕಷ್ಟ-ಕಾರ್ಪಣ್ಯಗಳನ್ನು ಮರೆ ಮಾಡುತ್ತವೆ. ದುಡಿದು ದಣಿದ ಇವರಿಗೆ ಸುಖ-ಶಾಂತಿಯು ಸಿಗುತ್ತದೆ. ತಮ್ಮ ಕಾಯಕಗಳ ಪರಿಕಲ್ಪನೆಯ ಹಿನ್ನಲೆಯೊಳಗೆ ಬರುವಂತಹ ಆಚರಣೆಗಳು, ಅವರಿಗೆ ಪುಷ್ಠಿ ನೀಡುತ್ತವೆ. ಇವರು ಆಚರಣೆಯ ಮಹತ್ವ ಅರಿತುಕೊಂಡಿರುವುದು, ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಪ್ರತ್ಯಕ್ಷವಾಗಿ ನೋಡುವುದರೊಂದಿಗೆ ಅನುಭವಕ್ಕೆ ಬಂದಿದೆ ಎಂದು ಹೇಳಬಹುದು.

## ಅಡಿ ಟಿಪ್ಪಣಿಗಳು

೧. ಡಾ. ಕೆ. ಅನ್ನದಾನಿ "ಉತ್ತರದೇಸ ಕತ್ತಲರಾಜ್ಯ" ಐಸಿರಿ ಪಕಾಶನ, ೨೦೦೬, ಪು. ೪೯.

೨. ಡಾ. ಬರಗೂರು ರಾಮಚಂದ್ರಪ್ಪ "ಸಂಸ್ಕೃತಿ ಮತ್ತು ಸೃಜನಶೀಲತೆ", ಜನಸ್ನೇಹ ಪ್ರಕಾಶನ, ಬೆಂ. ೧೯೯೧, ಪು. ೨೯.

೩. M.N. Srinivas, Marriage and family in Mysore, Prajval publications, Mysore, 1942, page no. 139.

೪. ವಕ್ತೃ : ಪುಟ್ಟಲಕ್ಷ್ಮಮ್ಮ ಗಂಡ ಬೋರಯ್ಯ, ವಯಸ್ಸು-೫೮, ಆರತಿ ಉಕ್ಕಡ, ಶ್ರೀರಂಗಪಟ್ಟಣ ತಾ||.

೫. ವಕ್ತೃ : ನಿಂಗಮ್ಮ ಗಂಡ ಚಿಕ್ಕಬೋರಯ್ಯ, ವಯಸ್ಸು-೬೯, ಚಿಕ್ಕರಸಿನಕೆರೆ, ಮದ್ದೂರು ತಾ||.

೬. ವಕ್ತೃ : ಚೆನ್ನಮ್ಮ ಗಂಡ ಸಿದ್ದಯ್ಯ, ವಯಸ್ಸು-೭೩, ಚಿಕ್ಕರಸಿನಕೆರೆ, ಮದ್ದೂರು ತಾ||.

೭. ವೆಂಕಟರಾಜ ಪುಣಿಂಚತ್ತಾಯ "ಮೊಗವೀರರ ಸಂಸ್ಕೃತಿ", ೧೯೯೩, ಪು. ೪೪.

೮. ವಕ್ತೃ : ನಿಂಗಮ್ಮ ಗಂಡ ಹೊಟ್ಟೆಈರಯ್ಯ, ವಯಸ್ಸು-೭೫, ಕನ್ನಲಿ, ಮಂಡ್ಯ ತಾಲ್ಲೂಕು.

೯. ಡಾ. ಅಂಬಳಿಕೆ ಹಿರಿಯಣ್ಣ "ಮಲೆನಾಡಿನ ವೈಷ್ಣವ ಒಕ್ಕಲಿಗರ ಸಂಸ್ಕೃತಿ" ೧೯೯೯, ಪು. ೨೫೨.

೧೦. ವಕ್ತೃ : ಮುನಿಜೋಗಯ್ಯ ತಂದೆ ಸಿದ್ದಯ್ಯ, ವಯಸ್ಸು-೪೦, ದೇವರಗುಡ್ಡ ಬಾಳೆಹೊನ್ನಿಗ, ಮಳವಳ್ಳಿ ತಾ||.

೧೧. ಚಂದ್ರಶೇಖರ್ ಬಿ.ದಾಮ್ಲೆ, ಭಾರತೀಯ ಸಾಮಾಜಿಕ ಅಧ್ಯಯನ, ದ್ರಾವಣ ಪ್ರಕಾಶನ, ಮಂಗಳೂರು, ೧೯೯೯, ಪು. ೫೩.

೧೨. ಡಾ.ರಾಗೌ. ಗೌರವ ಸಂಪಾದಕ, "ಅಭಿವ್ಯಕ್ತಿ" ಸಂಪುಟ-೧, ಸಂಚಿಕೆ-೧, ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ, ಕರ್ನಾಟಕ ಸಂಘ (ರಿ), ಮಂಡ್ಯ, ಜನವರಿ-೨೦೦೮, ಪು. ೭೭.

೧೩. ವೆಂಕಟರಾಜ ಪುಣಿಂಚತ್ತಾಯ "ಮೊಗವೀರರ ಸಂಸ್ಕೃತಿ" ೧೯೯೩. ಪು. ೪೬.

೧೪. ವಕ್ತೃ : ಹೊನ್ನಯ್ಯ ತಂದೆ ಚನ್ನಂಕಯ್ಯ ವಯಸ್ಸು, ೮೬, ಮದ್ದೂರು ಪಟ್ಟಣ, ಮದ್ದೂರು.

೧೫. ವಕ್ತೃ : ಕೆಂಪಮ್ಮ ಗಂಡ ತಿಮ್ಮಯ್ಯ, ವಯಸ್ಸು-೭೪, ತೆಂಡೆಕೆರೆ, ಕೆ.ಆರ್.ಪೇಟೆ ತಾಲ್ಲೂಕು.

೧೬. ಡಾ. ದೇಜಗೌ-ಸಂಪಾದಕ, "ಸುವರ್ಣ ಮಂಡ್ಯ" ೨೦೦೬, ಪು. ೨೭೧.

೧೭. ವೆಂಕಟರಾಜ ಪುಣಿಂಚತ್ತಾಯ "ಮೊಗವೀರರ ಸಂಸ್ಕೃತಿ", ೧೯೯೩, ಪು. ೪೮.

೧೮. ಡಾ. ರಾಗೌ, ಗೌರವ ಸಂಪಾದಕ, "ಅಭಿವ್ಯಕ್ತಿ" ಸಂಪುಟ-೧, ಸಂಚಿಕೆ-೧, ಎಂ.ಎಲ್.ಶ್ರೀಕಂಠೇಗೌಡ ಸಂಶೋಧನಾ ಕೇಂದ್ರ, ಕರ್ನಾಟಕ ಸಂಘ (ರಿ), ಮಂಡ್ಯ, ಜನವರಿ-೨೦೦೮, ಪು. ೭೮.

೧೯. ವಕ್ತೃ : ಮರಿಯಯ್ಯ ತಂದೆ ಪುಟ್ಟಯ್ಯ, ವಯಸ್ಸು-೬೧, ಮರಡಿಪುರ, ಮಂಡ್ಯ ತಾ||.

೨೦. ವಕ್ತೃ : ಹೆಚ್. ಪುಟ್ಟಸ್ವಾಮಿ ತಂದೆ ಹುಚ್ಚಯ್ಯ, ವಯಸ್ಸು-೭೮, ನಿವೃತ್ತ ಶಿಕ್ಷಕರು, ಬ್ಲಫ್, ಮಳವಳ್ಳಿ ತಾ||.

೨೧. ವಕ್ತೃ : ಕೆಂಚಮ್ಮ ಗಂಡ ಬಿಳಿಯಯ್ಯ, ವಯಸ್ಸು-೬೪, ಹುಸ್ಕೂರು, ಮಳವಳ್ಳಿ ತಾ||.

೨೨. Burton Benedict, Indians in a plural society, London; Her Majestry's stationery office, 1961, page. No.115.

೨೩. ಡಾ. ಕೆ. ಅನ್ನದಾನಿ "ಉತ್ತರದೇಸ ಕತ್ಲರಾಜ್ಯ" ೨೦೦೬, ಪು. ೭೧.

೨೪. ಗಂಗಾಧರ ದೈವಜ್ಞ, ಬುಡಕಟ್ಟು ಸಮಾಜ ಹುಟ್ಟು-ಸಾವಿನ ನಡುವೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, ೨೦೦೦, ಪು. ೯೬.

೨೫. ವಕ್ತೃ : ಶ್ರೀ ಶ್ರೀ ಶ್ರೀ ವಿದ್ಯಾನಂದ ಸ್ವಾಮೀಜಿ, ವಯಸ್ಸು-೬೮, ಮಠಾಧಿಪತಿ, ಶ್ರೀ ರಾಮರೂಢಸ್ವಾಮಿ ಮಠ, ಮಳವಳ್ಳಿ ಪಟ್ಟಣ.

೨೬. ವಕ್ತೃ : ಚೌಡಮ್ಮ ಗಂಡ ಕುಳ್ಳಯ್ಯ, ವಯಸ್ಸು-೭೦, ಹರಿಹರ ಪುರ, ಕೆ.ಆರ್.ಪೇಟೆ ತಾ||.

೨೭. ವಕ್ತೃ : ಶ್ರೀ ಶ್ರೀ ಶ್ರೀ ವಿದ್ಯಾನಂದ ಸ್ವಾಮೀಜಿ, ವಯಸ್ಸು-೬೮, ಮಠಾಧಿಪತಿ, ಶ್ರೀ ರಾಮರೂಢಸ್ವಾಮಿ ಮಠ, ಮಳವಳ್ಳಿ ಪಟ್ಟಣ.

೨೮. ವಕ್ತೃ : ನಂಜುಂಡಸ್ವಾಮಿ ತಂದೆ ಚಿಕ್ಕಮಸಣಯ್ಯ, ವಯಸ್ಸು-೬೦, ಬ್ಲಫ್, ಮಳವಳ್ಳಿ ತಾ||.

೨೯. ಡಾ. ದೇಜಗೌ. ಸಂಪಾದಕ "ಸುವರ್ಣಮಂಡ್ಯ", ೨೦೦೬, ಪು. ೨೯೩.

೩೦. ಡಾ.ಎಚ್.ಜೆ. ಲಕ್ಕಪ್ಪಗೌಡ-ಪ್ರಧಾನ ಸಂಪಾದಕ "ಜಾನಪದ ಕೈಪಿಡಿ" ಜಾನಪದ ಮಾಲೆ-೧, ೧೯೯೭, ಪು. ೪೭೩.

೩೧. ದೇಜಗೌ, ಜಾನಪದ ಅಧ್ಯಯನ, ಮೈಸೂರು, ೧೯೭೬, ಪು. ೩೩೮.

೩೨. ಡಾ.ಡಿ.ಆರ್.ಪಾಂಡುರಂಗ "ದಕ್ಷಿಣ ಕನ್ನಡ ಜಿಲ್ಲೆಯ ಭೈರರು" ೧೯೯೦, ಪು. ೧೫೭.

೩೩. ವಕ್ತೃ : ಮುದ್ದಯ್ಯ ತಂದೆ ದೊಡ್ಡಮುದ್ದಯ್ಯ, ವಯಸ್ಸು-೭೨, ದೊಡ್ಡರಸಿನಕೆರೆ, ಮದ್ದೂರು ತಾ॥.

೩೪. ವಕ್ತೃ : ಚಿಕ್ಕಚನ್ನಯ್ಯ ತಂದೆ ಮಾರಯ್ಯ, ವಯಸ್ಸು-೭೫, ಹೊಳಲು ಮಂಡ್ಯ ತಾ॥.

೩೫. ವಕ್ತೃ : ದೊಡ್ಡಪುಟ್ಟಯ್ಯ ತಂದೆ ಕರಿಈರಯ್ಯ, ವಯಸ್ಸು-೭೦, ಬೆಸಗರಹಳ್ಳಿ, ಮದ್ದೂರು ತಾ॥.

೩೬. ಡಾ.ಜಿ.ಎ. ದಾಸೇಗೌಡ "ಮಂಡ್ಯ ಜಿಲ್ಲೆಯ ಜಾತ್ರೆಗಳು" ಗ್ರಾಮ ಸಂಸ್ಕೃತಿ ಮಾಲೆ-೬, ೨೦೦೦, ಪು. ೨.

೩೭. ವಕ್ತೃ : ಸಣ್ಣಮ್ಮ ಗಂಡ ಜೋಗಿಬುಡ್ಡ, ವಯಸ್ಸು-೭೩, ಕೊತ್ತತ್ತಿ, ಮಂಡ್ಯ ತಾ॥.

೩೮. ಡಾ.ಜಿ.ಎ. ದಾಸೇಗೌಡ "ಮಂಡ್ಯ ಜಿಲ್ಲೆಯ ಜಾತ್ರೆಗಳು" ಗ್ರಾಮ ಸಂಸ್ಕೃತಿ ಮಾಲೆ-೬, ೨೦೦೦, ಪು. ೬೨.

೩೯. ಅದೇ ಕೃತಿ, ಪು. ೧೧.

೪೦. ದೇಜಗೌ-ಪ್ರಧಾನ ಸಂಪಾದಕ "ಸಿರಿಯೊಡಲು" ೧೯೯೪, ಪು. ೧೪೮.

೪೧. ವಕ್ತೃ : ಶ್ರೀ ಶ್ರೀ ಶ್ರೀ ವಿದ್ಯಾನಂದ ಸ್ವಾಮೀಜಿ, ವಯಸ್ಸು-೬೮, ಮಠಾಧಿಪತಿ, ಶ್ರೀ ರಾಮರೂಢಸ್ವಾಮಿ ಮಠ, ಮಳವಳ್ಳಿ ಪಟ್ಟಣ.

೪೨. ವಕ್ತೃ : ಎಂ. ಚಂದ್ರು ತಂದೆ ಮರಿಯಯ್ಯ, ವಯಸ್ಸು-೫೮, ಆರತಿಉಕ್ಕಡ, ಶ್ರೀರಂಗಪಟ್ಟಣ ತಾ॥.

೪೩. ವಕ್ತೃ : ಮರುಚ್ಚಮ್ಮ ಗಂಡ ತಮ್ಮಣ್ಣಬೋವಿ, ವಯಸ್ಸು-೬೦, ಕೋಡಿಪುರ, ಮಳವಳ್ಳಿ ತಾ॥.

# ಅಧ್ಯಾಯ – ಐದು

# ಸಾಹಿತ್ಯ ಮತ್ತು ಭಾಷೆ

೫.೧ ಜಾನಪದ ಸಾಹಿತ್ಯ

೫.೨ ಶಿಷ್ಟ ಸಾಹಿತ್ಯ ಮತ್ತು ಭಾಷೆ

# ಅಧ್ಯಾಯ – ಐದು

## ಸಾಹಿತ್ಯ ಮತ್ತು ಭಾಷೆ

ಅನುಭವದ ರಸಪಾಕವು ಸಾಹಿತ್ಯದ ರೂಪದಲ್ಲಿ ಹೊರಬರುತ್ತದೆ. ಇದನ್ನೆ "ಜೀವನದ ಪ್ರತಿಬಿಂಬ" ಸಾಹಿತ್ಯ ಎಂದು ಹೇಳುವುದು. ಶಿಷ್ಟ ಸಾಹಿತ್ಯ ಬರವಣಿಗೆಯ ರೂಪದಲ್ಲಿ ರಚನೆಗೊಂಡಿದ್ದರೆ ಜಾನಪದ ಸಾಹಿತ್ಯ ಬಾಯಿಯಿಂದ ಬಾಯಿಗೆ ಬಂದಿರುವ ಮೌಖಿಕ ಸಾಹಿತ್ಯವಾಗಿದೆ. ಶಿಷ್ಟ ಸಾಹಿತ್ಯದಲ್ಲಿ ವೈಭವೀಕರಣಗಳು ಕಂಡುಬಂದರೆ, ಜಾನಪದ ಸಾಹಿತ್ಯದಲ್ಲಿ ಜೀವನಾನುಭವದ ಸಹಜ ಅಭಿವ್ಯಕ್ತಿ ಕಂಡುಬರುತ್ತದೆ. ಒಂದು ಸಮುದಾಯದ ಸಾಹಿತ್ಯವು, ಅವರ ನೋವು-ನಲಿವುಗಳ ಹಿನ್ನಲೆಯನ್ನು ಒಳಗೊಂಡು ರಚನೆಗೊಂಡಿರುತ್ತದೆ. ಜನಪದ ಸಾಹಿತ್ಯವು "ತನ್ನ ಪರಿಶುದ್ಧತೆಯನ್ನು ಕಾಪಾಡಿಕೊಂಡು, ಸ್ವಚ್ಛವಾಗಿ ಸುಸ್ಪಷ್ಟವಾಗಿ ತನ್ನದೇ ಆದ ಬೆಡಗು ಬಿನ್ನಾಣಗಳಿಂದ ವಿಜೃಂಭಿಸುತ್ತಿದೆ. ತಾನು ಹುಟ್ಟಿದ ನೆಲದ ಉಸಿರೇ, ನೆಲದ ಅನ್ನವೇ ಅದರ ಪ್ರಾಣಕ್ಕೆ ಆಧಾರ. ತನ್ನದಲ್ಲದುದನ್ನು ಹತ್ತಿರ ಸೇರಿಸಗೊಡದು.[೧]

ಸಾಹಿತ್ಯ ಶಿಷ್ಟದ್ದಾಗಿರಬಹುದು ಅಥವಾ ಮೌಖಿಕವಾಗಿದ್ದಾಗಿರಬಹುದು ಅದು ಜೀವನಾನುಭವವನ್ನು ಪ್ರತಿಬಿಂಬಿಸಿ, ಸರಿ-ತಪ್ಪುಗಳ ಅರಿವನ್ನು ಮೂಡಿಸುತ್ತದೆ. ಶಿಷ್ಟ ಸಾಹಿತ್ಯ ಕಲಿತ ಜನರ ಪ್ರಜ್ಞಾಪೂರ್ವಕ ರಚನೆಗಳನ್ನು ಒಳಗೊಂಡದ್ದು. ಅನುಭವಗಳನ್ನು ಸೌಂದರ್ಯಾತ್ಮಕ ಅಭಿವ್ಯಕ್ತಿಯಾಗಿ ಮಾರ್ಪಡಿಸುವ ಪ್ರಕ್ರಿಯೆಗೆ ಉದ್ದೇಶಪೂರ್ವಕವಾಗಿ ಒಡ್ಡಿಕೊಳ್ಳುವುದರ ಫಲವಾಗಿ ರೂಪುಗೊಂಡದ್ದು, ಇಲ್ಲಿ ಕರ್ತೃಕೃತಿ ರಚನೆಗೆ ಮೊದಲಾದ ಅನುಭವಗಳನ್ನು ಪುನರಾವಲೋಕನಕ್ಕೆ ಗುರಿಪಡಿಸುತ್ತಾನೆ; ಒಂದು ವ್ಯವಸ್ಥೆಗೆ ಸಂಯೋಜಿಸುತ್ತಾನೆ. ಆದರೆ ಜನಪದ ಸಾಹಿತ್ಯ ಮಾಗಿದ ಅನುಭವದಿಂದ ಬರುವಂತದ್ದು ಇಲ್ಲಿ ಕರ್ತೃ ಇಲ್ಲ; ಕೃತಿಯೂ ಇಲ್ಲ. ಜಾನಪದ ಸಾಹಿತ್ಯದ ಉದ್ದೇಶವೊಂದೆ ಸಮಾಜವನ್ನ ತಿದ್ದುವಿಕೆ. ಒಟ್ಟಾರೆಯಾಗಿ ಸಾಹಿತ್ಯವು ಬದಲಾವಣೆಯನ್ನ ನಿರೀಕ್ಷಿಸಿ ರಚನೆಗೊಂಡಿರುವ ಭಾಷೆಯೂ ಸಹ ಪ್ರದೇಶದಿಂದ ಪ್ರದೇಶಕ್ಕೆ, ಸಮುದಾಯದಿಂದ ಸಮುದಾಯಕ್ಕೆ ವ್ಯತ್ಯಾಸವಿರುತ್ತದೆ. ಅಲ್ಲದೆ ಆರ್ಥಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಅಭಿವೃದ್ಧಿ ಹೊಂದಿದವರ ಭಾಷೆಯಲ್ಲಿ ನಯ-ನಾಜೂಕುತನವನ್ನು ಕಾಣಬಹುದು.

## ೫.೧ ಜನಪದ ಸಾಹಿತ್ಯ

ಜನಪದರ ಶಾಬ್ದಿಕ ಅಭಿವ್ಯಕ್ತಿಯೇ ಜನಪದ ಸಾಹಿತ್ಯ. ನೋವು-ನಲಿವುಗಳನ್ನು ತಮ್ಮ ಅನುಭವದ ಮೂಲಕ, ಮೌಖಿಕ ಸಾಹಿತ್ಯವನ್ನು ರಚಿಸಿದರು. ಅವರ ದಿನದ ಬಾಳು, ಸಾಗುತ್ತ ಹೋದಂತೆ, ಅವನ ಅವಶ್ಯಕತೆಗೆ ಅನುಗುಣವಾಗಿ, ಅವನ ಭಾವನೆಗಳಿಗೆ ರೂಪುಕೊಡಲು, ಅವನ ಅಂತಃಕರಣದ ಮಿಡಿತವನ್ನು ಹೊರಗೆಡಹಲು ಅವನ ಚಲನವಲನಗಳ ಜೊತೆಯಲ್ಲಿಯೇ ಜನಪದ ಸಾಹಿತ್ಯ ಬೆಳೆಯಿತು. ಜನಪದ ಸಾಹಿತ್ಯ "ಜನ್ಮವೆತ್ತಿದುದ್ದು ಜನಜೀವನ ತುಂಬ ಸರಳವೂ ಸಂಕೀರ್ಣವಲ್ಲದುದೂ, ಕ್ಲಿಷ್ಟವಲ್ಲದುದೂ ಆಗಿದ್ದಾಗ, ಜನರಲ್ಲಿ ಒಂದು ವಿಧವಾದ ತೃಪ್ತಿ, ನೆಮ್ಮದಿ, ದೇವರಿದ್ದಾನೆ, ನಮ್ಮ ಕಷ್ಟಗಳನ್ನು ನೋಡುತ್ತಾನೆ, ನಮ್ಮನ್ನು ಕಾಪಾಡುತ್ತಾನೆ[೨] ಎನ್ನುವುದರ ಹಿನ್ನಲೆಯ ಜೊತೆಗೆ ಅನುಭವವನ್ನು ಸೇರಿಸಿ ಜನಪದ ಸಾಹಿತ್ಯ ರಚಿಸಿದ್ದಾರೆ.

ಜನಪದ ಸಾಹಿತ್ಯವು "ಬಾಯಿಂದ ಬಾಯಿಗೆ ಹರಿಯುವಾಗ ಸಹಜವಾಗಿಯೇ ಹಲವು ಮಾರ್ಪಾಟುಗಳಿಗೆ ಗುರಿಯಾಗುತ್ತದೆ. ಜನಪದ ಕೃತಿಯ ವಹನ ಕ್ರಿಯೆಯಲ್ಲಿ ಪಾಲ್ಗೊಳ್ಳುವ ವ್ಯಕ್ತಿಗಳಲ್ಲಿ ಕೆಲವಾದರೂ ತಾನು ವಹನಗೊಳಿಸುವ ಕೃತಿಗೆ ತನ್ನ ಜಾಣ್ಮೆಯನ್ನು ಕಲೆಗಾರಿಕೆಯನ್ನು ಬೆರಸುವ ಪ್ರಯತ್ನ ಮಾಡುತ್ತಾರೆ. ಹಾಗಾಗಿ ಜನಪದ ಸಾಹಿತ್ಯ ಕಾಲದಿಂದ ಕಾಲಕ್ಕೆ ತನ್ನ ಸ್ವರೂಪವನ್ನು ಬದಲಿಸಿಕೊಂಡು, ಅಪೂರ್ಣವಾದುದನ್ನು ಪೂರ್ಣಗೊಳಿಸಿಕೊಳ್ಳುತ್ತಾ, ಅಸ್ಪಷ್ಟವಾದುದನ್ನು ಸ್ಪಷ್ಟಗೊಳಿಸಿಕೊಳ್ಳುತ್ತಾ, ಸರಳವಾದುದನ್ನು ಸಂಕೀರ್ಣಗೊಳಿಸಿಕೊಳ್ಳುತ್ತಾ ಸಾಗುತ್ತದೆ. ಇಷ್ಟಾದರೂ ಜನಪದ ಸಾಹಿತ್ಯ ತನ್ನ ವಸ್ತು, ಆಶಯ, ಅಭಿವ್ಯಕ್ತಿಯಲ್ಲಿ ಮಹತ್ತರವಾದ ಬದಲಾವಣೆಯನ್ನೇನೂ ಪಡೆದುಕೊಳ್ಳುವುದಿಲ್ಲ.[೩] ಅಂದರೆ ಜನಪದ ಸಾಹಿತ್ಯ ತನ್ನಲ್ಲಿರುವ ಮೌಲ್ಯವನ್ನ ಹಾಗೆಯೇ ಉಳಿಸಿಕೊಂಡಿದೆ. ಇದು ಸರ್ವಕಾಲಿಕವಾದ ಸತ್ಯವನ್ನ, ನೀತಿ-ನಿಯಮಗಳನ್ನ, ಜೀವನ ನಡೆಸುವ ವಿಧಾನವನ್ನು ತನ್ನೊಳಗೆ ಜನಪದ ಸಾಹಿತ್ಯ ಒಳಗೊಂಡಿದೆ. ಮಂಡ್ಯ ಜಿಲ್ಲೆಯ ಗಂಗಾಮತಸ್ಥರು ತಮ್ಮದೇ ಆದ ವೈಶಿಷ್ಟ್ಯ ಪೂರ್ಣವಾದ ಜನಪದ ಸಾಹಿತ್ಯವನ್ನು ಹೊಂದಿದ್ದಾರೆ. ಈ ಜನಪದ ಸಾಹಿತ್ಯವು ಹೆಚ್ಚಾಗಿ ದೇವರ ಭಕ್ತಿ ಪಾರಮ್ಯವನ್ನ ತಿಳಿಸಿಕೊಡುವಂಥದ್ದು. ಇವರ ಜನಪದ ಸಾಹಿತ್ಯವನ್ನು ಕಥೆ, ಹಾಡು, ಗಾದೆಗಳು, ಒಗಟುಗಳು, ಬೈಗುಳಗಳು ಎಂದು ವಿಂಗಡಿಸಿಕೊಳ್ಳಬಹುದು.

### ಕಥೆಗಳು

ಯಾವುದೇ ಜನಪದ ಕಥೆಗಳು ರೂಪುಗೊಳ್ಳುವಾಗ ತನ್ನ ಭೌಗೋಳಿಕ, ಚಾರಿತ್ರಿಕ, ಸಾಂಸ್ಕೃತಿಕ, ಧಾರ್ಮಿಕ ಪರಿಸರಗಳಿಂದ ಪ್ರಭಾವಿತವಾಗಿಯೇ ರಚನೆಗೊಳ್ಳುತ್ತವೆ. ಇವರು ಕಥೆ

ಹೇಳುವಾಗ ತಮ್ಮದೇ ಆದ ಆಡು ಮಾತಿನ ಸೊಗಡು ಹಾಗೂ ಭಾಷಾ ಸಂಪತ್ತಿನಿಂದ ಗಮನಸೆಳೆಯುತ್ತಾರೆ. ಗಂಗಾಮತಸ್ಥರು ತಮ್ಮ ದೇವತೆಗಳ ಬಗ್ಗೆ ಹಲವಾರು ಕಥೆಗಳನ್ನ ಹೇಳುತ್ತಾರೆ.

**ಉಕ್ಕಡದ ಮಾರಮ್ಮನ ಕಥೆ**

ಉಕ್ಕಡದ ಮಾರಮ್ಮ ಅಹಲ್ಯದೇವಿ. ಈಕೆ ಶಾಪಗ್ರಸ್ಥಳಾಗಿ, ರಾಮನ ಪಾದಸ್ಪರ್ಶದಿಂದ ಮುಕ್ತಿ ಪಡೆದು, ಶಿವನ ಆಜ್ಞೆಯಂತೆ ಆರತಿ ಉಕ್ಕಡದಲ್ಲಿ ಪ್ರತಿಷ್ಠಾಪನೆಗೊಂಡು ಗಂಗಾಮತಸ್ಥರಿಂದ ಪೂಜಿಸಿಕೊಳ್ಳುತ್ತಿದ್ದಾಳೆ.

**ಕಾಳ ದೇವರ ಕಥೆ**

ಮಳವಳ್ಳಿ ತಾಲ್ಲೂಕಿನ ಯತ್ತಂಬಾಡಿಯಲ್ಲಿ ಕಾಳದೇವರು ಹೇಗೆ ಪ್ರತಿಷ್ಠಾಪನೆಗೊಂಡಿದ್ದು, ಗಂಗಾಮತಸ್ಥರ ಹೆಣ್ಣನ್ನ ಮದುವೆಯಾಗಿ, ಇಂದಿಗೂ ಗಂಗಾಮತಸ್ಥರಿಂದಲೇ ಪೂಜಿಸಿಕೊಳ್ಳುತ್ತಿರುವ ಕಥೆ.

**ಶ್ರೀ ರಾಮರೂಢರ ಜೀವನದ ಕಥೆ**

ಮಳವಳ್ಳಿ ಪಟ್ಟಣದಲ್ಲಿರುವ ಶ್ರೀ ರಾಮಾರೂಢ ಸ್ವಾಮಿ ಮಠವನ್ನ ಸ್ಥಾಪಿಸಿದ ಪವಾಡ ಪುರುಷ ಶ್ರೀರಾಮಾರೂಢ ಕಥೆಯನ್ನು ಹೇಳುತ್ತಾರೆ. ಬಾಗಲಕೋಟೆಯಿಂದ ಮಳವಳ್ಳಿಗೆ ಬಂದು ಗಂಗಾಮತಸ್ಥರಿಗೆ ಧಾರ್ಮಿಕ ಅರಿವು ಮೂಡಿಸಿ ಪವಾಡ ಮಾಡಿ ಮಠ ಸ್ಥಾಪಿಸಿದ ಕಥೆ ಇದು.

**ನಳ್ಳಿ ಕಥೆ**

ಮಲತಾಯಿಯೊಬ್ಬಳು ತನ್ನ ಸವತಿ ಮಗಳನ್ನು ಹಣದಾಸೆಗೆ ನಳ್ಳಿಯೊಂದಕ್ಕೆ ಕೊಟ್ಟು ಮದುವೆ ಮಾಡುತ್ತಾಳೆ. ಆಕೆ ಮಾಡಿದ ದಾನ, ಧರ್ಮ, ಪುಣ್ಯ ಕಾರ್ಯದಿಂದ ನಳ್ಳಿ ರಾಜಕುಮಾರನಾಗುತ್ತಾನೆ. ಆನಂದದಿಂದ ಅವರು ಸಂಸಾರ ಮಾಡಿಕೊಂಡು ಇರುವಾಗ, ಮಲತಾಯಿ ಬಂದು ಆಕೆಯನ್ನು ಬಾವಿಗೆ ತಳ್ಳಿ, ತನ್ನ ಕುರುಡಿ ಮಗಳನ್ನು ರಾಜಕುಮಾರನ ಜೊತೆಯಲ್ಲಿ ಕಳುಹಿಸುತ್ತಾಳೆ. ಅನುಮಾನಗೊಂಡ ದೊರೆ ಮಗ, ಬಳೆಗಾರನ ಮೂಲಕ ತನ್ನ ಹೆಂಡತಿಯನ್ನ ಪತ್ತೆ ಹಚ್ಚಿ ಸುಖವಾಗಿದ್ದ.[೪]

### ನಾಗೇಂದ್ರಸ್ವಾಮಿ ಕಥೆ

ಮಕ್ಕಳಿಲ್ಲದ ಹೆಣ್ಣನ್ನು ಮನೆಯವರೆಲ್ಲ ಕಡೆಗಣಿಸಿದ್ದರಿಂದಾಗಿ, ಮಕ್ಕಳನ್ನು ಪಡೆದೇ ತೀರಬೇಕೆಂದು, ಗರ್ಭಿಣಿಯಂತೆ ನಟಿಸುತ್ತಾಳೆ. ಗುಂಡು ಕಲ್ಲೊಂದನ್ನ ಮಗುವೆಂದು ಇಟ್ಟುಕೊಂಡು ಯಾರಿಗೂ ತೋರಿಸದೆ ಗಂಡನ ಮನೆಗೆ ಹೋಗುವಾಗ, ಇಂಥ ಅವಮಾನದಲ್ಲಿ ಹೋಗುವುದೇಗೆಂದು ಸಾಯಲು ನಿರ್ಧರಿಸಿ ಹುತ್ತಕ್ಕೆ ಕೈ ಹಾಕಿ ನಾಗೇಂದ್ರಸ್ವಾಮಿಯ ರೋಗ ಪರಿಹರಿಸಿ, ಮಗುವನ್ನು ಪಡೆದು ಅಲ್ಪಾಯುಷಿಯಾಗಿದ್ದ ಮಗುವಿಗೆ ದೀರ್ಘಾಯುಷಿಯಾಗುವಂತೆ ವರ ಪಡೆದು ಸುಖವಾಗಿದ್ದ ಕತೆ.[೫]

### ಅಣ್ಣತಂಗಿ ಕಥೆ

ಹೆಂಡತಿ ಮಾತು ಕೇಳಿ ತಂಗಿಯನ್ನು ಕೊಂದು ಹಾಕಿದ ಅಣ್ಣ, ಸತ್ತ ಹೆಂಡತಿಯನ್ನ ಬದುಕಿಸಿಕೊಂಡ ಗಂಡನ ಕಥೆ.[೬]

ಇವರು ಹೇಳುವ ಕಥೆಗಳ ಆಶಯವೆಂದರೆ, ದೇವರ ಬಗ್ಗೆ ಇರುವ ನಂಬಿಕೆ, ಪವಾಡ, ಸಾಮಾಜಿಕ ನ್ಯಾಯ, ವಿಡಂಬನೆ ಮುಂತಾದ ಉದ್ದೇಶಗಳನ್ನ ಹೊಂದಿ, ಪರಿವರ್ತನೆಯಾಗುವ ಬಗೆಯನ್ನ ತಿಳಿಸುತ್ತವೆ.

### ಹಾಡುಗಳು

"ಅಕ್ಕಿಬೀಸು ಕಲ್ಲೇ ಮುತ್ತೀನ ಕಲ್ಲೆ
ನಮ್ಮವಾನ ಮನೆಯ ಒಜುಗಲ್ಲೇ । ಪಚ್ಚೆತೆನೆಯ
ನಾನೊಂದೊತ್ತತಿದ್ದು ನೆನೆದೆನೋ"

ರಾಗಿ ಬೀಸುವಾಗ ಹಾಡುವ ಹಾಡು "ಅಕ್ಕಿ ಬೀಸು ಕಲ್ಲೇ ಮುತ್ತೀನ ಕಲ್ಲೆ, ನಮ್ಮವಾನ ಮನೆಯ ಒಜುಗಲ್ಲೇ । ಪಚ್ಚೆತೆನೆಯ, ನಾನೊಂದೊತ್ತತಿದ್ದು ನೆನೆದೇನೋ" ಅಕ್ಕಿ ರಾಗಿಯನ್ನ ಬೀಸುವ ಕಲ್ಲು ಸಾಮಾನ್ಯದ್ದಲ್ಲ ಹಸಿಟ್ಟು ಮಾಡಿಕೊಡುವುದರೊಂದಿಗೆ, ಇವರ ಹಸಿವನ್ನ ನೀಗಿಸುತ್ತದೆ. ಗಂಗಾಮತಸ್ಥರು 'ಗಂಗೆ'ಯನ್ನು ಪೂಜಿಸಿ ತರುವಾಗ ಹಾಡುವ ಹಾಡುಗಳು, ಏತದಿಂದ ನೀರನ್ನು ಉಯ್ಯುವಾಗ ಹಾಡುವ ಹಾಡುಗಳು, ಮದುವೆಯ ಸೋಬಾನೆ ಪದಗಳು, ಶ್ರೀರಾಮಾರೂಢ ಜನನದ ಹಾಡುಗಳು, ಮಾದೇಶ್ವರನ ಹಾಡುಗಳು, ರಾಮಭಜನೆಯ ಹಾಡುಗಳು, ರಾಗಿ ಬೀಸುವಾಗ ಹಾಡುವ ಹಾಡುಗಳು. ಈ ಹಾಡುಗಳು ಸಂದರ್ಭಕ್ಕೆ ತಕ್ಕಂಥ

ಅರ್ಥಗಳನ್ನು ಹೊಂದಿರುತ್ತವೆ. ಈ ಹಾಡುಗಳಲ್ಲಿ ಭಕ್ತಿಯ ಪಾರಮ್ಯತೆ, ಮದುವೆಯ ಅರ್ಥ, ದುಡಿಮೆಯ ಆಯಾಸ ಮರೆಸುವಿಕೆಯ ಆಶಯಗಳು ಹಾಡುಗಳಲ್ಲಿ ಅಭಿವ್ಯಕ್ತವಾಗಿವೆ. ಅವರು ಹೇಳಿರುವ ಹಾಡುಗಳನ್ನ ಅನುಬಂಧದಲ್ಲಿ ಬರೆಯಲಾಗಿದೆ.

## ಗಾದೆಗಳು

'ಗಾದೆ ವೇದಕ್ಕೆ ಸಮಾನ; ವೇದ ಸುಳ್ಳಾದರೂ ಗಾದೆ ಸುಳ್ಳಾಗದು' ಎಂಬ ಮಾತು ಅರ್ಥಗರ್ಭಿತವಾದುದ್ದು. ಪ್ರಪಂಚದ ಎಲ್ಲ ಜನವರ್ಗಗಳಲ್ಲಿಯೂ ಗಾದೆ ಪ್ರಚಲಿತದಲ್ಲಿದೆ. ನಿತ್ಯದ ಭಾಷೆಯಂತೆಯೇ ಸಹಜವಾಗಿ, ಅನಿವಾರ್ಯವಾಗಿ ಜನಜೀವನದೊಡನೆ ಗಾದೆ ಬೆಳೆದು ಬಂದಿದೆ. ನಿತ್ಯ ಜೀವನದಲ್ಲಿ ಎಲ್ಲ ಸಂದರ್ಭಗಳಲ್ಲಿಯೂ ಅವಶ್ಯಕತೆಗಳಿಗನುಗುಣವಾಗಿ ಗಾದೆಗಳು ಪ್ರಯೋಗವಾಗುತ್ತಿರುತ್ತವೆ.[೭] ಗಾದೆಗಳಿಂದ ಹೊರ ಬರುವ ಅರ್ಥ ಬಹಳ ಮೌಲ್ಯಯುತವಾದುದ್ದು.

'ಗಾದೆ' ಪದವು ಮೂಲತಃ ಸಂಸ್ಕೃತದ 'ಗಾಥಾ' ಎಂಬುದರಿಂದ ನಿಷ್ಪನ್ನಗೊಂಡಿದೆ ಎಂದು ವಿದ್ವಾಂಸರು ಭಾವಿಸುತ್ತಾರೆ. ಸಂಸ್ಕೃತದ 'ಗಾಥ'ವು ಪ್ರಾಕೃತದಲ್ಲಿ 'ಗಾಹೆ' ಆಗಿ ಕನ್ನಡದಲ್ಲಿ 'ಗಾದೆ' ಆಗಿರಬೇಕು. ಆದರೆ ಸಂಸ್ಕೃತದಲ್ಲಿ 'ಗಾಥಾ'ವು ಛಂದಸ್ಸಿನ ಒಂದು ಜಾತಿಯಾಗಿದೆ. ಕನ್ನಡದಲ್ಲಿ 'ಗಾದೆ' ಸಂವಾದಿಯಾಗಿ 'ನಾಣ್ನುಡಿ' ಎಂಬ ಅಚ್ಚಗನ್ನಡ ಪದ ಬಳಕೆಯಲ್ಲಿದೆ. ಇದರ ಜೊತೆಗೆ ಜಾಣ್ನುಡಿ, ನಲ್ನುಡಿ, ಲೋಕೋಕ್ತಿ, ಶಾಸ್ತ್ರ ಎಂಬ ಪದಗಳೂ ಕ್ವಚಿತ್ತಾಗಿ ಬಳಕೆಯಲ್ಲಿವೆ.[೮]

ಗಂಗಾಮತಸ್ಥರು ಬಳಸುವ ಗಾದೆಗಳು ತಿಳುವಳಿಕೆಯನ್ನು ಮೂಡಿಸುವಂಥದ್ದು. ತಪ್ಪಿನ ಅರಿವನ್ನು ಸಂದರ್ಭಕ್ಕೆ ತಕ್ಕಂತೆ ಮೂಡಿಸುತ್ತವೆ. ಗಾದೆಗಳು ಹಲವು ಬಗೆಯ ಕಾರ್ಯಗಳನ್ನು ಮುಖ್ಯವಾಗಿ ಅನಕ್ಷರಸ್ಥರಾದ ಅವರಿಗೆ ತಿಳುವಳಿಕೆ ನೀಡುವ ಕೆಲಸವನ್ನು ನಿರಂತರವಾಗಿ ಮಾಡುತ್ತಾ ಬಂದಿವೆ. 'ಕುಲಕ್ಕೆ ಮೃತ್ಯು ಕೊಡ್ಲಿ ಕಾವು' 'ಬೆಂಕಿ ಇಲ್ಲದೆ ಹೊಗೆಯಾಡುವುದಿಲ್ಲ' ಇಂತಹ ಗಾದೆಗಳು, ವ್ಯಕ್ತಿ ಮಾಡಿದ ತಪ್ಪಿನ ಅರಿವನ್ನು ಮೂಡಿಸುತ್ತವೆ. ಗಾದೆ ಪರಂಪರಾನುಗತವಾದ ತಿಳುವಳಿಕೆಯನ್ನು ಅವು ಮತ್ತೆ ಮತ್ತೆ ಇವರ ನೆನಪಿಗೆ ತರುವುದರಿಂದಾಗಿ, ಒಂದು ಬಗೆಯ ಸಾಮಾಜಿಕ ಹತೋಟಿಯನ್ನು ಸಾಧಿಸುತ್ತವೆ. ಗಾದೆಗಳ ಆಶಯ ಪ್ರಮುಖವಾಗಿ 'ಬದಲಾವಣೆ' ಆಗಿದೆ. ಇಂತಹ ಹಲವಾರು ಗಾದೆಗಳನ್ನು ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಹೇಳಿದ್ದಾಳೆ. ಅವುಗಳನ್ನು ಅನುಬಂಧದಲ್ಲಿ ಬರೆಯಲಾಗಿದೆ.

## ಒಗಟುಗಳು

ಒಗಟುಗಳು ಹಳ್ಳಿಗರ ಬುದ್ಧಿ ಕುಶಲತೆಗೆ ಕೈಗನ್ನಡಿಯಂತಿವೆ. ಬೇಸರ ನೀಗಿಸಿಕೊಳ್ಳಲು ಮತ್ತೊಬ್ಬನ ಸೂಕ್ಷ್ಮತೆಯನ್ನು ಅರಿಯಲು ಚಮತ್ಕಾರದಿಂದ ಕೂಡಿದವು ಒಗಟುಗಳು. ಒಗಟಿನ ಉದ್ದೇಶವು ಮೂಲತಃ ಅದು ಬುದ್ಧಿಯನ್ನು ಹರಿತಗೊಳಿಸಿ, ಹಾಸ್ಯ ಗುಣವನ್ನು ಮೂಡಿಸುತ್ತವೆ. ಒಗಟು ಕಟ್ಟುವವನು ಒಂದೇ ವಸ್ತುವನ್ನು ಆಧಾರವಾಗಿಸಿಕೊಂಡು ತನ್ನ ರೂಪಕ ಸಾಮರ್ಥ್ಯದಿಂದ ಕೆಲವು ಬಾರಿ ಉಪಮಾ ಬಲದಿಂದ, ಬಗೆ ಬಗೆಯ ಸುಂದರವಾದ ಶಬ್ದಗಳನ್ನು ಬಳಸಿಕೊಂಡು ವಾಕ್ಚಾತುರ್ಯದಿಂದ ಹಲವು ಒಗಟುಗಳನ್ನು ಕಟ್ಟುತ್ತಾರೆ.

ಒಗಟುಗಳ ಸ್ವರೂಪವನ್ನು ಗಮನಿಸಿದಾಗ ಎದ್ದು ಕಾಣುವುದು ಅದರ ರೂಪಕ ಶಕ್ತಿಯೇ. ಜೇಮ್ಸ್ ಎ. ಕೆಲ್ಲೋ ಎಂಬುವನು ಹೇಳಿರುವಂತೆ "ಆಲಂಕಾರಿಕವಾಗಿ ಒಗಟು ರೂಪಕದೊಡನೆ ಆಳವಾದ ಸಂಬಂಧವನ್ನು ಹೊಂದಿದೆ. ವ್ಯಾವಹಾರಿಕ ಪ್ರಯೋಗಕ್ಕಿಳಿಯದ, ಅರ್ಥಸ್ಫುಟವಿಲ್ಲದ ರೂಪಕ ಅಥವಾ ರೂಪಕ ಸಮುದಾಯವನ್ನೇ ಒಗಟು ಎನ್ನುವುದು". ಒಗಟುಗಳು ರೂಪಕದಲ್ಲಿಯೇ ವ್ಯಕ್ತವಾಗುವುದಲ್ಲದೆ, ಅರ್ಥ ಚಮತ್ಕಾರಕ್ಕೆ ಎಡೆ ಮಾಡಿಕೊಡುತ್ತವೆ. ಕನ್ನಡದಲ್ಲಿ ಒಗಟಿಗೆ "ಒಂಟು, ಒಡಚುವ ಕತೆ, ಒಡ್ಡಿದ ಕತೆ, ಒಡಗಥೆ, ಒಗಟೆ, ಎಂಬ ಹೆಸರುಗಳಿಂದಲೂ ಈ ಪ್ರಕಾರವನ್ನು ಗುರುತಿಸಲಾಗುತ್ತಿದೆ".[೯] ಗಂಗಾಮತಸ್ಥರಲ್ಲಿ ಗಾದೆಗಳಿರುವಂತೆಯೇ ಒಗಟುಗಳು ಸಹ ಪ್ರಸಿದ್ಧವಾಗಿವೆ. 'ಮದುವೆಯ ಸಮಾರಂಭದಲ್ಲಿ ಒಗಟುಗಳನ್ನು ಕೇಳುವುದು ಅದನ್ನು ಬಿಡಿಸುವುದು ಲೋಕಸಾಮಾನ್ಯವಾದ ಸಂಪ್ರದಾಯವಾಗಿದೆ. ಈ ಒಗಟನ್ನು ಬಿಡಿಸಬಲ್ಲವರು ಬದುಕಿನ ಒಗಟುಗಳನ್ನು ಬಿಡಿಸುತ್ತಾರೆ ಎಂಬುದೇ ಇಲ್ಲಿನ ತಾತ್ವಿಕ ಅರ್ಥ.[೧೦]

ಮಂಡ್ಯ ಜಿಲ್ಲೆಯ ಗಂಗಾಮತಸ್ಥರಲ್ಲಿರುವ ಒಗಟುಗಳನ್ನು ವಕ್ತೃಗಳಿಂದ ಸಂಗ್ರಹಿಸಿ ಕೆಳಕಂಡಂತೆ ವರ್ಗೀಕರಿಸಬಹುದು.

೧. ಹಾಡಿನ ರೂಪದ ಒಗಟುಗಳು

೨. ಗಣಿತ ರೂಪದ (ಚಮತ್ಕಾರದ) ಒಗಟುಗಳು

೩. ಏಕ ವಾಕ್ಯದ ಒಗಟುಗಳು

೪. ಸಂಕೀರ್ಣ ಒಗಟುಗಳು

## ಹಾಡಿನ ರೂಪದ ಒಗಟುಗಳು

ಕಾಡಲ್ಲಿ ಹುಟ್ಟೋದು
ಕಾಡಲ್ಲಿ ಬೆಳವೋದು
ಕೋರೀರ ಮುಂದೆ ಕುಣಿವೋದು          ಉತ್ತರ – ಒನಕೆ

ಒನಕೆ ಕಾಡಿನಲ್ಲಿ ಬೆಳೆಯುವ ಮರದ ತುಂಡು ಅದನ್ನು ಕಡಿದು ತಂದು ಭತ್ತ ಕುಟ್ಟಲು ಬಳಸುತ್ತಾರೆ. ಭತ್ತ ಕುಟ್ಟುವವರು ಹೆಂಗಸರು. ಕುಟ್ಟುವಾಗ ಮೇಲಿನಿಂದ ಕೆಳಕ್ಕೆ ಕೆಳಗಡೆಯಿಂದ ಮೇಲಕ್ಕೆ ಎತ್ತಿ ಎತ್ತಿ ಕುಟ್ಟುತ್ತಾರೆ.

**ಗಣಿತ ಮತ್ತು ಚಮತ್ಕಾರದ ಒಗಟುಗಳು**

ಅತ್ತೆ ಸೊಸೆರು ಅವರಿಬ್ರು
ಅತ್ಗೆ ನಾದ್ನಿ, ಇವರಿಬ್ಬರು
ಮೂರು ರೊಟ್ಟಿ ಸುಟ್ಟವು
ಮುಂದೆ ಹಂಚಿಕೊಂಡು ತಿಂದ್ರು

(ಅತ್ತೆ, ಸೊಸೆ, ಮಗಳು) ಮೂರು ಮಂದಿ

ಇಲ್ಲಿ ಚಮತ್ಕಾರವಿರುವುದು ಕಂಡುಬರುತ್ತದೆ. ಮೂರು ರೊಟ್ಟಿಯನ್ನು ತಿಂದವರು ಅತ್ತೆ, ಸೊಸೆ, ಮಗಳು, ಎಂಬುದರ ಹಿನ್ನಲೆಯಲ್ಲಿ ಒಗಟು ಬಂದಿದೆ.

**ಏಕವಾಕ್ಯದ ಒಗಟುಗಳು**

'ಅಪ್ಪನ ದುಡ್ಡು ಎಣಿಸೋಕಾಗಲ್ಲ, ಅಮ್ಮನ ಸೀರೆ ಮಡಿಸೋಕಾಗಲ್ಲ' – ನಕ್ಷತ್ರ, ಆಕಾಶ
ಒಂದು ಗುಂಡೀಲಿ ಒಂದೇ ಕೊರ್ಮ – ನಾಲಿಗೆ
ಮೂಲೇಲಿ ಮುದ್ಕಿ ಕೊಯ್ತಾರೆ – ಹಲಸಿನ ಹಣ್ಣು

**ಸಂಕೀರ್ಣ ಒಗಟುಗಳು**

೧. 'ಅಕ್ಕ ಅಕ್ಕ ಬಾವಿನೋಡು
ಬಾವಿ ಒಳಗೆ ನೀರು ನೋಡು
ನೀರೊಳಗೆ ಹಗ್ಗ ನೋಡು
ಹಗ್ಗದೊಳಗೆ ಬೆಳ್ಕು ನೋಡು' – ದೀಪ

೨. 'ಮರದಲ್ಲಿ ಮರ ಹುಟ್ಟಿ
ಮರಚಿತ್ರ ಕಾಯಾಗಿ
ತಿನ್ನಲಾರದ ಹಣ್ಣು ಬಲುರುಚಿ' – ಮಗು[೧೧]

ಗಂಗಾಮತಸ್ಥರು ಬಿಡುವಿನ ವೇಳೆಯಲ್ಲಿ ಚರ್ಚಿಸುತ್ತಾ ಚರ್ಚಿಸುತ್ತಾ ಒಗಟುಗಳನ್ನು ಹೇಳಿ, ಅವುಗಳಿಂದ ಉತ್ತರ ಬಾರದಿದ್ದಾಗ ಒಗಟನ್ನು ಕೇಳಿದ ವ್ಯಕ್ತಿ, ಹೇಳಿದ ಹಾಗೆ ಮಾಡಬೇಕು. ಒಗಟುಗಳು ಬುದ್ಧಿಗೆ ಚಮತ್ಕಾರವನ್ನು ನೀಡುವುದರೊಂದಿಗೆ, ಮನರಂಜನೆಯನ್ನು ನೀಡುತ್ತವೆ.

## ಬೈಗುಳ

ಜನಪದರ ಬದುಕಿನಲ್ಲಿ 'ಬೈಗುಳ'ಗಳು ಬೆರೆತುಹೋಗಿವೆ. ಜನಪದ ಸಾಹಿತ್ಯ ಮನುಷ್ಯನ ಬದುಕಿನ ಯಾವ ಅಂಶವನ್ನೂ ಬಿಡದಂತೆ ತನ್ನ ಆವರಣಕ್ಕೆ ಅಳವಡಿಸಿಕೊಂಡಿದೆ. ತನ್ನ ಕೋಪವನ್ನು ಹತ್ತಿಕ್ಕಿಕೊಳ್ಳದ ವ್ಯಕ್ತಿ ತನ್ನ ಶತ್ರು ಅಥವಾ ತನ್ನನ್ನು ವಿರೋಧಿಸಿದವನ ವಿರುದ್ಧ ಕಠಿಣವಾದ ಮಾತುಗಳನ್ನು ಆಡತೊಡಗುತ್ತಾನೆ. ಆದರೆ ಜನಪದರು ಯಾವ ಮುಲಾಜೂ ಇಲ್ಲದೆ ಅವನ ವಂಶದವರನ್ನೆಲ್ಲಾ ಹೀನಾ-ಮಾನವಾಗಿ ತುಚ್ಛೀಕರಿಸಬಹುದು. ಸಾಮಾನ್ಯವಾಗಿ ಬೈಗುಳಗಳನ್ನು ಬಳಸುವವರು ಹೆಂಗಸರು. ವಾಚಾನುಗೋಚರವಾಗುವಂತೆ ಉದ್ರೇಕಗೊಂಡು ಬಯ್ಯುವುದು ಕೆಲವರ ಗುಣ, ಬೈಗುಳಗಳು ಲಯಬದ್ಧವಾಗಿ, ರಾಗಬದ್ಧವಾಗಿ, ಭಾವ ತೀವ್ರತೆಯ ಸಮಯದಲ್ಲಿ ಸ್ಫೋಟಗೊಳ್ಳುತ್ತವೆ.

ಬೈಗುಳಗಳನ್ನು ಕೇವಲ ದ್ವೇಷರೋಷಗಳ ಉದ್ರಿಕ್ತ ಸ್ಥಿತಿಯಲ್ಲಿ ಮಾತ್ರ ಕಾಣುವುದಿಲ್ಲ. ಪ್ರೀತಿಯಲ್ಲಿ ಮತ್ತು ಸ್ನೇಹಾಚಾರದಲ್ಲೂ ಬೈಗುಳ ಆತ್ಮೀಯತೆ ಹಿನ್ನೆಲೆಯಲ್ಲಿ ಬರುತ್ತದೆ. ಮಕ್ಕಳನ್ನು ಪ್ರೀತಿಯಿಂದ ಬೈದರೆ, ಸ್ನೇಹಿತರು ಸಲುಗೆಯ ಕಾರಣ ಬೈಗುಳಗಳನ್ನು ಬಳಸುತ್ತಾರೆ. ಆದರೆ ಹೆಚ್ಚಾಗಿ ಕೋಪ, ವ್ಯಗ್ರತೆಗಳ ಅಭಿವ್ಯಕ್ತಿ ರೂಪ ಬೈಗುಳುಗಳು, ಕೋಪಾವಿಷ್ಟನಾದ ವ್ಯಕ್ತಿಯೋರ್ವ ತನ್ನ ಎದುರಾಳಿಯನ್ನು ಬೈಯ್ಯುವುದರಿಂದ ಮನಸ್ಸಿಗೆ ಶಾಂತಿ ದೊರೆಯುತ್ತದೆ."[೧೨] ಎಲ್ಲ ಸಮುದಾಯಗಳಲ್ಲಿ ಬೈಗುಳಗಳು ಕಂಡುಬರುವಂತೆ ಗಂಗಾಮತಸ್ಥರಲ್ಲಿಯೂ ಕಂಡುಬರುತ್ತವೆ. ಅದೇ ಸಮುದಾಯದವರು ಅಥವಾ ಬೇರೆ ಸಮುದಾಯದವರೊಂದಿಗೆ ಜಗಳವಾಡುವಾಗ, ಕೋಪ ತೀರಿಸಿಕೊಳ್ಳುವಾಗ ಬೈಗುಳಗಳನ್ನು ಬಳಸುತ್ತಾರೆ. ಇದರ ಬೈಗುಳಗಳನ್ನು ಪ್ರಮುಖವಾಗಿ ನಾಲ್ಕು ಭಾಗ ಮಾಡಿಕೊಳ್ಳಬಹುದು. (೧) ಶಾಪ ಹಾಕುವ ಬೈಗುಳ (೨) ಅಶ್ಲೀಲ ಬೈಗುಳ (೩) ಕೆಟ್ಟ ಬೈಗುಳ (೪) ವ್ಯಕ್ತಿಯ ಕುರಿತ ಬೈಗುಳ

೧. **ಶಾಪ** : ಶತ್ರುವಿನ ಕುಟುಂಬವು ನಾಶವಾಗಲೆಂದು ಅವನ ಹಾಗೂ ಅವನ ಕುಟುಂಬದವರನ್ನ ಕುರಿತು ಕೆಟ್ಟದಾಗಲೆಂದು ಹಲವು ರೀತಿಯಲ್ಲಿ ಬೈಯುವುದೇ ಶಾಪ. ಕೆಲವರ ನಾಲಗೆಯಲ್ಲಿ

'ಮಚ್ಚೆ' ಇದ್ದು. ಅವರು 'ಹಿಡಿಶಾಪ' ಹಾಕಿದರೆ ಅದರಂತೆಯೇ ಆಗುತ್ತದೆಂಬ ಭಯದ ಹಿನ್ನಲೆಯಲ್ಲಿ ವ್ಯಕ್ತಿಯ ಮೇಲೆ ಶಾಪ ತೀವ್ರ ಪರಿಣಾಮ ಬೀರುತ್ತದೆ.

೧. ನಿನ್ನ ಮನೆ ಹಾಳಾಗ ೨. ನಿನ್ನ ಹೆಂಡ್ತಿ ಮುಂಡೆಯಾಗ ೩. ನಿನ್ನ ಹೆಣ್ಣ ತಿನ್ಕೋಳ. ೪. ನಿನ್ನ ಮನೆಗೆ ಬೆಂಕಿ ಬಿಳ ೫. ನೀನ್ ಹೋದ್ ದಾರೀಲಿ ಹಿಂದಕ್ಕೆ ಬರ್ದೆ ಹೋಗ ೬. ಹಿಂದ್ ಭೇದಿ, ಮುಂದ್ ಭೇದಿ ಕೊಡ ೭. ನಿನ್ನ ಹೆಣ ತೊಳೆಯ ೮. ನಿನಗೆ ಕುಷ್ಟರೋಗ ಬರ ೯. ವರ್ಷದಿಷ್ಟೋತ್ಕೆ ನೀಸಾಯ ೧೦. ನಿನ್ ಮನೆಗೆ ಗೂಬೆ ಕೂತ್ಕೋಳ ೧೧. ನಿನಗೆ ಲಕ್ವ ಹೊಡೆಯ ೧೨. ನಿನ್ನ ಮಗ್ನ ತಿನ್ಕೋಳ ೧೩. ನಿನ್ನ ಬಾಯಿಗೆ ಹುಳ ಬೀಳ ೧೪. ನಿನ್ನ ಕಣ್ಣು ಹಿಂಗ ೧೫. ನಿನ್ನ ಕಪಾಲ ಸಿಡಿಯ

**೨. ಅಶ್ಲೀಲ ಬೈಗುಳ :** ಕೋಪ ಹೆಚ್ಚಾದ ಸಂದರ್ಭದಲ್ಲಿ ಸೊಂಟದ ಕೆಳಗಿನ ಮಟ್ಟಕ್ಕೆ ಇಳಿದು ಬೈಯ್ಯುತ್ತಾರೆ. ಲೈಂಗಿಕ ಅಂಗಗಳನ್ನು ಹೆಸರಿಸಿ, ಆಕೆಯ ಹೆಂಡತಿ, ಮಗಳನ್ನು ಕುರಿತು ಬೈಯ್ಯುತ್ತಾರೆ. ಇಂಥ ಬೈಗುಳಗಳನ್ನು ಕೇಳಲಾಗದು. ಎಂಥವರನ್ನೂ ಇಂಥ ಬೈಗುಳಗಳು ನಾಚಿಕೆಯಾಗಿಸುತ್ತವೆ.

೧. ನಿನ್ನ ತಾಯ್ ನಾಕೆಯ್ಯ
೨. ನಿನ್ನ ಮಗಳ ತುಲ್ಲಿಗೆ ನನ್ನ ತುಣ್ಣೆ
೩. ನಿನ್ನ ಮೊಲೆನಾಕೆಯ್ಯ
೪. ನಿನ್ನ ತುಣ್ಣೆಗೆ ಕಜ್ಜೆತ್ತ
೫. ನಿನ್ನ ತುಲ್ಲಿಗೆ ಕಜ್ಜೆತ್ತ
೬. ನಿನ್ನ ತಿಕನಾಕೆಯ್ಯ
೭. ನನ್ನ ಗಂಡ್ನ ಹಿಡ್ಕ ನೀಕೆಯ್ಯ

**೩. ಕೆಟ್ಟ ಬೈಗುಳ :** ಕೆಲವು ಕೆಟ್ಟ ನುಡಿಗಳಿಂದ ನಿಂದಿಸಿ, ಅತ್ಯಂತ ಕೀಳು ಶಬ್ದಗಳಿಂದ ಶತ್ರುವಿಗೆ ಬೈಯುವುದು. ಇವುಗಳನ್ನು ಸಹ ಕೇಳುವುದಕ್ಕೆ ಅಸಹ್ಯವಾಗುತ್ತದೆ.

೧. ತೂ ನನ್ನ ಸವತಿ ಮಗನೆ
೨. ಎಲೊ ಅನ್ಯಾಯಕಾತಿ ಕೆಟ್ಮುಂಡೆ
೩. ಕಲ್ಕೆತ್‌ರಂಡೆ
೪. ನಿನ್ನ ಹೆಣ್ಣು ಮುಂಡೆಯಾಗ
೫. ತೂ ನನ್ನ ಸವತಿ
೬. ಹಾದಿರಗಿತ್ತಿ
೭. ಸೂಳೇ ಮಗ್ನೆ
೮. ಬೋಳೀ ಮಗ್ನೆ
೯. ಬೇವಾರ್ಸಿ ಮುಂಡೆ
೧೦. ನಿನ್ನ ಮುಖಕ್ಕೆ ನನ್ನ ಹಾಟುಯ್ಯ
೧೧. ತೂ ಮುಂಡೆ
೧೨. ನಾಯಿ ಮುಂಡೆ

**೪. ವ್ಯಕ್ತಿಯ ಕುರಿತು ಬೈಗುಳ** : ವ್ಯಕ್ತಿಯ ಕುರಿತು ದೈಹಿಕ ಲಕ್ಷಣಕ್ಕೆ ಸಂಬಂಧಿಸಿದಂತೆ, ಅವನ ಗುಣ ಸ್ವಭಾವಗಳಿಗೆ ಅನುಗುಣವಾಗಿ, ಬಯ್ಯುವುದು ಕಂಡುಬರುತ್ತದೆ.

ಗೂಬೆ, ಕತ್ತೆ, ನಾಯಿ, ದರಿದ್ರದ ಮುಂಡೆ, ಬಡ್ಡಿ ಮಗ್ನೆ, ಕುಂಡನನ್ನ ಮಗ್ನೆ, ಕುಂಟಬಡ್ಡಿ ಮಗ್ನೆ, ದಡಿಯ, ಕರಿಬೊಡ್ಡಿದೆ, ಮನೆಹಾಳ, ಹುಚ್ಚಮುಂಡೆದೆ, ಕಳ್ಳ ನನ್ನ ಮಗ್ನೆ.

ಹೀಗೆ ಗಂಗಾಮತಸ್ಥರು ತಮಗೆ ಕೋಪ–ತಾಪಗಳು ಬಂದಾಗ ಅವುಗಳನ್ನ ಸಮಾಧಾನ ಪಡಿಸಿಕೊಳ್ಳುವುದಕ್ಕೆ ಬೈಗುಳಗಳನ್ನು ಉಪಯೋಗಿಸುತ್ತಾರೆ. ಬೈಗುಳಗಳು ನಮ್ಮ ಕೆಳಮಟ್ಟದ ವ್ಯಕ್ತಿತ್ವವನ್ನು ತೋರಿಸಿದರೂ, ಅವುಗಳಿಂದ ವ್ಯಕ್ತಿಗೆ ಬಂದಿರುವ ಕೋಪ ತಣ್ಣಗಾಗುತ್ತದೆ. ಮನಸ್ಸು ಹಗುರಾಗುತ್ತದೆ ಎಂದು ಹೇಳುತ್ತಾರೆ.

**೫.೨ ಶಿಷ್ಟ ಸಾಹಿತ್ಯ ಮತ್ತು ಭಾಷೆ**

ಮಂಡ್ಯ ಜಿಲ್ಲೆ ಸಾಹಿತ್ಯ ಸೃಷ್ಟಿಗೆ ತವರೂರು ಇದ್ದಂತೆ. ಈ ನೆಲದಲ್ಲಿ ಹಲವಾರು ಸಾಹಿತಿಗಳು ಹುಟ್ಟಿ, ನಾಡಿನಾದ್ಯಂತ ಹೆಸರನ್ನು ಮಾಡಿರುವುದು ಸ್ತುತ್ಯಾರ್ಹ ವಿಷಯ. ಪು.ತಿ.ನರಸಿಂಹಾಚಾರ್, ಕೆ.ಎಸ್.ನರಸಿಂಹಸ್ವಾಮಿ, ಹೆಚ್.ಎಲ್.ನಾಗೇಗೌಡ, ರಾಗೌ, ಬಿ.ಎಂ.ಶ್ರೀಕಂಠಯ್ಯ, ಎಂ.ಆರ್. ಶ್ರೀನಿವಾಸಮೂರ್ತಿ, ಎ.ಎನ್. ಮೂರ್ತಿರಾವ್, ಸುಜನಾ, ಮುಂತಾದ ಕವಿಗಳನ್ನ ಹೆಸರಿಸಬಹುದು. ಇವರೆಲ್ಲರು ಬೇರೆ ಬೇರೆ ಸಮುದಾಯಕ್ಕೆ ಸೇರಿದ ಸಾಹಿತಿಗಳು. ಆದರೆ ಸಾಹಿತ್ಯ ಕ್ಷೇತ್ರಕ್ಕೆ ಗಂಗಾಮತಸ್ಥರ ಕೊಡುಗೆ ಇದೆಯೆಂಬುದಕ್ಕೆ ಸಾಕ್ಷಿಭೂತರಾಗಿರುವ ವ್ಯಕ್ತಿ ಶ್ರೀ ಕೆ.ನ. ಶಿವತೀರ್ಥನ್‌ರವರು.

ಕೆ.ನ. ಶಿವತೀರ್ಥನ್‌ರವರು ೧೯೪೩ರಲ್ಲಿ ಮಂಡ್ಯ ಜಿಲ್ಲೆಯ ಮಳವಳ್ಳಿಯಲ್ಲಿ ಜನಿಸಿದವರು. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಎಂ.ಎ. ಸ್ನಾತಕೋತ್ತರ ಪದವಿ ಪಡೆದು ಡಿ. ಬನುಮಯ್ಯ ಕಾಲೇಜು, ಮೈಸೂರು ಇಲ್ಲಿ ಕನ್ನಡ ಪ್ರಾಧ್ಯಾಪಕರಾಗಿ, ಉತ್ತಮವಾದ ಸಾಹಿತ್ಯ ರಚನೆಯ ಕೆಲಸವನ್ನು ಮಾಡಿದವರಾಗಿದ್ದಾರೆ. ಇವರು ಬರೆದಿರುವ ಕೃತಿಗಳೆಂದರೆ "ಬೆಸ್ತ", "ಗೆರೆಗಳು", "ಒಳದನಿ" ಇವು ಕವನ ಸಂಕಲನಗಳು, 'ಕನ್ನಡದಲ್ಲಿ ವಿನೋದ ಸಾಹಿತ್ಯ' ಸಂಪಾದಿತ ಕೃತಿಯಾಗಿದೆ. ಇವರ ಕವಿತೆಗಳು ಸಾಮಾನ್ಯವಾಗಿ ಕೆಳವರ್ಗದ ಬದುಕಿನ ಪಲುಕುಗಳನ್ನು ನೀಡುತ್ತವೆ. ಡಾ॥ ಯು.ಆರ್.ಅನಂತಮೂರ್ತಿಯವರು ಹೇಳುವಂತೆ "ಶಿವತೀರ್ಥನ್ ಬೆಸ್ತರ ಗುರು ಒಬ್ಬನನ್ನು ಅವನ ಕುಲ ಕಸುಬಿನ ಲೋಕದಲ್ಲೇ ಕಂಡು, ಆಧ್ಯಾತ್ಮಿಕ ಲೋಕದ ಸಂತನನ್ನಾಗಿ, ದ್ರಷ್ಟಾರನನ್ನಾಗಿ ಮಾಡುವ ಕ್ರಮ ದಿವ್ಯ[೧೩] ಎಂದು ಹೇಳಿದ್ದಾರೆ.

ಶಿವತೀರ್ಥನ್‌ರವರು ಬೆಸ್ತಲೋಕದ ಹಸಿವು ಮತ್ತು ಬದುಕಿಗಾಗಿ ಹೋರಾಟವನ್ನು ಕೃತಿಗಳಲ್ಲಿ ಜೀವಾಳವನ್ನಾಗಿ ಮಾಡಿದ್ದಾರೆ.

ಗೆರೆಗಳು ಎಂಬ ಕವನಸಂಕಲನದ 'ಗೆಂಡಗಯ್ಯ' ಎಂಬ ಕವನದಲ್ಲಿ ಗೆಂಡಗಯ್ಯದ ಶುರುವಿನಲ್ಲೇ ಕಾಣುವ

"ತಿಪ್ಪೆ ಕಸ ಕೊಚ್ಚೆ ನೀರು
ಯೆಕ್ಕಿ ಎರೆ ಉಳ ಗಾಳಕ್ಕೆ
ಎಸೆದು ಗಾಳ ಬೀಸಿ ಬಲೆ
ಕಾಯ್ತು ಕುಂತವ್ನೆ ಸಂತ"

– ಎಂಬ ಪಂಕ್ತಿ ಶಿವತೀರ್ಥನ್ ತಮ್ಮ ಈ ಸಾಂಸ್ಕೃತಿಕ ಪ್ರಯಾಣದ ಬಗೆಗೇ ಮಾಡುವ ಗುಪ್ತವ್ಯಾಖ್ಯಾನದಂತಿದೆ. ಗೆಂಡಗಯ್ಯನೊಡನೆ ಕವಿ ಸಂಪೂರ್ಣ ತಾದಾತ್ಮ್ಯ ಸಾಧಿಸಲಾರ. ಪದ್ಯದ ಕೊನೆಯಲ್ಲೂ ಕೂಡ 'ಕಾಯ್ತು ಕೂತವ್ನೆ ಸಂತ' ಸಂತನನ್ನು ಕಾವ್ಯ ಮಾಡಲು ಹೊರಟ ಕವಿ ಹಾಗೂ ಅವನ ಕಾವ್ಯವಸ್ತುವಾದ ಸಂತ ಇಬ್ಬರೂ ಒಂದರ್ಥದಲ್ಲಿ ಕಾಯುತ್ತಲೇ ಇದ್ದಾರೆ. ಕೊನೆಗೂ ಸಂತ ದೂರವೇ ಕುಂತಿದ್ದಾನೆ. ಅವರ 'ಪಿರ್ಕ'ನಾದ ಕವಿ ಅವನನ್ನು ಮುಟ್ಟಲು ಕಾತರಿಸುತ್ತಲೇ ಇದ್ದಾನೆ; ಮುಟ್ಟಿ ಹೊಸ ಬಗೆಯ ಕವಿಯಾಗಲು ಹಿಂದಕ್ಕೆ ಮತ್ತು ಹಿಂದಕ್ಕೆ ಚಲಿಸಲು ಯತ್ನಿಸುತ್ತಿದ್ದಾನೆ.

'ತೆರೆ ಲೋಕದ ಹೊಸ ಬಾಗಿಲ' – ಕವನಗಳು ಅಕ್ಷರಕಲಿಕೆಯ ಅಗತ್ಯವನ್ನು ಹಾಗೂ ಜ್ಞಾನ ಸಂಪಾದನೆಯ ಮಹತ್ವವನ್ನು ಒತ್ತಿ ಹೇಳುತ್ತವೆ. ಈ ದೇಶದ ಹಳ್ಳಿಗಾಡಿನ ಜನರು, ಅದರಲ್ಲೂ ಕೆಳವರ್ಗದವರು ಸಂಸ್ಕೃತಿಯ ಪಕ್ಷಪಾತ ಧೋರಣೆಯಿಂದಾಗಿ ಅಕ್ಷರಜ್ಞಾನದಿಂದ ದೂರ ಉಳಿದು ಸಂಸ್ಕೃತಿಯು ಮುಖ್ಯವಾಹಿನಿಯಿಂದ ಹೊರಗುಳಿದು ಶೋಷಣೆಗೆ ಒಳಗಾಗಿದ್ದಾರೆ. ಇದರ ಸ್ಪಷ್ಟ ಅರಿವಿರುವ ಶಿವತೀರ್ಥನ್ ಅವರು

'ತಕೋ ಹಲಗೆ ಬಳಪ
ಬಾ ಬಿಚ್ಚು ಪುಸ್ತಕದ ಹಾಳೆ
ಓದು ಬರೆಯುತ್ತ
ಲೋಕದ ಹೊಸ ಬಾಗಿಲ ತೆರೆ
ಎಲ್ಲ ನೆನ್ನೆಗಳು ಜೀತಕ್ಕ ಮೈತೇದು
ಜೀವ ಮುರುಟಿದ್ದು ಸಾಕು
ಬರೆಯುತ್ತ ಕಲಿಯುವ

ವ್ಯಥೆ ಕಳೆವ ನಾಳೆಗಳ ತೆರೆಯುವ'[೧೪]

– ಈ ಕವನದಲ್ಲಿ ಗಂಗಾಮತಸ್ಥರು ತಮ್ಮ ಬದುಕನ್ನು ಇದುವರೆವಿಗೂ ಬೇರೆಯವರಿಗಾಗಿ ದುಡಿದದ್ದು ಸಾಕು. ಇನ್ನು ಮುಂದೆಯಾದರೂ ವಿದ್ಯೆ ಕಲಿತು ಬುದ್ಧಿವಂತರಾಗಿ ಮುಂದಿನ ಜೀವನ ಸಾಗಿಸಿರಿ ಎಂಬ ನೋವನ್ನು ವ್ಯಕ್ತಪಡಿಸಿದ್ದಾರೆ.

'ಗೆಂಡಗಯ್ಯ' ಇದು ವಿಶಿಷ್ಟ ಕವನ. ಈ ಇಹದ ಪರಿಪಾಟಲನ್ನು ಕಂಡು ಉಂಡು, ಕಾಣದಂತೆ ತನ್ನ ಕಾಯಕವನ್ನು ನಡೆಸುತ್ತಿರುವ, ಒಳಗಣ್ಣನ್ನು ಸದಾ ತೆರೆದುಕೊಂಡು

'ಎಸೆದು ಗಾಳ ಬೀಸಿ ಬಲೆ
ಕಾಯ್ತ ಕುಂತ್ನೆ ಸಂತ'

ಎಂಬ 'ಇರ'ವಿನ 'ಅರಿ'ವನ್ನು ತೆರೆದಿಡುವ ಕವನ. ಜನಾಂಗದ ಕಾಯಕದ ಮೂಲ ದ್ರವ್ಯದ ಅಭಾವ : ಮನಸಿನ ಅಭಾವ, ಕನಸಿನ ಅಭಾವ ಅನ್ನದ ಅಭಾವ

"ಮೀನು ಸೀಗಡಿ ನಳ್ಳಿ ಸಿಕ್ತೆ
ಇಟ್ಟು ಸೊಪ್ಪು ಅಂಬ್ಲಿ ದಕ್ತೆ
ವೊತ್ತು ಕಂತೋಯ್ತು
ಉಳಿದಿರುವುದು.
ಬರಿಗಣ್ಣು ಬರಿಬಾಯಿ ಬರಿಗೈ
ಬರಿಕುಕ್ಕೆ ಬರಿ ಬರಿದೆ

ಕೆಲಸ ಮಾಡುವವರ ಕೈ ಬರಿದಾದರೂ

'ತಿಪ್ಪೆ ಕಸ ಕೊಚ್ಚೆ ನೀರು
ಯೆಕ್ಕಿ ಎರೆ ಉಳಗಾಳಕ್ಕೆ
ಎಸೆದು ಗಾಳ ಬೀಸಿ ಬಲೆ
ಕಾಯ್ತ ಕುಂತವ್ನೆ ಸಂತ'

– ಇಹದ – ಅಧ್ಯಾತ್ಮಕ ಶಕ್ತಿಯ ಮಾಧ್ಯಮವಾಗಿ, ಕರ್ಮಯೋಗಿಯಾಗಿ ಬರಿ ಬಲೆಯನ್ನು ಮಾತ್ರ ಕಾಯ್ತ ಕುಂತವನು ಈತ ಸಂತ. ಇವೆಲ್ಲ ನೆಪ್ಪಾಗಿ ಕುಂತವ್ನೆ ಸಂತ.[೧೫] ಕೆ.ನ.ಶಿವತೀರ್ಥನ್ ಗೆಂಡಗಯ್ಯನನ್ನು ತಮ್ಮ ಮೂಲ ಪುರುಷನ್ನಾಗಿ ಚಿತ್ರಿಸಿದ್ದಾರೆ. ಇವರ ಕೃತಿಗಳಲ್ಲಿ ತಮ್ಮ ಸಮುದಾಯದವರ ಬದುಕು, ಕಾಯಕ, ನೋವು–ನಲಿವು, ಶಿಕ್ಷಣ ಇವುಗಳನ್ನ ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ. ಮಂಡ್ಯ ಜಿಲ್ಲೆಯಲ್ಲಿ ಗಂಗಾಮತಸ್ಥ ಜನಾಂಗದಲ್ಲಿ ಶಿಷ್ಟ

ಸಾಹಿತ್ಯವನ್ನು ರಚಿಸಿ ಹೆಸರು ಮಾಡಿ, ತಮ್ಮ ಕಾವ್ಯದ ನಾಯಕ 'ಗಂಡಗಯ್ಯ'ನ ಮೂಲಕ ಕ್ರಾಂತಿಮಾಡಿಸಿದ ಕವಿ ಕೆ.ನ. ಶಿವತೀರ್ಥನ್ ಆಗಿದ್ದಾರೆ.

**ಭಾಷೆ**

ಭಾಷೆ ನಿಂತ ನೀರಲ್ಲ; ಅದು ಸದಾ ಹರಿಯುತ್ತಿರುವ ನೀರನಂತೆ. ಜೀವಂತಿಕೆಯನ್ನು ಭಾಷೆ ಹೊಂದಿ ಕಾಲ, ದೇಶ, ವ್ಯಕ್ತಿಗಳನ್ನಾಧರಿಸಿ ಬದಲಾಗುತ್ತ ತನ್ಮೂಲಕ ಬೆಳೆಯುತ್ತ ಹೋಗುತ್ತದೆ. ಸಾಮಾಜಿಕ ಭಾಷಾ ವಿಜ್ಞಾನಿಗಳು ಭಾಷೆಯ ಸಾಮಾಜಿಕ ಹಾಗೂ ಸಾಂಸ್ಕೃತಿಕ ನೆಲೆ ಬೆಲೆಗೆ ಹೆಚ್ಚು ಆದ್ಯತೆಯನ್ನು ಕೊಡುತ್ತಿದ್ದಾರೆ. ಭಾಷೆ ಪ್ರದೇಶದಿಂದ ಪ್ರದೇಶಕ್ಕೆ ವ್ಯತ್ಯಾಸವಿರುವುದರ ಜೊತೆಗೆ, ಸಮುದಾಯದಿಂದ ಸಮುದಾಯಕ್ಕೂ ವ್ಯತ್ಯಾಸವಿರುವುದನ್ನು ಗುರುತಿಸಬಹುದು.

ಮಂಡ್ಯ ಜಿಲ್ಲೆಯ ಗಂಗಾಮತಸ್ಥರು ಆಡುವ ಕನ್ನಡದಲ್ಲಿ ಶಿಷ್ಟಭಾಷೆಗಿಂತ ಭಿನ್ನವಾಗಿ ಗೋಚರಿಸುವ ಉಚ್ಚಾರಣೆ, ಪದಪ್ರಯೋಗ, ವಾಕ್ಯರಚನೆಯನ್ನು ಮೇಲ್ನೋಟಕ್ಕೆ ಪತ್ತೆ ಹಚ್ಚಬಹುದು. ಯಾವುದೇ ಆಡುನುಡಿ ಆಯಾ ಜನರ ಸಮಾಜ, ಸಂಸ್ಕೃತಿ, ಆಚಾರ-ವಿಚಾರಗಳನ್ನು ಅಭಿವ್ಯಕ್ತಿಸುತ್ತದೆ.

ಅ, ಇ, ಉ, ಎ, ಒ ಇವು ಹ್ರಸ್ವಸ್ವರಗಳು, ಆ, ಈ, ಊ, ಏ, ಓ ಇವು ದೀರ್ಘ ಸ್ವರಗಳು. ಇವುಗಳ ಜೊತೆಗೆ ಗಂಗಾಮಸ್ಥರು ಅ್ಯ, ಆ್ಯ, ಒ್ವ, ಓ್ವ ಎಂಬ ನಾಲ್ಕು ಸ್ವರಗಳನ್ನು ಬಳಸುತ್ತಾರೆ.

ಉದಾ: ಅ್ಯ – ಕ್ಯಲ್ಸ, ಮ್ಯಳೆ, ಮ್ಯದೆ

ಆ್ಯ – ಮ್ಯಾಳೆ, ಮ್ಯಾಲೆ, ತ್ಯಾವ, ಬ್ಯಾಟೆ

ಒ್ವ – ಕ್ವೊಡೆ, ಕ್ವೊರಿ, ಕ್ವೊಳ

ಓ್ವ – ಮ್ವೋತೆ, ಮ್ವೋರಿ, ಮ್ವೋಳೆ[೧೬]

'ಹ' ಕಾರಕ್ಕೆ ಬದಲಾಗಿ 'ಅ' ಕಾರವನ್ನು ಬಳಸುತ್ತಾರೆ.

ಹಂದಿ-ಅಂದಿ, ಹಾವು-ಆವು, ಹೆಂಡತಿ-ಎಡ್ತಿ, ಹಕ್ಕಿ-ಅಕ್ಕಿ, ಹಾಲು-ಆಲು, ಹಾರ-ಆರ, ವಿದ್ಯಾಭ್ಯಾಸ-ಇದ್ಯಭ್ಯಾಸ, ಬುದ್ಧಿವಂತ-ಬುದ್ವಂತ

ಕೆಲವು 'ಯ್' ಕಾರಾಂತ್ಯ ಪದಗಳನ್ನು ಬಿಟ್ಟಂತೆ ಉಳಿದೆಲ್ಲ ಪದಗಳು ಮಂಡ್ಯ ಕನ್ನಡದಲ್ಲಿ ಸ್ವರಾಂತ್ಯವಾದವು.

ಉದಾ: ಕಯ್, ಮಯ್, ಬಾಯ್ ಇತ್ಯಾದಿ

ಊಷ್ಮ ಧ್ವನಿಗಳಲ್ಲಿ (ಶ್, ಷ್, ಸ್) 'ಸ' ಕಾರ ಮಾತ್ರ ಚಲಾವಣೆಯಲ್ಲಿರುವಂಥದು.

ಉದಾ: ಶ್ರೀನಿವಾಸ – ಸೀನ್ವಾಸ, ಸೀನ

ರಾಮೇಶ – ರಾಮೇಸ, ರಮೇಸ

ಸುರೇಶ – ಸುರೇಸ, ಶಕ್ತಿ – ಸಕ್ತಿ

ಷರತ್ತು – ಸರತ್ತು

ಕೆಲವೊಂದು ಪದಗಳನ್ನು ಶಿಷ್ಟಭಾಷೆಗಿಂತ, ಬೇರೆಯಾಗಿ ಮಾತನಾಡುವುದನ್ನು ಕಾಣಬಹುದು. ಅವುಗಳನ್ನು ಕೆಳಕಂಡಂತೆ ಪಟ್ಟಿ ಮಾಡಲಾಗಿದೆ.

| | |
|---|---|
| ಕೆಂಪಮ್ಮ – ಚೆಂಪಮ್ಮ | ಕರುಳು – ಕಳ್ಳು |
| ಕಿಟಕಿ – ಚಿಟಕಿ | ಮರಳು – ಮಳ್ಳು |
| ಕೆಳಗೆ – ಚೆಳಗೆ | ಮಡಿಲು – ಮಡ್ಳು |
| ಜನ್ಮ – ಜಲ್ಮ | ವ್ಯಾಸ – ಯಾಸ |
| ದ್ರಾಕ್ಷಿ – ರಾಕ್ಷಿ | ಕಡಲೆ – ಕಡ್ಲೆ |
| ಕೊಡಲಿ – ಕೊಡ್ಲಿ | ಬಾಗಿಲು – ಬಾಗ್ಲು |
| ಬರುತ್ತೇನೆ – ಬತ್ತೀನಿ | ಬರೋಣ – ಬರ್ಮೆ |
| ಮಾಡೋಣ – ಮಾಡ್ಮೆ | ನೋಡೋಣ – ನೋಡ್ಮೆ |
| ಬರದವನು – ಬರ್ದೋನು | ತಿನ್ನದವನು – ತಿನ್ದವ್ನು |

**ಸಂಬೋಧಕ ಪದಗಳು** : ಮಂಡ್ಯ ಜಿಲ್ಲೆಯ ಗಂಗಾಮತಸ್ಥರ ಭಾಷೆ ಗುರುತಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ.

ಉದಾ: ತಂದೆಯನ್ನು ಕರೆಯುವಾಗ – ಅಪ್ಪಾಲೋ, ಯಪ್ಪೋ

ತಾಯಿಯನ್ನು ಕೂಗುವಾಗ – ಅವ್ವಾಮೇ, ಯವ್ವೋ

ಮಗನನ್ನು ಕೂಗುವಾಗ – ಮಗಾ, ಲೋಮಗಾ

ಹೆಂಡತಿಯನ್ನು ಸಂಬೋಧಿಸಲು – ಏನಮ್ಮೀ, ಹೊಗಣೆ, ಬಾರಣೆ, ಬಮ್ಮಿ

ಗಂಡನನ್ನು ಸಂಬೋಧಿಸಲು – ರೀ, ಏನೂಂದ್ರೆ

ಜೊತೆಗಾರರನ್ನು ಕರೆವಾಗ – ಏಸ್ಲ, ವೋಗ್ಲ, ಬಾರ್ಲ, ಬಮ್ಮಿ

ಅಟ್ಟಿ–ಮನೆ, ಗೂಟ–ದನ ಕಟ್ಟುವಂಥದು, ತೊಪ್ಪೆ–ಸಗಣಿ, ಮೋಡಗಟ್ಟದ್ದು–ತಿಳುವಳಿಕೆ ಕಡಿಮೆ, ಗಂಜ್ಲ–ದನದ ಮೂತ್ರ, ತೆನೆ–ಗರ್ಭ, ಮಣಕ–ಆಡುಮರಿ, ವತಾರೆ–ಬೆಳಿಗ್ಗೆ, ಅಗ್ಲು–ಹಗಲು, ಬಾಣ–ಆಕಾಶ, ಮೇಟ್ರು–ಮೇಷ್ಟ್ರಿ, ಇಸ್ಕೋಲು–ಸ್ಕೂಲು, ಮೋಟ್ರು–ಮೋಟಾರ್, ಪಿಲೋಟು–ಪ್ಲೇಟ್, ಚಾಕ್ರಿ–ಚಾಕರಿ, ಚೆರ್ಗು–ಸೆರಗು, ಓಸ್ತಿ–ಔಷಧಿ, ತೋಪಿ–ಟೋಪಿ, ಮುಸ್ಡಿ–ಮುಖ.

ಹೀಗೆ ಮಂಡ್ಯ ಜಿಲ್ಲೆಯಲ್ಲಿರುವ ಗಂಗಾಮತಸ್ಥರು ಮಾತನಾಡುವ ಮಾತುಗಳಿಗೂ ಶಿಷ್ಟ ಭಾಷೆಗೂ ವ್ಯತ್ಯಾಸವಿದೆ. ಕಾರಣ ಬಹುಶಃ ಇವರು ವಾಸಮಾಡುವ ವಾತಾವರಣ ಹಾಗೂ ಅನಕ್ಷರತೆಯೇ ಪ್ರಮುಖ ಕಾರಣವಾಗಿದೆ. ಇತ್ತೀಚಿನ ದಿನಗಳಲ್ಲಿ ಮಾಧ್ಯಮವನ್ನು ನೋಡುವುದರ ಮೂಲಕ ಬದಲಾವಣೆ ಕಾಣಬಹುದಾಗಿದ್ದರೂ, ಅಂತಹ ಹೇಳಿಕೊಳ್ಳುವ ಬದಲಾವಣೆ ಭಾಷೆಯಲ್ಲಿ ಆದಂತೆ ಕಂಡುಬರುವುದಿಲ್ಲ.

**ಅಡಿ ಟಿಪ್ಪಣಿಗಳು :**

೧. ದೇಜಗೌ "ಜಾನಪದ ಸೌಂದರ್ಯ", ೧೯೭೭, ಪು. ೧೨೩.

೨. ಗೋರೂರು ರಾಮಸ್ವಾಮಿ ಅಯ್ಯಂಗಾರ್, "ಜನಪದ ಜೀವನ ಮತ್ತು ದರ್ಶನ", ೧೯೭೪, ಪು. ೧೦೩.

೩. ಡಾ.ಬೋರೇಗೌಡ ಚಿಕ್ಕಮರಳಿ, "ಜಾನಪದ ಅನ್ವೇಷಣೆ", ೨೦೦೬, ಪು. ೩.

೪. ವಕ್ತೃ : ಚನ್ನಮ್ಮ ಗಂಡ ಬಸವಯ್ಯ, ವಯಸ್ಸು-೭೪, ಕೊತ್ತತ್ತಿ, ಮಂಡ್ಯ ತಾ॥.

೫. ವಕ್ತೃ : ಸಣ್ಣಿ ಗಂಡ ಚಿಕ್ಕಚನ್ನ, ವಯಸ್ಸು-೬೯, ದುದ್ದ, ಮಂಡ್ಯ ತಾ॥.

೬. ವಕ್ತೃ : ಕೆಂಪಮ್ಮ ಗಂಡ ರಮಾಬೋಯಿ, ವಯಸ್ಸು-೬೫, ಮೆಣಸಗೆರೆ, ಮದ್ದೂರು ತಾ॥.

೭. ಡಾ.ಎಚ್.ಜೆ. ಲಕ್ಕಪ್ಪಗೌಡ-ಪ್ರಧಾನ ಸಂಪಾದಕ "ಜಾನಪದ ಕೈಪಿಡಿ" ಜಾನಪದ ಮಾಲೆ-೧, ಕನ್ನಡ ಪುಸ್ತಕ ಪ್ರಾಧಿಕಾರ, ೧೯೯೭, ಪು. ೯೫.

೮. ಅದೇ ಕೃತಿ, ಪು. ೯೬.

೯. ಅದೇ ಕೃತಿ, ಪು. ೩೮.

೧೦. ಡಾ. ಅಂಬಳಿಕೆಯ ಹಿರಿಯಣ್ಣ "ಮಲೆನಾಡಿನ ವೈಷ್ಣವ ಒಕ್ಕಲಿಗರ ಸಂಸ್ಕೃತಿ" ಜಾನಪದ ಮಾಲೆ, ಕನ್ನಡ ಪುಸ್ತಕ ಪ್ರಾಧಿಕಾರ, ೧೯೯೯, ಪು. ೪೨೧.

೧೧. ಸಿದ್ದಮ್ಮ ಗಂಡ ಕೆಂಚಯ್ಯ, ವಯಸ್ಸು-೭೦, ತೈಲೂರು, ಮದ್ದೂರು ತಾ॥.

೧೨. ಡಾ॥ ಡಿ.ಆರ್. ಪಾಂಡುರಂಗ, "ದಕ್ಷಿಣ ಕನ್ನಡ ಜಿಲ್ಲೆಯ ಭೈರರು ಸಾಹಿತ್ಯಿಕ ಸಾಂಸ್ಕೃತಿಕ ಅಧ್ಯಯನ", ೧೯೯೦, ಪು. ೮೫.

೧೩. ಕೆ.ನ. ಶಿವತೀರ್ಥನ್‌ರ "ಗೆಂಡಗಯ್ಯ: ಒಳವು" ಸಂಪಾದಕರು ಡಾ. ಕೃಷ್ಣಮೂರ್ತಿ ಹನೂರು, ಪ್ರೊ.ಎಸ್. ಶಿವಾಜಿಜೋಯಿಸ್, ೨೦೦೧, ಪು. ೪.

೧೪. ಅದೇ ಕೃತಿ, ಪು. ೧೧೧.

೧೫. ಅದೇ ಕೃತಿ, ಪು. ೮೫.

೧೬. ಡಾ. ದೇಜಗೌ, "ಸುವರ್ಣ ಮಂಡ್ಯ", ೨೦೦೬, ಪು. ೨೨೨.

# ಅಧ್ಯಾಯ – ಆರು

# ವರ್ತಮಾನದಲ್ಲಿ ಗಂಗಾಮತಸ್ಥರ ಸ್ಥಿತ್ಯಂತರಗಳು

೬.೧ ರಾಜಕೀಯ ಜೀವನ

೬.೨ ಸಾಮಾಜಿಕ ಸಾಂಸ್ಕೃತಿಕ ಜೀವನ

# ಅಧ್ಯಾಯ – ಆರು

# ವರ್ತಮಾನದಲ್ಲಿ ಗಂಗಾಮತಸ್ಥರ ಸ್ಥಿತ್ಯಂತರಗಳು

ಭಾರತ ಮುಂದುವರಿಯುತ್ತಿರುವ ರಾಷ್ಟ್ರವಾಗಿದೆ. ಆದರೆ ಭಾರತದ ಸಂಪತ್ತು ಕೆಲವೇ ಕೆಲವು ಮಂದಿಗಳ ಹಿಡಿತದಲ್ಲಿ ಕೇಂದ್ರೀಕೃತವಾಗಿದೆ. ನಮ್ಮ ರಾಷ್ಟ್ರದಲ್ಲಿ ಆಳುವ ಮತ್ತು ದುಡಿಯುವ ವರ್ಗಗಳೆಂದು ಎರಡು ವರ್ಗಗಳು ಕಂಡುಬರುತ್ತವೆ. ಆಳುವ ವರ್ಗ ತುಂಬಾ ಶ್ರೀಮಂತವಾಗಿದ್ದು, ತಮ್ಮ ಕೆಲಸ ಕಾರ್ಯಗಳನ್ನು ಮಾಡಲು ದುಡಿಯುವ ವರ್ಗದ ಮೇಲೆ ಅವಲಂಬಿತವಾಗಿದೆ. ಬಡವರು ಬಡವರಾಗಿಯೇ ಶ್ರೀಮಂತರು ಶ್ರೀಮಂತರಾಗಿಯೇ ಉಳಿದು ಬರುತ್ತಿರುವುದು ಭಾರತದ ಪಾಲಿಗೆ ಸವಾಲಾಗಿದೆ. ಬಡವರನ್ನ ಅಭಿವೃದ್ಧಿಪಡಿಸಲು ಸರ್ಕಾರ ಹಾಕಿಕೊಂಡಿರುವ ಯೋಜನೆಗಳು, ಅವರಿಗೆ ತಲುಪದಿರುವುದೇ ಯೋಜನೆಗಳ ವಿಫಲತೆಗೆ ಕಾರಣವಾಗಿದೆ. ಆದುದ್ದರಿಂದಲೇ ಬಡವರು ಬಡವರಾಗಿಯೇ ಉಳಿಯುತ್ತಿದ್ದಾರೆ.

ಬಂಡವಾಳ ಶಾಹಿಗಳು ತಮ್ಮ ಕುಟುಂಬಗಳು ಅಭಿವೃದ್ಧಿ ಹೊಂದಬೇಕು. ಶ್ರೀಮಂತರಾಗಬೇಕು, ತಮ್ಮ ತಮ್ಮ ಸಮುದಾಯ ಸಮಾಜದಲ್ಲಿ ಬೆಳಕಿಗೆ ಬರಬೇಕು ಇತ್ಯಾದಿ ಅಂಶಗಳನ್ನಿಟ್ಟುಕೊಂಡು ಸಾರ್ವತ್ರಿಕ ಬದುಕಿನಲ್ಲಿ ಸರ್ಕಾರದ ಸಂಪರ್ಕದಿಂದ ಮುಂದೆ ಬಂದಿದ್ದಾರೆ. ಇದೇ ಅಂಶಗಳು ಮುಂದೆ ಅನುಸರಿಸಿ ಉಳಿದ ಬಂಡವಾಳಶಾಹಿಗಳು ತಮ್ಮ ಜೀವನ ರೂಪಿಸಿಕೊಂಡಿದ್ದಾರೆ. ಇಂತಹ ಸಂದರ್ಭದಲ್ಲಿ ಅಸಮಾನತೆಯನ್ನು ಬಿತ್ತುವ ತಂತ್ರಗಾರಿಕೆ ಸಮಾಜದಲ್ಲಿ ಬಂದೊದಗುತ್ತದೆ.[೧] ಬಂಡವಾಳಶಾಹಿಗಳ ಹಿಡಿತಕ್ಕೆ ಸಿಲುಕಿ, ಇಂದು ಸಹ ಹಲವು ಸಮುದಾಯಗಳು ಸಂಕಷ್ಟದಲ್ಲೇ ಉಳಿದಿರುವುದು ಶೋಚನೀಯವಾದ ಸಂಗತಿಯಾಗಿದೆ. ಇಂಥ ಹಿಡಿತದಿಂದ ಗಂಗಾಮತಸ್ಥ ಸಮುದಾಯವು ಸಹ ಹೊರತಲ್ಲ. ಇಂದಿಗೂ ಇವರು ಎಲ್ಲಾ ರೀತಿಯ ಶೋಷಣೆಗೆ ಒಳಗಾಗಿರುವುದು ಕಂಡು ಬಂದಿದೆ. ಸಾಮಾಜಿಕವಾಗಿ, ರಾಜಕೀಯವಾಗಿ, ಶೈಕ್ಷಣಿಕವಾಗಿ, ಆರ್ಥಿಕವಾಗಿ ಗಂಗಾಮತಸ್ಥರು ಪ್ರಸ್ತುತದಲ್ಲೂ ಸಂಕಷ್ಟದ ಪರಿಸ್ಥಿತಿಯೇ ಇದ್ದಾರೆ.

## ೬.೧ ರಾಜಕೀಯ ಜೀವನ

ಯಾವುದೇ ಕಾಲಘಟ್ಟದ ರಾಜಕೀಯವು ಆರ್ಥಿಕವಾಗಿ ಪ್ರಬಲವಾಗಿರುವರ ಕಪಿಮುಷ್ಠಿಯಲ್ಲಿದುದ್ದು ಇತಿಹಾಸದಿಂದ ತಿಳಿದು ಬರುತ್ತದೆ. ಎಲ್ಲಾ ರಾಜಕಾರಣಿಗಳು ಸ್ವಾರ್ಥ ಸಾಧನೆಯನ್ನು ಗುರಿಯನ್ನಾಗಿ ಹೊಂದಿರುತ್ತಾರೆಯೇ ಹೊರೆತು ತಮ್ಮ ಸಮುದಾಯದ

ಅಭಿವೃದ್ಧಿಯತ್ತ ಗಮನ ಕೊಡುವುದಿಲ್ಲ. ಬೆರಳೆಣಿಕೆಯಷ್ಟು ಸಭ್ಯ ರಾಜಕಾರಣಿಗಳು ಮಾತ್ರ, ತಮ್ಮನ್ನ ಆರಿಸಿದ ಜನರ ಕಷ್ಟ-ಸುಖಗಳಲ್ಲಿ ಭಾಗಿಯಾಗುತ್ತಾರೆ. ಏನೇ ಆಗಲಿ ಯಾವುದೇ ಸಮುದಯದಲ್ಲೂ ರಾಜಕಾರಣಿಗಳಿದ್ದಾಗ, ಆ ಸಮುದಾಯ ಅಭಿವೃದ್ಧಿ ಹೊಂದಲು ಸಾಧ್ಯ ಎಂಬುದನ್ನ ಇತ್ತೀಚಿನ ರಾಜಕೀಯ ತೋರಿಸುತ್ತದೆ.

ಮಂಡ್ಯ ಜಿಲ್ಲೆಯ ಗಂಗಾಮತಸ್ಥರ ರಾಜಕೀಯ ಜೀವನವು ಜಿಲ್ಲಾ ಮಟ್ಟಕ್ಕೆ ಇತ್ತೀಚಿನ ದಿನಗಳಲ್ಲಿ ಬಂದಿರುವುದೇ ವಿಶೇಷವಾದುದ್ದು. ಹಿಂದೆ ಯಾವುದೇ ಸ್ಥಳೀಯ ಸಂಸ್ಥೆಗಳಿಗೂ ಕೂಡ ಸದಸ್ಯರಾಗುವ ಅವಕಾಶ ದೊರೆಯುತ್ತಿರಲಿಲ್ಲ. ಆದರೆ ಇತ್ತೀಚಿನ ಮೀಸಲಾತಿಗಳ ಆಧಾರದ ಮೇಲೆ ಗ್ರಾಮಪಂಚಾಯಿತಿ, ತಾಲ್ಲೂಕು ಪಂಚಾಯಿತಿ, ಜಿಲ್ಲಾ ಪಂಚಾಯಿತಿ, ಪುರಸಭೆ ಮತ್ತು ನಗರಸಭೆಗಳನ್ನು ಪ್ರವೇಶಿಸುವ ಅವಕಾಶ ದೊರೆತಿದೆ. ಸಾಮಾನ್ಯ ಕ್ಷೇತ್ರಗಳಲ್ಲಿ ಗೆಲ್ಲುವುದಿರಲಿ, ನಿಲ್ಲಲು ಎದುರುತ್ತಾರೆ. ಕಾರಣವೆಂದರೆ ಆರ್ಥಿಕವಾಗಿ ಪ್ರಬಲರಲ್ಲದಿರುವುದರಿಂದ ಯಾವುದೇ ಸಾಮಾನ್ಯ ಕ್ಷೇತ್ರದಲ್ಲಿ ಗಂಗಾಮತಸ್ಥರು ಸ್ಪರ್ಧಿಸುವುದೇ ಇಲ್ಲ.

ಪ್ರಸ್ತುತ ಮಂಡ್ಯ ಜಿಲ್ಲೆಯ, ಜಿಲ್ಲಾ ಪಂಚಾಯಿತಿಯಲ್ಲಿ ಮೂರು ಜನರು ಸದಸ್ಯರಾಗಿದ್ದಾರೆ. ಕುಲುಮೆದೊಡ್ಡಿಯ ಎಂ.ಪುಟ್ಟಯ್ಯ, ಕನ್ನಲಿಯ ಈರಯ್ಯ, ಹುಲಿಕೆರೆಯ ಮಂಗಳಮ್ಮ ಇವರು ಜಿಲ್ಲಾ ಪಂಚಾಯಿತಿಯ ಸದಸ್ಯರಾಗಿದ್ದು, ತಮ್ಮ ಸಮುದಾಯಕ್ಕೆ ಸಾಧ್ಯವಾದಷ್ಟು ಕೆಲಸವನ್ನು ಮಾಡುತ್ತಿದ್ದಾರೆ. ಮಳವಳ್ಳಿ ತಾಲ್ಲೂಕು ಪಂಚಾಯಿತಿ ಸದಸ್ಯರಾದ ದೇವರಾಜು, ಮಳವಳ್ಳಿ ಪುರಸಭೆಯ ಸದಸ್ಯರಾದ ಗಂಗರಾಜೇ ಅರಸು, ದೊಡ್ಡಯ್ಯ, ಮಂಡ್ಯ ನಗರಸಭೆ ಸದಸ್ಯರಾದ ನಂಜುಂಡಯ್ಯ ಹೀಗೆ ಮುಂತಾದ ವ್ಯಕ್ತಿಗಳು ಸ್ಥಳೀಯ ಸಂಸ್ಥೆಗಳಲ್ಲಿ ಕೆಲಸವನ್ನು ನಿರ್ವಹಿಸುತ್ತಿದ್ದಾರೆ. ಈ ಸಮುದಾಯದ ಯಾವೊಬ್ಬ ಪ್ರತಿನಿಧಿಯು ಜಿಲ್ಲೆಯಿಂದ ಇದುವರೆವಿಗೂ ವಿಧಾನಸಭೆ, ವಿಧಾನಪರಿಷತ್ತು, ಸಂಸತ್ತನ್ನು ಪ್ರವೇಶಿಸಲು ಸಾಧ್ಯವಾಗಿಲ್ಲ. ಈ ಸಮುದಾಯದ ಬಗ್ಗೆ ಶ್ರೀ ಎಂ. ಪುಟ್ಟಯ್ಯನವರು ಹೇಳುವಂತೆ "ನಮ್ಮ ಸಮುದಾಯದ ಮತದಾರರು ಜಿಲ್ಲೆಯಲ್ಲಿ ಸುಮಾರು ಎರಡುವರೆ (೨೫೦೦೦೦) ಲಕ್ಷ ಇದ್ದಾರೆ. ಸರ್ಕಾರವು ಪಕ್ಕದ ಜಿಲ್ಲೆಯಾದ ಚಾಮರಾಜನಗರ, ಮೈಸೂರು ಇಲ್ಲಿ ನಮ್ಮ ಜನಾಂಗದವರನ್ನ ಪರಿಶಿಷ್ಟವರ್ಗಕ್ಕೆ ಸೇರಿಸಿದ್ದಾರೆ. ಆದರೆ ನಮ್ಮ ಜಿಲ್ಲೆಯನ್ನ ಇನ್ನೂ ಸಹ ಪ್ರವರ್ಗದಲ್ಲಿ ಸೇರಿಸಿರುವುದು ದುಃಖದ ಸಂಗತಿಯಾಗಿದೆ. ನಮ್ಮ ಜಿಲ್ಲೆಯ ಗಂಗಾಮತಸ್ಥರನ್ನು ಪರಿಶಿಷ್ಟವರ್ಗಕ್ಕೆ ಸೇರಿಸಿ, ಜಿಲ್ಲೆಯಲ್ಲಿ ಯಾವುದಾದರೊಂದು ಕ್ಷೇತ್ರವನ್ನು ನಮ್ಮ ವರ್ಗಕ್ಕೆ ಮೀಸಲು ಮಾಡಬೇಕು. ಅಥವಾ ಸರ್ಕಾರ ವಿಧಾನಪರಿಷತ್ತಿಗೆ ನಮ್ಮ ಸಮುದಾಯದ ಅರ್ಹ ವ್ಯಕ್ತಿಗಳಲ್ಲಿ ಯಾರನ್ನಾದರೂ ಒಬ್ಬರನ್ನ ಗುರುತಿಸಿ ನೇಮಕಮಾಡಬೇಕು. ಇದರಿಂದ ನಮ್ಮ ಸಮುದಾಯದ ಅಭಿವೃದ್ಧಿ ಮಾಡಲು ಸಾಧ್ಯವಾಗುತ್ತದೆ" ಎಂದು ಹೇಳಿದ್ದಾರೆ.

ಗಂಗಾಮತಸ್ಥರು ಕೆಲವೊಂದು ಗ್ರಾಮಪಂಚಾಯಿತಿಗಳಲ್ಲಿ ಸದಸ್ಯರಾಗಿದ್ದಾರೆ. ಇವರನ್ನ ರಾಜಕೀಯ ಪಕ್ಷಗಳು ತಮ್ಮ ಸ್ವಾರ್ಥ ಸಾಧನೆಗಾಗಿ ಬಳಸಿಕೊಳ್ಳುತ್ತಿದ್ದಾರೆಯೇ ಹೊರತು, ಈ ಸಮುದಾಯದ ಅಭಿವೃದ್ಧಿಗಾಗಿ ಸರ್ಕಾರದಿಂದ ವಿಶೇಷವಾದ ಸವಲತ್ತುಗಳನ್ನು ಒದಗಿಸಿಕೊಡುವಲ್ಲಿ ವಿಫಲರಾಗಿರುವುದು ಇವರನ್ನು ನೋಡಿದಾಗ ಎದ್ದು ಕಾಣುತ್ತದೆ. ಆದುದ್ದರಿಂದ ಜಿಲ್ಲೆಯಲ್ಲಿರುವ ಸಚಿವರು, ಶಾಸಕರು, ಇವರನ್ನ ಅಭಿವೃದ್ದಿಪಡಿಸುವತ್ತ ಗಮನ ಕೊಡಬೇಕು. ಪರಿಶಿಷ್ಟಜಾತಿಯವರಿಗಿಂತಲೂ ಕಷ್ಟದ ಜೀವನ ಸಾಗಿಸುತ್ತಿರುವವರು ಜಿಲ್ಲೆಯ ಗಂಗಾಮತಸ್ಥರಾಗಿದ್ದಾರೆ. ಇವರಿಗೆ ಸಿಗುವ ಸೌಲಭ್ಯಗಳನ್ನು ದೊರಕಿಸಿಕೊಡುವುದರ ಮೂಲಕ ಉತ್ತಮ ಜೀವನ ನಡೆಸಲು ಸರ್ಕಾರ ಅನುವು ಮಾಡಿಕೊಡಬೇಕು.

## ೬.೨ ಸಾಮಾಜಿಕ ಸಾಂಸ್ಕೃತಿಕ ಜೀವನ

ಗಂಗಾಮತಸ್ಥರ ಸಾಮಾಜಿಕ, ಸಾಂಸ್ಕೃತಿಕ ಜೀವನ ಅಷ್ಟೊಂದು ಉತ್ತಮವಾಗಿಲ್ಲ. ಪ್ರತಿಯೊಂದು ಸಮುದಾಯವು ಸಾಮಾಜಿಕವಾಗಿ ಉತ್ತಮವಾದ ಜೀವನ ನಡೆಸಲು ಆರ್ಥಿಕವಾಗಿ ಪ್ರಬಲವಾಗಿದ್ದರೆ ಮಾತ್ರ ಸಾಧ್ಯವಾಗುತ್ತದೆ. ಏಕೆಂದರೆ ಹಣವಿದ್ದರೆ ಉತ್ತಮ ಮನೆ, ಉತ್ತಮ ಶಿಕ್ಷಣ, ಉತ್ತಮ ಆರೋಗ್ಯ ಹೊಂದಲು ಸಾಧ್ಯವಾಗುತ್ತದೆ. ಆದರೆ ಗಂಗಾಮತಸ್ಥರ ಆರ್ಥಿಕ ಆಧಾರವೇ ಕೂಲಿಯಾಗಿದೆ. ಮೀನುಗಾರಿಕೆಯನ್ನು ನಂಬಿ ಬದುಕುವ ಕೆಲವರಿದ್ದರೆ, ವೀಳ್ಯದೆಲೆ, ಸುಣ್ಣ ಸುಡುವುದು, ಹೂವಿನ ಮಾರಾಟ, ಇವುಗಳ ವ್ಯಾಪಾರದಿಂದ ಜೀವನ ಸಾಗಿಸುವವರಿದ್ದಾರೆ.

ಶಿಕ್ಷಣಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ, ಸರ್ಕಾರವು ಹಲವು ಸೌಲಭ್ಯಗಳನ್ನು ಇತ್ತೀಚಿನ ದಿನಗಳಲ್ಲಿ ಕಲ್ಪಿಸಿಕೊಟ್ಟಿರುವುದು, ಈ ಸಮುದಾಯದ ಹಲವು ಮಕ್ಕಳು ಕನಿಷ್ಟ ಎಸ್.ಎಸ್.ಎಲ್.ಸಿ. ವರೆವಿಗೆ ಓದಲು ಸಾಧ್ಯವಾಗುತ್ತದೆ. ಇವರು ಕೂಲಿಯನ್ನ ಅಥವಾ ವ್ಯಾಪಾರವನ್ನ ನಂಬಿ ಬುದಕುವ ಜನರಾಗಿರುವುದರಿಂದ, ಶಾಲೆ ಮುಗಿದ ಮೇಲೆ ತಮ್ಮ ಮಕ್ಕಳು ಯಾವುದಾದರೊಂದು ಕೆಲಸವನ್ನು ಮಾಡಲೇಬೇಕು. ಸೊಪ್ಪಿನ ವ್ಯಾಪಾರ, ತರಕಾರಿ ವ್ಯಾಪಾರ, ಸುಣ್ಣದ ವ್ಯಾಪಾರ ಇದರ ಜೊತೆಗೆ ಕೂಲಿಗೂ ಹೋಗಲೇಬೇಕು. ಕಾರಣ ಹೊಟ್ಟೆಪಾಡಿಗಾಗಿ ಆ ಮಕ್ಕಳೂ ಸಹ ದುಡಿಯಲೇಬೇಕು.[೩] ಇವರಲ್ಲಿ ಟಿ.ಸಿ.ಎಚ್., ಬಿ.ಎ., ಎಂ.ಎ. ಪದವಿಯನ್ನು ಮಾಡಿರುವವರು ಬೆರಳೆಣಿಕೆಯಷ್ಟು ಜನರು ಮಾತ್ರ ಸಿಗುತ್ತಾರೆ. ಇಂಜಿನಿಯರ್ ಪದವಿ, ವೈದ್ಯಕೀಯ ಪದವಿ ಮಾಡಿರುವವರು ತೀರಾ ಕಡಿಮೆ. ಒಟ್ಟಾರೆಯಾಗಿ ಶೈಕ್ಷಣಿಕ ಪ್ರಗತಿ ಈ ಸಮುದಾಯದಲ್ಲಿ ಕೆಳಮಟ್ಟದಲ್ಲಿದೆ. ಇನ್ನು ಸರ್ಕಾರಿ ಉದ್ಯೋಗದಲ್ಲಿರುವವರ ಸಂಖ್ಯೆಯು

ಕಡಿಮೆಯೇ. ಕೆ.ಎಸ್.ಆರ್.ಟಿ.ಸಿ. ಕಂಡೆಕ್ಟರ್ ಲೈನ್‌ಮ್ಯಾನ್, ಪೋಲೀಸ್ ಕಾನ್‌ಸ್ಟೇಬಲ್, ಜವಾನ, ಶಿಕ್ಷಕರು ಇಂಥ ಹುದ್ದೆಗಳಲ್ಲಿರುವ ಕೆಲವು ಮಂದಿಯನ್ನ ಮಾತ್ರ ಕಾಣಲು ಸಾಧ್ಯ.

ಇವರು ವಾಸಿಸುವ ಮನೆಗಳು ಹೆಚ್ಚಾಗಿ ಗುಡಿಸಲುಗಳೇ. ಈ ಗುಡಿಸಲುಗಳು ಹೇಗಿದೆಯೆಂದರೆ ಹಂದಿ ವಾಸಿಸಲು ಮಾತ್ರ ಯೋಗ್ಯವಾದ ಮನೆಗಳು ಅವು. ಇಂತಹ ಗುಡಿಸಲುಗಳಲ್ಲೆ ಇಂದಿಗೂ ವಾಸಮಾಡುತ್ತಿದ್ದಾರೆ. ಶೇಕಡ ೧೦ ರಿಂದ ೨೦ ರಷ್ಟು ಜನರು ಮಾತ್ರ ವಾಸಿಸಲು ಯೋಗ್ಯವಾದ ಮನೆಗಳನ್ನ ಹೊಂದಿದ್ದಾರೆ. ಸರ್ಕಾರ ಗೃಹ ನಿರ್ಮಾಣ ಮಾಡಿಕೊಳ್ಳಲು ಸಾಲ-ಸೌಲಭ್ಯಗಳನ್ನು ಒದಗಿಸಿಕೊಟ್ಟಿದ್ದರು, ಇವರು ಬಳಸಿಕೊಂಡು ಮನೆಗಳನ್ನು ನಿರ್ಮಿಸಿಕೊಳ್ಳಲು ಸಾಧ್ಯವಾಗುತ್ತಿಲ್ಲ. ಕಾರಣ ಸರ್ಕಾರದ ಆ ಹಣದಿಂದಲೇ ಮನೆ ನಿರ್ಮಿಸಲು ಸಾಧ್ಯವಿಲ್ಲ ಎಂಬುದು ಅವರ ಅಭಿಪ್ರಾಯ. ಹಬ್ಬ-ಹರಿದಿನಗಳಲ್ಲಿ ನೆಂಟರಿಷ್ಟರು ಬಂದರೆ, ಅವರನ್ನ ಕುಲದ ಮನೆಯಲ್ಲಿ ಮಲಗಿಸುವ ಪರಿಸ್ಥಿತಿ ಇಂದಿಗೂ ಕಾಣಬಹುದು.

ಗಂಗಾಮತಸ್ಥರು ಇಂದಿಗೂ, ಸಾಂಪ್ರದಾಯಿಕವಾಗಿ ಬಂದಿರುವರ ಕಲೆಗಳನ್ನು ಉಳಿಸಿಕೊಂಡಿದ್ದಾರೆ. ಪಟದ ಕುಣಿತ, ನಂದಿಧ್ವಜದ ಕುಣಿತ, ಡೊಳ್ಳುಕುಣಿತ, ಕತ್ತಿಪವಾಡ, ಕಾಯಿಪವಾಡ, ವೀರಗಾಸೆ, ಮಂಕಿಕುಣಿತ ಮುಂತಾದ ಸಾಂಸ್ಕೃತಿಕ ಕಲೆಗಳನ್ನ ಮುಂದುವರೆಸಿಕೊಂಡು ಬಂದಿದ್ದಾರೆ. ನಂಬಿಕೆ, ವಿಧಿನಿಷೇಧಗಳ ಬಗ್ಗೆ, ಧಾರ್ಮಿಕ ಆಚರಣೆಗಳ ಬಗ್ಗೆ, ಮಠಮಾನ್ಯಗಳ ಬಗ್ಗೆ, ಜಾನಪದ ವೈದ್ಯ, ಕುಲದ ನ್ಯಾಯಪದ್ಧತಿ, ಮುಂತಾದವುಗಳನ್ನ ಉಳಿಸಿಕೊಂಡು ಬರುತ್ತಿರುವುದು ಸ್ತುತ್ಯಾರ್ಹವಾಗಿದೆ. ಮೀನುಗಾರಿಕೆ, ಬಲೆ ನೆಯ್ಯುವುದು, ದೋಣಿ ನಡೆಸುವುದು, ಸುಣ್ಣ ಸುಡುವುದು, ವೀಳ್ಯದೆಲೆ ತೋಟ, ಬೇಟೆ ಮುಂತಾದ ಸಾಂಪ್ರದಾಯಕ ವೃತ್ತಿಗಳನ್ನ ಇಂದಿಗೂ ಅವಲಂಬಿಸಿಕೊಂಡಿದ್ದಾರೆ.

ಗಂಗಾಮತಸ್ಥರ ಸ್ತ್ರೀಯರು ಮತ್ತು ಪುರುಷರು ಹಲವು ಸಂಘಗಳನ್ನ ಸ್ಥಾಪಿಸಿಕೊಂಡಿದ್ದಾರೆ. ಶ್ರೀ ಗಂಗಾಪರಮೇಶ್ವರಿ ಮಹಿಳಾ ಸ್ವ-ಸಹಾಯ ಸಂಘ, ಶ್ರೀ ಗಂಗಾಪರಮೇಶ್ವರಿ ಯುವಕರ ಸಂಘ ಮುಂತಾದ ಸಂಘಗಳು ಸಮುದಾಯಕ್ಕೆ ಸಂಬಂಧಿಸಿದ ಹಲವು ಕೆಲಸಗಳನ್ನು ಮಾಡುತ್ತವೆ. ಮಳವಳ್ಳಿಯಲ್ಲಿರುವ ಶ್ರೀ ರಾಮರೂಢ ಸ್ವಾಮಿ ಮಠವು ಸಮುದಾಯಕ್ಕೆ ಸಹಾಯ ಮಾಡುತ್ತದೆ. ಇವರು ತಮ್ಮ ಸಮುದಾಯದ ವಿಶೇಷವಾದ ಹಬ್ಬಗಳ ಸಂದರ್ಭದಲ್ಲಿ ನಾಟಕ, ರಂಗಕುಣಿತ, ಕೋಲಾಟ ಮುಂತಾದ ಮನೆರಂಜನೆಯ ಕಲೆಗಳನ್ನು ಪ್ರದರ್ಶಿಸುತ್ತಾರೆ. ಕುಲಸ್ಥರಿಗೆ ಇಂದಿಗೂ ತುಂಬಾ ಗೌರವವನ್ನ ನೀಡುತ್ತಾರೆ. ಅವರು ಹೇಳಿದ ಕೆಲಸ-ಕಾರ್ಯಗಳನ್ನ ಶ್ರದ್ಧೆಯಿಂದ ಮಾಡುತ್ತಾರೆ. ಇವರು ಆರ್ಥಿಕವಾಗಿ ಪ್ರಬಲರಾಗಿಲ್ಲದಿದ್ದರೂ, ಜಿಲ್ಲೆಯ ಬೇರೆ ಸಮುದಾಯಗಳಿಗಿಂತ ಉತ್ತಮವಾದ ಸಾಂಸ್ಕೃತಿಕ ಹಿನ್ನಲೆಯನ್ನ, ಹೊಂದಿದ್ದಾರೆ.

ಸರ್ಕಾರ ಇವರಿಗೆ ಸಹಾಯ ಹಸ್ತವನ್ನು ಚಾಚಿದರೆ, ಉತ್ತಮವಾದ ಜೀವನ ಸಾಗಿಸಲು ಸಾಧ್ಯವಾಗುತ್ತದೆ.[೪] ಈ ನಿಟ್ಟಿನಲ್ಲಿ ಸರ್ಕಾರ ಚಿಂತನೆ ನಡೆಸುವ ಅಗತ್ಯವಿದೆ ಎಂದು ಹಲವರು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಹೇಳಿದ್ದಾರೆ.

## ಅಡಿ ಟಿಪ್ಪಣಿಗಳು

೧. ದೊಡ್ಡಮನಿ ಲೋಕರಾಜ ಎ.ಕೆ.(ಸಂ), ಕರ್ನಾಟಕ ಸಿಂದೋಳ್ಳು ಸಮುದಾಯದ ಸಮಾಜಶಾಸ್ತ್ರೀಯ ಅಧ್ಯಯನ, ೨೦೦೫ರಲ್ಲಿ ಕನ್ನಡ ವಿಶ್ವವಿದ್ಯಾನಿಲಯದ, ಹಂಪಿಗೆ ಸಲ್ಲಿಸಿದ ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ, ಪು. ೧೮೨.

೨. ವಕ್ತೃ : ಎಂ. ಪುಟ್ಟಯ್ಯ ತಂದೆ ಮರಿಯಯ್ಯ, ವಯಸ್ಸು-೫೧, ಕುಲುಮೆದೊಡ್ಡಿ ಜಿಲ್ಲಾ ಪಂಚಾಯಿತಿ ಸದಸ್ಯರು, ಮಂಡ್ಯ.

೩. ವಕ್ತೃ : ಚನ್ನಂಕ ತಂದೆ ದೊಡ್ಡಬೋರಯ್ಯ, ವಯಸ್ಸು-೬೫, ರಾವಣಿ, ಮಳವಳ್ಳಿ ತಾ॥.

೪. ವಕ್ತೃ : ಚನ್ನಯ್ಯ ತಂದೆ ಚೂರಿ ಚನ್ನಯ್ಯ, ವಯಸ್ಸು-೭೦, ಗಾಮನಹಳ್ಳಿ, ಶ್ರೀರಂಗಪಟ್ಟಣ ತಾ॥.

# ಅಧ್ಯಾಯ – ಏಳು

## ಉಪಸಂಹಾರ

ವಿವಿಧತೆಯಲ್ಲಿ ಏಕತೆಯನ್ನ ಹೊಂದಿರುವ ರಾಷ್ಟ್ರ ಭಾರತ. ಹಲವು ಧರ್ಮಗಳು, ಜಾತಿಗಳು, ಭಾರತದಲ್ಲಿ ಇದ್ದರೂ, ನಾವು ಏಕತೆಯನ್ನು ಹೊಂದಿದ್ದೇವೆ. ಭಾರತೀಯ ಸಾಮಾಜಿಕ ವ್ಯವಸ್ಥೆಯು ವೈವಿಧ್ಯಮಯವಾಗಿದ್ದು, ಸಂಸ್ಕೃತಿ, ಪರಂಪರೆ, ಲೋಕರೂಢಿಯಂತೆ ಜಾತಿ ವ್ಯವಸ್ಥೆಯು ವೈವಿಧ್ಯಮಯವಾಗಿದೆ. ಪ್ರತಿಯೊಂದು ಜಾತಿಗೆ ಪ್ರತ್ಯೇಕತೆಯನ್ನು ಹೊಂದಿದ ಕಸುಬುಗಳಿದ್ದು, ಅವುಗಳು ಸಹ ವೈಶಿಷ್ಟ್ಯಪೂರ್ಣವಾಗಿವೆ. ಆ ಕಸುಬುಗಳ ಆಧಾರದ ಮೇಲೆ ಜಾತಿವ್ಯವಸ್ಥೆಯು ಬಂದಿರುವುದನ್ನು ಕಾಣಬಹುದು. ತಮ್ಮನ್ನು ತಾವು ರಕ್ಷಿಸಿಕೊಳ್ಳುವುದರ ಹಿನ್ನಲೆಯು ಕೂಡು, ಜಾತಿ ವ್ಯವಸ್ಥೆಗೆ ಕಾರಣವಾಗಿದೆ. ಪ್ರತಿಯೊಂದು ಆಚಾರ–ವಿಚಾರ, ಸಂಸ್ಕೃತಿ–ಸಂಸ್ಕಾರ, ನಡೆ–ನುಡಿ, ಸಂಪ್ರದಾಯಗಳಲ್ಲಿ ಒಂದು ಸಮುದಾಯದವರಿಗಿಂತ ಮತ್ತೊಂದು ಸಮುದಾಯದವರು ಭಿನ್ನತೆಯನ್ನು ಹೊಂದಿರುತ್ತವೆ.

ಭಾರತದಲ್ಲಿರುವ ಹಲವಾರು ಸಮುದಾಯಗಳು ಭಿನ್ನ ಸಂಸ್ಕೃತಿಯನ್ನ ಹೊಂದಿ, ಅದರ ಮೂಲಕ ಗುರುತಿಸಿಕೊಳ್ಳುವಂತೆಯೇ, ಕರ್ನಾಟಕದ ವಿವಿಧ ಭಾಗಗಳಲ್ಲಿ ಕಂಡುಬರುವ ಗಂಗಾಮತಸ್ಥ ಸಮುದಾಯದವರು ಸಹ ಪ್ರಾದೇಶಿಕವಾಗಿ ಸಂಪ್ರದಾಯ, ರೂಢಿ, ಆಚರಣೆಗಳು, ಉದ್ಯೋಗ, ಕಲೆ ಮುಂತಾದ ಅಂಶಗಳಲ್ಲಿ ವಿಶೇಷವಾಗಿದ್ದಾರೆ. ಅಂತೆಯೇ ಮಂಡ್ಯ ಜಿಲ್ಲೆಯ ಗಂಗಾಮತಸ್ಥರು, ರಾಜ್ಯದ ಬೇರೆ, ಬೇರೆ ಸ್ಥಳಗಳಲ್ಲಿ ವಾಸಿಸುವ ಗಂಗಾಮತಸ್ಥರಂತೆಯೇ ಕೆಲವೊಂದು ಅಂಶಗಳನ್ನು ಹೊಂದಿದ್ದರು. ಹಲವು ವಿಚಾರಗಳಲ್ಲಿ ಭಿನ್ನತೆಯನ್ನು ಹೊಂದಿದ್ದಾರೆ. ಮಂಡ್ಯದ ನೆಲೆ ಅವರಿಗೆ ಪುಷ್ಟಿಕೊಟ್ಟು ಅವರ ಜೀವನಕ್ಕೆ, ಸಂಪ್ರದಾಯಗಳಿಗೆ ಹಿನ್ನಲೆಯಾಗಿದೆ.

ಪ್ರಸ್ತುತ ಈ ಅಧ್ಯಯನವು "ಗಂಗಾಮತಸ್ಥರ ಜಾನಪದ ಅಧ್ಯಯನ" (ಮಂಡ್ಯ ಜಿಲ್ಲೆಯನ್ನ ಪರಿಗಣಿಸಿ) ಎಂಬ ಶೀರ್ಷಿಕೆಯಲ್ಲಿ ಈ ಮಹಾಪ್ರಬಂಧವು ಕ್ಷೇತ್ರಕಾರ್ಯದ ಮಾಹಿತಿ ಮತ್ತು ಹಲವು ಪೂರಕ ಗ್ರಂಥಗಳ ನೆರವಿನಿಂದ ರೂಪುಗೊಂಡಿದೆ. ವಿಷಯ ನಿರೂಪಣೆಯನ್ನು ವಿವಿಧ ಶೀರ್ಷಿಕೆಗಳ ಅಡಿಯಲ್ಲಿ ಚರ್ಚಿಸಲಾಗಿದ್ದು, ಪ್ರಬಂಧವನ್ನು ಆರು ಅಧ್ಯಾಯಗಳಾಗಿ ವಿಂಗಡಿಸಿಕೊಳ್ಳಲಾಗಿದೆ. ಅಧ್ಯಾಯಗಳ ವಿವರ ಈ ಕೆಳಗಿನಂತಿದೆ.

ಮೊದಲನೆಯ ಅಧ್ಯಾಯದಲ್ಲಿ ಪೀಠಿಕೆ, ಅಧ್ಯಯನದ ಮಹತ್ವ, ಅಧ್ಯಯನದ ಉದ್ದೇಶಗಳು, ಅಧ್ಯಯನದ ವ್ಯಾಪ್ತಿ, ಅಧ್ಯಯನದ ವಿಧಾನಗಳು ಹಾಗೂ ಇಲ್ಲಿಯವರೆಗೆ ನಡೆದಿರುವ ಅಧ್ಯಯನಗಳು, ಇವುಗಳನ್ನು ಕುರಿತು ವಿವರಣೆ ನೀಡಲಾಗಿದೆ.

ಎರಡನೆಯ ಅಧ್ಯಾಯವು 'ಗಂಗಾಮತಸ್ಥರ ಮೂಲ' ಎಂಬ ಶೀರ್ಷಿಕೆಯನ್ನು ಹೊಂದಿದ್ದು, ಇದರಲ್ಲಿ 'ಗಂಗಾಮತಸ್ಥ' ಎಂಬ ಪದದ ನಿಷ್ಪತ್ತಿ, ಇದೇ ಜನಾಂಗವನ್ನು ಕರ್ನಾಟಕದ ಬೇರೆ ಬೇರೆ ಸ್ಥಳಗಳಲ್ಲಿ ವಿವಿಧ ಹೆಸರುಗಳಿಂದ ಕರೆಯುವುದನ್ನು ಕುರಿತಂತೆ ವಿವರಣೆ ನೀಡಲಾಗಿದೆ. 'ಗಂಗಾಮತಸ್ಥರು' ಎಂಬ ತಲೆಬರಹದಡಿಯಲ್ಲಿ ಇವರ ಮೂಲ, ಇವರಿಗಿರುವ ವಿವಿಧ ಹೆಸರುಗಳು, ಕಥೆ ಇವುಗಳನ್ನು ತಿಳಿಸಲಾಗಿದೆ. ಮಂಡ್ಯ ಜಿಲ್ಲೆಯಲ್ಲಿರುವ ಗಂಗಾಮತಸ್ಥರ ಬಳಿಗಳು ಮತ್ತು ಪಂಗಡಗಳನ್ನು ಹೇಳಲಾಗಿದೆ. ಜಿಲ್ಲೆಯ ಭೌಗೋಳಿಕ ಪರಿಸರ, ಗಂಗಾಮತಸ್ಥ ಜನಸಂಖ್ಯೆಯನ್ನು ಹೇಳಲಾಗಿದೆ. ಸಾಂಸ್ಕೃತಿಕ ಪರಂಪರೆಯನ್ನು ಹೊಂದಿರುವ ಗಂಗಾಮತಸ್ಥರ 'ಸಾಂಸ್ಕೃತಿಕ ಕೇಂದ್ರ'ಗಳ ಬಗ್ಗೆ ವಿವರಿಸಲಾಗಿದೆ. ಗಂಗಾಮತಸ್ಥ ಸಮುದಾಯಕ್ಕಿರುವ ಪೌರಾಣಿಕ ಹಿನ್ನಲೆಯನ್ನು ತಿಳಿಸಲಾಗಿದೆ. ಶಾಸನಗಳಲ್ಲಿ, ಸಾಹಿತ್ಯದಲ್ಲಿ ಗಂಗಾಮತಸ್ಥರ ಉಲ್ಲೇಖಗಳಿರುವುದನ್ನು ವಿವರಿಸಲಾಗಿದೆ.

ಮೂರನೇ ಅಧ್ಯಾಯವು 'ಸಾಮಾಜಿಕ ಸಂರಚನೆ' ಎಂಬ ಶೀರ್ಷಿಕೆಯನ್ನು ಹೊಂದಿದ್ದು, ಇವರ ಕುಟುಂಬದ ವ್ಯವಸ್ಥೆ, ಅವಿಭಕ್ತ, ವಿಭಕ್ತ ಕುಟುಂಬಗಳಿರುವುದರ ಬಗ್ಗೆ ಹೇಳಲಾಗಿದೆ. ಪ್ರಮುಖವಾಗಿ ಇವರ ಆರ್ಥಿಕ ಸ್ಥಾನಮಾನವು ಸಾಂಪ್ರದಾಯಿಕ ವೃತ್ತಿಗಳಾದ ಮೀನುಗಾರಿಕೆ, ಸುಣ್ಣ ಸುಡುವುದು, ವೀಳ್ಯದೆಲೆ ವ್ಯಾಪಾರ ಹಾಗೂ ಕೂಲಿಯನ್ನು ಅವಲಂಬಿಸಿರುವುದನ್ನು ವಿವರಿಸಲಾಗಿದೆ. ಇವರ ಶಿಕ್ಷಣ ವ್ಯವಸ್ಥೆ, ಮಹಿಳೆಯ ಸ್ಥಾನ-ಮಾನ, ಆಹಾರ ಪದ್ಧತಿ, ನ್ಯಾಯಪದ್ಧತಿ, ಉಡುಗೆ-ತೊಡುಗೆ, ಬೇಟೆ, ಸಾಮಾಜಿಕ ಸಂಘಸಂಸ್ಥೆಗಳು ನಂಬಿಕೆಗಳು ಮತ್ತು ವಿಧಿ, ನಿಷೇಧಗಳು, ಜಾನಪದ ವೈದ್ಯ, ಕಲೆ, ಕ್ರೀಡೆ ಮತ್ತು ಧಾರ್ಮಿಕ ಜೀವನವನ್ನು ವಿವರಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ 'ಆಚರಣೆಗಳು' ಎಂಬ ಶೀರ್ಷಿಕೆಯಡಿಯಲ್ಲಿ ಜೀವನಾವರ್ತನ ಆಚರಣೆಗಳಾದ ಹುಟ್ಟಿನಿಂದ ಸಾವಿನವರೆಗಿನ ಕೆಲವು ಪ್ರಮುಖ ಆಚರಣೆಗಳನ್ನು ವಿವರಿಸಲಾಗಿದೆ. ನಂತರ ವಾರ್ಷಿಕಾವರ್ತನ ಆಚರಣೆಗಳಾದ ಹಬ್ಬ, ಜಾತ್ರೆ, ಹರಕೆಗಳ ಬಗ್ಗೆ ಹೇಳಲಾಗಿದೆ.

ಐದನೇ ಅಧ್ಯಾಯವು 'ಸಾಹಿತ್ಯ ಮತ್ತು ಭಾಷೆ' ಎಂಬ ಶೀರ್ಷಿಕೆಯನ್ನು ಹೊಂದಿದ್ದು ಜನಪದ ಸಾಹಿತ್ಯದ ವಿವಿಧ ಪ್ರಕಾರಗಳನ್ನ ಕುರಿತು ವಿವರಿಸಲಾಗಿದೆ. ಇವರ ಶಿಷ್ಟಸಾಹಿತ್ಯ ಮತ್ತು ಭಾಷೆಯ ಬಗ್ಗೆ ಹೇಳಲಾಗಿದೆ.

ಆರನೇ ಆಧ್ಯಾಯದಲ್ಲಿ "ವರ್ತಮಾನದಲ್ಲಿ ಗಂಗಾಮತಸ್ಥರ ಸ್ಥಿತ್ಯಂತರಗಳು" ಎಂಬ ಶೀರ್ಷಿಕೆಯಡಿಯಲ್ಲಿ, ಇವರ ರಾಜಕೀಯ ಜೀವನ ಹಾಗೂ ಸಾಮಾಜಿಕ, ಸಾಂಸ್ಕೃತಿಕ ಜೀವನವನ್ನು ಕುರಿತು ಚರ್ಚಿಸಲಾಗಿದೆ.

ಕೊನೆಯದಾಗಿ 'ಉಪಸಂಹಾರ' ಭಾಗದಲ್ಲಿ ಎಲ್ಲ ಅಧ್ಯಯನದ ಫಲಿತಗಳು ಹಾಗೂ ಸಲಹೆಗಳನ್ನು ಕುರಿತು ಹೇಳಲಾಗಿದೆ. 'ಅನುಬಂಧ'ದಲ್ಲಿ ಪರಾಮರ್ಶನ ಗ್ರಂಥಗಳು, ವಕ್ತೃಗಳ ವಿವರ, ಮಂಡ್ಯ ಜಿಲ್ಲೆಯ ನಕ್ಷೆ, ಸಾಂಸ್ಕೃತಿಕ ಪದಕೋಶ, ಹಾಡುಗಳು, ಗಾದೆಗಳು, ಒಗಟುಗಳು, ಭಾವಚಿತ್ರಗಳನ್ನು ಕೊಡಲಾಗಿದೆ. ಒಟ್ಟಾರೆಯಾಗಿ "ಗಂಗಾಮತಸ್ಥ ಜಾನಪದ ಅಧ್ಯಯನ"ವು, ಅವರ ವರ್ತಮಾನದ ಬದುಕಿನ ವಿವಿಧ ಮಗ್ಗಲುಗಳನ್ನು ಅನಾವರಣ ಮಾಡುವುದಕ್ಕೆ ಹಾಗೂ ಸಾಂಪ್ರದಯಿಕ ಆಚಾರ-ವಿಚಾರ, ಕುಲ ಕಸುಬು ಆರ್ಥಿಕ ಸ್ಥಿತಿ-ಗತಿ ಮುಂತಾದ ವಿಚಾರಗಳನ್ನ ತಿಳಿಯುವುದಕ್ಕೆ ಅನುಕೂಲವಾಗಿದೆ. ಪ್ರಸ್ತುತ ಅಧ್ಯಯನವು ಸಮುದಾಯಗಳ ತೌಲನಿಕ ಅಧ್ಯಯನದ ಸಂದರ್ಭದಲ್ಲಿ ಉಪಯುಕ್ತವಾಗುವುದು.

**ಅಧ್ಯಯನದ ಫಲಿತಗಳು ಅಥವಾ ಕಂಡುಕೊಂಡ ಅಂಶಗಳು**

೧. ಗಂಗಾಮತಸ್ಥರು ಗಂಗಾದೇವಿಯ ಪರಮ ಭಕ್ತರಾಗಿದ್ದು, ಇವರು ನಡೆಸುವ ಎಲ್ಲಾ ಕಾರ್ಯಗಳಿಗೂ 'ಗಂಗಾ' ಪೂಜೆಯನ್ನು ಮಾಡಿ, ನಂತರ ಮುಂದಿನ ಕೆಲಸ ಕೈಗೊಳ್ಳುತ್ತಾರೆ.

೨. ಕರ್ನಾಟಕದ ತುಂಬೆಲ್ಲಾ ಗಂಗಾಮತಸ್ಥರು ಇದ್ದರೂ, ಬೇರೆ ಬೇರೆ ಹೆಸರುಗಳಿಂದ ಇವರನ್ನು ಕರೆಯುತ್ತಾರೆ.

೩. ಪ್ರಮುಖವಾಗಿ ಎರಡು ಬಳಿಗಳು ಹಾಗೂ ಮೂರು ಪಂಗಡಗಳು ಇವೆ.

೪. ಮಹಾಭಾರತದ 'ಭೀಷ್ಮಾಚಾರ್ಯರೇ' ನಮ್ಮ ಮೂಲಪುರುಷ, ಎಂದು ಕಥೆಯನ್ನ ವಾಸ್ತವಕ್ಕೆ ಸಮೀಕರಿಸಿ ಹೇಳುತ್ತಾರೆ.

೫. ಇಂದಿಗೂ ಇವರು ಸಾಂಸ್ಕೃತಿಕ ಕೇಂದ್ರವನ್ನಾಗಿ, ಕುಲದ ಮನೆ ಹಾಗೂ ರಾಮಮಂದಿರವನ್ನ ಮಾಡಿಕೊಂಡಿದ್ದಾರೆ.

೬. ಮಂಡ್ಯ ಜಿಲ್ಲೆಯ ಹಲವು ಶಾಸನಗಳಲ್ಲಿ ಹಾಗೂ ವೀರಗಲ್ಲುಗಳಲ್ಲಿ, ಗಂಗಾಮತಸ್ಥರನ್ನ ಕುರಿತು ವಿಚಾರಗಳು ಇವೆ.

೭. ಸಾಹಿತ್ಯದಲ್ಲಿ ಗಂಗಾಮತಸ್ಥರ ಉಲ್ಲೇಖಗಳು ಕಂಡುಬಂದಿವೆ.

೮. ಕುಟುಂಬ ವ್ಯವಸ್ಥೆಯಲ್ಲಿ ಅವಿಭಕ್ತ ಹಾಗೂ ವಿಭಕ್ತ ಕುಟುಂಬಗಳು ಕಂಡು ಬಂದಿದ್ದು, ಸ್ತ್ರೀಯು ಪುರುಷನಿಗೆ ಸರಿಸಮಾನವಾಗಿ ದುಡಿಯುವುದರಿಂದಲೇ, ಕುಟುಂಬದಲ್ಲಿ ಸ್ತ್ರೀಯ ಪಾತ್ರ ಪ್ರಧಾನವಾಗಿರುತ್ತದೆ.

೯. ಮಂಡ್ಯ ಜಿಲ್ಲೆಯಲ್ಲೇ ಶಿಕ್ಷಣದಲ್ಲಿ ಅತ್ಯಂತ ಹಿಂದುಳಿದ ಸಮುದಾಯ ಗಂಗಾಮತಸ್ಥರದ್ದಾಗಿದೆ.

೧೦. ಇವರು ವಾಸಿಸುವ ಮನೆಗಳು ಹಂದಿಯ ಮನೆಗಳಂತಿದ್ದು, ನೆಮ್ಮದಿಯ ಜೀವನ ನಡೆಸಲು ಕಷ್ಟವಾಗಿದೆ.

೧೧. ಪಾರಂಪರಿಕ ವೃತ್ತಿಗಳಾದ ಮೀನುಗಾರಿಕೆ, ಸುಣ್ಣಸುಡುವುದು, ವೀಳ್ಯದೆಲೆ ಬೆಳೆಯುವುದು ಇವುಗಳ ಜೊತೆಗೆ ಕೂಲಿ, ಸಣ್ಣ–ಪುಟ್ಟ ವ್ಯಾಪಾರ ಮಾಡುತ್ತಿದ್ದಾರೆ.

೧೨. ಕುಲದ ನ್ಯಾಯ ಪದ್ಧತಿ ಇಂದಿಗೂ ಇದೆ.

೧೩. ಶ್ರೀ ಗಂಗಾಪರಮೇಶ್ವರಿ ಎಂಬ ಸಂಘ ಸಾಮಾನ್ಯವಾಗಿ ಇವರು ವಾಸಿಸುವ ಗ್ರಾಮಗಳಲೆಲ್ಲಾ ಕಂಡು ಬಂದಿವೆ.

೧೪. ಬೇಟೆಯಾಡುವುದೇ ಒಂದು ಕಾಲದಲ್ಲಿ ಇವರ ವೃತ್ತಿಯಾಗಿದ್ದು, ಇತ್ತೀಚೆಗೆ ಮೀನಿನ ಬೇಟೆಯೊಂದನ್ನು ಮಾತ್ರ ಉಳಿಸಿಕೊಂಡಿದ್ದಾರೆ.

೧೫. ನಂಬಿಕೆ ಮತ್ತು ವಿಧಿ, ನಿಷೇಧಗಳ ವಿಚಾರದಲ್ಲಿ ಇಂದಿಗೂ ನಂಬಿಕೆಯಿದೆ.

೧೬. ಉತ್ತಮವಾದ ಧಾರ್ಮಿಕ ಆಚರಣೆಯನ್ನ ಮಾಡುತ್ತಾರೆ. ಜನಪದ ವೈದ್ಯವನ್ನು ಇವರು ಹೆಚ್ಚಾಗಿ ಅವಲಂಬಿಸಿದ್ದಾರೆ.

೧೭. ಹುಟ್ಟಿನಿಂದ–ಸಾವಿನವರೆಗೆ ಹಾಗೂ ವಾರ್ಷಿಕಾವರ್ತನದಲ್ಲಿ ಕಂಡು ಬರುವ ಆಚರಣೆಗಳನ್ನು ಕ್ರಮಬದ್ಧವಾಗಿ ಮಾಡುತ್ತಾರೆ.

೧೮. ಜನಪದ ಸಾಹಿತ್ಯ ಹೇರಳವಾಗಿದ್ದು, ಮೌಖಿಕ ಸಾಹಿತ್ಯದಲ್ಲಿ ಜಿಲ್ಲೆಯಲ್ಲೇ ಪ್ರಥಮರಾಗಿದ್ದಾರೆ.

೧೯. ಇವರ ರಾಜಕೀಯ ಜೀವನವು ಅಷ್ಟು ಉತ್ತಮವಾಗಿ ಇರುವುದಿಲ್ಲ.

೨೦. ಇವರಲ್ಲಿ ಜಮೀನನ್ನು ಹೊಂದಿರುವವರ ಸಂಖ್ಯೆ ತೀರಾ ಕಡಿಮೆ ಇದ್ದು, ಆರ್ಥಿಕ ಸಂಕಷ್ಟದಲ್ಲಿ ಗಂಗಾಮತಸ್ಥರು ಇದ್ದಾರೆ.

೨೧. ಮಂಡ್ಯಜಿಲ್ಲೆಯಲ್ಲೇ ಅತ್ಯಂತ ಹೆಚ್ಚು ಜನರು ಸೆರೆಮನೆ ವಾಸದಲ್ಲಿರುವವರು ಗಂಗಾಮತಸ್ಥರಾಗಿದ್ದಾರೆ.

## ಸಲಹೆಗಳು

"ಗಂಗಾಮತಸ್ಥರ ಜಾನಪದ ಅಧ್ಯಯನ" (ಮಂಡ್ಯ ಜಿಲ್ಲೆಯನ್ನು ಪರಿಗಣಿಸಿ)ದ ಹಿನ್ನಲೆಯಲ್ಲಿ ಈ ಸಮುದಾಯವು ಅನೇಕ ಸಮಸ್ಯೆಗಳನ್ನು ಎದುರಿಸುತ್ತಿರುವುದನ್ನು ಗುರುತಿಸಲಾಗಿದೆ. ಈ ಸಮಸ್ಯೆಗಳ ಪರಿಹಾರಕ್ಕಾಗಿ ಈ ಕೆಳಗಿನ ಸೂಕ್ತ ಸಲಹೆಗಳನ್ನು ನೀಡಲಾಗಿದೆ. ಸಮಾಜ, ಸರ್ಕಾರ, ಸಂಘ-ಸಂಸ್ಥೆಗಳು ಈ ಕುರಿತು ಗಂಭೀರವಾಗಿ ಚಿಂತನೆ ನಡೆಸಿ ಸಹಾಯವನ್ನು ಮಾಡಬೇಕಾಗಿದೆ.

- ಮಂಡ್ಯ ಜಿಲ್ಲೆಯಲ್ಲಿ ವಾಸಿಸುವ ಗಂಗಾಮತಸ್ಥರನ್ನ ಪರಿಶಿಷ್ಟ ಪಂಗಡಕ್ಕೆ ಸೇರಿಸಬೇಕು.
- ಗುಡಿಸಲುಗಳಲ್ಲಿ ವಾಸಿಸುವ ಗಂಗಾಮತಸ್ಥರಿಗೆ ಸರ್ಕಾರದ ವತಿಯಿಂದ ಜನತಾ ಆಶ್ರಯ ಮನೆಗಳನ್ನು ಕಲ್ಪಿಸುವುದು.
- ಗಂಗಾಮತಸ್ಥ ಸಮುದಾಯದಲ್ಲಿ ವಿದ್ಯಾಭ್ಯಾಸ ಮಾಡುವ ಮಕ್ಕಳಿಗೆ ಸಂಪೂರ್ಣವಾಗಿ ಉಚಿತವಾದ ಸೌಲಭ್ಯಗಳನ್ನು ಕಲ್ಪಿಸಿಕೊಡಬೇಕು. ಉನ್ನತ ಶಿಕ್ಷಣಕ್ಕೆ ಹೆಚ್ಚಿನ ಪ್ರೋತ್ಸಾಹವನ್ನು ಒದಗಿಸಬೇಕು.
- ಮೀನುಗಾರರಿಗೆ ಬೇಕಾಗುವ ಬಲೆ, ಬೋಟು, ಸೈಕಲ್, ಮುಂತಾದ ವಸ್ತುಗಳನ್ನು ಉಚಿತವಾಗಿ ಕೊಡಬೇಕು. ಜೀವ ವಿಮೆ ಸೌಲಭ್ಯವನ್ನು ಸರ್ಕಾರ ಕಲ್ಪಿಸಿಕೊಡಬೇಕು.
- ಗಂಗಾಮತಸ್ಥರು ವಾಸಿಸುವ ಗ್ರಾಮಗಳಿಗೆ ನಾಗರೀಕ ಸೌಲಭ್ಯ ಕಲ್ಪಿಸಬೇಕು.
- ಮೀನುಗಾರರು ಕೆರೆ-ಕಟ್ಟೆಗಳಲ್ಲಿ ಮೀನು ಸಾಕಾಣಿಕೆಗೆ ಉಚಿತವಾದ ಅವಕಾಶಗಳನ್ನು ಒದಗಿಸಿಕೊಡಬೇಕು. ಅಲ್ಲದೆ ಉತ್ತಮ ಮೀನಿನ ತಳಿಗಳನ್ನು ಉಚಿತವಾಗಿ ಒದಗಿಸಿಕೊಡಬೇಕು.
- ಸರ್ಕಾರದ ಮೀನುಗಾರಿಕೆ ಇಲಾಖೆಯ ಉದ್ಯೋಗದಲ್ಲಿ ಹೆಚ್ಚಿನ ಅವಕಾಶ ಗಂಗಾಮತಸ್ಥರಿಗೆ ಕೊಡಬೇಕು.
- ತಾಲ್ಲೂಕು ಮಟ್ಟದಲ್ಲಿ ಸರ್ಕಾರದಿಂದ ಮೀನಿನ ಮಾರಾಟ ಕೇಂದ್ರಗಳನ್ನು ಸ್ಥಾಪಿಸಿ, ಒಂದು ನಿಗಧಿತ ಬೆಲೆಯನ್ನು ನಿಗಧಿಪಡಿಸಬೇಕು.

- ಗಂಗಾಮತಸ್ಥರ ಎಲ್ಲಾ ಸಂಘಸಂಸ್ಥೆಗಳಿಗೆ ಆರ್ಥಿಕವಾದ ಸಹಕಾರವನ್ನು ನೀಡಿ, ಆ ಮೂಲಕ ಅಭಿವೃದ್ಧಿಗೆ ಒತ್ತು ನೀಡಬೇಕು.
- ಒಟ್ಟಾರೆ ಸರ್ಕಾರದ ಮಟ್ಟದಲ್ಲಿ ಹಾಗೂ ಖಾಸಗಿ ಮಟ್ಟದಲ್ಲಿ ನೇಮಕ ಮಾಡುವ ಎಲ್ಲ ಹುದ್ದೆಗಳಿಗೂ, ಈಗಿರುವ ಮೀಸಲಾತಿಗಿಂತ ಹೆಚ್ಚಿನ ಮೀಸಲಾತಿಯನ್ನು ಕಲ್ಪಿಸಿಕೊಡಬೇಕು.
- ಜಿಲ್ಲೆಯಲ್ಲಿ ಯಾವುದಾದರೊಂದು ವಿಧಾನಸಭಾ ಕ್ಷೇತ್ರವನ್ನು ಇವರಿಗೆ ಮೀಸಲು ಮಾಡಬೇಕು. ಹಾಗೂ ವಿಧಾನ ಪರಿಷತ್ತಿಗೆ ಸರ್ಕಾರ ಈ ಸಮುದಾಯದ ಒಬ್ಬರನ್ನು ನೇಮಿಸಬೇಕು.
- ಗಂಗಾಮತಸ್ಥರನ್ನೆಲ್ಲಾ ಕೂಲಿಗಾರರ ಸಂಘಕ್ಕೆ ಕಡ್ಡಾಯವಾಗಿ ನೇಮಿಸಿಕೊಳ್ಳುವಂತೆ, ಸರ್ಕಾರಿ ಅಧಿಕಾರಿಗಳಿಗೆ ಸೂಚಿಸಬೇಕು.
- ಇವರ ಕಲೆಗೆ ಸರ್ಕಾರ ಹೆಚ್ಚಿನ ಪ್ರೋತ್ಸಾಹ ನೀಡಬೇಕು.
- ಉಚಿತ ಆರೋಗ್ಯ ಸೌಲಭ್ಯವನ್ನು ಕಲ್ಪಿಸಿಕೊಡಬೇಕು.
- ಗಂಗಾಮತಸ್ಥರು ವಾಸಿಸುವ ಗ್ರಾಮಗಳಲ್ಲಿ ಸಮುದಾಯ ಭವನವನ್ನು ನಿರ್ಮಾಣ ಮಾಡಿಕೊಡುವುದು.
- ಮೀನುಗಾರರಿಗೆ ಸರ್ಕಾರದಿಂದ ಉಚಿತ ತರಬೇತಿ ನೀಡಬೇಕು.
- ವೀಳ್ಯದೆಲೆ ತೋಟ ಹೊಂದಿರುವ ಗಂಗಾಮತಸ್ಥರಿಗೆ ಪ್ರೋತ್ಸಾಹ ನೀಡಬೇಕು.
- ಕಬ್ಬು ಕಡಿಯುವ ಗಂಗಾಮತಸ್ಥ ಕೂಲಿಗಾರರಿಗೆ, ಸಕ್ಕರೆ ಕಾರ್ಖಾನೆ ವತಿಯಿಂದ ವಿಶೇಷ ಸೌಲಭ್ಯಗಳು ಸಿಗಬೇಕು.
- ಅರಿವಿಲ್ಲದೆ ತಪ್ಪುಮಾಡಿ ಸೆರೆಮನೆ ವಾಸದಲ್ಲಿರುವ, ಇವರಿಗೆ ಸಮಾಜದಲ್ಲಿ ಬದುಕುವ ಕಲೆಯ ಬಗ್ಗೆ ಅರಿವು ಮೂಡಿಸಿ ಸರ್ಕಾರ ಬಿಡುಗಡೆ ಮಾಡುವತ್ತ ಮನಸ್ಸು ಮಾಡಬೇಕು.

ಹೀಗೆ ಸರ್ಕಾರ ಇವರ ಸಮಸ್ಯೆಗಳಿಗೆ ಸ್ಪಂದಿಸಿದರೆ ಮಾತ್ರ ಗಂಗಾಮತಸ್ಥ ಸಮುದಾಯದವರು, ಇನ್ನಿತರ ಸಮುದಯದವರಂತೆ, ಅಭಿವೃದ್ಧಿಯನ್ನ ಹೊಂದಿ ಜೀವನ ನಡೆಸಲು ಸಾಧ್ಯವಾಗುತ್ತದೆ. ಈ ನಿಟ್ಟಿನಲ್ಲಿ ಸರ್ಕಾರ ಸಹಾಯ ಹಸ್ತವನ್ನು ನೀಡಬೇಕಾಗಿದೆ.

# ಅನುಬಂಧ

೧. ಪರಾಮರ್ಶನ ಗ್ರಂಥಗಳು

೨. ವಕ್ತೃಗಳ ವಿವರ

೩. ಮಂಡ್ಯ ಜಿಲ್ಲೆಯ ನಕ್ಷೆ

೪. ಸಾಂಸ್ಕೃತಿಕ ಪದಕೋಶ

೫. ಹಾಡುಗಳು

೬. ಗಾದೆಗಳು

೭. ಒಗಟುಗಳು

೮. ಭಾವಚಿತ್ರಗಳು

# ಅನುಬಂಧ

## ೧. ಪರಮಾರ್ಶನ ಗ್ರಂಥಗಳು


೧. 'ಅಂಬೇಡ್ಕರ್ ಬರಹಗಳು ಮತ್ತು ಭಾಷಣಗಳು', ಸಂ. ೧, ೧೯೯೦, ಕನ್ನಡ ಸಂಸ್ಕೃತಿ ಇಲಾಖೆ, ಬೆಂಗಳೂರು.

೨. ಅಕ್ಕಮಹಾದೇವಿ, ೧೯೮೪, 'ಬುಡಕಟ್ಟುನ್ಯಾಯ', ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೩. ಅನಂತರಂಗಾಚಾರ್ ಎನ್. 'ಪಂಪಭಾರತಂ' ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು. ೧೯೭೨.

೪. ಅನಂತರಾಮು ಕೆ. 'ಸಕ್ಕರೆಯ ಸೀಮೆ', ೧೯೮೨ ಅನಂತ ಪ್ರಕಾಶನ, ಮೈಸೂರು.

೫. ಅನ್ನದಾನಿ ಕೆ. 'ಉತ್ತರ ದೇಸ ಕತ್ಲ ರಾಜ್ಯ' ೨೦೦೬, ಅಂಶು ಪ್ರಕಾಶನ, ನಂ. ೨೫, ೪ನೇ ಕ್ರಾಸ್, ಮುನೇಶ್ವರ ನಗರ, ಕೃಷ್ಣಯ್ಯನ ಪಾಳ್ಯ, ಬೆಂಗಳೂರು.

೬. ಈಶ್ವರನ್ ಹಿರೇಮಲ್ಲೂರು 'ಭಾರತದ ಹಳ್ಳಿಗಳು' ೧೯೭೨, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೭. ಈಶ್ವರಪ್ಪ. ಎಂ.ಜಿ. 'ಜಾನಪದ ಇಬ್ಬನಿಗಳು' ೧೯೯೯, ಕನ್ನಡ ಪುಸ್ತಕ ಪ್ರಾಧಿಕಾರ, ಕರ್ನಾಟಕ ಸರ್ಕಾರ, ಬೆಂಗಳೂರು.

೮. ಎಚ್ಚಾರ್ಕೆ, 'ಭಾರತದ ಆರ್ಥಿಕಾಭಿವೃದ್ಧಿ', ಸ್ವಪ್ನ ಬುಕ್ ಹೌಸ್, ಬೆಂಗಳೂರು, ೨೦೦೫.

೯. 'ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು', ಏಳನೆಯ ಸಂಪುಟ, ಬಿಲ್ವ–ಲೌಹಿತ್ಯ ೧೯೯೩, ಪ್ರಕಾಶಕರು–ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು.

೧೦. ಕರೀಂಸಾಬ್ .ಎಸ್.ಕೆ. 'ಜಾನಪದ ವೈದ್ಯ', ಕರ್ನಾಟಕ ಯಕ್ಷಗಾನ ಅಕಾಡೆಮಿ, ಬೆಂಗಳೂರು, ೧೯೮೯.

೧೧. ಕಲ್ಲೂರು ಎಂ.ಎಸ್. ಮತ್ತು ಪ್ರಭಾಕರ ಶಿಶಿಲ, 'ಕೃಷಿ ಅರ್ಥಶಾಸ್ತ್ರ', ಕಲಾಪ್ರಕಾಶನ, ಬೆಂಗಳೂರು, ೨೦೦೦.

೧೨. ಕೃಷಿ ಉತ್ಪಾದನೆ, ೧೯೯೪–೯೫, ಕೃಷಿ ನಿರ್ದೇಶನಾಲಯ, ಬೆಂಗಳೂರು.

೧೩. ಕೃಷ್ಣಮೂರ್ತಿ ಹನೂರು, ೧೯೯೩, 'ಮ್ಯಾಸಬೇಡರ ಸಂಸ್ಕೃತಿ', ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೧೪. ಕೃಷ್ಣಮೂರ್ತಿ ಹನೂರು, ಶಿವಾಜಿ ಜೋಯಿಸ್, ಎಸ್ ಸಂಪಾದಕರು ಕೆ.ನ. ಶಿವತೀರ್ಥನ್‌ರ 'ಗೆಂಡಗಯ್ಯ: ಒಳವು' ೨೦೦೧, ನೈರುತ್ಯ ಪ್ರಕಾಶನ, ೪೩, ಮಾಂದಳಿರು, ೨ನೇ ಹಂತ ಎಂ. ಬ್ಲಾಕ್, ಕುವೆಂಪುನಗರ, ಮೈಸೂರು.

೧೫. ಕೃಷ್ಣಶಾಸ್ತ್ರೀ.ಎ.ಆರ್. 'ವಚನಭಾರತ', ೨೦೦೧, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೧೬. ಗಂಗಾಧರ ದೈವಜ್ಞ, ೨೦೦೦, 'ಬುಡಕಟ್ಟು ಸಮಾಜ ಹುಟ್ಟು-ಸಾವಿನ ನಡುವೆ', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ.

೧೭. ಗಾಯಿತ್ರಿ ಎನ್. ಆರ್. 'ಆಯುರ್ವೇದೋಕ್ತ ಸಂಸ್ಕಾರಗಳು', ೧೯೮೫ ಭಾರತೀಯ ವೈದ್ಯ ಪದ್ಧತಿಗಳು ಮತ್ತು ಹೋಮಿಯೋಪತಿ ನಿರ್ದೇಶನಾಲಯ, ಬೆಂಗಳೂರು.

೧೮. ಗುರುಪ್ರಸಾದ್ ಸಿ.ಟಿ. 'ನೀಲಗಾರರು: ಒಂದು ಧಾರ್ಮಿಕ ಸಮುದಾಯದ ಅಧ್ಯಯನ' (ದಕ್ಷಿಣ ಕರ್ನಾಟಕವನ್ನ ಅನುಲಕ್ಷಿಸಿ) ೨೦೦೨, ಕನ್ನಡ ವಿಶ್ವವಿದ್ಯಾನಿಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ಅಪ್ರಕಟಿತ ಮಹಾಪ್ರಬಂಧ.

೧೯. ಚಂದ್ರು ಕಾಳೇನಹಳ್ಳಿ, ೧೯೯೩, 'ಸೋಲಿಗರ ಸಂಸ್ಕೃತಿ', ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೨೦. ಚಂದ್ರ ಪೂಜಾರಿ ಎಂ., ೨೦೦೫, 'ಸಮಾಜಸಂಶೋಧನೆ', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ.

೨೧. ಚಂದ್ರಶೇಖರ್, ಬಿ. ದಾಮ್ಲೆ, ೧೯೯೯, 'ಭಾರತೀಯ ಸಾಮಾಜಿಕ ಅಧ್ಯಯನ', ದ್ರಾವಣ ಪ್ರಕಾಶನ, ಮಂಗಳೂರು.

೨೨. ಚಂದ್ರಶೇಖರ ಕಂಬಾರ 'ಕನ್ನಡ ಜಾನಪದ ವಿಶ್ವಕೋಶ' ೧೯೮೫, ಕನ್ನಡ ಸಾಹಿತ್ಯ ಪ್ರಕಾಶನ, ಸಂಪುಟ, ೧, ೨.

೨೩. ಚೆನ್ನಬಸಪ್ಪ ಗೊ.ರು. ಸಂಪಾದಕರು 'ಕರ್ನಾಟಕ ಜನಪದ ಕಲೆಗಳು' ೧೯೭೭, ಬೆಂಗಳೂರು.

೨೪. ಚನ್ನಮಲ್ಲಪ್ಪ ಶಾಸ್ತ್ರಿಗಳು 'ಶ್ರೀ ರಾಮಾರೂಢ ಸ್ವಾಮಿಗಳ ಜೀವನ ಚರಿತ್ರೆ', ಮುಗಳಳ್ಳಿ ತಾ॥, ಬಾಗಲಕೋಟೆ.

೨೫. ಜವರೇಗೌಡ. ದೇ. 'ಜಾನಪದ ಸೌಂದರ್ಯ' ೧೯೭೭, ಸಹ್ಯಾದ್ರಿ ಪ್ರಕಾಶನ, ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಮೈಸೂರು.

೨೬. ಜವರೇಗೌಡ. ದೇ. 'ಸುವರ್ಣ ಮಂಡ್ಯ' ೨೦೦೬, ಮಂಡ್ಯ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಬಂದೀಗೌಡ ಬಡಾವಣೆ, ಎಲ್.ಐ.ಸಿ. ಕಟ್ಟಡದ ಹಿಂಭಾಗ, ಮಂಡ್ಯ.

೨೭. ಜವರೇಗೌಡ. ದೇ. ಪ್ರಧಾನ ಸಂಪಾದಕ 'ಸಿರಿಯೊಡಲು' ೧೯೯೪, ಪ್ರಕಾಶಕರು, ಸ್ವಾಗತ ಸಮಿತಿ, ೬೩ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ, ಮಂಡ್ಯ.

೨೮. ದೊಡ್ಡಮನಿ, ಲೋಕರಾಜ ಎ.ಕೆ. (ಸಂ), 'ಕರ್ನಾಟಕ ಸಿಂದೋಳ್ಳು ಸಮುದಾಯದ ಸಮಾಜ ಶಾಸ್ತ್ರೀಯ ಅಧ್ಯಯನ', ೨೦೦೫ರಲ್ಲಿ ಕನ್ನಡ ವಿಶ್ವವಿದ್ಯಾನಿಲಯ, ಹಂಪಿಗೆ ಸಲ್ಲಿಸಿದ ಅಪ್ರಕಟಿತ ಪಿಎಚ್.ಡಿ ಮಹಾ ಪ್ರಬಂಧ.

೨೯. ದಾಸೇಗೌಡ, ಜಿ.ವಿ. 'ಮಂಡ್ಯ ಜಿಲ್ಲೆಯ ಜಾತ್ರೆಗಳು' ೨೦೦೦, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೩೦. ನಾಗೇಗೌಡ, ಎಚ್.ಎಲ್., ಪ್ರಧಾನ ಸಂಪಾದಕರು, 'ಕನ್ನಡ ಜಾನಪದ ಕೋಶ' ೧೯೯೮, ಕರ್ನಾಟಕ ಜಾನಪದ ಪರಿಷತ್ತು ೫ನೇ ಅಡ್ಡರಸ್ತೆ, ೪ನೇ ಬ್ಲಾಕ್, ಕುಮಾರ ಪಾರ್ಕ್ ಪಶ್ಚಿಮ, ಬೆಂಗಳೂರು.

೩೧. ನಾಗೇಗೌಡ, ಎಚ್.ಎಲ್., ಪ್ರಧಾನ ಸಂಪಾದಕರು, 'ಕನ್ನಡ ಜನಪದ ಕಥನ ಕಾವ್ಯಗಳು' ೨೦೦೭, ಕರ್ನಾಟಕ ಜಾನಪದ ಪರಿಷತ್ತು, ನಂ. ೧ ಕರ್ನಾಟಕ ಸರ್ಕಾರಿ ನೌಕರರ ವಸತಿ ಬಡಾವಣೆ, ನ್ಯೂ ಬಿ.ಇ.ಎಲ್. ರಸ್ತೆ, ಬೆಂಗಳೂರು.

೩೨. ನಾರಾಯಣ ಜಿ. ಪ್ರಧಾನ ಸಂಪಾದಕರು, 'ಜಾನಪದ ಜಗತ್ತು', ಸಂಪುಟ ೨೯, ಸಂಚಿಕೆ–೪, ಅಕ್ಟೋಬರ್–ಡಿಸೆಂಬರ್ ೨೦೦೮.

೩೩. ನಲ್ಲೂರು ಪ್ರಸಾದ್ 'ಗಂಗಡಿಕಾರ ಒಕ್ಕಲಿಗರು' ೨೦೦೧, 'ಇಳಾ' ಮುದ್ರಣ, ಬೆಂಗಳೂರು.

೩೪. ಪರಮಶಿವಯ್ಯ ಜೀ.ಶಂ. 'ಜನಪದ ಕಾವ್ಯ ಕಥೆಗಳು' ೧೯೯೦, ಮುದ್ರಕರು: ಅಶೋಕ್‌ಕುಮಾರ್, ಲಕ್ಷ್ಮಿ ಮುದ್ರಣಾಲಯ, ಬೆಂಗಳೂರು.

೩೫. ಪಾಂಡುರಂಗ, ಡಿ.ಆರ್. 'ದಕ್ಷಿಣ ಕನ್ನಡ ಜಿಲ್ಲೆಯ ಭೈರರು ಸಾಹಿತ್ಯಿಕ ಸಾಂಸ್ಕೃತಿಕ ಅಧ್ಯಯನ' ೧೯೯೦, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ.

೩೬. ಪುಟ್ಟಯ್ಯ ಬಿ.ಎಂ. 'ಸಾವು ಒಂದು ಚಿಂತನೆ' ೨೦೦೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ.

೩೭. ಪ್ರಶಾಂತ್.ಹೆಚ್.ಡಿ. 'ಈಶಾನ್ಯ ಕರ್ನಾಟಕದಲ್ಲಿ ಪ್ರಾಥಮಿಕ ಶಿಕ್ಷಣ ಮತ್ತು ಸಮಾಜ' ಪ್ರಸಾರಾಂಗ, ಕನ್ನಡ ವಿಶ್ವ ವಿದ್ಯಾನಿಲಯ, ಹಂಪಿ, ೨೦೦೫.

೩೮. ಭಾರತದ ಗ್ಯಾಸೆಟಿಯರ್, ಕರ್ನಾಟಕ ರಾಜ್ಯ ಮಂಡ್ಯ ಜಿಲ್ಲೆ, ೨೦೦೩.

೩೯. ಬೋರೇಗೌಡ ಚಿಕ್ಕಮರಳಿ 'ಜಾನಪದ ಅನ್ವೇಷಣೆ' ೨೦೦೬ ಪ್ರಕಾಶನ: ಮಂಡ್ಯಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ೧ನೇ ತಿರುವು, ಎಲ್.ಐ.ಸಿ. ಹಿಂಭಾಗ, ಬಂದೀಗೌಡ ಬಡಾವಣೆ, ಮಂಡ್ಯ.

೪೦. ಮಂಜುನಾಥ ಬೇವಿನಕಟ್ಟಿ, 'ಜನಪದ ನಂಬಿಕೆಗಳು' ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ. ಹಂಪಿ, ೧೯೯೬.

೪೧. ಮಂಜುನಾಥ ಬೇವಿನಕಟ್ಟಿ, 'ವ್ಯಾಧಚರಿತೆ' ೨೦೦೭, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾನಿಲಯ ಹಂಪಿ.

೪೨. 'ಮಂಡ್ಯ ಜಿಲ್ಲೆಯ ಅಂಕಿ ಅಂಶಗಳ ನೋಟ' ಕರ್ನಾಟಕ ಸರ್ಕಾರ, ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ಮಂಡ್ಯ, ೨೦೦೮.

೪೩. ಮಹಾಭಾರತ, ಆದಿಪರ್ವ, ಸಂಪುಟ–೨, ಭಾರತ ದರ್ಶನ ಪ್ರಕಾಶನ, ಬೆಂಗಳೂರು.

೪೪. ಮುಹಮ್ಮದ್ ಕಲೀಂಉಲ್ಲ 'ಶಾಸನ ಪರಿಚಯ: ಮಳವಳ್ಳಿ ತಾಲ್ಲೂಕು', ೨೦೦೮, ಮುಜೀಬ್ ಪ್ರಕಾಶನ, ನಾಗಮಂಗಲ.

೪೫. ಮೋಹನ್ ಎಸ್. 'ದಕ್ಷಿಣ ಕನ್ನಡ ಜಿಲ್ಲೆಯ ಮರಾಟಿಗರ ಜಾನಪದ', ೨೦೦೭ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ಅಪ್ರಕಟಿತ ಮಹಾಪ್ರಬಂಧ.

೪೬. ಮೈತ್ರಿ ಕೆ.ಎಂ. 'ಬುಡಕಟ್ಟು ಕುಲಕಸುಬುಗಳು' ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, ೨೦೦೨.

೪೭. ರಾಧಮ್ಮ 'ಕೊರವರ ಸಮುದಾಯದ ಮಹಿಳೆ' (ಬಳ್ಳಾರಿ ಜಿಲ್ಲೆಯನ್ನು ಅನುಲಕ್ಷಿಸಿ) ೨೦೦೯ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ಅಪ್ರಕಟಿತ ಮಹಾಪ್ರಬಂಧ.

೪೮. ರಾಮಚಂದ್ರರಾವ್, ಎಸ್.ಕೆ., 'ವಿವಾಹ ಪದ್ಧತಿಗಳು' ೧೯೮೧, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾನಿಲಯ, ಬೆಂಗಳೂರು.

೪೯. ರಾಮರಾವ್ ಬೆನಗಲ್, ಪಾನ್ಯಂ ಸುಂದರ ಶಾಸ್ತ್ರಿ 'ಪುರಾಣನಾಮ ಚೂಡಾಮಣಿ' ೨೦೦೩, ಪ್ರಕಾಶಕರು, ಪ್ರೊ.ಲಕ್ಷ್ಮೀನಾರಾಯಣ ಅರೋರಾ ನಿರ್ದೇಶಕರು, ಪ್ರಸಾರಾಂಗ, ಮಾನಸಗಂಗೋತ್ರಿ, ಮೈಸೂರು.

೫೦. ರಾಮಸ್ವಾಮಿ ಅಯ್ಯಂಗಾರ್, ಗೋರೂರು, 'ಜನಪದ ಜೀವನ ಮತ್ತು ದರ್ಶನ' ೧೯೭೪, ಪ್ರಸಾರಾಂಗ, ಮಾನಸಗಂಗೋತ್ರಿ, ಮೈಸೂರು.

೫೧. ರಾಮೇಗೌಡ–ಗೌರವಸಂಪಾದಕ, 'ಅಭಿವ್ಯಕ್ತಿ' ಸಾಹಿತ್ಯ ಮಾಸಿಕ ಸಂಪುಟ–೧, ಸಂಚಿಕೆ–೧, ಜನವರಿ–೨೦೦೮, ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ, ಕರ್ನಾಟಕ ಸಂಘ (ರಿ), ಮಂಡ್ಯ.

೫೨. ಲಕ್ಕಪ್ಪಗೌಡ, ಎಚ್.ಜಿ., 'ಜಾನಪದ ಕೈಪಿಡಿ' ೧೯೯೭, ಕನ್ನಡ ಪುಸ್ತಕ ಪ್ರಾಧಿಕಾರ ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು.

೫೩. ವೆಂಕಟಪ್ಪ ಕೂಡ್ಲೂರು 'ಗೊಂಬೆ ಚಿತ್ತಾರದ ಮಡೆಕಡೆದೊ.....' ೨೦೦೯ ಎಂ. ಮೀನಾಕ್ಷಿ ರಮೇಶ್ ಧಾತ್ರಿ ಪುಸ್ತಕ ಮಾಲೆ ನಂ. ೧೭೦, ೩ನೇ ಸಿ ಅಡ್ಡರಸ್ತೆ, ವಿನಾಯಕ ಬಡಾವಣೆ, ನಾಗರಬಾವಿ, ಬೆಂಗಳೂರು.

೫೪. ವೆಂಕಟರಾಜ ಪುಣಿಂಚತ್ತಾಯ 'ಮೊಗವೀರರ ಸಂಸ್ಕೃತಿ' ೧೯೯೩, 'ಕರ್ನಾಟಕ ಸಾಹಿತ್ಯ ಅಕಾಡೆಮಿ' ನೃಪತುಂಗ ರಸ್ತೆ, ಬೆಂಗಳೂರು.

೫೫. ಸುಧಾಕರ 'ಜನಪದ ನುಡಿಗಟ್ಟುಗಳ ಕೋಶ' ೨೦೦೬, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ.

೫೬. ಸಿದ್ದಲಿಂಗಯ್ಯ 'ಗ್ರಾಮದೇವತೆಗಳು' ೧೯೯೭, ಮೂಲಭಾರತಿ ಪ್ರಕಾಶನ, ಬೆಂಗಳೂರು.

೫೭. ಸಿದ್ದಾಶ್ರಮ ಸಿ.ಪಿ. 'ದಿಟದ ದಿಟ್ಟಿಯ ಪಯಣ' ಅರುಣ ಪ್ರಕಾಶನ, ಮೈಸೂರು, ೨೦೦೫

೫೮. ಶ್ರೀಹರಿ 'ಭೀಷ್ಮ' ೨೦೦೨ ಭಾರತ ಸಂಸ್ಕೃತಿ ಪ್ರಕಾಶನ ನಂ. ೩೭/೮, ಜಿ೪, ಲೀಸಾ ಅಪಾರ್ಟ್‌ಮೆಂಟ್ಸ್, ೪ನೇ ಕ್ರಾಸ್, ಲಾಲಾಬಾಗ್ ರಸ್ತೆ, ಬೆಂಗಳೂರು.

೫೯. ಹಿರಿಯಣ್ಣ ಅಂಬಳಿಕೆ 'ಜಾನಪದ : ಕೆಲವು ಅಧ್ಯಯನಗಳು' ೧೯೯೪ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ನೃಪತುಂಗ ರಸ್ತೆ, ಬೆಂಗಳೂರು.

೬೦. ಹಿರಿಯಣ್ಣ ಅಂಬಳಿಕೆ 'ಜಾನಪದ ಪರಿಶೋಧನ' ೧೯೮೮, ಪ್ರಜ್ವಲ್ ಪ್ರಕಾಶನ, ಮೈಸೂರು.

೬೧. ಹಿರಿಯಣ್ಣ ಅಂಬಳಿಕೆ 'ಮಲೆನಾಡಿನ ವೈಷ್ಣವ ಒಕ್ಕಲಿಗರ ಸಂಸ್ಕೃತಿ' ೧೯೯೯, ಕನ್ನಡ ಪುಸ್ತಕ ಪ್ರಾಧಿಕಾರ ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು.

೬೨. Anantha Krishnan Iyer L.K, Vol-I, 1930, 'The Mysore Tribes and Caste', Mysore University, Mysore.

೬೩. Burton Benedict, 'Indians in a plural society', Lodon; Her Majesty's stationery office 1961.

೬೪. Elwin V., 'A New Deal for Tribal India', New Delhi, Ministry of Home offairs, 1963.

೬೫. Nanjundaiah H.V., Anantha Krishna Iyer, 1922. 'The Mysore Tribes and castes', Mittal Publications, New Delhi.

೬೬. Srinivas. M.N. 'Marriage and Family in Mysore', Prajval Publications, Mysore, 1942.

## ೨. ವಕ್ತೃಗಳ ವಿವರ

| ಕ್ರ. ಸಂ. | ವಕ್ತೃವಿನ ಹೆಸರು ಮತ್ತು ವಿಳಾಸ | ವಯಸ್ಸು | ಶಿಕ್ಷಣ | ವೃತ್ತಿ |
|---|---|---|---|---|
| ೧. | ಎಂ. ಪುಟ್ಟಯ್ಯ ತಂದೆ ಮರಿಯಯ್ಯ<br>ಕುಲುಮೆದೊಡ್ಡಿ, ಮಳವಳ್ಳಿ ತಾ॥ | ೫೧ | ಬಿ.ಕಾಂ., | ಜಿಲ್ಲಾ ಪಂಚಾಯಿತಿ ಸದಸ್ಯರು,<br>ಮಂಡ್ಯಜಿಲ್ಲೆ. |
| ೨. | ಕುಮಾರ ಸ್ವಾಮಿ ತಂದೆ ಸಿದ್ದಪ್ಪಾಜಿ<br>ಅಪ್ಪಾಜಯ್ಯನ ದೊಡ್ಡಿ, ಮಳವಳ್ಳಿ ತಾ॥ | ೩೦ | ಬಿ.ಎ., | ವ್ಯವಸಾಯ |
| ೩. | ಪೀಚಯ್ಯ ತಂದೆ ತೈಲೂರು ಪುಟ್ಟಯ್ಯ<br>ಅಪ್ಪಾಜಯ್ಯನ ದೊಡ್ಡಿ, ಮಳವಳ್ಳಿ ತಾ॥ | ೬೦ | ಅನಕ್ಷರಸ್ಥ | ವ್ಯವಸಾಯ |
| ೪. | ಸ್ವಾಮಿ ತಂದೆ ಪುಟ್ಟರಾಮಯ್ಯ<br>ಅಪ್ಪಾಜಯ್ಯನ ದೊಡ್ಡಿ, ಮಳವಳ್ಳಿ ತಾ॥ | ೩೧ | ಎಸ್.ಎಸ್.ಎಲ್.ಸಿ. | ನಲ್ಲಿ ರಿಪೇರಿ ಮಾಡುವ ಕೆಲಸ |
| ೫. | ಎಂ. ಮಹದೇವ ತಂದೆ ಮಾದಯ್ಯ<br>ಕುಲುಮೆದೊಡ್ಡಿ, ಮಳವಳ್ಳಿ ತಾ॥ | ೪೧ | ೭ನೇ ತರಗತಿ | ಕಬ್ಬಿನ ಮೇಸ್ತ್ರಿ |
| ೬. | ಈರಯ್ಯ ತಂದೆ ಎಲೆ ಈರಯ್ಯ<br>ಕನ್ನಲಿ, ಮಂಡ್ಯ ತಾ॥ | ೪೮ | ಎಸ್.ಎಸ್.ಎಲ್.ಸಿ. | ಜಿಲ್ಲಾ ಪಂಚಾಯಿತಿ ಸದಸ್ಯರು,<br>ಮಂಡ್ಯ ಜಿಲ್ಲೆ |

| | | | | |
|---|---|---|---|---|
| ೭. | ನಿಂಗಮ್ಮ ಗಂಡ ಹೊಟ್ಟೆ ಈರಯ್ಯ<br>ಕನ್ನಲಿ, ಮಂಡ್ಯ ತಾ॥ | ೭೫ | ಅನಕ್ಷರಸ್ಥೆ | ವೀಳ್ಯದೆಲೆ ಮಾರುವುದು |
| ೮. | ದೊಡ್ಡಯ್ಯ ತಂದೆ ದೊಡ್ಡ ಪುಟ್ಟಯ್ಯ<br>ಕನ್ನಲಿ, ಮಂಡ್ಯ ತಾ॥ | ೬೦ | ಅನಕ್ಷರಸ್ಥ | ಕೂಲಿ |
| ೯. | ಹೆಚ್.ಸಿ. ಶಿವಮಾದಯ್ಯ ತಂದೆ ಚಿಕ್ಕಹೈದಯ್ಯ<br>ಹುಸ್ಕೂರು, ಮಳವಳ್ಳಿ ತಾ॥ | ೩೯ | ಎಂ.ಎ., ಬಿ.ಇಡಿ., | ಸರ್ಕಾರಿ ಪ್ರೌಢಶಾಲಾ ಶಿಕ್ಷಕರು<br>ಹಲಗೂರು, ಮಳವಳ್ಳಿ ತಾ॥ |
| ೧೦. | ಕರಗಮ್ಮ ಗಂಡ ಚಿಕ್ಕಹೈದಯ್ಯ<br>ಹುಸ್ಕೂರು, ಮಳವಳ್ಳಿ ತಾ॥ | ೮೦ | ಅನಕ್ಷರಸ್ಥೆ | ಕೂಲಿ |
| ೧೧. | ಕುಮಾರ ತಂದೆ ಚಿಕ್ಕಸಿದ್ದಯ್ಯ<br>ಹುಸ್ಕೂರು, ಮಳವಳ್ಳಿ ತಾ॥ | ೨೯ | ಎಂ.ಎ., ಬಿ.ಇಡಿ., | ಶಿಕ್ಷಕರು, ಸರ್ಕಾರಿ ಹಿರಿಯ<br>ಪ್ರಾಥಮಿಕ ಶಾಲೆ, ತುಮಕೂರು. |
| ೧೨. | ಕರಿಯಯ್ಯ ತಂದೆ ಕುನ್ನಾಬೋಯಿ<br>ಮೆಣಸಗೆರೆ, ಮದ್ದೂರು ತಾ॥ | ೮೫ | ಅನಕ್ಷರಸ್ಥ | ಕೂಲಿ |
| ೧೩. | ಕೆಂಪಮ್ಮ ಗಂಡ ರಾಮಾಬೋಯಿ<br>ಮೆಣಸಗೆರೆ, ಮದ್ದೂರು ತಾ॥ | ೬೫ | ಅನಕ್ಷರಸ್ಥೆ | ಕೂಲಿ |

| | | | | |
|---|---|---|---|---|
| ೧೪. | ಚಿಕ್ಕಬೋರಯ್ಯ ತಂದೆ ರಾಮಣ್ಣ<br>ಮೆಣಸಗೆರೆ, ಮದ್ದೂರು ತಾ॥ | ೩೫ | ಎಂ.ಎ., ಎಂ.ಇಡಿ., | ಶಿಕ್ಷಕರು, ಸರ್ಕಾರಿ ಪ್ರೌಢಶಾಲೆ,<br>ಕ್ಯಾತಘಟ್ಟ, ಮದ್ದೂರು ತಾ॥ |
| ೧೫. | ಎಂ. ಚಂದ್ರು ತಂದೆ ಮರಿಯಯ್ಯ<br>ಆರತಿಉಕ್ಕಡ, ಶ್ರೀರಂಪಟ್ಟಣ ತಾ॥ | ೫೮ | ೫ನೇ ತರಗತಿ | ಕೂಲಿ |
| ೧೬. | ಪುಟ್ಟಲಕ್ಷ್ಮಮ್ಮ ಗಂಡ ಬೋರಯ್ಯ<br>ಆರತಿ ಉಕ್ಕಡ, ಶ್ರೀರಂಗಪಟ್ಟಣ ತಾ॥ | ೪೮ | ಅನಕ್ಷರಸ್ಥೆ | ಉಕ್ಕಡದ ಮಾರಮ್ಮನ<br>ದೇವಸ್ಥಾನದ ಹತ್ತಿರ ವ್ಯಾಪಾರ |
| ೧೭. | ಬೋರಯ್ಯ ತಂದೆ ಬೋರಯ್ಯ<br>ಆರತಿ ಉಕ್ಕಡ, ಶ್ರೀರಂಗಪಟ್ಟಣ ತಾ॥ . | ೫೧ | ೫ನೇ ತರಗತಿ | ಕಾವಲುಗಾರ |
| ೧೮. | ನಂಜುಂಡಯ್ಯ ತಂದೆ ನಂಜುಂಡಯ್ಯ<br>ಕಲ್ಲಹಳ್ಳಿ, ಮಂಡ್ಯ ಪಟ್ಟಣ | ೬೫ | ಪಿ.ಯು.ಸಿ. | ಸದಸ್ಯರು ನಗರಸಭೆ, ಮಂಡ್ಯ,<br>ಅಧ್ಯಕ್ಷರು, ಗಂಗಾಮತಸ್ಥರ<br>(ಬೆಸ್ತರ) ಸಂಘ, ಮಂಡ್ಯ ಜಿಲ್ಲೆ. |
| ೧೯. | ಹೊ.ರ. ಕುಮಾರಸ್ವಾಮಿ ತಂದೆ ರಾಮಸಿದ್ದಯ್ಯ<br>ಹೊಳಲು, ಮಂಡ್ಯ ತಾ॥ | ೬೦ | ಬಿ.ಎ. | ಪ್ರಧಾನ ಕಾರ್ಯದರ್ಶಿ<br>ಗಂಗಾಮತಸ್ಥರ (ಬೆಸ್ತರ) ಸಂಘ,<br>ಮಂಡ್ಯ ಜಿಲ್ಲೆ. |

| | | | | |
|---|---|---|---|---|
| ೨೦. | ರಾಮು ತಂದೆ ಚನ್ನಯ್ಯ<br>ತೂಬಿನಕೆರೆ, ಮಂಡ್ಯ ತಾ॥ | ೫೩ | ಅನಕ್ಷರಸ್ಥ | ಕೂಲಿ |
| ೨೧. | ಮಲ್ಲಯ್ಯ ತಂದೆ ಸಿದ್ದಯ್ಯ<br>ತೂಬಿನಕೆರೆ, ಮಂಡ್ಯ ತಾ॥ | ೬೨ | ಅನಕ್ಷರಸ್ಥ | ಕೂಲಿ |
| ೨೨. | ಲಕ್ಷ್ಮಣ ತಂದೆ ಸುಬ್ಬಯ್ಯ<br>ಹೊಸಹೊಳಲು, ಕೆ.ಆರ್.ಪೇಟೆ ತಾ॥ | ೭೦ | ಅನಕ್ಷರಸ್ಥ | ಮೀನುಗಾರಿಕೆ |
| ೨೩. | ಸಣ್ಣಮ್ಮ ಗಂಡ ಮರಿಸಿದ್ದ<br>ಹೊಸಹೊಳಲು, ಕೆ.ಆರ್. ಪೇಟೆ ತಾ॥ | ೬೩ | ಅನಕ್ಷರಸ್ಥೆ | ಹೂವಿನ ವ್ಯಾಪಾರ |
| ೨೪. | ಚಲುವರಾಜು ತಂದೆ ತಮ್ಮಯ್ಯ<br>ತಮ್ಮಡಹಳ್ಳಿ, ಮಳವಳ್ಳಿ ತಾ॥ | ೪೮ | ೩ನೇ ತರಗತಿ | ಮೀನುಗಾರಿಕೆ |
| ೨೫. | ಲಿಂಗಯ್ಯ ತಂದೆ ಬೋರಯ್ಯ<br>ಗೊಲ್ಲರಹಳ್ಳಿ, ಮಳವಳ್ಳಿ ತಾ॥ | ೬೨ | ಎಸ್.ಎಸ್.ಎಲ್.ಸಿ. | ನಿವೃತ್ತ ಶಿಕ್ಷಕರು |
| ೨೬. | ನಿಂಗಮ್ಮ ಗಂಡ ಚಲುವಯ್ಯ<br>ಮಣಿಗೆರೆ, ಮದ್ದೂರು ತಾ॥ | ೫೦ | ಅನಕ್ಷರಸ್ಥೆ | ಕೂಲಿ |

| | | | | |
|---|---|---|---|---|
| ೨೭. | ಪಾರ್ವತಿ ಗಂಡ ಚಿಕ್ಕಬೋರಯ್ಯ<br>ಮರಡಿಪುರ, ಮಂಡ್ಯ ತಾ॥ | ೪೬ | ಅನಕ್ಷರಸ್ಥೆ | ಕೂಲಿ |
| ೨೮. | ಮರಿಯಯ್ಯ ತಂದೆ ಪುಟ್ಟಯ್ಯ<br>ಮರಡಿಪುರ, ಮಂಡ್ಯ ತಾ॥ | ೬೧ | ೬ನೇ ತರಗತಿ | ಕೂಲಿ |
| ೨೯. | ತೈಲೂರು ವೆಂಕಟಕೃಷ್ಣ<br>ಸಾಹಿತಿಗಳು, ತೈಲೂರು, ಮದ್ದೂರು ತಾ॥ | ೬೨ | ಎಂ.ಎ. | ವ್ಯವಸಾಯ |
| ೩೦. | ಬಸವಬೋಯಿ ತಂದೆ ಬಸವಬೋಯಿ<br>ಗೊಲ್ಲರಹಳ್ಳಿ, ಮಳವಳ್ಳಿ ತಾ॥ | ೯೦ | ಅನಕ್ಷರಸ್ಥ | ಕೂಲಿ |
| ೩೧. | ಕುನ್ನಯ್ಯ ತಂದೆ ಕರಿಯಯ್ಯ<br>ಗಾಮನಹಳ್ಳಿ, ಶ್ರೀರಂಗಪಟ್ಟಣ ತಾ॥ | ೭೦ | ಅನಕ್ಷರಸ್ಥ | ಮೀನುಗಾರಿಕೆ |
| ೩೨. | ಬೋರಮ್ಮ ಗಂಡ ಸಿದ್ದಯ್ಯ<br>ಕೋಡಿಪುರ, ಮಳವಳ್ಳಿ ತಾ॥ | ೬೨ | ಅನಕ್ಷರಸ್ಥೆ | ಮೇಕೆ ಮೇಯಿಸುವುದು |
| ೩೩. | ಚಿಕ್ಕವೆಂಕಟಮ್ಮ ಗಂಡ ಹೊನ್ನಯ್ಯ<br>ದೇಶವಹಳ್ಳಿ, ಮದ್ದೂರು ತಾಲ್ಲೂಕು. | ೮೬ | ಅನಕ್ಷರಸ್ಥೆ | ಹೂವಿನ ವ್ಯಾಪಾರ |

| | | | | |
|---|---|---|---|---|
| ೩೪. | ಕಾಳಮ್ಮ ಗಂಡ ತಿಮ್ಮಯ್ಯ<br>ಬ್ಯಾಡರಹಳ್ಳಿ, ಪಾಂಡವಪುರ ತಾ॥ | ೬೨ | ಅನಕ್ಷರಸ್ಥೆ | ಕೂಲಿ |
| ೩೫. | ರಾಮಣ್ಣ ತಂದೆ ದೊಡ್ಡಚನ್ನಯ್ಯ<br>ಬ್ಯಾಡರಹಳ್ಳಿ, ಪಾಂಡವಪುರ ತಾ॥ | ೬೯ | ಅನಕ್ಷರಸ್ಥ | ಕೂಲಿ |
| ೩೬. | ಕರಿಯ ತಂದೆ ತಿಮ್ಮಪ್ಪ<br>ಕೆನ್ನಾಳು, ಪಾಂಡವಪುರ ತಾ॥ | ೫೪ | ಅನಕ್ಷರಸ್ಥ | ಮೀನುಗಾರಿಕೆ |
| ೩೭. | ನಿಂಗರಾಜ ತಂದೆ ಶಿವಯ್ಯ<br>ತೆಂಡೆಕೆರೆ, ಕೆ.ಆರ್.ಪೇಟೆ ತಾ॥ | ೪೮ | ೫ನೇ ತರಗತಿ | ಮೀನುಗಾರಿಕೆ |
| ೩೮. | ನಂಜಯ್ಯ ತಂದೆ ಜವರಾಯಿ<br>ತೆಂಡೆಕೆರೆ, ಕೆ.ಆರ್. ಪೇಟೆ ತಾ॥ | ೫೩ | ಅನಕ್ಷರಸ್ಥ | ಕೂಲಿ |
| ೩೯. | ರಾಮಚಂದ್ರ ತಂದೆ ಪರಶಿವ<br>ಮಾಯಸಂದ್ರ, ನಾಗಮಂಗಲ ತಾ॥ | ೩೫ | ೭ನೇ ತರಗತಿ | ತರಕಾರಿ ವ್ಯಾಪಾರ |
| ೪೦. | ಬೋರಯ್ಯ ತಂದೆ ಜವರಯ್ಯ<br>ಮಾಯಸಂದ್ರ, ನಾಗಮಂಗಲ ತಾ॥ | ೬೭ | ಅನಕ್ಷರಸ್ಥ | ಕೂಲಿ |

| | | | | |
|---|---|---|---|---|
| ೪೧. | ಕುಮಾರ ತಂದೆ ಸಿದ್ದಯ್ಯ<br>ರಾವಣಿ, ಮಳವಳ್ಳಿ ತಾ॥ | ೪೬ | ಅನಕ್ಷರಸ್ಥ | ಮೀನುಗಾರಿಕೆ |
| ೪೨. | ಸಿದ್ದಮ್ಮ ಗಂಡ ಮಲ್ಲಯ್ಯ<br>ಕಲ್ಕುಣಿ, ಮಳವಳ್ಳಿ ತಾ॥ | ೫೪ | ಅನಕ್ಷರಸ್ಥೆ | ಸುಣ್ಣ ಸುಡುವುದು |
| ೪೩. | ನಂಜುಂಡಸ್ವಾಮಿ ತಂದೆ ಚಿಕ್ಕ ಮಸಣಯ್ಯ<br>ಬ್ಲಫ್, ಮಳವಳ್ಳಿ ತಾ॥ | ೫೫ | ಅನಕ್ಷರಸ್ಥ | ಕೂಲಿ |
| ೪೪. | ಹೋಯ್ಸಳ ತಂದೆ ಪುಟ್ಟಸ್ವಾಮಿ<br>ಬ್ಲಫ್, ಮಳವಳ್ಳಿ ತಾ॥ | ೫೦ | ಎಸ್.ಎಸ್.ಎಲ್.ಸಿ. | ವ್ಯಾಪಾರ |
| ೪೫. | ಲೀಲಾವತಿ ಸಿ. ಗಂಡ ರಾಮಚಂದ್ರ<br>ಗಂಜಾಂ, ಶ್ರೀರಂಗಪಟ್ಟಣ ತಾ॥ | ೪೫ | ೭ನೇ ತರಗತಿ | ಹೂವಿನ ವ್ಯಾಪಾರ |
| ೪೬. | ಜಿ.ಎಸ್. ವೆಂಕಟರಾಜ ತಂದೆ ಶ್ರೀನಿವಾಸಯ್ಯ<br>ಗಂಜಾಂ, ಶ್ರೀರಂಗಪಟ್ಟಣ ತಾ॥ | ೬೦ | ಅನಕ್ಷರಸ್ಥ | ಮೀನುಗಾರಿಕೆ |
| ೪೭. | ಎಸ್. ಕಂಬರಾಜ ತಂದೆ ಶಿವಣ್ಣ<br>ಗಂಗಾಮತಸ್ಥ ಬೀದಿ, ಮಳವಳ್ಳಿ | ೩೫ | ಬಿ.ಎಸ್ಸಿ., ಬಿ.ಇಡಿ. | ನಿರುದ್ಯೋಗಿ |

| | | | | |
|---|---|---|---|---|
| ೪೮. | ದೊಡ್ಡಯ್ಯ ತಂದೆ ರಾಮಣ್ಣ<br>ಗಂಗಾಮತಸ್ಥ ಬೀದಿ, ಮಳವಳ್ಳಿ | ೬೪ | ಎಸ್.ಎಸ್.ಎಲ್.ಸಿ. | ಪುರಸಭೆ ಸದಸ್ಯ<br>ಮಳವಳ್ಳಿ |
| ೪೯. | ಕೆ.ವಿ. ನಾರಾಯಣ್<br>ವಿಶ್ರಾಂತ ಕುಲಸಚಿವರು, ಹಂಪಿ ಕನ್ನಡ ವಿ.ವಿ.<br>ವಿಶೇಷ ಸಂದರ್ಶಕರು | ೬೩ | ಎಂ.ಎ. ಪಿಎಚ್.ಡಿ. | ವಿಶ್ರಾಂತ ಕುಲಸಚಿವರು |
| ೫೦ | ರಾಮು ತಂದೆ ಮಿರಲಯ್ಯ<br>ಆರತಿ ಉಕ್ಕಡ, ಶ್ರೀರಂಗಪಟ್ಟಣ ತಾ॥ | ೨೭ | ಎಸ್.ಎಸ್.ಎಲ್.ಸಿ. | ನಿರುದ್ಯೋಗಿ |
| ೫೧. | ಗೂಳಯ್ಯ ತಂದೆ ರಾಮಣ್ಣ<br>ಹೇಮಗಿರಿ, ಕೆ.ಆರ್.ಪೇಟೆ ತಾ॥ | ೬೯ | ಅನಕ್ಷರಸ್ಥ | ಕೂಲಿ |
| ೫೨. | ಲಕ್ಷ್ಮಣ ತಂದೆ ಕಾಳಪ್ಪ<br>ಕಡಿಲುವಾಗಿಲು, ಮದ್ದೂರು ತಾ॥ | ೫೪ | ಏಳನೇ ತರಗತಿ | ಅಂಗಡಿ ವ್ಯಾಪಾರಿ |
| ೫೩. | ಶೇಖರ ತಂದೆ ರಾಜಣ್ಣ<br>ನಾಗಮಂಗಲ ಪಟ್ಟಣ | ೪೩ | ಅನಕ್ಷರಸ್ಥ | ಮೀನುಗಾರಿಕೆ |
| ೫೪. | ಚಂದ್ರು ತಂದೆ ಸೋಮಣ್ಣ<br>ಹಿರಿಸೆವೆ, ನಾಗಮಂಗಲ ತಾ॥ | ೪೫ | ೫ನೇ ತರಗತಿ | ವೀಳ್ಯದೆಲೆ ವ್ಯಾಪಾರಿ |

| | | | | |
|---|---|---|---|---|
| ೫೫. | ಹುಚ್ಚಮ್ಮ ಗಂಡ ಮೂಗಯ್ಯ<br>ಸೀತಾಪುರ, ಪಾಂಡವಪುರ ತಾ॥ | ೭೦ | ಅನಕ್ಷರಸ್ಥೆ | ವೀಳ್ಯದೆಲೆ ವ್ಯಾಪಾರಿ |
| ೫೬. | ಚಿಕ್ಕವನು ತಂದೆ ಚನ್ನಬೋರಯ್ಯ<br>ಕುಲುಮೆದೊಡ್ಡಿ, ಮಳವಳ್ಳಿ ತಾ॥ | ೩೯ | ಅನಕ್ಷರಸ್ಥ | ತರಕಾರಿ ವ್ಯಾಪಾರಿ |
| ೫೭. | ಯಲಕ್ಕಯ್ಯ ತಂದೆ ರಾಮಯ್ಯ<br>ಕುಲುಮೆದೊಡ್ಡಿ, ಮಳವಳ್ಳಿ ತಾ॥ | ೬೫ | ಅನಕ್ಷರಸ್ಥ | ಸುಣ್ಣ ಸುಡುವುದು |
| ೫೮. | ಬೋರಯ್ಯ ತಂದೆ ಮಹದೇವಪ್ಪ<br>ನಿಡಘಟ್ಟ, ಕೆ.ಆರ್.ಪೇಟೆ ತಾ॥ | ೫೩ | ಅನಕ್ಷರಸ್ಥ | ಕೂಲಿ |

## ೩. ಏಳು ತಾಲ್ಲೂಕುಗಳನ್ನು ಒಳಗೊಂಡಿರುವ ಮಂಡ್ಯ ಜಿಲ್ಲೆಯ ನಕ್ಷೆ



## ೪. ಸಾಂಸ್ಕೃತಿಕ ಪದಕೋಶ

ಅಂಬಲಿ : ರಾಗಿ ಹಿಟ್ಟನ್ನು ಬೇಯಿಸಿ ತಯಾರಿಸಿದ ಗಂಜಿ.

ಅರ್ಕ್‌ಪಡಿ : ಅಕ್ಕಿಯ ಜೊತೆಗೆ ಬೆಲ್ಲ, ತೆಂಗಿನ ಕಾಯಿ ಕೊಡುವುದು

ಅಸ್ಥಿ : ಮೂಳೆ

ಈಡುಗಾರ : ಪ್ರಾಣಿಗಳಿಗೆ ಗುರಿಯಿಟ್ಟು ಕೊಲ್ಲುವವ

ಉಪ್ಪಂಡ : ಸೀಳಿದ ಮಾಂಸದ ಚೂರಿಗೆ ಉಪ್ಪು-ಹುಡಿ ಹಾಕಿ ಒಣಗಿಸಿರುವುದು.

ಉಪ್ಪೆಸ್ರು : ಸೊಪ್ಪು, ಕಾಳುಗಳನ್ನು ಬೇಯಿಸಿದ ನೀರಿಗೆ, ಕಾರ ಹಾಕಿರುವುದು

ಎಕ್ಕಡ : ಚಪ್ಪಲಿ, ಜೋಡು

ಎಡೆ : ನೈವೇದ್ಯ, ಸತ್ತ ಹಿರಿಯರಿಗೆ ವರ್ಷಕ್ಕೊಮ್ಮೆ ಅರ್ಪಿಸುವ ಪ್ರಸಾದ

ಎಸರು : ಸಾರು, ಸಾಂಬಾರು

ಏತ : ಬಾವಿಯಿಂದ ನೀರನ್ನು ಮೇಲೆತ್ತುವ ಸಾಧನ

ಐದಾನ್ಯದಗಂಟು: ಐದು ಧಾನ್ಯಗಳಿರುವ ಒಂದು ಗಂಟು

ಒಕ್ಕಣೆ : ಫಸಲನ್ನು ಸ್ವಚ್ಛಗೊಳಿಸುವುದು, ಧಾನ್ಯಗಳನ್ನು ಬೇರ್ಪಡಿಸುವುದು

ಒಪ್ಪತ್ತು : ದೇವರ ಸನ್ನಿಧಿಯಲ್ಲಿ ನೆಲದ ಮೇಲೆ ಪ್ರಸಾದ ಸೇವಿಸುವುದು

ಕಂಕಣಬಳೆ : ಮದುವೆಯ ಸಂದರ್ಭದಲ್ಲಿ ಮದುಮಗಳು ಮತ್ತು ಮುತ್ತೈದೆಯರಿಗೆ ತೊಡಿಸುವ ಕಪ್ಪುಬಳೆ

ಕರಕಲು : ಹಬ್ಬದ ದಿನವನ್ನು ಗೊತ್ತುಪಡಿಸಿದ ಹಿಂದಿನ ಒಂದು ವಾರದಿಂದ ಯಾವುದೇ ಪದಾರ್ಥಗಳನ್ನು ಉರಿಯದಿರುವುದು

ಕರಿಮೀನು : ಸಣ್ಣ ಮೀನುಗಳನ್ನು ಬಿಸಿಲಿನಲ್ಲಿ ಒಣಗಿಸಿ ಹಾಕಿದ ಮೀನು

ಕಳ : ಬೆಳದ ಧಾನ್ಯಗಳನ್ನು ಸಿದ್ದಗೊಳಿಸಲು ಇರುವ ಅಂಗಳ, ಕಣ

ಕತ್ತಿಪವಾಡ : ಕತ್ತಿಯನ್ನು ಆಶ್ಚರ್ಯವಾಗುವಂತೆ ಪ್ರದರ್ಶಿಸುವುದು

ಕಾಯಿಪವಾಡ : ತಲೆಯ ಮೇಲೆ ಅಚ್ಚರಿಯಾಗುವಂತೆ ತೆಂಗಿನ ಕಾಯಿ ಹೊಡೆಯುವುದು

ಕುರ್ಜಿ : ಶವ ಸಾಗಿಸಲು ಬಿದಿರಿನ ಬೊಂಬಿನಿಂದ ಮಾಡಿದ ಕುಳಿತುಕೊಳ್ಳುವಂತಿರುವ ಚೊಟ್ಟ

ಕುಲಸಿದ್ಧಿ : ತಪ್ಪನ್ನು ಶಾಸ್ತ್ರೋಕ್ತವಾಗಿ ತಿದ್ದುವುದು

ಕೂಡಾವಳಿ : ವಿಧವೆ ಅಥವಾ ಗಂಡ ಬಿಟ್ಟವಳನ್ನು ಮರು ಮದುವೆ ಮಾಡುವಿಕೆ

ಕೊಟ್ಟಿಗೆ : ಜಾನುವಾರುಗಳನ್ನು ಕಟ್ಟುವ ಸ್ಥಳ

ಕೋರಿ : ಹೆಂಗಸು

ಗಂಗಾಪೂಜೆ : ಕೆರೆ, ಬಾವಿ, ಹೊಳೆಗಳಲ್ಲಿ ಗಂಗೆಯನ್ನು ಪೂಜಿಸುವುದು

ಗಂಜಳ : ಹಸುವಿನ ಮೂತ್ರ

ಗರಡು ಗಂಬ : ಭಜನೆ ಸಂದರ್ಭದಲ್ಲಿ ಬೀದಿಸುತ್ತುವಾಗ ಕೈಯಲ್ಲಿ ಹಿಡಿದುಕೊಳ್ಳುವ ದೀವಟಿಗೆ

ಗಂಗಾಫಲ : ಮೀನು

ಗ್ವಾದರ್ದು : ಅರಿಣಿ

ಗಾವುಸಿಗಿಯುವುದು : ಬಾಯಿಂದ ಕುರಿಯ ರಕ್ತವನ್ನು ಹೀರುವುದು

ಗುಂಭ : ಕುಂಭ, ಮಣ್ಣಿನಿಂದ ಮಾಡಿರುವ ಮಡಕೆಯ ಬಿಂದಿಗೆ

ಗುಡಾಣ : ಧಾನ್ಯಗಳನ್ನು ಶೇಖರಿಸಿಡುವ ಉದ್ದನೆಯ ಮಡಕೆ

ಗೊಂಬಪ್ಪ : ಸಗಣಿಯಿಂದ ಮಾಡಿದ ವಿಘ್ನೇಶ್ವರ

ಗೊಟ್ಟ : ಜಾನುವಾರುಗಳಿಗೆ ಔಷಧಗಳನ್ನು ಉಯ್ಯಲು ಬಳಸುವ ಕೊಳವೆಯಾಕಾರದ ಮರದ ಸಾಧನ

ಗೊಪ್ಪೆ : ಪ್ಲಾಸ್ಟಿಕ್ ಚೀಲವನ್ನು ಮಳೆಗಾಲದಲ್ಲಿ ತಲೆತೊಯ್ಯದಂತೆ ಮಾಡಿಕೊಳ್ಳುವ ಗವುಸು

ಚಕ್ರಾದಿ ಬಳೆಗಳು : ಸಂಗೀತ, ತಾಳ

ಚಡ್ಡಿ : ಪುರುಷರು ಬಳಸುವ ನಡುವಿನಿಂದ ಮೊಣಕಾಲಿನವರೆಗೆ ಧರಿಸುವ ಉಡುಪು

ಚೂಲುದಾರ : ಹಿರಿಯ ಜೋಗಿಯ ಗುಡ್ಡ, ಜೋಗಿ ಬಿಡುವ ವ್ಯಕ್ತಿ

ಚೊಕ್ಕ ಭೋಜನ : ಸಸ್ಯಾಹಾರ

ಚೌಳುಮಣ್ಣು : ಜೌಗು ಪ್ರದೇಶದಲ್ಲಿ ಸಿಗುವ ಉಪ್ಪು ಮಣ್ಣು

ತೆರೆಹಿಡಿಯುವುದು : ಧಾರೆಯ ಸಂದರ್ಭದಲ್ಲಿ ಗಂಡು-ಹೆಣ್ಣು ಪರಸ್ಪರ ಮುಖ ನೋಡದಂತೆ ಹಿಡಿದಿರುವ ವಸ್ತ್ರ

ತಲೆಗೊಳ್ಳಿ : ಸತ್ತವ್ಯಕ್ತಿಯ ಮಕ್ಕಳು ಅಥವಾ ಸಂಬಂಧಿಕರು ಶವಯಾತ್ರೆಯ ಸಂದರ್ಭದಲ್ಲಿ ಹಿಡಿಯುವ ಕೊಳ್ಳಿ

ತಾಯತ : ಕೈಗೆ ಅಥವಾ ಕೊರಳಿಗೆ ಕಟ್ಟಿಕೊಳ್ಳುವ ತಾಮ್ರ ಅಥವಾ ಬೆಳ್ಳಿಯ ತೆಳುವಾದ ತಗಡಿನ ಸುರುಳಿ

ತ್ರಿಶೂಲ : ಬೆಳ್ಳಿಯಿಂದ ಮಾಡಿರುವ ಮೂರು ಪಟ್ಟೆಯ ಪೂಜಿಸುವ ಸಾಧನ

| | |
|---|---|
| ದಿಮ್ಮಸಾಲೆ | : ಮಾರಮ್ಮನ ಗಂಡ |
| ದಿವಸ | : ಶ್ರಾದ್ಧ, ತಿಥಿ |
| ನೆರವಿ | : ಮದುವೆಯ ನಂತರದ ಮಾಂಸದೂಟ, ಬೀಗರೂಟ |
| ಪಡಸಾಲೆ | : ಮನೆಯ ಮುಂದಿನ ಸ್ಥಳ |
| ಪರ | : ದೇವರ ಉತ್ಸವದ ಸಂದರ್ಭದಲ್ಲಿ ಭಕ್ತರಿಗೆ ಮಾಡಿರುವ ಊಟದ ವ್ಯವಸ್ಥೆ, ಅನ್ನ ಸಂತರ್ಪಣೆ |
| ಪವಾಡ | : ಆಶ್ಚರ್ಯಕರವಾದ ಘಟನೆ, ಅತಿಮಾನುಷ ಕಾರ್ಯ |
| ಪ್ರಭಾವಳಿ | : ವಿಗ್ರಹದ ಶಿರೋಭಾಗದಲ್ಲಿ ಅಳವಡಿಸುವ ವರ್ತುಲಕಾರದ ಒಂದು ಅಲಂಕಾರ ಸಾಧನ |
| ಪಾಯಸ | : ನೀರಿನಂತಿರುವ ಸಿಹಿಯಾದ ತಿನಿಸು |
| ಪಿಂಡಿ | : ವೀಳ್ಯದೆಲೆಯ ನೂರು ಕಟ್ಟಿಗೆ ಒಂದು ಪಿಂಡಿ |
| ಫಿರ್ಯಾದು | : ತೊಂದರೆ ಪರಿಹಾರಕ್ಕಾಗಿ ಮಾಡಿಕೊಳ್ಳುವ ವಿನಂತಿ, ಅಹವಾಲು |
| ಬಂಢಾರ | : ಪ್ರಸಾದ ರೂಪದ ಅರಿಸಿನ, ಕುಂಕುಮ, ಹೂ ಮುಂತಾದವು |
| ಬಜೆ | : ಔಷಧಿ ಗುಣಹೊಂದಿರುವ ಹಣೆಯ ಮೇಲೆ ಹಚ್ಚುವ ನಾಮ |
| ಬಲೆ | : ಮೀನು, ಪ್ರಾಣಿ ಪಕ್ಷಿಗಳನ್ನು ಹಿಡಿಯುವ ಸಾಧನ |
| ಭಂಟ | : ಕಾವಲುಗಾರ, ಸೇವಕ |
| ಬಾಸಿಂಗ | : ಮದುವೆಯ ಸಂದರ್ಭದಲ್ಲಿ ಮದುಮಕ್ಕಳ ಹಣೆಗೆ ತೊಡಿಸುವ ಒಂದು ಅಲಂಕಾರ ಸಾಧನ |
| ಬಾಳೆ ಕಾಯಿ | : ನಿರಿಗೆಗಳನ್ನು ಬಾಳೆಕಾಯಿಯ ಆಕಾರದಲ್ಲಿ ಮೇಲಕ್ಕೆ ತಿರುವಿ, ಸೊಂಟ ಮಡಿಸಿ ಸಿಕ್ಕಿಸಿದ ಸೀರೆಯ ಅಂಚು' |
| ಬಿಚ್ಚೋಲೆ | : ಮುತ್ತೈದೆಯರು ಕಿವಿಗೆ ಆಭರಣದಂತೆ ಧರಿಸುವ ತಾಳೆಗರಿಯ ಸುರುಳಿ |
| ಬುಜ್ಜಣಿಗೆ ಪೆಟ್ಟಿಗೆ | : ಮುಚ್ಚಿದ ಪೆಟ್ಟಿಗೆ, ಇದರಲ್ಲಿ ಮದುವೆ ಹೆಣ್ಣಿಗೆ ಕೊಡುವ ವಸ್ತುಗಳನ್ನು ಇಡುತ್ತಾರೆ |
| ಮಕ್ಕರಿ | : ಬಿದಿರಿನಿಂದ ಮಾಡಿರುವ ಅಗಲವಾದ ಬಾಯುಳ್ಳ ಕುಕ್ಕೆ |
| ಮದ್ದನಗೂಳು | : ಮದುಮಕ್ಕಳಿಗೆ ಮದುವೆಯ ಸಂದರ್ಭದಲ್ಲಿ ಸಂಬಂಧಿಕರು ಮಾಡಿವ ವಿಶೇಷ ಭೋಜನ |
| ಮಡೆ | : ಬೆಲ್ಲದಿಂದ ಮಾಡಿದ ಅನ್ನ, ದೇವರ ನೈವೇದ್ಯ |

ಮೂಳ ಮಕ್ಕಳು : ಕುಲದ ಸಂಬಂಧವುಳ್ಳ ಹಳೆಯ ಮಕ್ಕಳು

ಮೇಲು ಕಟ್ಟು : ಮದುವೆಯ ಚಪ್ಪರದ ನಾಲ್ಕು ಮೂಲೆಗಳಿಗೂ ಬಟ್ಟೆಯನ್ನು ಕಟ್ಟುವುದು

ಮೊರ : ಬಿದಿರಿನಿಂದ ಮಾಡಿರುವ ದವಸ ಧಾನ್ಯಗಳನ್ನು ಕೇರಲು ಬಳಸುವ ಸಾಧನ

ಮೊಡಗಟ್ಟದ್ದು : ತಿಳಿವಳಿಕೆ ಕಡಿಮೆ, ಗೊತ್ತಿಲ್ಲದಿರುವುದು

ರಾಜದೀವಿಗೆ : ತಂಬಿಟ್ಟಿನ ಅರತಿ

ಲಂಗೋಟಿ : ಪುರುಷರು ನಡುವಿನ ಕೆಲಭಾಗವನ್ನು ಮುಚ್ಚಿಕೊಳ್ಳಲು ಬಳಸುವ ತುಂಡು ಬಟ್ಟೆ

ವರಿವಟ : ಶುಲ್ಕ, ಹಬ್ಬದ ಸಂದರ್ಭದಲ್ಲಿ ನಿಗದಿಗೊಳಿಸಿದ ಕೊಡಬೇಕಾದ ಹಣ

ವರ್ಷ ತೊಡಕು : ಹಬ್ಬದ ಮಾರನೆಯ ದಿವಸ ಮಾಡುವ ಮಾಂಸದೂಟ

ಶಲೆರೋಗ : ಹಸುಗಳಿಗೆ ಬರುವ ಒಂದು ಕಾಯಿಲೆ

ಸವತಿ : ತನ್ನ ಗಂಡನ ಮತ್ತೊಬ್ಬ ಹೆಂಡತಿ

ಸೋಗಲು : ಮಡಿಲು, ಉಡಿ, ಅಕ್ಕಿ, ಕಾಯಿ–ಬೆಲ್ಲ ಇವುಗಳಿಂದ ತುಂಬುವುದು

ಹಿಂಡೆಕೂಳು : ಸ್ಮಶಾನದಲ್ಲಿ ಮಡಿಕೆಯಿಂದ ಬೇಯಿಸಿದ ಅನ್ನ

ಹಜಾಮ : ಕೆಲಸಿಗ, ಭಜಂತ್ರಿ

ಹರವಿ : ನೀರುಹಾಕಲು ಮಾಡಿದ ಮಣ್ಣಿನ ಗುಡಾಣ

ಹಸೆಕಲ್ಲು : ಮೆಣಸಿನಕಾಯಿ ಕಾರ ಅರೆಯಲು ಬಳಸುವ ಕಲ್ಲು

ಹಿಟ್ಟಿನ ಸೀಕು : ಮಡಿಕೆಗೆ ಅಂಟಿಕೊಂಡಿರುವ ಹಿಟ್ಟಿನ ಕರಿ

ಹಿಟ್ನುಮ್ರೆದೆಚಟ್ನಿ : ಹಿಟ್ಟಿನ ಮುದ್ದೆಯನ್ನು ಕಟ್ಟಲು ಬಳಸುವ ಮರದ ಸಾಧನ

ಹಿಟ್ನೆಸ್ರು : ಬಿಸಿ ನೀರಿಗೆ ರಾಗಿ ಹಿಟ್ಟನ್ನು ಹಾಕಿದಾಗ ಕುದಿಯುವುದು

ಹೊಡಕೆ : ಆನೆ ಹುಲ್ಲು

## ೫. ಹಾಡುಗಳು

**ಹಾಡಿದವರು : ಕೆಂಚಮ್ಮ ಮತ್ತು ತಂಡ, ಮಳವಳ್ಳಿ.**

**ಶ್ರೀ ಸದ್ಗುರು ರಾಮಾರೂಢರ ಜೋಗುಳ ಪದಗಳು**

ಜೋ ಜೋ ಗುರು ರಾಮಾರೂಢೇಶಾ ।
ಜೋ ಜೋ ಗುರು ಚಿಕ್ಕರಾಮೇಶಾ ।
ಜೋ ಜೋ ಪರಬ್ರಹ್ಮಾನಂದೇಶಾ ।
ಜೋ ಜೋ ನಿರುಪಮ ನಿರ್ವಾಣೇಶಾ ಜೋ ಜೋ ॥ ಪ ॥

ಧರೆಯ ನರರೆಲ್ಲರ ದುಃಖವ ಕಂಡು ।
ಗುರುವಾಗಿ ನರ ಶರೀರ ನೀವು ತಕ್ಕೊಂಡು ।
ಪರಬ್ರಹ್ಮ ವಿದ್ಯೆಯ ಬೋಧಿಸಿಕೊಂಡು ।
॥ ಸದ್ಯಾ ॥ ಹರಿದೀರೆಲ್ಲರದೀಗ ಭವದ ಪಿಚ್ಚಂಡು ಜೋ ಜೋ ॥ ೧ ॥

ಮೇಲೆ ಬ್ರಹ್ಮಾಂಡದ ತೊಟ್ಟಿಲ ಹಿಡಿದು ।
ಕಾಲವಾಯುವಿನ ಹಗ್ಗದಿಂ ಬಿಗಿದು ॥
ಮೂಲ ಧರೆಯಾಕಾಶ ಹಾಸಿ ಹೊದಿಸಿಹುದು ॥
॥ಒಳಗೆ॥ ಬಾಲ ರಾಮಾರೂಢ ಶಿಶುವು ಮಲಗಿಹುದು ಜೋ ಜೋ ॥ ೨ ॥

ಶರಣ ಶರಣೆಯರರುವಿನರುವಿಯ ತೊಡಿಸಿ ।
ಗುರು ರಾಮ ಚಿಕ್ಕರಾಮಾರೂಢರೆನಿಸಿ ॥
ಸರುವ ಸಾದನ ಕಾಳಿನ ಗುಗ್ಗರಿಯ ಕೊಡಿಸಿ ॥
॥ ಮತ್ತೆ ॥ ವರವೇದ ವಾಕ್ಯ ಜೋಗುಳ ಹರಿಸಿ ॥ ಜೋ ಜೋ ॥ ೩ ॥

ನೀತಿ ಸದ್ಗುಣವೆಂಬುವಾಭರಣ ವಿಡಿಸಿ ।
ಚೈತನ್ಯವೆಂಬುವ ವಿಭೂತಿ ಪೂಸಿ ॥

ಓತು ನವವಿಧ ಭಕ್ತಿ ಹಾರಗಳ ಧರಿಸಿ ॥
॥ ಹೀಗೆ ॥ ಮಾತೆ ಮಣಿಯರೆಲ್ಲ ಪ್ರೀತಿಲಿ ಪೂಜಿಸಿ ॥ ಜೋ ಜೋ ॥ ೪ ॥

ತೂಗಿರಿ ತೊಟ್ಟಿಲ ಮುತ್ತೈದೆರು ಜೋಡಿ ।
ಜೋಗುಳ ಹಾಡಿ ಶಿವಯೋಗಿ ನೋಡಿ ॥
ರಾಗದಿಂದೆಲ್ಲರು ಬಂದೀರಿ ಕೂಡಿ ॥
॥ ಬಾಲ ॥ ಯೋಗಿಗಳಿಬ್ಬರ ನೀವು ಕೊಂಡಾಡಿ ॥ ಜೋ ಜೋ ॥ ೫ ॥

ನಿನ್ನ ಕಾಣದೆ ಗುರುವೆ ಭವಗಳ ತಿರುಗಿರುವೆ ।
ಎನ್ನ ಪುಣ್ಯದಲಿಂದ ನೀನು ಬಂದಿರುವೆ ॥
ಉನ್ನತದುಪದೇಶವೆನಗೆ ಮಾಡಿರುವೆ ॥
॥ ಇನ್ನು ॥ ಬನ್ನಪಡದ ಮುಕ್ತಿ ನಾನು ಹೊಂದಿರುವೆ ॥ ಜೋ ಜೋ ॥ ೬ ॥

ತೆತ್ತೀಸ ಕೋಟಿ ದೇವತೆಗಳೆಲ್ಲರು ।
ನಿತ್ಯ ನಿನ್ನ ಹತ್ತಿರ ವಾಸವಾಗಿಹರು ॥
ಉತ್ತಮ ತತ್ವಜ್ಞಾನ ಕೇಳುದಕ್ಕಿರುವರು ।
॥ ಮತ್ತೆ ॥ ಅತ್ಯಧಿಕ ಮುಕ್ತಿಗೆ ಹಂಬಲಿಸುತಿಹರು ॥ ಜೋ ಜೋ ॥ ೭ ॥

ಹರಿಹರರೆ ನೀವೀಗ ಕೂಸಾಗಿ ಬಂದ ।
ತ್ವರಿತದಲಿ ತೊಟ್ಟಿಲದ ಕೂಸು ಕೈ ಯಿಂದ ॥
ಸುರ ನರರು ಮುದ್ದಾಡಿ ರಾಮಾರೂಢನೆಂದು ।
॥ ಹಿಂಗ ॥ ಸ್ಮರಣಿಯಿಂದೆಲ್ಲರು ಜೋ ಜೋಯಂದ ॥ ಜೋ ಜೋ ॥ ೮ ॥

ಉತ್ತರದ ಕಡೆಯಿಂದ ದಕ್ಷಿಣ ಜನಕೆಲ್ಲಾ ।
ಉತ್ತಮ ತತ್ವಜ್ಞಾನದಮೃತ ಉಣಿಸೆಲ್ಲಾ ॥
ಮತ್ತೆ ಭವಕವರು ಬರದಂತೆ ಮಾಡೆಲ್ಲಾ ।
॥ ಈಗ ॥ ನಿತ್ಯ ಬಾಗಲಕೋಟ ವಾಸಗೈದಿರಲ್ಲಾ ॥ ಜೋ ಜೋ ॥ ೯ ॥

ಜಗದ ಜನರೆಡಬಿಡದೆ ಕೇಳಿರಿ ಸಾಗಿ ।
ನಿಗಮಾಗಮಗಳೆಲ್ಲ ಗುರುವೆ ಮಿಗಿಲಾಗಿ ॥
ಹಗಲಿರುಳು ಶ್ರುತಿ ಕೂಗುತಿವೆ ಶಿರವು ಬಾಗಿ ।
॥ ನಿತ್ಯ । ನಗುರೊ ರಧಿಕ ನಗುರೊ ರಧಿಕೆಂಬುದಾಗಿ ॥ ಜೋ ಜೋ ॥ ೧೦॥

ಈ ಪದ್ಯ ಜೋಗುಳವ ನಿತ್ಯ ಪಠಿಸುವ ।
ಆ ಪರಮ ಭಕ್ತರಿಗೆ ಭೋಗ ಮೋಕ್ಷವ ।
ಮಾಪ ಮಾಡುವನವರ ಪಾಪವೆಲ್ಲವ ।
॥ ಗುರು ॥ ರೂಪದಿಂದವತರಿಸಿ ಕಾಲಕಾಲಕ್ಕೆ ಬರುವ ॥ ಜೋ ಜೋ ॥ ೧೧ ॥

ಸೋಮ ಶ್ರೀ ಉಮೆ ಪರಶಿವಗೆ ಮಂಗಲ ।
ಭೂಮಾವಿದ್ಯೆ ತತ್ವಜ್ಞಾನಿಗೆ ಮಂಗಲ ॥
ರಾಮರೂಢ ಗುರುವರಗೆ ಮಂಗಲ ।
॥ ಚಿಕ್ಕ ॥ ರಾಮರೂಢ ಯೋಗಿಗೆ ಮಂಗಲ ॥ ಜೋ ಜೋ ॥ ೧೨ ॥

## ಶ್ರೀ ಸದ್ಗುರು ರಾಮಾರೂಢ ಶ್ರೀಗಳ ಸುಪ್ರಭಾತ

ಏಳಿರಾರೂಢ ರಾಮ ಚಿಕ್ಕರಾಮಾರೂಢ ।
ಮೇಳಾಗಿ ಬಂದಿಹರು ಭಕ್ತ ಜನರು ॥ ಪ ॥
ಬಾಳಲೋಚನ ಹರಿಯವತಾರ ಗುರುವರರೆ ।
ಏಳಿರೇಳಿರಿ ನಿಮಗೆ ಸುಪ್ರಭಾತ ॥ ಅನು ॥ ಪ ॥

ಸುಪ್ರಭಾತವು ನಿನಗೆ ಅಪ್ರತಿಯ ಗುರುವರರೆ ।
ಸ್ವಪ್ರಕಾಶ ಜ್ಞಾನ ವೈರಾಗ್ಯರೆ ॥
ವಿಪ್ರಾದಿ ವರ್ಣಗಳಿಗತಿತವಾಗಿಹ ಜ್ಞಾನ ।
ಸ್ವಪ್ರಕಾಶವ ತಿಳಿಸಲೇಳಿರಯ್ಯಾ ॥ ೧ ॥

ಯೋಗ ಸಮಾಧಿಯಿಂ ಜಾಗ್ರವಾಗುತ ನೀವು ।
ಬೇಗ ಭಕ್ತ ಜನರ ದುಃಖ ನೋಡಿ ॥
ಈಗ ಕರುಣೆಯ ಮಾಡಿ ಲಗುನೆ ಸಂಸಾರವೆಂಬ ।
ಸಾಗರವ ದಾಟಿ ಸೇಳೆತಿ ತಿಲಕರೆ ॥ ೨ ॥

ಮಾತಿನಿಂ ಬಂದಿರುವ ಮರವಿ ಸಂಸಾರವಿದನು ।
ಮಾತಿನಿಂ ಬಿಡಿಸಿ ಭಕ್ತರನು ಬೇಗ ॥
ಆತುಮನ ಜ್ಞಾನದಲಿ ಬೆರಸಿ ಬಿಟ್ಟು ಜಗ ।
ಜ್ಯೋತಿಯಾಗಿರು ವಗ್ರ ಗಣ್ಯರೀಗ ॥ ೩ ॥

ವೇದ ವೇದಾಂತದ ಸಾರವೆಲ್ಲವು ನೀವು ।
ಮೇದಿನಿಯ ಜನಕೆಲ್ಲ ಬೋಧ ಮಾಡಿ ॥
ಸಾಧು ಸಂತರು ಶರಣ ಸಜ್ಜನರಿಗೆಲ್ಲವು ।
ಮೋದದಿಂ ಮುಕ್ತಿಯನು ಕೊಡುವುದಕ್ಕೆ ॥ ೪ ॥

ವ್ರಾತ ಸಾಧು ಸಂತ ಸಜ್ಜನರು ಕೂಡುತಲಿ ।
ಪ್ರೀತಿಯಿಂದಲಿ ನಿಮ್ಮ ಬಳಿಗೆ ಸಾರಿ ॥
ಸಾತಿಶಯದಾನಂದ ಸುಖದ ಸುಗ್ಗಿಗಾಗಿ ।
ಜಾತಿ ಮತ ಭೇದ ಬಿಟ್ಟಿಹರು ಗುರುವೆ ॥ ೫ ॥

ಪರಮ ಸಾತ್ವಿಕಂಗಳೆಂಟರಿಂದಲಿ ಕೂಡಿ ।
ಗುರು ನಿಮ್ಮ ಸ್ಮರಣೆಯಲಿ ಶಿಷ್ಯ ಸಮೂಹ ॥
ಹರುಷದಿಂದಲಿ ವೇದ ಸಾರ ತತ್ವದ ಶಾಸ್ತ್ರ ।
ನಿರುತ ಶ್ರವಣಕೆ ಕಾಯ್ದು ನಿಂತಿರುವ ॥ ೬ ॥

ಎದ್ದು ಶೀತಾದಿಂದ ತೂರ್ಯದೊಳಗೆ ಬಂದು ।
ಬುದ್ಧಿವಾದವನು ಶಿಷ್ಯರಿಗೆ ಪೇಳಿ ॥

ಬದ್ಧರಲ್ಲವು ನೀವು ಶುದ್ಧಾತ್ಮರೆಂದೆನ್ನು
ತುದ್ಧಾರ ಮಾಡಲೇಳಾರೂಢರೆ ॥ ೭ ॥

ತತ್ವ ಮಸಿ ಮಹಾವಾಕ್ಯ ನಿತ್ಯದಲ್ಲಿ ಬೋಧಿಸುತ ।
ಬಿತ್ತಿದಿರಿ ಜಗದಲ್ಲಿ ಪರತತ್ವವ ॥
ಸತ್ಯಾತ್ಮ ಪರಬ್ರಹ್ಮನಿಷ್ಠ ಗುರುವರ ನೀವು ।
ಉತ್ತಮದ ಭೃತ್ಯರನ್ನುದ್ಧರಿಸಲು ॥ ೮ ॥

ಮತ ಮತಾಂತರ ಭೇದವತಿಯಾಗಿ ವೇದಾಂತ ।
ಮತವ ಬಿಟ್ಟಿಹರು ಗುರುದೇವ ಈಗ ॥
ಅತಿಶಯದ ವೈಧಿಕದ ಸಿದ್ಧಾಂತ ತಿಳಿಸುದಕೆ ।
ಪ್ರತಿಯಾಗಿ ಉತ್ಥಾನದಿಂದೇಳಿರೈ ॥ ೯ ॥

ಅಲ್ಲಲ್ಲಿ ಇರುತಿರುವ ತೀರ್ಥ ಕ್ಷೇತ್ರಗಳು ತಾ ।
ವೆಲ್ಲ ಪುಣ್ಯವು ಕಳೆದುಕೊಂಡಿರುವವು ॥
ಅಲ್ಲಲ್ಲಿ ಗಡಿಯಿಡುತ ಪುಣ್ಯ ಸಾರವನವಕೆ ।
ನಿಲ್ಲದೆ ಕೊಡ ಏಳಿರುತ್ಥಾನದಿ ॥ ೧೦ ॥

ಗುರುವೆ ಹರಿ ಹರ ಬ್ರಹ್ಮ ವರ ಸದಾಶಿವ ದೇವ ।
ಗುರುವೆ ತೆತ್ತೀಸ ಕೋಟಿ ದೇವತೆಯಾಗಿ ॥
ಗುರುವಿಗೆ ಸರಿ ಸಮಾನಿಲ್ಲವೆಂದು ಶ್ರುತಿ ॥
ನಿರುತ ಕೂಗುತಲಿವೆ ಏಳಿರಯ್ಯಾ ॥ ೧೧ ॥

ಹರ ಮುನಿಯೆ ಭಯವಿಲ್ಲ ಹರಿಯು ಮುನಿದರೆ ಮತ್ತೆ ।
ವರ ಸದಾಶಿವ ಬ್ರಹ್ಮ ಮುನಿದರಿಲ್ಲಾ ॥
ನಿರುತ ತೆತ್ತೀಸ ಕೋಟಿ ದೇವತೆಯ ಭಯವಿಲ್ಲ ।
ಗುರು ನಿಮ್ಮ ಕರುಣ ಧರೆ ನರರಿಗಿರಲು ॥ ೧೨ ॥

ಉನ್ನತದ ತೀರ್ಥವು ಕ್ಷೇತ್ರ ಬಾಗಲಕೋಟೆ ॥
ಚೆನ್ನಾಗಿ ಮಾಡಿದಿರಿ ವಾಸಿಸುತಲಿ ॥
ಚನ್ನ ಪರಶಿವ ಗುರು ಆರೂಢ ಯತಿ ವರೆರೆ ।
ಏನ್ನಾತ್ಮ ನಿಮಗಿನ್ನು ಸುಪ್ರಭಾತ ॥ ೧೩ ॥

ಉದಯ ಮಂಡಲವಾದ ಸುಪ್ರಭಾತವ ನಿದನು ।
ಪದುಳದಿಂದಲಿ ನಿತ್ಯ ಭಜಿಸುವರಿಗೆ ॥
ಸದಮಲಾತ್ಮ ಜ್ಞಾನ ಮೊದಗಿ ಮುಕ್ತಿ ಕಾಂತಿ ।
ಸುದತಿಯಿಂ ಗೂಡಿ ಸುಖಿಸುತ್ತಲಿಹರು ॥ ೧೪ ॥

ಜಯತು ಜಯ ಮಂಗಲವು ಆರೂಢ ಯತಿಗಳಿಗೆ ।
ಜಯತು ಜಯ ಮಂಗಲವು ನಿರುಪಮರಿಗೆ ॥
ಜಯತು ಜಯ ಮಂಗಲವು ವೇದಾಂತ ಸಾರರಿಗೆ ।
ಜಯತು ಜಯ ಮಂಗಲವು ನಿತ್ಯ ನಿಮಗೆ ॥ ೧೫ ॥

– ಓಂ ಇತಿ ಸುಪ್ರಭಾತ ಸಮಾಪ್ತಿ –

**ಗಂಗಾದೇವಿ ಪೂಜೆಯ ಹಾಡು**

**ಹಾಡಿದವರು : ಲಕ್ಷ್ಮಣ ತಂದೆ ಸಿದ್ದಯ್ಯ, ಕಡಿಲುವಾಗಿಲು, ಮದ್ದೂರು ತಾ॥**

ಗಂಗೆಯ ತಡಿಯಲ್ಲಿ ಲಿಂಗಪೂಜೆ ಮಾಡಿ
ಗಂಗೆ ಗೌರಮ್ಮ ದೇವರು ಕಾಣಿರೋ ॥ ಪ ॥

ಹೋಗುವಾಗ ಹೊಳೆ ಸಾಲು । ದೇವರು ಕಾಣಿರೋ
ಬರುವಾಗ ಗಿಡಸಾಲು । ದೇವರು ಕಾಣಿರೋ
ಛತ್ರಿಯ ನೆರಳಲ್ಲಿ । ದೇವರು ಕಾಣಿರೋ
ಚಿತ್ರ ಓದುವವಳೇ, ಯಾರು ನೀನು । ದೇವರು ಕಾಣಿರೋ
ಒಂದಳ್ಳು ಧೂಪವ ಹಾಕಿ । ದೇವರು ಕಾಣಿರೋ

ಎಲ್ಲಾ ದೇವರಿಗೂ ಸಲ್ಲಿತು । ದೇವರು ಕಾಣಿರೋ
ಕಾಯಿ ನೀರು ಬಂದಾವೇ । ದೇವರು ಕಾಣಿರೋ
ತೋಪಿನಲ್ಲಿ ನಿಂದಾವೇ । ದೇವರು ಕಾಣಿರೋ
ಅರೆಕೆರೆ ತೋಟದಾ । ದೇವರು ಕಾಣಿರೋ
ಅಡಿಕೆ ಹೊಂಬಾಳೆ ಬಂದಾವೇ । ದೇವರು ಕಾಣಿರೋ
ಬನ್ನೂರು ತೋಟದಾ । ದೇವರು ಕಾಣಿರೋ
ಬನ್ನಿ ಹೊಂಬಾಳೆ ಬಂದಾವೆ । ದೇವರು ಕಾಣಿರೋ
ಕೋಳಿ ಕೂಗುವಾಗ । ದೇವರು ಕಾಣಿರೋ
ಬಾಳೆ ಬಾಗುವಾಗ ದೇವರು ಕಾಣಿರೋ

ಪಲ್ಲವಿ

ಕೆತ್ತಿದಾ ಹಲಗೆ ನೆತ್ತಿಮ್ಯಾಗಳ ಜುಂಗು
ಅಣ್ಣ ಸಿದ್ದಯ್ಯನ ಹಲಗೆ ಮೆರೆದು । ದೇವರು ಕಾಣಿರೋ

ಬೆಳ್ಳಿಯ ಉಡುದಾರ, ಬೆಣ್ಣೆಯಲಿ ಶಿವದಾರ
ಬೆಳ್ಳಿಯ ಕುದುರೆ ಮ್ಯಾಲೆ ಬಿಜುಮಾಡಯ್ಯ ದೇವರು ಕಾಣಿರೋ

ತಟ್ಟೆಕೆಳಗಾಲ ಪುಟ್ಟಗಣಗಲ ಹೂವೇ
ತಟ್ಟೆಲಿ ಬಂದಾವೆ ಪೂಜೆಗೆ ಏಳವ್ವ । ದೇವರು ಕಾಣಿರೋ
ಚೆಂಡುಮಲ್ಲಿಗೆ ಹೂವ ಮಂಡೆ ತುಂಬಾ ಮುಡಿದು
ದುಂಡಿ ಹೋಗುತ್ತಾಳೆ ರಾಜ್ಯದ ಮೇಲೆ । ದೇವರು ಕಾಣಿರೋ
ಊರು ಮುಂದಾಲ ಮಾರಿ ಕೇರಿಗೆ ಬರುವಾಗ
ಕೇರೆಲ್ಲಾ ಚಿನ್ನ ಹೊಳೆದಾವಾಲ್ಲೋ । ದೇವರು ಕಾಣಿರೋ
ಬಣ್ಣ ಹುಟ್ಟಾಳೋ, ಬಳೆಯ ತೊಟ್ಟಾಳೋ
ಕಣ್ಮಣಿ ಕಾಲುಂಗುರದಂತೆ ಕಾಳಮ್ಮ ಬಂದಾಳೋ । ದೇವರು ಕಾಣಿರೋ
ಹೆಬ್ಬಿದರು ಚಿಕ್ಕ ಬಿದಿರು ಹಬ್ಬಿತು ಮಲ್ಲಿಗೆ
ತಲಕಾಡು ತೂಗಿತು ಮಲ್ಲಿಗೆ ನೀಲಗಿರಿ ಕೊನೆಗೆ । ದೇವರು ಕಾಣಿರೋ

ಕೊಂಡಾದಾಳೊ ಕೆಂಡ ತುಳುದಾಳೊ
ತಾಯಿ ಕಾಳಮ್ಮ ಮಂಡೆ ಹೊದಿರಾಳೊ । ದೇವರು ಕಾಣಿರೋ

**ಸೋಬನೆ ಪದಗಳು**

**ಹಾಡಿದವರು : ದುಂಡಮ್ಮ, ಹುಸ್ಕೂರು**

**(ಗಂಡಿಗೆ ನೀರು ಉಯ್ಯುವ ಸಂದರ್ಭ)**

ಸೋಬನ್ನಿರೆ ಸೋಬಾನ ಬನ್ನಿರೆ
ಸೋಬಾನಾವೆಲ್ಲ ಶಿವನಿಗೆ

ಆಯ್ದಲ್ಲಿ ಹೊಲೆ ಊಡಿ
ಪಾಯ್ದಲ್ಲಿ ಹೊಲೆ ಕೊರೆದು
ಗಂಧದ ಸೌದೆ ದಳೆ ಊಡಿ । ಹೆತ್ತಮ್ಮ
ಕಾದನೀರ ಮದುವಣನಿಗೆ ಎರೆದಾಳೊ । ಸೋ

ಮುತ್ತು ಮುತ್ತು ಅಂದರೆ ಮುತ್ತಗಿಂತ ಮುತ್ತತ್ತಿ ಮೇಲು
ಮುತ್ತತ್ತಿ ಹೊಳೆಯ ನೀರ ತಂದು । ತಾಯಮ್ಮ
ಹೆತ್ತ ಮಗನಿಗೆ ಎರೆದಾಳೊ । ತಾಯಮ್ಮ
ಮಗನೆ ನಿನಗೆ ಒದ್ದಿದ ಪಾಪ ಪರಿಹಾರ । ಸೋ

ಮೇಲುಕೋಟೆ ಮೇಲುಕೋಟೆ ಲೋಕಾಕೆ ಮೇಲಾದ ಕೋಟೆ
ಮೇಲುಕೋಟೆ ಕೊಳದ ನೀರತಂದು । ತಾಯಮ್ಮ
ಹೆತ್ತ ಮಗನಿಗೆ ಎರೆದಾಳೊ । ತಾಯಮ್ಮ
ಭಾಗ್ಯ ಬಂದೀತು ಬಲದಲ್ಲಿ । ಸೋ

ಆರು ಮನೆ ಉಚ್ಚಳ್ಳ ಅರೆದು ಗಾಣಕೂದು
ರಾಮ ಅನ್ನುವ ಎರೆಡೆತ್ತು । ಕಟ್ಟಿಕೊಂಡು
ನಾರಿರು ಉಗುರೆಣ್ಣೆ ತೆಗೆದಾರೋ ।

ಎಣ್ಣೆಯ ಇಕ್ಕೊರೇ, ಚನ್ನಾಗಿ ಇಕ್ಕೀರಿ
ಚಿನ್ನದ ಕಡುಗ ನಿಮ್ಮ ಕೈಲಿ
ಅರಿಶಿನ ಇಕ್ಕೊರೇ, ಚನ್ನಾಗಿ ಇಕ್ಕೀರಿ
ಬೆಳ್ಳೀಯ ಕಡುಗು ನಿಮ್ಮ ಕೈಲಿ । ಸೋ

ನೀರಿಲ್ಲದ ಹಟ್ಟೀಲಿ ನೀರೇಕೆ ನಿಂತಾವೆ
ಊರಿಗೆ ದೊಡ್ಡವನ ಮಗಮೀದ । ನೀರು
ಒತ್ತಣ್ಣೆ ಪುರಕೆ ಹರಿದಾವೋ । ಆ ನೀರು
ಹರಿದು ಬಾಳೆ ವಾಲಾಡಿ ಬೆಳೆದಾವೋ । ಸೋ
ಕೆಸರಿಲ್ಲದ ಹಟ್ಟೀಲಿ ಕೆಸರೇಕೆ ನಿಂತಾವೆ
ಹೆಸರಿಗೆ ದೊಡ್ಡವನ ಮಗಮೀದ । ನೀರು
ದುರ್ಗಾಕೆ ಕೋಡಿ ಹರಿದಾವೊ । ತಾಯಮ್ಮ
ಬಾಳೆವಾಲಾಡಿ ಬೆಳೆದಾವೋ । ಸೋ

**ರಾಮ ಭಜನೆ ಹಾಡು**

**ಹಾಡಿದವರು : ರಾಮಣ್ಣ ತಂದೆ ಸೋಮನಾಯಕ, ಹೊಸಹೊಳಲು, ಕೆ.ಆರ್.ಪೇಟೆ.**

೧. ಹನುಮನ ಪ್ರಾಣ ಪ್ರಭು ರಘುರಾಮ
ನಿನ್ನಯ ಕುಲ ಸೋಮ, ಕೋದಂಡ ರಾಮ
ಧರಣಿಯಂಬರ ದಿನಕರ ಚಂದಿರ
ನಿನ್ನಯ ರೂಪವದು.
ಸಾಗರದಲೆಗಳು ಸಮೀರನೊಡನೆ ನಿನ್ನಯ ನಾಮವ ಹಾಡಿ
ಕವಿಕಾಣದೆ ಕವಿಕಾಣದ ಕಾಣದೆ ನೀನೆ ರಾಮ
ಮಹಾಸಾಧನ, ಮಹಾಸಾಧನ ಮುಕ್ತಿಗೆ ನಿನ್ನ ನಾಮ
ಭಾನುಕುಲೇಶ ಮಾನವವೇಷ ವಾನರ ಕುಲದ ಸ್ವಾಮಿ
ದೇನರದಾತ ನೀನುರುವಂತ ಪುಣ್ಯಮಹಿ ಈ ಭೂಮಿ
ಏ ರಾಘವ ಪಾನನ ಮೇಘಶ್ಯಾಮ
ಈ ರಾಗದ ಭಾಗ್ಯವು ನಿನ್ನ ನಾಮ (ಹನುಮನ ಪ್ರಾಣ)

೨. ಎಲ್ಲಿರುವೆ ತಂದೆ ಬರು ಮಾರುತಿ
ಎಲ್ಲಿಲ್ಲಿ ನಿನ್ನ ನೋಡಿದರು ನಿನ್ನ ಕೀರುತಿ
ಎಲ್ಲಿ ನೋಡಿದರಲ್ಲಿ ಕೂಡಿರುವ ಶ್ರೀಪತಿ
ರಂಗನಾ ಅರ್ಧಾಂಗಗೆ ಉಂಗುರವನ್ನಿತ್ತು

ನೀ ವನಭಂಗವನು ಮಾಡಿದೆಯಲ್ಲೋ ಮಾರುತಿ (ಎಲ್ಲಿರುವೆ)
ರಕ್ಕಸದ ಸೊಕ್ಕು ಮುರಿದಿಕ್ಕಿ ಲಂಕೆಗೆ ಪೋಗಿ
ಲಂಕಿಣಿಯ ಕೊಂದೆಯಲ್ಲೋ ಮಾರುತಿ (ಎಲ್ಲಿರುವೆ)

## ೬. ಗಾದೆಗಳು

೧. ಅಟ್ಟ ಮೇಲೆ ಒಲೆ ಉರಿತು
ಕೆಟ್ಟ ಮೇಲೆ ಬುದ್ಧಿ ಬಂತು

೨. ಸತ್ಯಕ್ಕೆ ಸಾವಿಲ್ಲ ಸುಳ್ಳಿಗೆ ಬದುಕಿಲ್ಲ
ಹಣ್ಣೆಲೆ ಕಂಡು ಹಸುರೆಲೆ ನಗ್ತಂತೆ

೩. ಕೊಟ್ಟ ಸಾಲ ಕೊಟ್ಟಾನಾ
ನೆಟ್ಟ ಮರಕೆ ನೀರುದನಾ

೪. ತಾಯಿಗಿಂತ ಬಂಧುವಿಲ್ಲ
ಉಪ್ಪಿಗಿಂತ ರುಚಿಯಿಲ್ಲ

೫. ಜಾತಿಗೆ ಜಾತಿ ವೈರಿ
ನೀರಿಗೆ ಪಾಚಿ ವೈರಿ

೬. ನನಗೆ ತಡಕ್ಕಿಟ್ಟು
ನಿನಗೆಲ್ಲಿ ತರಲಿ ಮಡಕ್ಕಿಟ್ಟು

೭. ತುಂಬಿದ ಕೆರೆಗೆ ಕೋಡಿ ಮದ್ದು
ಬೆಳ್ದ ಬಿದಿರ್‍ಗೆ ಗಾಳಿ ಮದ್ದು

೮. ನೂಲನಂತ ಸೀರೆ
ತಾಯಿಯಂತ ಮಕ್ಕಳು

೯. ಹಾಸಿಗೆ ಇದ್ದಷ್ಟು ಕಾಲುಚಾಚು
೧೦. ಕೈಕೆಸರಾದರೆ ಬಾಯಿ ಮೊಸರು
೧೧. ಅತಿ ಆಸೆ ಗತಿ ಕೇಡು
೧೨. ಅಪ್ಪನ ಕಾಲದಿಂದ ಕಾಣೆ ಉಪ್ಪಾಕಿದ ಗಂಜಿಯ
೧೩. ಊರು ಮೇಲೆ ಊರು ಬಿದ್ದರೆ ಶ್ಯಾನು ಭೋಗನ ಸಾಟಕ್ಕೇನು
೧೪. ಒಲ್ಲದ ಗಂಡನ್ಗೆ ಮೊಸರಲ್ಲಿ ಕಲ್ಲು
೧೫. ಹಾದರತನ ಹಳೆದಾಯ್ತು ಹಿರಿಮಗ ದೊಡ್ಡೋನಾದ
೧೬. ಕುಣಿಲಾರದ ಸೂಳೆಗೆ ನೆಲ ಡೊಂಕು
೧೭. ತಿರ್‍ಕೊಂಡು ತಿನ್ನೊನ ಹಿಡ್ಕೊಂಡು ಕೇದ್ರಂತೆ
೧೮. ಕೂಸು ಹುಟ್ಟೋಕು ಮೊದಲೆ ಕುಲಾವಿ ಹೊಲೆಸಿದರಂತೆ
೧೯. ಚಿನ್ನದ ಕತ್ತಿ ಅಂತ ಮೂಗು ಕುಯ್ಕೋಕಾದೀತೆ
೨೦. ಕೀತ ಬೆರಳ ಮೇಲೆ ಉಚ್ಚೆ ಹುಯ್ಯೋ ಅಂದ್ರೆ ಜಲಮಲ ಕಟ್ಟಿ ಆರ್ತಿಂಗ್ಳಾಯ್ತು ಅಂದ್ನಂತೆ
೨೧. ಜೇನು ಬಿಚ್ಚಿದವನು ಕೈಯ ನೆಕ್ಕದೆ ಇದ್ದಾನೆ
೨೨. ಕಾಮಾಲೆ ಕಣ್ಣೋನ್ಗೆ ಲೋಕವೆಲ್ಲಾ ಹಳದಿ
೨೩. ಕತ್ತೇಗೇನು ಗೊತ್ತು ಕಸ್ತೂರಿ ಗುಣ
೨೪. ಕುಂಬಾರನಿಗೆ ವರುಷ ದೊಣ್ಣೆಗೆ ನಿಮಿಷ
೨೫. ಮಳೆ ಹುಯ್ದರೆ ಕೇಡೋ ಮಕ್ಕಳಾದರೆ ಕೇಡೋ
೨೬. ಇಟ್ಟು ಕೇಡು ಇಟ್ಟು ಕಟ್ಟಿದ ಬಟ್ಟೆಯು ಕೇಡು
೨೭. ಮನೆ ಮನೆ ಮುದ್ದೆ ಮಾರಿಗುಡೆ ನಿದ್ದೆ
೨೮. ಉಪ್ಪು ಕೊಟ್ಟೋನ ಮುಪ್ಪಿನ ತನಕ ನೆನಿ

## ೭. ಒಗಟುಗಳು

೧. ಅಪ್ಪಾ ಜಪ್ನ ತೋಟ
ಎಪ್ಪತ್ರೂಪಾಯ್ನ ಬೀಗ
ಹಾಕೋರುಂಟು
ತೆಗೆಯೋರಿಲ್ಲ – ತಾಲಿ

೨. ಕಪ್ಪು ಉಂಟು ಕಸ್ತೂರಿಯಲ್ಲ
ರೆಕ್ಕೆಯುಂಟು ಪಕ್ಷಿಯಲ್ಲ ನೀರುಂಟು ಕೆರೆಯಲ್ಲ
ಹಾಗಾದರೆ ನಾನು ಯಾರು? – ಕಣ್ಣು

೩. ಮಣೆಯ ಮಾಡುವವನೊಬ್ಬ
ಹೆಣೆದು ಕಟ್ಟುವವನೊಬ್ಬ
ಮಣೆಯ ಕರೆದವನೊಬ್ಬ ಸತ್ತವನೊಬ್ಬ
ಸತ್ತವನ ಹೊತ್ತು ಮಾರುವವನೊಬ್ಬ
ಹಾಗಾದರೆ ಅದು ಯಾವುದು? – ಮೀನು

೪. ಬುಡ್ಡು ಹುಡುಗಿ ಗುದ್ದಿದರೆ
ಮನೆಯ ತುಂಬ ಮಕ್ಕಳು – ಬೆಳ್ಳುಳ್ಳಿ

೫. ಅಕ್ಕನ ಮನೆಯ ಬೆಳಕು
ತಂಗಿಯ ಮನೆಯಲ್ಲಿ ಕಾಣುತ್ತೇ – ಒಲೆ

೬. ಅಕ್ಕನ ಕೈಗೆ ಪಚ್ಚೆಯ ಕಡಗ
ಹಾಕುವರುಂಟು ತೆಗೆವವರಿಲ್ಲ – ಹಚ್ಚೆ

೭. ಹತ್ತಲಾರದ ಮರ ಎಣಿಸಲಾರದ ಕಾಯಿ · – ರಾಗಿ ತೆನೆ

೮. ಒಂದು ಕರಗ್ತದೆ
ಒಂದು ತೇಲುತ್ತದೆ
ಒಂದು ಮುಳುಗುತ್ತದೆ – ಸುಣ್ಣ, ಎಲೆ, ಅಡಿಕೆ

೯. ಗುಂಡುಂಟು ಚಕ್ರವಲ್ಲ
ಮುಳ್ಳುಂಟು ಬೇಲಿಯಲ್ಲ
ರುಚಿಯುಂಟು ಹಣ್ಣಲ್ಲ – ಚಕ್ಕಲಿ

೧೦. ಅಪ್ಪನ ಹಣ ಎಣಿಸೋಕಾಗಲ್ಲ
ಅವ್ವನ ಸೀರೆ ಮಡಿಸೋಕಾಗಲ್ಲ — ಚುಕ್ಕಿ, ಆಕಾಶ

೧೧. ಅಂಗಡೀಲಿ ಮಾರೋದಲ್ಲ
ತಕ್ಕಡೀಲಿ ತೂಗೋದಲ್ಲ
ಅದಿಲ್ದೆ ಹಬ್ಬ ಆಗೋಲ್ಲ — ಸಗಣಿ (ತೊಪ್ಪೆ)

೧೨. ಕೊಚ್ಚೆ ಗುಂಡಿಲೊಂದು ಕೊರ್ಮ — ನಾಲಿಗೆ

೧೩. ಮುಳ್ಳಣ್ಣ ಮುಸುಗಣ್ಣ ಅವರೊಂದು ಜಾತಿ
ತರಗಣ್ಣ ಬುಗರಣ್ಣ ಅವರೊಂದು ಜಾತಿ
ಸರಪಣಿ ಸಿದ್ದಪ್ಪ ಅವರೊಂದು ಜಾತಿ — ಕಾಳು, ಮುದ್ದೆ, ಶ್ಯಾವಿಗೆ

೧೪. ಸಂದೆಗೆ ಮದುವೆ, ಸರ್ಹೊತ್ಗೆ ಸೋಬ್ನ
ಹೊತಾರಕೆ ಮಗ — ಬೆಣ್ಣೆ

೧೫. ಅಂಗಣ್ಣ ಮಂಗಣ್ಣ ಅಂಗಿ ಬಿಚ್ಕೊಂಡು ನುಂಗಣ್ಣ — ಬಾಳೆಹಣ್ಣು



ಮದುವೆಯ ಸಂದರ್ಭದಲ್ಲಿನ
ಗಂಗೆ (ದೇವರ) ಪೂಜೆ



ಮದುಮಗಳಿಗೆ ಸೋದರಮಾವ
ಕಂಕಣ ಕಟ್ಟುತ್ತಿರುವುದು



ವರನು, ಮದುಮಗಳಿಗೆ ತಾಳಿ ಕಟ್ಟುತ್ತಿರುವುದು



ವಕ್ತೃಗಳಿಂದ ಮಾಹಿತಿ ಸಂಗ್ರಹಣೆ



ಅಂತಿಮವಾಗಿ ನ್ಯಾಯ
ತೀರ್ಮಾನಿಸುವ 'ತಾಯಿಗಡಿ'



ಸಿಡಿ ಹಬ್ಬದಂದು ದೇವರ ಪೂಜೆಗಳನ್ನ
ಹೊತ್ತವರು ಕುಣಿಯಲು ಸಿದ್ಧರಾಗಿರುವುದು



ಪಂಜಿನ ಸೇವೆ



ಜೋಗಿಬಿಡುವಾಗ ಗಂಗೆಪೂಜೆ ಮಾಡಿ
'ಮರಿ'ಗಳನ್ನು ಬಲಿಕೊಡಲು ಸಿದ್ಧರಾಗಿರುವುದು



ಚಕ್ರಾದಿಬಳೆಗಳನ್ನು ಬಡಿಯುತ್ತ
ಹಾಡುತ್ತಿರುವುದು



ತಡೆ ನಿವಾರಣೆ



ತಡೆ ಹೊಡೆಯುತ್ತಿರುವುದು



ಕಾಯಿ ಪವಾಡ


ಮೇಕೆ ಮೇಯಿಸಲು ಹೋಗುತ್ತಿರುವುದು


ವೀಳ್ಯದೆಲೆ ಕೊಯ್ಯುತ್ತಿರುವುದು


ದೇವಸ್ಥಾನದ ಹತ್ತಿರ ಸ್ತ್ರೀಯರು
ವ್ಯಾಪಾರ ಮಾಡುತ್ತಿರುವುದು


ಬಲೆ ಮೂಲಕ ಮೀನು ಹಿಡಿಯುವುದು


ಬಲೆ ನೆಯ್ಯುತ್ತಿರುವುದು


ಸುಣ್ಣದ ವ್ಯಾಪಾರ



ಕಬ್ಬು ಕಡಿಯುವ ಕೂಲಿ



ಮೀನು ಮಾರಾಟ ಕೇಂದ್ರ



ವಾಸದ ಮನೆ




ಸಹಕಾರ ಸಂಘದ ಕಛೇರಿ




ಗಂಗಾಮತಸ್ಥರು ವಾಸಿಸುವ
ಗ್ರಾಮಗಳಲ್ಲಿರುವ ಸಂಘದ ಫಲಕ



ಅವಿಭಕ್ತ ಕುಟುಂಬ

